## NAKHASTUTHI
### a magnum opus

The monumental work on *Nakhastuthi* by Shri Vishnutheertha Guruji is being gone through by me and at every stage it makes me marvel at his vastness of knowledge, mastery over grammar, command over language and the simplicity of style with which he explains the minutest points most thoroughly and convincingly—quoting proper authority. This masterpiece proves—if a proof be at all necessary—that its illustrious author must have definitely been exceedingly blessed by the noble band of nine Vidwatparigneya Maha Visheshas at whose lotus-feet he has rendered selfless service for more than two decades. Only eminent men of letters well-versed in Madhwa Philosophy can adequately comment upon and justifiably review this *magnum opus*.

**—Prabhanjan T Kulkarni**
**Bombay**

। ಶ್ರೀ ಗುರುಭ್ಯೋ ನಮಃ ।
। ಶ್ರೀಮನ್ಮಧ್ವಾಂತರ್ಗತ ಶ್ರೀಲಕ್ಷ್ಮೀನೃಸಿಂಹಾಯ ನಮಃ ।

ಶ್ರೀ ತ್ರಿವಿಕ್ರಮಪಂಡಿತಾಚಾರ್ಯ ವಿರಚಿತ

# ಶ್ರೀ ಹರಿವಾಯುಸ್ತುತಿ

## ಎರಡನೆಯ ಭಾಗ

ಸಿ. ವಿಷ್ಣುತೀರ್ಥ
ನವವೃಂದಾವನ, ಆನೆಗೊಂದಿ
ಇವರ ಅರ್ಥ, ತಾತ್ಪರ್ಯ, ವಿವರಣೆಗಳ ಸಹಿತ

ವಾಸುದೇವಪದಸಂತತಸಂಗೀ
ಆನಂದ್ ಪ್ರಿಂಟರ್ಸ್
25, ಗಾಂಧೀ ಬಜಾರ್, ಬೆಂಗಳೂರು-560 004

SRI HARIVAYUSTUTHI—with meanings and notes by P. Vishnu-teertha, 931, 2nd Main, IV Block, Rajajinagar, Bangalore 560 010

ಪ್ರಥಮ ಮುದ್ರಣ—1987 : ೧,೦೦೦ ಪ್ರತಿಗಳು



ಬೆಲೆ : ರೂ. 40-00

ಮುದ್ರಣ :
ಆನಂದ್ ಪ್ರಿಂಟರ್ಸ್
25, ಗಾಂಧೀ ಬಜಾರ್, ಬಸವನಗುಡಿ, ಬೆಂಗಳೂರು 4



ವ್ಯಾಸತೀರ್ಥಮುನಿಧ್ಯಾತ—ಹೇಮಕಾಂತಿಲಸತ್ಪದ ।
ಚಕ್ರತೀರ್ಥತಟಾವಾಸ ಯಂತ್ರೋದ್ಧಾರಕ ಮಾರುತೇ ॥
ಧ್ರಿಯತಾಂ ಹೃದಯೇ ತೇದ್ಧಾ ವಾಯುಸ್ತುತ್ಯರ್ಥಮಾಲಿಕಾ ।
ಗ್ರಥಿತಾ ವಿಷ್ಣುತೀರ್ಥೇನ ರಾಘವೇಂದ್ರಯತೇರನು ॥

# ಲೇಖಕನ ಎರಡು ಮಾತು

**"ಸಪ್ತ್ರಮಂ ದೈವಚಿಂತನಂ"** ಎಂದು ಸಂಸ್ಕೃತದಲ್ಲಿ ಹೇಳಿದ್ದನ್ನೇ ಶ್ರೀ ಪುರಂದರದಾಸವರ್ಯರು "ಹರಿಚಿತ್ತ ಸತ್ಯ ಹರಿಚಿತ್ತ ಸತ್ಯ। ನರಚಿತ್ತಕ್ಕೆ ಬಂದದ್ದು ಲವಲೇಶ ನಡೆಯದು" ಎಂದು ಕನ್ನಡದಲ್ಲಿ ಹಾಡಿದ್ದಾರೆ. ನಾವು ಈ ಸತ್ಯವನ್ನು ಅರಿತುಕೊಳ್ಳಲೆಂದು ಶ್ರೀಹರಿವಾಯುಗಳು ಜೀವನದಲ್ಲಿ ಹೆಜ್ಜೆ ಹೆಜ್ಜೆಗೂ ಅನುಭವ ಕೊಡುತ್ತಿದ್ದರೂ ಅಲ್ಪರಾದ ನಮಗೆ 'ನಾನು', 'ನಮ್ಮದು' ಎಂಬ ಭಾವನೆ ಮತ್ತೆಮತ್ತೆ ತಲೆ ಎತ್ತುತ್ತಲೇ ಇರುತ್ತದೆ. ಹಿಂದೆ ನನ್ನ ಜೀವನದಲ್ಲಿ ಈ ಅನುಭವ ಎಷ್ಟೋ ವೇಳೆ ಬಂದಿದ್ದರೂ ಈಗ "ವಾಯುಸ್ತುತಿ"ಯ ಬಗ್ಗೆ ಆಗಿರುವುದು ಮಾತ್ರ ಎಂದೆಂದಿಗೂ ಮರೆಯು-ವಂತಿಲ್ಲ.

"ನಖಸ್ತುತಿ"ಯ ಅರ್ಥ ಬರೆಯಲು ಆರಂಭಿಸಿದಾಗ ನನ್ನ ಧ್ಯೇಯದಲ್ಲಿ ಇಡೀ ವಾಯುಸ್ತುತಿಯ ಅರ್ಥ ಸುಮಾರು ಇನ್ನೂರು ಪುಟಗಳಲ್ಲಿ ಮುಗಿಯಬಹುದೆಂದಿತ್ತು. ಸುಮಾರು ಎರಡು ವರ್ಷಗಳಲ್ಲಿ 'ವಾಸುದೇವ-ಪದಸಂತತಸಂಗೀ' ಮಾಸಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟಿಸಿ ಮುಗಿಸುವ ಯೋಜನೆ ಇದಾಗಿತ್ತು. ಆದರೆ ನಖಸ್ತುತಿಯ ಎರಡನೇ ಶ್ಲೋಕದ ಸಾಧಾರಣ ಅರ್ಥ-ತಾತ್ಪರ್ಯ ಮುಗಿದಾಗಲೇ ನನ್ನ ಭ್ರಷ್ಟಸಂಕಲ್ಪದ ಅರಿವು ನನಗಾಯಿತು. ನಾನು ಬರೆದಷ್ಟನ್ನೇ ನರಸಿಂಹತೀರ್ಥಕ್ಕೆ ಹೋಗಿ ಅಲ್ಲಿ ಸನ್ನಿಹಿತರಾಗಿರುವ ಶ್ರೀಮದಕ್ಷೋಭ್ಯತೀರ್ಥರಿಂದ ಮಂತ್ರಪ್ರತಿಷ್ಠಿತರಾದ ಶ್ರೀಯೋಗಾನರಸಿಂಹದೇವರಲ್ಲಿ ಸಮರ್ಪಿಸಿ ಹಾಗೆಯೇ ನನಗೆ ಪರಮಗುರು-ಸ್ಥಾನೀಯರಾದ ಶ್ರೀ ಶ್ರೀಪಾದರಾಜರ ಅನುಗ್ರಹ ಪಡೆದುಕೊಂಡು ಬರೋಣ ಎಂದು ಮುಳಬಾಗಿಲಿಗೆ ಹೋದೆ. ಹರಿಭಕ್ತಾಗ್ರಣಿಗಳೂ ಪ್ರೌಢ ವಿದ್ವದ್ವ-ರೇಣ್ಯರೂ ಆದ ಆ ಮಹಸೇಯರು ಈ ಮಂದಮತಿಯ ಅಳಿಲುಸೇವೆಗೇ ಸುಪ್ರಸನ್ನರಾಗಿ ನನ್ನನ್ನು ತಮ್ಮ ಸನ್ನಿಧಿಯಲ್ಲಿ ಐದು ದಿನ ಇಟ್ಟುಕೊಂಡು ತಮ್ಮ ಕೃಪಾಕಟಾಕ್ಷ ಬೀರಿದರು. ಅದರಿಂದ ಅವರ ಸನ್ನಿಧಿಯಲ್ಲಿ ನಿಂತಾಗಲೇ

ಗಹನವಾದ ಅನೇಕಾರ್ಥಗಳು ಮಿಂಚಿನಂತೆ ಹೊಳೆದುಹೋದುವು. ಆನಂದ-ಪುಳಕಿತನಾಗಿ ಸ್ವಾಮಿಗಳಿಗೆ ವಂದಿಸಿ ನನ್ನ ಸ್ಥಳಕ್ಕೆ ಹಿಂತಿರುಗಿಬಂದು ಅಲ್ಲಿ ಹೊಳೆದ ಅರ್ಥಗಳನ್ನೇ ಕರಿಅಕ್ಷರದಲ್ಲಿ ಮೂಡಿಸುತ್ತಾ ಹೋಗಲು ಆ ವಿವರಣೆ ಹನುಮಂತನ ಬಾಲ ಬೆಳೆದಂತೆ ಬೆಳೆದುಹೋಯಿತು. ಅಷ್ಟಾದರೂ ಇದನ್ನು ಓದಿದ ಮಿತ್ರರು ಬೇಸರ ವ್ಯಕ್ತಪಡಿಸುವುದಕ್ಕೆ ಪ್ರತಿಯಾಗಿ ನನಗೆ ಉತ್ಸಾಹ-ವನ್ನೇ ಕೊಡುತ್ತಾ ಬಂದರು. ಇದರಿಂದಲೇ ನನಗೆ ನನ್ನ ಸೇವೆ ಶ್ರೀಹರಿ-ವಾಯುಗಳಿಗೆ ಪ್ರಿಯವಾಗಿದೆಯೆಂಬ ಸೂಚನೆ ಸಿಕ್ಕಿತು.

ಅಷ್ಟಾದರೂ ನನಗೆ ಹೆಜ್ಜೆ-ಹೆಜ್ಜೆಗೂ ಭಯ ಆತಂಕ. ಏನು ಅಪರಾಧ ಮಾಡೀತೋ, ಏನಾದರೂ ಅಪದ್ಧ ಬರೆದುಬಿಟ್ಟೇನಲ್ಲ ಎಂಬುದೇ ಸದಾ ಕಳವಳ. ಅದರ ಪರಿಹಾರಕ್ಕಾಗಿ ನವವೃಂದಾವನದಲ್ಲಿ ಏಕಾಂಗಿಯಾಗಿ ಶ್ರೀಮದ್ವ್ಯಾಸ-ರಾಯರ ಸಮೀಪದಲ್ಲೇ ಕುಳಿತು ನಾನು ಬರೆದುದನ್ನೆಲ್ಲ ಒಂದಕ್ಷರ ಬಿಡದಂತೆ ಶ್ರೀ ಪದ್ಮನಾಭತೀರ್ಥರಿಗೂ ಶ್ರೀಮಚ್ಚಂದ್ರಿಕಾಚಾರ್ಯರಿಗೂ ಓದಿಓದಿ ಹೇಳುತ್ತಿದ್ದೆ. ಅವರ ಮೂಕ ಅನುಮತಿ ಸಿಕಿದಮೇಲೆ ನನಗೆ ಕಿಂಚಿತ್ ಧೈರ್ಯವುಂಟಾಗುತ್ತಿತ್ತು.

ವಿಷ್ಣುಶಬ್ದಾರ್ಥಕ್ಕೆ ಬಂದಾಗ ಗಾಡಿ ನಿಂತೇಬಿಟ್ಟಿತು. ನಾನೇ ಸ್ವತಃ ಐತರೇಯೋಪನಿಷತ್ತನ್ನು ಖಂಡಾರ್ಥ, ಭಾಷ್ಯ, ಟೀಕೆಗಳಲ್ಲದೆ ಉಡುಪಿಯ ಕನ್ನಡಾರ್ಥ ಎಲ್ಲಾ ಇಟ್ಟುಕೊಂಡು ಓದಿದರೂ ನನಗೆ ತಾಳಮೇಳವಿಲ್ಲದ ಏನೋ ಜ್ಞಾನವಾಯಿತೇ ಹೊರತು ಒಳರಹಸ್ಯ ಕಿಂಚಿತ್ತೂ ಅರ್ಥವಾಗಲಿಲ್ಲ. ಕಡೆಗೆ ಪುಸ್ತಕಗಳ ಸಹಿತ ನವವೃಂದಾವನಕ್ಕೇ ಹೋಗಿ ಸುಮಾರು ಕಾಲ ಅಲ್ಲೇ ಇದ್ದೆ. ಮಧ್ಯೇಮಧ್ಯೇ ವಿಘ್ನಗಳು ಬಂದರೂ ನನ್ನ ಮುಖ್ಯ ಧ್ಯೇಯ ವಿಚಲಿತವಾಗಲಿಲ್ಲ. ಪ್ರತಿನಿತ್ಯ ನವಯತಿವರೇಣ್ಯರ ಮುಂದೆ ಒಂದೊಂದು ಖಂಡವಾಗಿ ಉಪನಿಷತ್ತು ಓದಿ ನನಗೆ ತಿಳಿದದ್ದನ್ನು ನನ್ನ ಬಾಲಭಾಷೆಯಲ್ಲಿ ಅನುವಾದ ಮಾಡಲಾರಂಭಿಸಿದೆ. ಎರಡನೇ ಅಧ್ಯಾಯ ಮುಗಿದು ಮೂರನೇ ಅಧ್ಯಾಯ ಆರಂಭವಾಗುವ ಹೊತ್ತಿಗೆ ಅನುವಾದ ಮಾಡಿದ್ದನ್ನೇ ಬರೆದಿಡು-ವಂತೆ ಆ ದಿಗ್ಗಜಗಳೇ ಪ್ರೇರಿಸಿದರು. ಹೀಗೆ ಇಡೀ ಮೂರನೇ ಆರಣ್ಯಕದ ಕನ್ನಡ ಭಾವಾನುವಾದ ಸಿದ್ಧವಾಯಿತು. ಆಗಾಗ್ಗೆ ಹಿಂದಿನ ಭಾಗವನ್ನೆಲ್ಲಾ

ಅವಲೋಡನೆ ಮಾಡುತ್ತಿದ್ದುದರಿಂದ ಎಲ್ಲ ವಿಷಯುಗಳೂ ಮನಸ್ಸಿಗೆ ನಾಟಿ-ಹೋದುವು. ಕಡೆಗೆ ಮೂರು ದಿನ ಆ ಮಹಾತಪಃಕ್ಷೇತ್ರದಲ್ಲೇ ಕುಳಿತು ಮೂರನೇ ಆರಣ್ಯಕದಲ್ಲಿ ಭಿನ್ನಭಿನ್ನ ಋಷಿಗಳು ಪ್ರತಿಪಾದಿಸಿರುವ ವಿವಿಧ ಪಾಠಗಳನ್ನೆಲ್ಲಾ ಕ್ರೋಡೀಕರಿಸಿ ಸ್ಥೂಲವಾಗಿ ಪಟ್ಟಿಮಾಡಿ ಶ್ರೀ ಪದ್ಮನಾಭ-ತೀರ್ಥರ ಮುಂದಿಟ್ಟು ಅನುಗ್ರಹ ಮಾಡಬೇಕೆಂದು ಕೇಳಿಕೊಂಡೆ. ಆವರು ನನ್ನನ್ನು ಮರುದಿನವೇ ಅಲ್ಲಿಂದ ಕಳುಹಿಸಿಬಿಟ್ಟರು.

ಬೆಂಗಳೂರಿಗೆ ಬಂದು ನಾನು ವಿಷ್ಣುಶಬ್ದಾರ್ಥ ವಿವರಣೆ ಆರಂಭಿಸಿದೆ. ಹಿಂದೆ ದುರ್ಗಮವಾಗಿದ್ದ ವಿಷಯುಗಳೆಲ್ಲ ನನ್ನ ಯೋಗ್ಯತೆಗೆ ತಕ್ಕಂತೆ ಕರ-ತಳಾಮಲಕವಾಗಿ ತೋರಿದುವು. ಅದನ್ನು ಮುಗಿಸಿಕೊಂಡು ಕ್ರೋಧನ ಸಂವತ್ಸರದಲ್ಲಿ (ಶಾ ಶ. ೧೯೦೭, ಕ್ರಿ.ಶ. 198?) ಚಾತುರ್ಮಾಸ್ಯಾರಂಭಕ್ಕೆ ಕಿಂಚಿತ್ ಮೊದಲು ಪುನಃ ನರಸಿಂಹತೀರ್ಥಕ್ಕೆ ಹೋಗಿ ಆ ಮಹಾನುಭಾವರು ಶ್ರೀ ಶ್ರೀಪಾದರಾಜರನ್ನು ಶರಣುಹೊಕ್ಕು ಆರಂಭಿಸಿದ ಕಾರ್ಯ ನಿರ್ವಿಘ್ನ-ವಾಗಿ ಒಂದು ಹಂತಕ್ಕೆ ಮುಟ್ಟುವಂತೆ ಕರುಣಿಸಬೇಕೆಂದು ಪ್ರಾರ್ಥಿಸಿಕೊಂಡೆ. ಅಲ್ಲಿ ಒಂದೇ ವಾರ ಇದ್ದದ್ದು. ಅಷ್ಟರೊಳಗೇ ನಖಸ್ತುತಿಯ ಉಪಸಂಹಾರದ ಸ್ಥೂಲಲೇಖನ ಆಷಾಢ ಶುದ್ಧ ದಶಮಿಯೇ ಮುಗಿಯಿತು. ಬೆಂಗಳೂರಿಗೆ ಬಂದು ಹಸ್ತಪ್ರತಿ ಮುಗಿಸಿ ಮುದ್ರಣಕ್ಕೆ ಕೊಟ್ಟೆ. ಆ ಗ್ರಂಥ ಸಂಪೂರ್ಣವಾಗಿ (೩೪೬ ಪುಟಗಳು) ಮುದ್ರಿತವಾಗಿ ಅದೇ ಕ್ರೋಧನ ಸಂವತ್ಸರದಲ್ಲಿ ಅದೇ ನವವೃಂದಾವನದಲ್ಲೇ ಶ್ರೀ ವ್ಯಾಸರಾಯರ ಸನ್ನಿಧಿಯಲ್ಲಿ ಅವರ ಆರಾಧನೆಯ ಮಧ್ಯದಿವಸವೇ ಅವರ ಕರ್ಣಾಟಕರತ್ನಸಿಂಹಾಸನದಲ್ಲಿ ಈಗ ವಿರಾಜಿಸುವ, ಅವರ ಪರಂಪರೆಯಲ್ಲೇ ಬಂದ, ನಮ್ಮ ಕುಲಗುರುಗಳಾದ ಶ್ರೀ ೧೦೮ ಶ್ರೀ ವಿದ್ಯಾಪಯೋನಿಧಿತೀರ್ಥರ ಕರಕಮಲಗಳಿಂದ ಬಿಡುಗಡೆಯಾಯಿತು ಆದರೆ ಇದರ ಅವಗಾಹನಾಭಾಗ್ಯ ಲಭಿಸಿದುದು 'ವಾಸುದೇವಪದಸಂತತಸಂಗೀ'ಯ ಗ್ರಾಹಕರಿಗೆ ಮಾತ್ರ. ಇದು ನಮ್ಮ "ನಖಸ್ತುತಿ"ಯ ಚರಿತ್ರೆ.

"ನಖಸ್ತುತಿ" ಮುಗಿಸಿದ ಬಳಿಕ ಮುಂದಿನ ಭಾಗ ವಾಯುಸ್ತುತಿಯ ನಲವತ್ತೊಂದು ಶ್ಲೋಕಗಳನ್ನಾದರೂ ಬೆಳೆಸಬಾರದೆಂದೂ ಹೆಚ್ಚಿನ ವ್ಯಾಕರ ಣಾಂಶಗಳನ್ನೆಲ್ಲ ಬಿಟ್ಟುಬಿಡಬೇಕೆಂದೂ ಅಂತೂ ಶ್ಲೋಕಕ್ಕೆ ಹತ್ತು ಪುಟ

ಮೀರಬಾರದೆಂದೂ ಅಂದಾಜು ಮಾಡಿಕೊಂಡು ನಾನೂರು ಪುಟಗಳಲ್ಲಿ ಈ ಪುಸ್ತಕ ಮುಗಿಯಬೇಕೆಂದು ಪ್ರಕಾಶಕರೊಡನೆ ಮಾತಾಡಿ ಈ ಅಂದಾಜಿನಂತೆ ಬೆಲೆ ನಿಶ್ಚಯಿಸಿ ಗ್ರಾಹಕರಿಗೆ ಸುತ್ತೋಲೆಯನ್ನು ಕಳುಹಿಸಲಾಯಿತು. ಆವರೆ ಪ್ರತಿಯೊಂದು ಶ್ಲೋಕಕ್ಕೂ ಹರಿಪರ ಹಾಗೂ ವಾಯುಪರ ಎರಡರ್ಥಗಳನ್ನೂ ಬರೆಯಬೇಕೆಂಬುದು ಇಬ್ಬರ ದೃಷ್ಟಿಯೂ ಆಗಿತ್ತು. ಬಿಡಿಬಿಡಿ ಶ್ಲೋಕಗಳ ಅರ್ಥ ಎಲ್ಲಾದರೂ ಕ್ವಚಿತ್ ಸಿಕ್ಕೀತು, ಆದರೆ ಇಡೀ ವಾಯುಸ್ತುತಿಯ 'ವಿಹಂಗಾವಲೋಕನ' ಮಾಡಿಸುವುದು ಎಲ್ಲರಿಂದ ಸಾಧ್ಯವೂ ಅಲ್ಲ, ಎಲ್ಲೂ ಸಿಗುವುದೂ ಇಲ್ಲವಾದ್ದರಿಂದ ಅದನ್ನೇ ಮೊಟ್ಟಮೊದಲು ಬರೆಯಬೇಕೆಂಬ ಹಂಬಲ ನನಗೆ 1951ರಲ್ಲಿ ಯಂತ್ರೋದ್ಧಾರಕರ ಸೇವೆ ಆರಂಭಿಸಿದಾಗಲೇ ಉದಯಿಸಿತ್ತು. ಅದಕ್ಕೆ ಅವಕಾಶ ಈಗ ದೊರಕಿತಾದಕಾರಣ ವಾಯುಸ್ತುತಿಯನ್ನು ಈ ವಿಹಂಗಾವಲೋಕನದಿಂದಲೇ ಆರಂಭಿಸಿದೆ. ಅದೇ ಇಪ್ಪತ್ತೆರಡು ಪುಟಗಳಾದುವು. ಆವರೂ ನನಗೆ ಸಮಾಧಾನವಾಯಿತೇ ಹೊರತು ವ್ಯಾಕುಲತೆಯಾಗಲಿಲ್ಲ.

ಮಾಧ್ವರಲ್ಲಿ ವಾಯುಸ್ತುತಿಪುರಶ್ಚರಣೆ ಎಂಬುದು ಶತಮಾನಗಳಿಂದಲೂ ಆಚರಿಸಲ್ಪಡುತ್ತಿರುವ ಹರಿ ವಾಯುಪ್ರೀತಿಕರವಾದ ಅತ್ಯಂತ ಶ್ರೇಷ್ಠ ಅನುಷ್ಠಾನ. ಇದನ್ನು ಎಲ್ಲೋ ಕೊನೆಯಲ್ಲಿ ಕೊಡುವುದಕ್ಕಿಂತ ಪ್ರಾರಂಭದಲ್ಲೇ ಕೊಡುವುದು ಉತ್ತಮವೆನಿಸಿತು. ಅನೇಕ ಮಹನೀಯರು ಈ ಅನು-ಷ್ಠಾನಕ್ಕೆ ಅನೇಕ ಕ್ರಮ ಹೇಳಿದ್ದಾರಾದರೂ ಎಲ್ಲವೂ ಗ್ರಾಹ್ಯ; ತಮ್ಮ ಅನುಕೂಲ ನೋಡಿಕೊಂಡು ಯಾವುದು ಬೇಕೋ ಆರಿಸಿಕೊಳ್ಳಬಹುದೆಂದು ಯೋಚಿಸಿ ಅನೇಕ ಗ್ರಂಥಗಳಲ್ಲಿ ಹುಡುಕಿ ಅನೇಕ ಪಂಡಿತರನ್ನು ವಿಚಾರಿಸಿ ಪುರಶ್ಚರಣ ವಿಧಿಯನ್ನೂ ಬರೆದಿದ್ದಾಯಿತು.

ಶ್ರೀಹರಿವಾಯುಸ್ತುತಿಯ ಶಬ್ದಜೋಡಣೆಯೇ ಬಹಳ ಬಿಕ್ಕಟ್ಟಾಗಿದೆ. ಗೀತೆ ರಾಮಾಯಣಗಳನ್ನು ಓದಿದಂತೆ ಇದನ್ನು ಸುಲಭವಾಗಿ ಓದುವುದು ಅಸಾಧ್ಯ ಪ್ರಯತ್ನ. ನಖಸ್ತುತಿಯ ಎರಡು ಶ್ಲೋಕಗಳಿಗೆ ಅರ್ಥ ಬರೆಯುವಾಗಲೂ ಮೊದಲು ಆ ಶ್ಲೋಕಗಳನ್ನು 'ಓದುವ ಕ್ರಮ ಹೇಗೆ?' ಎಂದು ವಿವರಿಸಿದ್ದೆವು. ಅದೇ ಕ್ರಮವನ್ನು ಅನುಸರಿಸಿ ಇಲ್ಲೂ ಅರ್ಥಕ್ಕೆ ಮೊದಲೇ

‘ ಓದುವ ಕ್ರಮ ’ವನ್ನು ವಿವರಿಸಿದೆ. ವಾಯುಸ್ತುತಿ ಕಲಿಯಲು ಉತ್ಸಾಹ ವಿದ್ದರೂ ಪಂಡಿತರ ಬಳಿಗೆ ಹೋಗಲು ಅವಕಾಶವಿಲ್ಲದ ಉತ್ಸಾಹಶಾಲಿ ಮಾಧ್ವರಿಗೆ ಈ ‘ಓದುವ ಕ್ರಮ’ ಅವಶ್ಯವಾಗಿ ಉಪಯೋಗವಾಗುವುದೆಂಬ ಭರವಸೆ ನನಗಿದೆ. ಇದಿಷ್ಟು ಕೇವಲ ಪೀಠಿಕೆಯೇ ಆದರೂ ಇಷ್ಟಕ್ಕೇ ೪೪ ಪುಟಗಳು ಮುಗಿದುಹೋದುವು.

ಇರಲಿ. ವಾಯುಸ್ತುತಿಗೆ ಸಂಬಂಧಿಸಿದ ನಲವತ್ತೊಂದು ಶ್ಲೋಕಗಳ ಅರ್ಥತಾತ್ಪರ್ಯಗಳನ್ನು ಹೇಗಾದರೂ ಮಾಡಿ ಸುಮಾರು ನಾನೂರು ಪುಟ ಗಳಲ್ಲಿಯೇ ಮುಗಿಸಬೇಕೆಂಬ ಹಂಬಲದಿಂದ ಪ್ರಯತ್ನ ಆರಂಭಿಸಿದಾಗ ಇಡೀ ಪುಸ್ತಕ (೨ನೇ ಭಾಗ) ಮುದ್ರಿಸಲು ಅದಕ್ಕೆ ಸುಮಾರು ಹನ್ನೆರಡು ಸಾವಿರ ರೂಪಾಯಿಗಳಷ್ಟು ಕಾಗದವೇ ಬೇಕಾಗುವುದೆಂದು ಗೊತ್ತಾಯಿತು. ನಖ-ಸ್ತುತಿಯ ಪುಸ್ತಕ ಹೊರಬಂದಮೇಲಾದರೂ ನಮಗೆ ಕನಿಷ್ಠ ಐದುನೂರು ಮಂದಿ ಮುಂಗಡ ಹಣ ಕೊಡುವ ಗ್ರಾಹಕರು ಸಿಗಬಹುದೆಂಬ ಆಸೆಯಿತ್ತು. ಆದರೆ ನಮ್ಮ ಆ ಆಸೆಯೆಲ್ಲ ಹುಸಿಯಾಯಿತು. ಸುದಾಮನ ಬಳಗದವರಾದ ನಮಗೆ ಕೈಹಾಕಿದ ಈ ಕಾರ್ಯ ಹೇಗೆ ಮುಂದೆ ಸಾಗೀತೆಂಬುದೇ ದೊಡ್ಡ ಚಿಂತೆಯಾಯಿತು. ಏಕೆಂದರೆ ಎರಡನೇ ಭಾಗವನ್ನು ನಾಲ್ಕು-ನಾಲ್ಕು ಪುಟ ಗಳಾಗಿ ಹಂಚದೆ ಇಡೀ ಪುಸ್ತಕರೂಪವಾಗಿಯೇ ಕೊಡಬೇಕೆಂಬ ಯೋಜನೆ ನಮ್ಮದಾಗಿತ್ತು. ಕೇವಲ ಶ್ರೀಹರಿವಾಯುಗಳನ್ನೇ ನಂಬಿದ ನಮಗೆ ಆ ಅನಾಥರಕ್ಷಕರೇ ಕೊನೆಗೆ ಹೇಗೋ ಒಂದು ರೀತಿ ಮಾರ್ಗ ತೋರಿಸಿಕೊಟ್ಟರು.

ನಮ್ಮ ಆಪ್ತಮಿತ್ರರಾದ ಡಾ॥ ಆರ್. ಕೆ. ರಾಜಾರಾಯರು ಕಾಗದ-ಕ್ಕಾಗಿ ಚಿಂತಿಸುತ್ತಿರುವ ನಮ್ಮನ್ನು ಕಂಡು ಪ್ರೊಫೆಸರ್ ರಾವ್‌ಬಹದ್ದೂರ್ ವೇಂಕಟೇಶಾಚಾರ್ ಮೆಮೋರಿಯಲ್ ಟ್ರಸ್ಟ್‌ನ ಅಧ್ಯಕ್ಷರೊಡನೆ ವಿಚಾರ ಮಾಡಿ ನಾವು ಅವರ ನೆರವು ಪಡೆಯಬಹುದೆಂದು ಸೂಚಿಸಿದರು. ಅದರಂತೆ ನಾವು ಆ ಸಂಸ್ಥೆಯ ಅಧ್ಯಕ್ಷರಾದ ಡಾ॥ ಬಿ. ವಿ. ರಾಘವೇಂದ್ರರಾವ್ ಅವರನ್ನು ಆರ್ಥಿಕನೆರವಿಗಾಗಿ ಪ್ರಾರ್ಥಿಸಲು ಅವರು ಉದಾರ ಮನಸ್ಸಿನಿಂದ ಒಂದು ಸಹಸ್ರ ರೂಪಾಯಿಗಳನ್ನು ಟ್ರಸ್ಟಿನಿಂದ ದಾನವಾಗಿ ಕೊಟ್ಟು ಮಹೋಪಕಾರ ಮಾಡಿದರು. “ ವಾಯುಸ್ತುತಿ ”ಯ ಪ್ರಕಟನೆಗೆ ಇದೇ ವಿಘ್ನೇಶ್ವರನ ಪೂಜೆ ಯಾಯಿತು.

ಅದರ ಜೊತೆಗೆ ಅಲ್ಲಿಯವರೆಗೆ ಬಂದಿದ್ದ ಎಲ್ಲಾ ಮುಂಗಡಹಣವನ್ನಲ್ಲದೆ ನಮ್ಮ ಹತ್ತಿರವಿದ್ದ ಪುಡಿಕಾಸುಗಳೆಲ್ಲ ಸೇರಿಸಿದರೂ ಕಾಗದ ಕೊಳ್ಳಲು ಬಹಳ ಹಣ ಸಾಲದೇ ಬಂತು. ಈ ಸಂದರ್ಭದಲ್ಲಿ ಸ್ವಿಮಿಂಗ್‌ಪೂಲ್ ಬಡಾವಣೆಯಲ್ಲಿರುವ ಶ್ರೀ ಸಿ. ನಾರಾಯಣರಾಯರು ಮುಂದೆ ಬಂದು ಕಾಗದ ಕೊಳ್ಳಲು ಸಾಲದೆ ಬಂದಿದ್ದ ಹಣವನ್ನು ಬಡ್ಡಿರಹಿತವಾಗಿ ಎರವಲಾಗಿ ಕೊಟ್ಟು ಪರಮ ಸಹಾಯ ಮಾಡಿದರು ಹೀಗೆ ಈ ಮಹನೀಯರಿಬ್ಬರ ಆರ್ಥಿಕ ಸಹಾಯ ಸಕಾಲದಲ್ಲಿ ದೊರೆಯದಿದ್ದಿದ್ದರೆ "ವಾಯುಸ್ತುತಿ"ಯ ಮುದ್ರಣ ಆರಂಭವಾಗುವುದೇ ದುಸ್ತರವಾಗಿತ್ತು. ಈ ಇಬ್ಬರು ಮಹನೀಯರಿಗೂ ಶ್ರೀಹರಿವಾಯುಗಳು ಗುರುಗಳು ಜ್ಞಾನಭಕ್ತ್ಯಾದಿಗಳನ್ನೂ ಧಾರ್ಮಿಕ ಕಾರ್ಯಗಳಲ್ಲಿ ಶ್ರದ್ಧೆಯನ್ನೂ ಔದಾರ್ಯವನ್ನೂ ಇತೋಽಪ್ಯಧಿಕವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ.

ಹೀಗೆ ಅನಿರೀಕ್ಷಿತ ಸಹಾಯ ದೊರಕಿದ್ದರಿಂದ ನಾಲ್ಕುನೂರು ಪುಟಗಳ ಮುದ್ರಣಕ್ಕೆ ಬೇಕಾದ ಕಾಗದವನ್ನು ಕೊಂಡುಕೊಳ್ಳಲು ಅನುಕೂಲವಾಯಿತಲ್ಲದೆ ನಿರಾತಂಕವಾಗಿ ಮುದ್ರಣಕಾರ್ಯವನ್ನೂ ಆರಂಭಿಸಿ ಮುಂದರಿಸಲು ಉತ್ತೇಜನ ದೊರೆಯಿತು. ಮುದ್ರಣಕಾರ್ಯ ಮುಂದುವರಿದ ಹಾಗೆ ಈಚೆಗೆ ಮತ್ತೆ ಕೆಲವರು ಹೊಸಹೊಸದಾಗಿ ಗ್ರಾಹಕರಾಗುತ್ತಿರುವುದರಿಂದ ನಮಗೆ ನಿರುತ್ಸಾಹವೇನೂ ಆಗಿಲ್ಲ. ಇನ್ನು ಶ್ರೀಹರಿವಾಯುಸ್ತುತಿಯ ವಿವರಣಕ್ಕೆ ಹಿಂದಿರುಗೋಣ.

ಪೀಠಿಕೆಯಾದಮೇಲೆ ನ್ಯಾಯವಾಗಿ 'ಶ್ರೀಮದ್ವಿಷ್ಣ್ವಂಘ್ರಿ........' ಎಂಬ ಶ್ಲೋಕವನ್ನೇ ಆರಂಭಿಸಬೇಕಾಗಿತ್ತು. ಆದರೆ ನಖಸ್ತುತಿ ಅರ್ಥ ಬರೆಯುವಾಗ 'ನಖಸ್ತುತಿ ಹೇಳಿಕೊಳ್ಳದಿದ್ದರೆ ವಾಯುಸ್ತುತಿ ಫಲಿಸಲಾರದೆಂ'ದು ನಾವೇ ಹೇಳಿ ಈಗ ನಾವೇ ಅದನ್ನು ಬಿಟ್ಟು ಗ್ರಂಥಾರಂಭ ಮಾಡುವುದು ದಡ್ಡತನವೆನಿಸಿತು. ನಖಸ್ತುತಿ ಪುಸ್ತಕ ಸಿಗದವರಿಗೆ ಅನುಕೂಲವಾಗುವುದರಿಂದ ನಖಸ್ತುತಿ ಮೊದಲಲ್ಲಿ ಕೊಡಬೇಕೆಂದು ಪ್ರಕಾಶಕರೂ ಅಭಿಪ್ರಾಯಪಟ್ಟರು. ಅದಕ್ಕೂ ಹೆಚ್ಚಾಗಿ ನಖಸ್ತುತಿಯಲ್ಲಿ ಹೇಳಿದ ಎಲ್ಲ ವಿಷಯಗಳನ್ನೂ ಒಮ್ಮೆಲೇ ಗ್ರಹಿಸುವುದು ಎಲ್ಲರಿಗೂ ಸಾಧ್ಯವಿಲ್ಲ. ಆದರ

ಸಾರಾಂಶ ಹೇಳದೆ ಮುಂದುವರಿಸಿದ್ದರೆ ಕೊರತೆಯಾಗುತ್ತಿತ್ತು. ಅಲ್ಲದೆ ಇದರಲ್ಲಿ ಲೌಕಿಕವೂ ಇದೆ. ಪುರಾಣ ಹೇಳುವಾಗ ಪುರಾಣಿಕರು 'ಕಿಂಚಿತ್ ಪೂರ್ವಕಥಾನುವಾದಃ' ಎಂದು ಹೇಳಿ ಹಿಂದಿನ ದಿನದ ಕಥಾಸಾರಾಂಶ ಹೇಳಿಯೇ ಆರಂಭಿಸುವರು. ಅಷ್ಟೇ ಏಕೆ, ಆಧುನಿಕ ವೃತ್ತಪತ್ರಿಕೆಗಳಲ್ಲಿ ಬರುವ 'ಧಾರಾವಾಹಿ'ಗಳಲ್ಲೂ 'ಹಿಂದಿನ ಕಥೆ'ಯನ್ನು ಪ್ರತಿ ಸಂಚಿಕೆಯಲ್ಲೂ ತಪ್ಪದೆ ಕೊಡುತ್ತಾರೆ ಹೀಗೆ ಲೋಕರೂಢಿಯೇ ಇರುವುದರಿಂದ ನಾವೂ ಸಹ ೩೪೮ ಪುಟಗಳ ಸಾರಾಂಶವನ್ನು ಇಪ್ಪತ್ತಮೂರು ಪುಟಗಳಲ್ಲಿ (೪೫-೬೭) ಸಂಗ್ರಹಿಸಿ ನಖಸ್ತುತಿಯ ಅರ್ಥವನ್ನು ಕೊಟ್ಟಿದ್ದೇವೆ. ಇದನ್ನು ಓದಿಕೊಂಡರೆ 'ನಖಸ್ತುತಿ' ಸಿಗದಿದ್ದರೂ ನಖಸ್ತುತಿ ಸಿಕ್ಕಿ ಓದಿದಂತೆಯೇ ಆಗುತ್ತದೆ. 'ನಖಸ್ತುತಿ' ಓದಿದವರಿಗೂ ಇದರ ಪುನರಾವೃತ್ತಿಯಾಗುತ್ತದೆ. ಹೀಗೆ ಈ ೨೩ ಪುಟಗಳ ಪ್ರಯೋಜನ 'ಏಕಂ ಸದ್ವಿಪ್ರಾ ಬಹುಧಾ ಕಲ್ಪಯಂತಿ'.ಎಂಬಂತೆ ಬಹುಮುಖವಾಗಿದೆ.

ಅಂತೂ ೬೮ನೇ ಪುಟದಲ್ಲಿ 'ವಾಯುಸ್ತುತಿ'ಯ ಪ್ರಥಮ ಶ್ಲೋಕ ಆರಂಭವಾಯಿತು. ಮೊದಲನೇ ಶ್ಲೋಕಕ್ಕೆ ವಿಷ್ಣುಪರವಾಗಿ ಅರ್ಥ ಬರೆಯಲು ಆರಂಭಿಸಿದಾಗಲೇ ಈ ಗ್ರಂಥ ನಾನೂರು ಪುಟಗಳಲ್ಲಿ ಮುಗಿಯಬೇಕೆಂಬ ಯೋಜನೆ ಹುಚ್ಚುಕಲ್ಪನೆ ಎನ್ನಿಸಿತು. ಅಡ್ಡಾದಿಡ್ಡಿ ಅರ್ಥ ಹೇಳಿ ನಾನೂರು ಪುಟಗಳಲ್ಲಿ ಪುಸ್ತಕ ಮುಗಿಸುವುದಕ್ಕಿಂತ ಹೇಳಬೇಕಾದ್ದೆಲ್ಲ ಹೇಳುವುದೇ ಯುಕ್ತವೆನಿಸಿತು. ಕಾರಣ 'ನಖಸ್ತುತಿ'ಯ ಲೇಖಕನ ಮುನ್ನುಡಿಯಲ್ಲಿ (ಪುಟ iii) ಹೇಳಿರುವಂತೆ ಪದ್ಮನಾಭತೀರ್ಥಾದಿ ನವವೃಂದಾವನಸ್ಥ ಯತಿಗಳ ಸನ್ನಿಧಾನದಲ್ಲಿ ಕೊಡುತ್ತಿರುವ ಪರೀಕ್ಷೆಯಿದೆಂಬುದನ್ನು ಮರೆಯುವಂತಿಲ್ಲ. ಆಗ 'ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ' ಎಂಬ ಶ್ರೀ ಕೃಷ್ಣೋಕ್ತಿಯೂ ನನಗೆ ಮಾರ್ಗದರ್ಶನ ಮಾಡಿತು.

ವ್ಯಾಕರಣಾಂಶಗಳನ್ನೂ ಸುಲಭ ಪದಗಳ ಹೆಚ್ಚಿನ ವಿವರಣೆಗಳನ್ನೂ ಬಿಡುತ್ತಾ ಬಂದೆ. ಆದರೆ 'ಶ್ಲೋಕದ ವಿಶ್ಲೇಷಣೆ' ಎಂಬ ವಿವರಣೆ ಅದಕ್ಕೆ ಸ್ಥಾನಾಪನ್ನವಾಗಿ ಬಂತು. ಈ ವಿಶ್ಲೇಷಣೆ ಸಂಸ್ಕೃತದ ಸಾಮಾನ್ಯಜ್ಞಾನವುಳ್ಳ ಮಧ್ಯಮಾಧಿಕಾರಿಗಳಿಗೆ ನಿಜವಾಗಿಯೂ — ಎರಡು ಮೂರು ಸಲ ಓದಿ-

ಕೊಂಡರೆ—ಶ್ಲೋಕದ ಅರ್ಥಗ್ರಹಣ ಮಾಡಲು ಬಹಳ ಸಹಾಯ ಮಾಡುವು ದೆಂಬ ಭರವಸೆ ನನಗಿದೆ. ಮಿಕ್ಕ ವಿಚಾರ ಪಾಠಕರಿಗೇ ಸೇರಿದ್ದು.

ಪ್ರಾರಂಭದ ಕೆಲವು ಶ್ಲೋಕಗಳಿಗೆ ಹೆಚ್ಚು ವಿವರಣೆ ಬೇಕಾದರೂ ಮುಂದೆಮುಂದಾದರೂ ಕೆಲವು ಶ್ಲೋಕಗಳ ವಿವರಣೆ ಐದಾರು ಪುಟಗಳಲ್ಲೇ ಮುಗಿದುಬಿಡಬಹುದೆಂಬ ಭ್ರಾಂತಿಯಿಂದಲೇ ನಾನು ಲೇಖನ ಮುಂದು-ವರೆಸಿದೆ. ಶ್ರೀಮದಾನಂದತೀರ್ಥ...., ಮಧ್ವಾಖ್ಯಂ ಮೊದಲಾದ ಪದಗಳಿಗೆ ಹರಿಪರವಾಗಿ ಅರ್ಥ ಹೇಳಿಬಿಟ್ಟು 'ಚುಟುಕಿಯಲ್ಲಿ ಚಪ್ಪರ ಹಾರಿಸು'ವು-ದಕ್ಕಿಂತಲೂ ಅವುಗಳ ಅರ್ಥ ಮನದಟ್ಟಾಗುವಂತೆ ವಿವರಿಸುವುದೇ ಉಚಿತ ವೆನಿಸಿತು. ಹೀಗಾಗಿ ಹತ್ತನೇ ಶ್ಲೋಕಕ್ಕೆ ಬರುವ ಹೊತ್ತಿಗೇ ಇನ್ನೂರು ಪುಟಗಳು ಮುದ್ರಣವಾದುದನ್ನು ಕಂಡಾಗ, ಯುಗಾಂತರದಲ್ಲಿ ಮಹಾನು-ಭಾವರಾದ ಆ ಧ್ರುವರಾಯರಿಗೆ ಆಗಿದ್ದ ಅನುಭವ

ಯೋಽನ್ತಃ ಪ್ರವಿಶ್ಯ ಮಮ ವಾಚಮಿಮಾಂ ಪ್ರಸುಪ್ತಾಂ
ಸಂಜೀವಯತ್ಯಖಿಲಶಕ್ತಿಧರಃ ಸ್ವಧಾಮ್ನಾ

ಎಂಬ ಅನುಭವ ಸ್ವಂತ ನನಗೂ ಆಯಿತೆಂದು ಧಾರಾಳವಾಗಿ ಹೇಳಿಕೊಳ್ಳ-ಬಹುದು. ಮುಂದೆಮುಂದೆ ಹೋದಂತೆ ಮುಕ್ತಿ-ಮೋಕ್ಷ, ನಿತ್ಯನರಕಗಳು, ಜೀವತ್ರೈವಿಧ್ಯ, ಭಕ್ತಿ, ತಾರತಮ್ಯ, ಗುರುಗಳ ವಿಚಾರಗಳನ್ನು ಹೇಳುವಾಗ ನನ್ನ ಗಮನ ಪುಟಗಳ ಕಡೆ ಹೋಗದೆ ಕೇವಲ ವಿಷಯಪ್ರತಿಪಾದನೆಯಲ್ಲೇ ಲೀನವಾಗಿ ಹೋಗಿತ್ತು. ಇದು ಕೇವಲ ಆ ವೇದವ್ಯಾಸರ ಕೃಪಾಕಟಾಕ್ಷ-ಲವಲೇಶದ ಮಹಿಮೆಯೇ ಹೊರತು ನನ್ನದೇನೂ ಇಲ್ಲ. ಈ ಸಂದರ್ಭದಲ್ಲೇ ನಾನು ಆನಂದ್ ಪ್ರಿಂಟರ್ಸ್‌ನವರಿಗೆ ನನ್ನ ಕೈ ಹತೋಟಿ ಮೀರಿದ ವಿಷಯ ತಿಳಿಸಿದೆ. ಅದನ್ನು ಸಕಾಲದಲ್ಲಿ ಅವರೂ ಮಾನ್ಯ ಗ್ರಾಹಕರಿಗೂ ಸೂಚನೆ ಕೊಟ್ಟಿದ್ದಾರೆ.

ಹನುಮದವತಾರದ ನಿರೂಪಣೆಯಲ್ಲೇ ರಾಮಾವತಾರದ ಕಥೆಯೂ ಶ್ಲೇಷದಿಂದ ಬಂದಿರುವುದರಿಂದಲೂ ಕಾವ್ಯಶೈಲಿಯಲ್ಲಿ ಪಂಡಿತಾಗ್ರಣಿಗಳು ಹೇಳಿರುವ ಗೂಢಭಾವಾರ್ಥವು ಹೊರಬೀಳುವಂತೆ ವಿವರಿಸಲು ವಾಲ್ಮೀಕಿ-ರಾಮಾಯಣದಿಂದಲೂ (ಕುಂಭಕೋಣದ ಟಿ. ಆರ್. ಕೃಷ್ಣಾಚಾರ್ಯರ

ಸಂಸ್ಕರಣ) ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದಿಂದಲೂ ಉಪಯುಕ್ತ ಪ್ರಮೇಯಾಂಶಗಳನ್ನು ಹುಡುಕಿ ಹೇಳಬೇಕಾಯಿತು ಹಾಗೆ ಹೇಳದಿದ್ದಿದ್ದರೆ ಅನೇಕರಿಗೆ ಶ್ಲೋಕಗಳಲ್ಲಿ ಅಡಗಿರುವ ಗೂಢಾಭಿಪ್ರಾಯ ಅರ್ಥವಾಗುವುದು ಕಷ್ಟವಾಗುತ್ತಿತ್ತು. ಅದಕ್ಕೂ ಹೆಚ್ಚಾಗಿ ವಾಯುಸ್ತುತಿಯಲ್ಲಿ ಅಡಗಿರುವ ಮಧ್ವಮತದ ಮೂಲತತ್ವಗಳು ಎಲ್ಲರಿಗೂ ಸ್ಪಷ್ಟವಾಗಿ ತಿಳಿಯುತ್ತಿರಲಿಲ್ಲ-ವೆಂದು ಎದೆ ಮುಟ್ಟಿ ಹೇಳಬಹುದು. ಆದ್ದರಿಂದಲೇ ಶ್ರೀವೇದವ್ಯಾಸರೇ ನನ್ನಲ್ಲಿ ನಿಂತು ಈ ಸೇವೆ ಮಾಡಿಸಿದ್ದಾರೆಯೇ ಹೊರತು ಇದು ನನ್ನ ಸ್ವಪ್ರಯತ್ನವಲ್ಲ. ಮಹಾಕವಿಯೆಂದು ಜಗದ್ವಿಖ್ಯಾತನಾದ ಕಾಳಿದಾಸ

ಮಂದಃ ಕವಿಯಶಃಪ್ರಾರ್ಥೀ ಗಮಿಷ್ಯಾಮ್ಯುಪಹಾಸ್ಯತಾಮ್

ಎಂದು ಹೇಳಿಕೊಂಡಿದ್ದರೂ ಅದು ಔಪಚಾರಿಕ. ಆದರೆ ಅದು ನನ್ನ ವಿಷಯದಲ್ಲಿ ನೂರಕ್ಕೆ ನೂರು ಭಾಗವೂ ಸತ್ಯ. ವೇದವ್ಯಾಸರ ಪ್ರೇರಣೆಯಿಲ್ಲದಿದ್ದರೆ, ಶ್ರೀ ವ್ಯಾಸರಾಯರು ಶ್ರೀ ಶ್ರೀಪಾದರಾಯರಂತಹ ಮಹಾನುಭಾವರ ಕರುಣಾ-ಪೂರ್ಣದೃಷ್ಟಿ ನನಗೆ ಬೆನ್ನ ಹಿಂದೆ ಇರದಿದ್ದಿದ್ದರೆ, ನಾನೆಲ್ಲಿ ? ಗಂಭೀರವಾದ ಸಾಗರದಂತಿರುವ ವಾಯುಸ್ತುತಿಯೆಲ್ಲಿ? ಅದಕ್ಕೂ ಮಿಗಿಲಾಗಿ ಅವತಾರ-ಪುರುಷರಾದ ಶ್ರೀಮದಾಚಾರ್ಯರ ಕೃತಿ ' ನಖಸ್ತುತಿ 'ಗೆ ವಿವರಣೆ ಬರೆಯಲು ಜಡಮತಿಯಾದ ನಾನೆಷ್ಟರವನು ?

ಇಷ್ಟು ಎಚ್ಚರಿಕೆ ತೆಗೆದುಕೊಂಡಿದ್ದರೂ ಇನ್ನೂ ಸಹ ನನ್ನ ಬರವಣಿಗೆಯೆಲ್ಲ ನಿರ್ದುಷ್ಟವಾಗಿದೆಯೆಂದೂ ಪ್ರಾಮಾಣಿಕವೆಂದೂ ಹೇಳುವ ಭರವಸೆ ನನಗಿಲ್ಲ. ನವವೃಂದಾವನದಲ್ಲೂ ಶ್ರೀ ಶ್ರೀಪಾದರಾಯರ ಮುಂದೆಯೂ ನಾನು ಭಿನ್ನವಿಸಿಕೊಂಡಿದ್ದೇನಾದರೂ ಪ್ರತ್ಯಕ್ಷವಾಗಿ ಅವರ ಒಪ್ಪಿಗೆ ಸಿಕ್ಕಿಲ್ಲ. ಆದಕಾರಣ ನನಗೆ ಪರಿಚಯವಿರುವ ಎಲ್ಲ ವಿದ್ವದ್ವರೇಣ್ಯರಲ್ಲೂ ಈ ಪುಸ್ತಕ ಕೊಟ್ಟು ಇದರಲ್ಲಿರುವ ಲೋಪದೋಷಗಳನ್ನು ತೋರಿಸಿಕೊಟ್ಟು ಅನುಗ್ರಹಿಸ-ಬೇಕೆಂದು ಪ್ರಾರ್ಥಿಸಿಕೊಂಡಿದ್ದೇನೆ. ಈ ಪ್ರಾರ್ಥನೆ ಅವರಿಗೆ ಮಾತ್ರವಲ್ಲ; ಈ ಗ್ರಂಥವನ್ನು ಓದುವ ಆಬಾಲವೃದ್ಧರಾದಿಯಾಗಿ ಎಲ್ಲರಿಗೂ ಅನ್ವಯಿಸುತ್ತದೆ. ' ಯುಕ್ತಿಯುಕ್ತವಚೋ ಗ್ರಾಹ್ಯಂ ಬಾಲಾದಪಿ ಶುಕಾದಪಿ ' ಎಂಬುದೇ ನನ್ನ ಗುರಿ. ಆದಕಾರಣ ಯಾವ ಮಹಾನುಭಾವರಿಗೆ ಏನೇನು

ನ್ಯೂನತೆಗಳು ತಪ್ಪುಗಳು ಕಾಣಿಸುತ್ತವೋ ಅದನ್ನು ತಿಳಿಸಿ ನನ್ನ ಮೇಲೆ ಅನುಗ್ರಹ ಮಾಡಬೇಕೆಂದು ಎಲ್ಲರಲ್ಲೂ ಕಳಕಳಿಯಿಂದ ಈ ಮೂಲಕ ಪ್ರಾರ್ಥಿಸಿಕೊಳ್ಳುತ್ತಿದ್ದೇನೆ.

ಇಷ್ಟೆಲ್ಲ ಆತ್ಮಪುರಾಣ ಹೇಳಿಕೊಳ್ಳುವ ಮುಖ್ಯ ಉದ್ದೇಶ ಇಷ್ಟೇ. ಇದನ್ನು ನನ್ನ ಪಾಂಡಿತ್ಯಪ್ರದರ್ಶನಕ್ಕಾಗಿ ಬರೆದ ಗ್ರಂಥವೆಂದಾಗಲಿ, ದುಡ್ಡಿನ ಲಾಭಕ್ಕಾಗಲಿ ಕೀರ್ತಿಯ ಸಂಪಾದನೆಗಾಗಲಿ ವ್ಯಾಪಾರೋದ್ಯೋಗ ಮಾಡ. ಬೇಕೆಂಬ ಹಂಬಲದಿಂದಾಗಲಿ ಬರೆದ ಗ್ರಂಥವೆಂದು ಯಾರೂ ಭಾವಿಸುವುದು ಬೇಡ. ಕೇವಲ ಶ್ರೀಹರಿವಾಯು ಪ್ರೀತ್ಯರ್ಥ ಸೇವಾರೂಪವಾಗಿ ಭಕ್ತಿಭರದಿಂದ ಬರೆದ ಗ್ರಂಥವೆಂದೇ ತಿಳಿಯಲಿ. ಗ್ರಂಥವು ಬೆಳೆದದ್ದಕ್ಕೆ ಯಾರೂ ಬೇಸರ-ಗೊಳ್ಳದೆ ನಮ್ಮ ಕಷ್ಟ-ನಷ್ಟಗಳನ್ನು ಗಮನಿಸಿ ನಮ್ಮೊಡನೆ ಸಹಕರಿಸಲಿ ಎಂದು ಪ್ರಾರ್ಥಿಸುವುದೇ ಆಗಿದೆ.

ಇಷ್ಟು ನಮ್ರ ನಿವೇದನೆ ಮಾಡಿ ನನ್ನ ಈ ಎರಡು ಮಾತುಗಳನ್ನು ಮುಗಿಸುವೆನು.

ಇತಿ ಅತ್ಯಂತ ವಿನೀತ<br>
ಪಿ. ವಿಷ್ಣುತೀರ್ಥ

# ಪ್ರಕಾಶಕರ ನುಡಿ

ಅನೇಕ ದಿನಗಳಿಂದ ನಿರೀಕ್ಷಿಸುತ್ತಿದ್ದ "ಶ್ರೀಹರಿವಾಯುಸ್ತುತಿ"ಯು ಇದೀಗ ಬಿಡುಗಡೆಯಾಗಿದೆ. "ನಖಸ್ತುತಿ" ಆರಂಭವಾದಾಗ ಇದು—ಸಂಪೂರ್ಣ "ಶ್ರೀಹರಿವಾಯುಸ್ತುತಿ"ಯು—ಎರಡು ವರ್ಷಗಳಲ್ಲಿ ಮುಗಿಯಬಹುದೆಂಬ ಅಂದಾಜು ಇದ್ದಕಾರಣ 'ವಾಸುದೇವಪದಸಂತತಸಂಗೀ'ಯ ಮೂಲಕವೇ ಪೂರ್ಣ ಮಾಡಬಹುದೆಂಬ ಗುರಿಯಿದ್ದಿತು. 'ನಖಸ್ತುತಿ' ಯೊಂದೇ ಸುಮಾರು ಮೂರು ವರ್ಷಕ್ಕೂ ಹೆಚ್ಚು ಕಾಲ ತೆಗೆದುಕೊಂಡಾಗ, ಶ್ರೀಹರಿವಾಯುಸ್ತುತಿಯು ೪೦೦ ಪುಟಗಳಿಗೆ ಮೀರದಂತೆ ಬರೆದುಕೊಡುವ ಲೇಖಕರ ಆಶ್ವಾಸನೆಯಂತೆ, ಆದಷ್ಟು ಕಡಿಮೆ ಕಾಲಾವಧಿಯಲ್ಲಿ ಸಮಗ್ರ ಪುಸ್ತಕರೂಪದಲ್ಲಿ ಕೊಡಬೇಕೆನ್ನುವ ಉದ್ದೇಶದಿಂದ ಪತ್ರಿಕೆಯಲ್ಲಿ ಪ್ರಕಟಿಸುವ ಯೋಜನೆ ಹಾಕಿಕೊಂಡು ಸುತ್ತೋಲೆ ಕಳಿಸಿದೆವು. ಗ್ರಾಹಕರ ಸಹಕಾರದಿಂದ ಹಾಗೂ ಕೆಲವು ಉದಾರಹೃದಯರ ಕೊಡುಗೈಯಿಂದ ೪೦೦ ಪುಟಗಳಿಗೆ ಬೇಕಾಗುವಷ್ಟು ಧನ ಸಂಗ್ರಹಿಸಿ ಕಾಗದವನ್ನು ಕೊಂಡುಕೊಂಡೆವು.

ಮುದ್ರಣ ಆರಂಭಿಸಿದಾಗಲೂ ೪೦೦ ಪುಟದಲ್ಲಿ ಲೇಖನ ಮುಗಿಸುವ ಗುರಿಯೇ ಇದ್ದರೂ ಲೇಖಕರು ಬರೆದು ತೋರಿಸುತ್ತಿದ್ದ ಹಸ್ತಪ್ರತಿಗಳನ್ನು ನೋಡಿದಾಗ, ಇಂತಹ ವಿಷಯಗಳು ಪುನಃ ದೊರಕಲಾರದೆಂಬ ದೃಷ್ಟಿಯಿಂದ ವಿಷಯದಲ್ಲಿ ಕೊರತೆ ಕಂಡುಬರದಂತೆ, ೪೦೦ ಪುಟಗಳ ಗುರಿಯನ್ನು ಮರೆತು ಲೇಖನವು ಸಾಧ್ಯವಾದಷ್ಟು ಪರಿಪೂರ್ಣವಾಗಿರುವಂತೆ ಮುಂದುವರೆಸ-ಬೇಕೆಂದು ಲೇಖಕರನ್ನು ಕೇಳಿಕೊಂಡೆವು. "ನಖಸ್ತುತಿ"ಯಲ್ಲಿರುವಂತೆ ವ್ಯಾಕರಣವಿಶೇಷಗಳು ಜಾಸ್ತಿಯಾಗದಂತೆಯೂ, ಶ್ಲೋಕಕ್ಕೆ ಪೂರಕವಾದ ವಿಷಯಗಳು ಕಡಿಮೆಯಾಗದಂತೆಯೂ ಬರೆದರೂ ನಮ್ಮ ಅಂದಾಜಿನ ಸಮಗ್ರ ಪುಸ್ತಕದ ೪೦೦ ಪುಟಗಳು ಹನುಮದವತಾರ ಒಂದರಲ್ಲೇ ಹದಿನೆಂಟು ಪುಟ ಮೀರಿ ಸಂಗೃಹೀತವಾದ ಧನವೆಲ್ಲ ಖರ್ಚಾಗಿ, ಗ್ರಾಹಕರಿಗೆ ಕೊಟ್ಟಿದ್ದ ೪೦೦ ಪುಟಗಳ ವಾಗ್ದಾನವನ್ನು ನೆರವೇರಿಸಿದ್ದಾಯಿತು. ಇದರ ಸಾರ್ಥಕತೆ ಎಷ್ಟು ಎಂಬುದು ಗ್ರಾಹಕರ ವೈಯಕ್ತಿಕ ಜ್ಞಾನದಾಹವನ್ನವಲಂಬಿಸಿದೆ.

"ಶ್ರೀಹರಿವಾಯುಸ್ತುತಿ"ಯ ೨+೪೧ ಶ್ಲೋಕಗಳಿಗೆ ಇಷ್ಟು ದೊಡ್ಡ ವ್ಯಾಖ್ಯಾನವಾಗಬಹುದೆಂಬ ಯೋಚನೆಯೇ ಇಲ್ಲದಿದ್ದಾಗ ಶ್ರೀಹರಿವಾಯು-ಸ್ತುತಿಯನ್ನು ಅರ್ಥಮಾಡಿಕೊಳ್ಳದೆ ಆಚಾರ್ಯರ ಇತರ ಗ್ರಂಥಗಳನ್ನು ಓದುವುದು ಶ್ರಮಸಾಧ್ಯವೆಂದೇ ಯೋಚಿಸಿ ಎಲ್ಲೂ ಕಡಿತಗೊಳ್ಳದಂತೆ ಲೇಖನ ಸಿದ್ಧಪಡಿಸಲಾಗಿದೆ. ಗ್ರಾಹಕರು ಇದರಿಂದ ಸಂತೋಷಿಸಿ ಮುಂದಿನ ಎರಡು ಅವತಾರಗಳನ್ನು ಇನ್ನೊಂದು ಸಂಪುಟದಲ್ಲಿ ಮುಗಿಸಲು ಪ್ರೋತ್ಸಾಹಿಸುವ-ರೆಂದು ಆಶಿಸುತ್ತೇವೆ.

10-6-1987 ಪ್ರಕಾಶಕರು

# ವಿಷಯಾನುಕ್ರಮಣಿಕೆ



## ಶ್ರೀಹರಿವಾಯುಸ್ತುತಿ

### ೧. ಮೂಲಭಾಗಕ್ಕೆ ಉಪೋದ್ಘಾತ

## ೨. ಶ್ರೀಹರಿವಾಯುಸ್ತುತಿಃ



## ೩. ಪೀಠಿಕಾ ಭಾಗ (೧ನೇ ವರ್ಗ)

### ೧–೧೬ ಶ್ಲೋಕಗಳು

### ಕ (ಅ) ಆಚಾರ್ಯರ ಪಾದಧೂಳಿಯ ಮಹಿಮೆ

# ತಿದ್ದುಪಡಿಗಳು

**ಸೂಚನೆ :** ತನಗೆ ತಾನೇ ತಪ್ಪೆಂದು ಅರ್ಥವಾಗುವ ಸಣ್ಣ ಸಣ್ಣ ತಪ್ಪುಗಳನ್ನು ಇಲ್ಲಿ ಸೂಚಿಸಿಲ್ಲ.

ಕೆ = ಕೆಳಗಿನಿಂದ

| ಪುಟ | ಪಂಕ್ತಿ | ತಪ್ಪು | ಹೀಗೆ ತಿದ್ದಿಕೊಳ್ಳಿ |
|---|---|---|---|
| ೪ | ೧೬ | ಉಪವಿಭಾಗಿಸಿ | ವಿಭಾಗಿಸಿ |
| ೯ | ಕೆ ೩ | ಇಲ್ಲಿ | (ಇಲ್ಲಿ |
| ೧೩ | ೧೧ | ಕ್ಷೀರಾಂಬೋಧಿಃ | ಕ್ಷೀರಾಂಭೋಧಿಃ |
| | ೧೭ | ಪದಯುಗೇ ಅಸ್ಮಾಕಂ | ಪದಯುಗೆ ಭಕ್ತಿಂ ಅಸ್ಮಾಕಂ |
| ೧೬ | ೮ | ಅದರ | ಅವರ |
| ೧೭ | ೧೨ | ಉದ್ಧಾ ಸು | ಉದ್ದಾಮು |
| ೧೮ | ೧೨ | ತೆಂ ಬಹ್ವೀಃ | ತ್ವಂ ಬಹ್ವೀಃ |
| ೧೯ | ೪ | ಪ್ರಮಾಣಾ....ಗ್ನಿಃ ॥ | ಪ್ರಮಾಣಾ....ಗ್ನಿಃ ವಿಜಯತೇ॥ |
| | ೭ | ಸ್ವರೂಪವಾಗಿದೆ | ಸ್ವರೂಪವಾಗಿ ವಿಜಯಶಾಲಿಯಾಗಿದೆ. |
| | ೧೧ | ಮಾಡಲಾರಂಭಿಸಿದುವು | ಮಾಡಿದುವು |
| ೨೦ | ೧೩ | ಹೇಳಿದ | ಹೇಳಿದ್ದ |
| ೨೧ | ೨ | ಮಣಿಮಂತ | ಮಣಿಮತಃ |
| ೨೮ | ೧೩ | ಮೂಲಮಂತ್ರಧ್ಯಾನ | ನಾರಾಯಣನ ಮೂಲರೂಪಧ್ಯಾನ |
| | ೧೪ | ೭. ವಂದೇ | ೭ಅ. ವಿಜ್ಞಾನರೋಚಿಃ (ವೇದವ್ಯಾಸಧ್ಯಾನ) ಆ. ವಂದೇ |
| ೨೯ | ೪ | ಸುಪರ್ಣ | ಸುವರ್ಣ |
| | ೧೦ | ಪಾಂತುನಸ್ಸದಾ | ಪಾಂತು ನಸ್ಸದಾ |
| ೬೩ | ೧೧ | ಜಲಜಲಸತ್ವಾಂ | ಜಲಜಲಜಲಸತ್ವಾಂ |

| ಪುಟ | ಪಂಕ್ತಿ | ತಪ್ಪು | ಹೀಗೆ ತಿದ್ದಿಕೊಳ್ಳಿ |
|---|---|---|---|
| ೪೬ | ೭ | ಟೀಕಾಽಸಮೀಕ್ಷ್ಯ | ಟೀಕಾಃ ಸಮೀಕ್ಷ್ಯ |
| ೪೯ | ೫ | ಸಾಮಾನ್ಯವಾದ | ಸಾಮಾನ್ಯವಾಗಿ |
| ೫೧ | ೧೦ | ಶೋಕವನ್ನು | ಶ್ಲೋಕವನ್ನು |
| | ಕೆ ೪ | ಭಯುದ | ಭಯುವು |
| ೫೭ | ಕೆ ೩ | ಸ್ಮೃತಾ | ಸ್ಮೃತ್ವಾ |
| ೬೧ | ೫ | ಧರಾಧಿ | ಧರಾದಿ |
| ೬೪ | ೭ | ತೇಯಃ | ತೇ, ಯಃ |
| ೭೦ | ೪ | ಶಿಷ್ಯರಿಂದ | ಶಿಷ್ಯರಾದ |
| ೭೩ | ೧೫ | ಹೇತವ | ಹೇತವಃ |
| ೭೬ | ೫ | ಕ್ರಾತ್ಯಾದಿ | ಕ್ರಾತ್ಯಾದಿ |
| ೭೯ | ೪ | ಇಚ್ಛಾತರ್ಥಾತ್ | ಇಚ್ಛಾಥರ್ಥಾತ್ |
| | ೫ | ಅಕಾರಸ್ಯಾ | ಅಕಾರಸ್ಯ |
| | ೧೪ | ಕಾಂತಿಶ್ಛಾ | ಕಾಂತಿಶ್ಚಾ |
| ೮೩ | ಕೆ ೧೧ | ಸತ್ತ್ವಾದೆ | ಸತ್ತ್ವಾದಿ |
| | ಕೆ ೧೭ | ಶುಕ್ಲಾದಾವಸಿ | ಶುಕ್ಲಾದಾವಪಿ |
| | ಕೆ ೧೦ | ಬುದ್ಧ್ಯಾಂ | ವಟ್ಯಾಂ |
| ೮೬ | ಕೆ ೧೩ | ಎಂದು ಮಾಡಿದ್ದಕ್ಕೆ | ಎಂದು ಅರ್ಥ ಮಾಡಿದ್ದಕ್ಕೆ |
| ೮೭ | ೪ | ಷ್ಯ ಇಗ್ (ಯ) | ಷ್ಯ (ಯ) |
| ೯೫ | ೭ | ನುರಾಗಸ್ಯ | ನುರಾಗಸ್ತಸ್ಯ |
| ೯೬ | ೧೦ | ಸ್ಮರಣೆ | ಲಕ್ಷ್ಮೀದೇವಿಯನ್ನು ಸ್ಮರಣೆ |
| ೯೭ | ಕೆ ೮ | ವಿವರಿಸುವಂತೆ | ವಿವರಿಸಿರುವಂತೆ |
| ೯೮ | ೭ | ಆನಂದದಲ್ಲಿ | ಆನಂದವಲ್ಲಿಯಲ್ಲಿ |
| ೧೦೩ | ಕೆ ೬ | ವಃಸ್ತ್ರಿಗುರುಃ | ಮಸ್ತ್ರಿಗುರುಃ |
| ೧೧೫ | ೪ | ಮಲ್ಲನಾಥ | ಮಲ್ಲಿನಾಥ |
| | ೬ | ದ್ವಾಭ್ಯಂ | ದ್ವಾಭ್ಯಾಂ |

| ಪುಟ | ಪಂಕ್ತಿ | ತಪ್ಪು | ಹೀಗೆ ತಿದ್ದಿಕೊಳ್ಳಿ |
|---|---|---|---|
| ೧೦೮ | ೮ | ಇದನ್ನು | ಇದು |
| ೧೧೦ | ೩ | ಚಾಸಾ— | ಪ್ರಾಜ್ಞಃ ಚೊಸಾ |
| | ೧೧ | ಕ್ತ-ಪ್ರತ್ಯಯ | ಕ್ತ-ಪ್ರತ್ಯಯ ಬಂದು |
| | ೧೨ | ಘೂರೀಕೃತಂ | ದೂರೀಕೃತಂ |
| ೧೧೧ | ಕೆ ೨ | ಮಕಾರಾದೇಶ | ಮಕಾರಕ್ಕೆ ತಕಾರಾದೇಶ |
| ೧೨೧ | ಕೆ ೯ | ಅಕಾರಾದೇಶ | ಅಕಾದೇಶ |
| ೧೩೦ | ಕೆ ೨ | ಕಷ್ಟಪಾರ್ಪಣ್ಯಗಳೇ | ಕಷ್ಟಕಾರ್ಪಣ್ಯಗಳೇ |
| ೧೩೧ | ಕೆ ೯ | ಹರಿವಾಯುಗಳ ಮಹಿಮೆಯು | ಹರಿವಾಯುಗಳ ಪಾದ-ಧೂಳಿಯ ಮಹಿಮೆಯು |
| ೧೪೫ | ೧ | ಯೋಗವಿದ್ದಲ್ಲಿ | ಯೋಗವಿರುವುದರಿಂದ |
| ೧೩೭ | ಕೆ ೮ | ವೇದವಿಶೇಷೋ | ವೇದವಿಶೇಷಃ |
| ೧೪೦ | ೩ | ಆಂದರೆ | ಆದರೆ |
| ೧೪೪ | ೯ | ಜೀವೋತ್ತಮಾದಿ | ವಾಯುಜೀವೋತ್ತಮಾದಿ |
| | ೧೨ | ಕೃತವತ | ಕೃತವತಃ— |
| ೧೪೫ | ೬ | ವೇದಗಳಿಗೇ | ವೇದಗಳೇ |
| ೧೪೭ | ೮ | ಸ್ಮತ್ರಿಗಳಲ್ಲೂ | ಸ್ಮೃತಿಗಳಲ್ಲೂ |
| ೧೭೫ | ೮ | ಇಷ್ಟ ಗತೌ | ಇಷು ಗತೌ |
| | ೯ | ಜನಾತಿ | ಜಾನಾತಿ |
| | ೧೫ | ಏ ಚೋಯ | ಏಚೋಽಯ |
| ೧೮೮ | ಕೆ ೩ | ಭೃತಾ ಚ-ಧೃತಾ ಚ- | ಭೃತಾ ಚ— |
| | ಕೆ ೧ | ಇಚ್ಛಾಂ | ಇಚ್ಛಾ |
| ೧೮೯ | ೫ | ಹೊಂಚುಹಾಕು | ಬೆಕ್ಕು ಹೊಂಚುಹಾಕು |
| | ೫ | ಈರ್ವಾದಿ | ಈ ದುರ್ವಾದಿ |
| ೧೯೪ | ೪ | ಸುರಮುಸುಖಜನಾ | ಸುರಮುಖಸುಜನಾ |
| ೨೦೨ | ೯ | ಕಾರಯಿತಾ | ಕಾರಯಿತ್ರಾ |

| ಪುಟ | ಪಂಕ್ತಿ | ತಪ್ಪು | ಹೀಗೆ ತಿದ್ದಿಕೊಳ್ಳಿ |
|---|---|---|---|
| ೨೧೦ | ಕೆ ೬ | ಹೇಳುತ್ತದೆ. ಆಳುವ | ಹೇಳುತ್ತದೆ—ಆಳುವ |
| ೨೧೨ | ಕೆ ೭ | ಮೊತಾಮುಪ | ಮಾತ್ರಾಮುಪ |
| ೨೧೩ | ೨ | ದೊರಕುವುದಾದ | ದೊರಕುವುದಾದ್ದರಿಂದ |
| | ೧೨ | ಈ ದ್ವೇಷ | ಈಗ ದ್ವೇಷ |
| ೨೧೪ | ೧೧ | ಗರಿಮಾ | ಗರಿಮ್ಣಾ |
| ೨೧೬ | ಕೆ ೧೦ | ಭವದ್ದ್ವೇಷಃ/ ಏಷಾಂ.... ಏಷಾ— | ಭವದ್ದ್ವೇಷಃ ಏಷಾ— |
| ೨೧೮ | ೮ | 5. ಅದಕ್ಕೂ ಬ್ರಹ್ಮ | 5. ಬ್ರಹ್ಮ |
| ೨೩೧ | ೩ | ಏಕಾ, ಶ್ಯುಪವಾಸದ | ಏಕಾದಶ್ಯುಪವಾಸ, |
| | ೧೧ | ಸ್ಮೃತಿಯೋಗ್ಯಾ | ಸ್ಮೃತಿಯೋಗ್ಯಾಃ |
| ೨೫೦ | ಕೆ ೩ | ಗೋವಿಧ | ಗೋವಿಂದ |
| ೨೫೬ | ೪ | ಹೊಂದುವ | ಹೊಂದುವ ಅಥವಾ, |
| ೨೫೭ | ೧೧ | ಸ್ರೇಣಾ, ಪ್ರತಿಬದ್ಧಪ್ಯ-ವಾದ | ಸ್ರೇಣಾಪ್ಯಪ್ರತಿಬದ್ಧವಾದ |
| ೨೫೮ | ೩ | ಅಚಿದ್ರ | ಅಚ್ಛಿದ್ರ |
| | ೪ | ಶಕ್ಯೋಹ | ಶಕ್ಯೋ |
| ೨೬೨ | ಕೆ ೨ | ತಿಳಿದು | ತಿಳಿದು ಯಾರು |
| ೨೬೫ | ೧ | ವಿಷ್ಣೋ | ವಿಷ್ಣೋಃ, |
| ೨೬೮ | ೮ | ಅವ್ಯಯ | ಅನ್ವಯ |
| | ೧೧-೧೨ | ಎಂಬುವು ಎರಡು.... ಪ್ರತ್ಯಯಗಳು | ಎಂಬುವು ವ್ಯಾಕರಣದಲ್ಲಿ ... ಎರಡು ಪ್ರತ್ಯಯಗಳು |
| | ಕೆ ೬ | ಅಥ | ಅಥವಾ |
| | ಕೆ ೫ | ಲಘುತರಂ (ಲಘೀಯಃ) | ಲಘುತರಃ (ಲಘೀಯಾನ್) |
| | ಕೆ ೩ | ಲಘಿಷ್ಠಿ | ಲಘಿಷ್ಠ |
| ೨೬೯ | ೪ | ಸಂಸ್ಕೃತ | ಸಂಸ್ಕೃತದಲ್ಲಿ |

| ಪುಟ | ಪಂಕ್ತಿ | ತಪ್ಪು | ಹೀಗೆ ತಿದ್ದಿಕೊಳ್ಳಿ |
|---|---|---|---|
| ೨೯೯ | ೯ | ಅಧ್ಯಾಯನ್ | ಅಧ್ಯಾಯನ್ ಯಃ |
| ೨೮೪ | ೫ | ಬಿಡುವೆ | ಬಿಟ್ಟುಬಿಡಿ |
| ೨೭೫ | ೬ | ಬೃಹದ್ಗ್ರಂಥದಿಂದ ಆರಿಸಿ | ಬೃಹದ್ಗ್ರಂಥದಿಂದ ಕೆಲವು ವಾಕ್ಯಗಳನ್ನು ಆರಿಸಿ |
| ೨೮೯ | ಕೆ ೧೦ | ದೇವಾಧ್ಯ | ದೇವಾದ್ಯಾ |
| ೨೯೩ | | ಪಾದಟಿಪ್ಪಣಿಯು 'ಅನಭಿಭವಂ' ಎಂಬುದು ಮುಂದಿನ ಪುಟದಲ್ಲಿ ಕಡೆಯ ಐದು ಪಂಕ್ತಿಗಳಲ್ಲಿ 'ಚ ಎಂದರೆ....' ಎಂದು ಆರಂಭವಾಗಿ ೨೯೫ನೇ ಪುಟದಲ್ಲಿ........ವರ್ಗದಲ್ಲೀ ಪ್ರೇರಿಸುತ್ತಾರೆ' ಎಂಬಲ್ಲಿಗೆ ಮುಗಿಯುತ್ತದೆ. | |
| ೨೯೪ | ಕೆ ೨ | ಯೇವ—' | ಮೇವ—' |
| ೨೯೬ | ಕೆ ೧೨ | ಮುಖ್ಯಪ್ರಾಣನು | ಮುಖ್ಯಪ್ರಾಣನ ಮೂಲಕ |
| ೨೯೮ | ೭ | ಉದ್ಯೋಗವನ್ನು ಮುಖ್ಯ | ಉದ್ಯೋಗವನ್ನು ಕೊಡುವ ಮುಖ್ಯ |
| ೩೦೧ | ೧೩ | ವಿಧಿತಾ | ವಿದಿತಾ |
| ೩೦೪ | ಕೆ ೭ | ಗುರುರುಕ್ರೋ | ಗುರುರುಕ್ತೋ |
| ೩೧೧ | ೩ | ಗುರೋರ್ತಿತ್ಯ | ಗುರೋರ್ನಿತ್ಯ |
| ೩೨೩ | ಕೆ ೧೧ | ನರಕದಲ್ಲಿ | ನಿತ್ಯನರಕದಲ್ಲಿ |
| ೩೨೪ | ಕೆ ೩ | ವಾಕ್ಪುಷ್ಟ್ಯ | ವಾಕ್‌ಪುಷ್ಪ್ಯ |
| ೬೨೫ | ೮ | ಖರಾಧಿಕ | ಖರಾದಿಕ |
| ೩೨೮ | ಕೆ ೩ | ತನುಸ್ತನು | ತನುಸ್ತನೂ |
| ೩೬೩ | ೧೦ | ಯೋಽಜನ್ಯೈಃ | ಯೋಜನ್ಯೈಃ |
| ೩೬೬ | ೧ | ಶ್ಲೋಕದ | ಶ್ಲೋಕ, |
| ೩೭೧ | ೧೪ | ವ್ಯೃಷ್ಟಕಾಷ್ಟ: | ವ್ಯೃಷ್ಟಕಾಷ್ಠ: |
| ೩೮೪ | ೧೧ | ರಾಮನ | ರಾಮನು |
| ೩೮೫ | ಕೆ ೧೧ | ಕಾಷ: | ಕಾಷ್ಠ: |

| ಪುಟ | ಪಂಕ್ತಿ | ತಪ್ಪು | ಹೀಗೆ ತಿದ್ದಿಕೊಳ್ಳಿ |
|---|---|---|---|
| ೩೮೭ | ೧ | ಭಾಶ್ಪವಿ | ಭಾಷ್ಪವಿ |
| ೩೮೯ | ೧೧ | ಮೋ–ನಿನ್ನ | ಮೋ–ನನ್ನ |
| ೩೯೨ | ೯ | ಬಿಟ್ಟನು.) | ಬಿಟ್ಟನು. |
| | ೧೪ | ಮುಮೋ ಚ | ಮುಮೋಚ |
| ೩೯೮ | ೯ | ಕೊಳ್ಳಬೇಕು.) ದುಷ್ಪ್ರಾಪೇ....ಇತ್ಯಾದಿ ಮುಂದಿನ ಪಂಕ್ತಿಯನ್ನು ಹಿಂದಿನ ಪಂಕ್ತಿಯ ಜೊತೆಯೇ ಸೇರಿಸಿಕೊಳ್ಳಿ. | |
| | ಕೆ ೨ | ಇವನ್ | ಇನನ್ |
| ೪೦೨ | ಕೆ ೧೦ | ಘಾತಅ–ವಧ್ಯ | ಘಾತ–ಅವಧ್ಯ |
| ೪೦೩ | ೭ | ಸಯೋಗವೆಂಬ | ಸಹಯೋಗವೆಂಬ |
| ೪೦೪ | ಕೆ ೩ | ರೇಖವನ್ನು | ರೇಕವನ್ನು |
| ೪೦೫ | ಕೆ ೧೦ | ಸಮಾಸ. | ಸಮಾಸ.* |
| ೪೦೯ | ಕೆ ೧ | ೪೬ ಸರ್ಗ, ೨. | ೪೬ ಸರ್ಗ). ೨. |

# ಆಧಾರಗ್ರಂಥಗಳ ಪಡಿಯಚ್ಚು



तैमावगाढं दृढम् । प्रघटनं सङ्घट्टनम् । तेन सघटात्कारम् । घटात्कारो-ऽनुकरणशब्दः । तेन सह वर्तनं यथा भवति तथा सङ्घृष्यमाणः सम्पीड्यमानः प्रान्तः पर्यन्तः यस्य तत् । प्राग्र्यं श्रेष्ठम् । "तत्र साधुः" (अ. सू. ४.४.९८.) इति यत्प्रत्ययः । अङ्घ्रिपीठं पादपीठम् । तस्मादुत्थितानि ऊर्ध्वं गतानि कनकस्य रजांसि । तैः पिञ्जरं यथा भवति तथा आरञ्जिताः समन्तादरुणीकृताः आशाः दिशो यैस्ते तथोक्ताः । एवंविधप्रौढिमाटीकमानाः[1] श्रीमदानन्दतीर्थश्रीमच्चरणनखिनरेणवोऽस्मान् पुनन्त्विति पूर्वेण सम्बन्धः[2] ॥ ● ॥

कविरिदानीं स्वाहङ्कारं परिहरति—

> जन्माधिव्याध्युपाधिप्रतिहतिविरहप्रापकाणां गुणाना-
> मग्र्याणामर्पकाणां चिरमुदितचिदानन्दसन्दोहदानाम् ।
> एतेषामेष दोषप्रमुषितमनसां द्वेषिणां दूषकाणां
> दैत्यानामार्तिमन्धे तमसि विदधतां संस्तवे नास्मि शक्तः ॥ २ ॥

जन्मादीति ॥ एषः स्तुतिप्रवृत्तोऽहम् । जन्म जननम् । आधिर्मानसी व्यथा । "पुंस्याधिर्मानसी व्यथा" इत्यमरः । व्याधिर्भगन्दरादिः[3] । तेषामुपाधयः कारणानि अविद्याऽस्मितादयः । तेषां प्रतिहतिः प्रत्यावृत्तिः । हन हिंसागत्योरित्यस्मात् गत्यर्थे क्तिन्प्रत्ययः । तस्याः विरहः विच्छेदः, तस्य प्रापकाणां यापकानाम् । उपाधिः शरीरम्, तस्य प्रतिहतिर्नाश, तस्या विरहः प्रध्वंसः, तस्य प्रापकाणामिति वा । पुनः किम्भूतानाम्[4]? अग्र्याणां श्रेष्ठानां गुणानां भक्तिज्ञानादीनां अर्पकाणां प्रदातॄणाम् । पुनः किंविशिष्टानाम्? उदितः उदयमारभमाणः । "आदिकर्मणि क्तः कर्तरि च" (अ. सू. ३.४.७१.) इति कर्तरि क्तः । चित् ज्ञानम् । आनन्दो हर्षः । तयोः सन्दोहः समूहः । तं ददतीति तेषां तथोक्तानाम् । पुनः कीदृशानाम्? दोषेणान्यथाज्ञानादिना प्रमुषितं कलुषितं मनो येषां तेषाम्[5], द्वेषिणां द्वेषणशीलानाम् । "सम्पृचानुरुध–" (अ सू. ३.२.१४२.)

१ 'प्रौढमहिमान ' इति पा.
२ 'पूर्वेण योजना' इति पा.
३ अत्र सर्वत्रापि कोशेष्वस्फुटः पाठः । क्वचित् 'व्याधिर्भगज्वरादयः' (?) इति पठ्यते ।
४ 'किंविधानाम्' इति पा.
५ 'तेषां तथा द्वेषिणाम्' इति पा.

वि. टी.

पुनः कथम्भूता यास्त इत्याकाङ्क्षायां तानेव विशिनष्टि—उत्कण्ठेति ॥ उत्कण्ठया तृष्णया अकुण्ठो प्रवृद्धौ 'आयल्लिकमुत्कण्ठा स्यादुत्कलिका रतिश्चरणरणिका । औत्कण्ठ्यं ह्लेख'इति हलः ॥ तादृशौ यौ कोलाहलमयौ कलकलध्वनिवेगौ ताभ्यां विदिता या अजस्रमनवरतं सेवा परिचर्या तत्संस्तवा तयानुवृद्धमानुपूर्व्येण वृद्धं प्रतिदिनमृद्धमित्यर्थः । यत्प्राज्ञात्मज्ञानं प्रकर्षेण मानातीति प्रज्ञः प्रज्ञ एव प्राज्ञः 'प्रज्ञादिभ्यश्चे'ति प्रज्ञादित्वात्स्वार्थेऽण् प्रत्ययः । अतति व्याप्नोतीत्यात्मा औणादिको मन्प्रत्ययः । स चासावात्मा चेति प्राज्ञात्मा सर्वज्ञविष्णुस्तस्य यज्ज्ञानं तेन धूतं निरस्तमन्धतमसमज्ञानं महान्धकारविशेषो वा येषां ते तथोक्ताः 'अवसमन्धेभ्यस्तमसः' इति समासान्तोऽच्प्रत्ययः । तादृशा ये सुमनसो देवाः 'मालत्यां पण्डिते पुष्पे देवे च सुमनोऽभिधा' इति विश्वः । तेषां मौलयः किरीटानि तेषु खचितानि रत्नानि मौलिरत्नानि तेषामाव-

> उत्कण्ठाकुण्ठकोलाहलजवविदिताजस्रसेवानुवृद्धप्राज्ञात्मज्ञानधूतान्धतमससुमनोमौलिरत्नावलीनाम् । भ-
> क्त्युद्रेकावगाढप्रघटनसघटात्कारसंघृष्यमाणप्रान्तप्राग्र्याङ्घ्रिपीठोत्थितकनकरजःपिञ्जरारञ्जिताशाः ॥ २ ॥

लयः पङ्क्तयस्तासाम् । भक्त्युद्रेकः उत्कर्षस्तेनावगाढं दृढं यत्प्रघटनं सङ्घट्टनं तेन घटात्कारोऽनुकरणध्वनिस्तेन सहवर्तनं यथा भवति तथा संघृष्यमाणः सम्पीड्यमानः सघटात्कारसंघृष्यमाणस्तादृशः प्रान्तः पर्यन्तो यस्य तत्तथोक्तम् । तादृशं प्राग्र्यमुत्तमं 'तत्र साधु' रिति यत्प्रत्ययः । यदङ्घ्रिपीठं पादपीठं तस्मादुत्थितानि ऊर्ध्वगतानि यानि कनकस्य रजांसि तैः पिञ्जराः पीतरक्ताः 'पिञ्जरः पीतरक्तः स्या'दिति हलः । अत एव आसमन्तादञ्जिता अलङ्कृता आशा दिशो यैस्ते तथोक्ताः । विलोकीमहितया भास्वत्प्रायादृतत्वात्पापासुना पवित्रीकरणदाक्षिणत्वेति समर्थितत्वात्काव्यलिङ्गालङ्कृतिश्च । उपसर्जनत्वेन मुख्यप्राणपत्न्या भारत्याश्च स्तुतिः कविना विवक्षिता । स्रग्धरावृत्तमिदं सम्पूर्णां स्तुतिं क्षिप्यायने ध्येयस्करी मुख्यतोऽवर्णताधिका च ॥ अत्रअमेति शारदाशारदेति भार भारेति वर्णावृत्त्या छेकानुप्रासश्च 'छेकश्छिद्यमनीनां तु व्यञ्जनानां यथा भवेत् । आवृत्तिरनियत्यात्र छेकानुप्रास इष्यते' इति तल्लक्षणम् ॥ १ ॥

॥ ಶ್ರೀಮದ್ಧನುಮದ್ಭೀಮಮಧ್ವಾಂತರ್ಗತ ಶ್ರೀರಾಮಕೃಷ್ಣವೇದವ್ಯಾಸಾತ್ಮಕ ಶ್ರೀಲಕ್ಷ್ಮೀನೃಸಿಂಹಾಯ ನಮಃ ॥

# ಶ್ರೀ ಹ ರಿ ವಾ ಯು ಸ್ತು ತಿ

## ೧. ಮೂಲಭಾಗಕ್ಕೆ ಉಪೋದ್ಘಾತ

### ಇಡೀ ಸ್ತುತಿಯ ಪಕ್ಷಿನೋಟ

### ಲೇಖಕನ ಮಂಗಳಾಚರಣೆ

ಶ್ರೀನೃಸಿಂಹಂ ಮಧ್ವಬಂಧುಂ ಪ್ರಣಮ್ಯಾದೌ ಗುರೂಂಸ್ತಥಾ ।
ಕರಿಷ್ಯೇ ಸುಖಬೋಧಾಯ ವಾಯುಸ್ತುತ್ಯರ್ಥಸಂಗ್ರಹಮ್ ॥

**ಶ್ರೀಹರಿವಾಯುಸ್ತುತಿ**—ಶ್ರೀಮತ್ತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ ಈ ಸ್ತುತಿಯ ಮೂಲಭಾಗದಲ್ಲಿ ನಲವತ್ತೊಂದು ಶ್ಲೋಕಗಳಿವೆ. ಇವುಗಳಲ್ಲಿ ಕಡೆಯ ಒಂದು ಶ್ಲೋಕ ಮಾತ್ರ ಫಲಸ್ತುತಿಯಾಗಿದ್ದು ಮಿಕ್ಕ ನಲವತ್ತು ಶ್ಲೋಕಗಳೂ ಮುಖ್ಯವಾಗಿ ವಾಯುದೇವರ ಮೂಲರೂಪದ ಮತ್ತು ಅವರ ಅವತಾರತ್ರಯದ ಸ್ತುತಿಗಳೇ ಆಗಿವೆ. ಹೀಗೆ ಸ್ಥೂಲವಾಗಿ ನೋಡುವವರಿಗೆ ಈ ಶ್ಲೋಕಗಳು ಕೇವಲ ವಾಯುದೇವರ ಸ್ತೋತ್ರವಾಗಿ ಕಂಡರೂ ವಾಸ್ತವಿಕವಾಗಿ ಈ ನಲವತ್ತು ಶ್ಲೋಕಗಳೂ ಶ್ರೀಹರಿಯ ಸ್ತುತಿಯೂ ಆಗಿವೆ. ಈ ಅಂಶವನ್ನು ಸ್ವತಃ ಪಂಡಿತಾಚಾರ್ಯರೇ ಈ ಸ್ತುತಿಯಲ್ಲೇ ಅನೇಕ ಕಡೆ ಸೂಚನೆ ಮಾಡಿ-ಮಾಡಿ ತೋರಿಸಿಕೊಟ್ಟಿದ್ದಾರೆ. (ಇದನ್ನು ಸದ್ಯದಲ್ಲೇ ವಿವರಿಸುವೆವು.) ಒಟ್ಟಿನಲ್ಲಿ ಈ ಸ್ತುತಿಯ ಸಕಲ ಶ್ಲೋಕಗಳೂ ವಾಯುದೇವರ ಸ್ತುತಿಯೂ ಆಗಿರುವುವಲ್ಲದೆ ಶ್ರೀಹರಿಯ

ಸ್ತುತಿಯೂ ಕೂಡ ಆಗಿವೆ. ಇದನ್ನು ಲಕ್ಷ್ಯದಲ್ಲಿಟ್ಟುಕೊಂಡು ಹಿಂದಿನಿಂದಲೂ ವಿದ್ವದ್ಗೋಷ್ಠಿಯಲ್ಲಿ ಈ ಸ್ತುತಿಯನ್ನು **ಶ್ರೀಹರಿವಾಯುಸ್ತುತಿ** ಎಂದೇ ಕರೆ-ಯುತ್ತಾ ಬಂದಿದ್ದಾರೆ. ಅಥವಾ ವಾಯುಶಬ್ದವು ಮುಖ್ಯವೃತ್ತಿಯಿಂದ ಶ್ರೀಹರಿಯನ್ನೇ ಹೇಳುವುದರಿಂದ ಸುಮ್ಮನೆ **ವಾಯುಸ್ತುತಿ** ಎಂದರೂ ಶ್ರೀಹರಿಯ ಸ್ತುತಿ ಎಂದೂ ಅರ್ಥವಾಗುತ್ತದೆ.

**ಹರಿಸ್ತುತಿಯೆಂಬುದಕ್ಕೆ ಸಾಧಕಪ್ರಮಾಣಗಳು**—ಶ್ರೀಹರಿವಾಯು-ಸ್ತುತಿ ಶ್ರೀಹರಿಯ ಸ್ತುತಿಯೂ ಆಗಿದೆಯೆಂಬುದಕ್ಕೆ ಈ ಸ್ತುತಿಯ ಅನೇಕ ವಾಕ್ಯಗಳೇ ಸಾಧಕವಾಗಿವೆ. ಏಳನೇ ಶ್ಲೋಕದಲ್ಲೂ ಹದಿನಾಲ್ಕನೇ ಶ್ಲೋಕ ದಲ್ಲೂ ಶ್ರೀ ಪಂಡಿತಾಚಾರ್ಯರು ವಾಯುದೇವರನ್ನು ಪ್ರಾರ್ಥಿಸಿಕೊಳ್ಳುತ್ತಾ 'ಹೇ ಸ್ವಾಮಿ, ಶ್ರೀಹರಿಯಲ್ಲೂ ಅನಂತರ ತಮ್ಮಲ್ಲೂ ಭಕ್ತಿಯನ್ನು ಕೊಡಿ' ಎಂದು ಕೇಳಿಕೊಂಡಿದ್ದಾರೆ. ಹದಿನೈದನೆಯ ಶ್ಲೋಕದಲ್ಲಂತೂ 'ಶ್ರೀವಿಷ್ಣು ಸರ್ವೋತ್ತಮನಾದ್ದರಿಂದ ಅವನಲ್ಲಿ ಅತ್ಯಂತ ಹೆಚ್ಚಾದ ಭಕ್ತಿಯನ್ನು (ಭಕ್ತಿಂ ಗರಿಷ್ಠಾಂ) ಮಾಡಬೇಕೆಂದೂ ಅನಂತರ ತಾರತಮ್ಯಾನುಸಾರ ಮಿಕ್ಕ ಹರಿಭಕ್ತರಲ್ಲಿ ಭಕ್ತಿಮಾಡಬೇಕೆಂದೂ ಹೇಳಿ ಅಂಥವನನ್ನೇ ವಾಯುದೇವರು ಸಲಹುತ್ತಾರೆಂದೂ ಹೇಳಿದ್ದಾರೆ. ಫಲಸ್ತುತಿ ಹೇಳುವಾಗ ತಾವು 'ಕೇಶವಾ-ನಂದತೀರ್ಥ ಶ್ರೀಮತ್ಪಾದಾಬ್ಜಭಕ್ತ'ರೆಂದು ಹೇಳಿಕೊಂಡು ಈ ಸ್ತೋತ್ರವು 'ಹರೇರ್ವಾಯುದೇವಸ್ಯ ಚ' ಸ್ತುತಿಯೆಂದು ಕಂಠೋಕ್ತವಾಗಿಯೇ ಸಾರಿ-ದ್ದಾರೆ. ಈ ಸ್ತುತಿಯು ಫಲದಾಯಕವಾಗಬೇಕಾದರೆ 'ಯೇ ಅಮೂ ನಮಂತಿ ಏತೇ ಮುಕ್ತಿಂ ವ್ರಜಂತಿ' ಎಂದರೆ 'ಯಾರು ಶ್ರೀಹರಿಯನ್ನೂ ಮಧ್ವಾಚಾರ್ಯರನ್ನೂ ಇಬ್ಬರನ್ನೂ ವಂದಿಸುತ್ತಾರೋ ಅವರೇ ಮುಕ್ತಿ-ಯನ್ನೈದುತ್ತಾರೆ' ಎಂದೂ ಉಪಸಂಹಾರಮಾಡುತ್ತಾರೆ. ಇದರಿಂದ ವಾಯು-ಸ್ತುತಿಯು ಹರಿಸ್ತುತಿಯೂ ಆಗಿದೆಯೆಂದು ಸಿದ್ಧವಾಯಿತು.

**ಪ್ರತಿ ಶ್ಲೋಕಕ್ಕೂ ಎರಡೆರಡು ಅರ್ಥ**—ಹೀಗೆ ಶ್ರೀಹರಿವಾಯು-ಸ್ತುತಿಯ ನಲವತ್ತು ಶ್ಲೋಕಗಳಿಗೂ ಎರಡೆರಡು ಅರ್ಥಗಳಿವೆ ಎಂದು ಹೇಳಿದಂತಾಯಿತು—ಒಂದು ವಾಯುಪರವಾದ ಅರ್ಥ, ಇನ್ನೊಂದು ವಿಷ್ಣು ಪರವಾದ ಅರ್ಥ. ಅಣುಭಾಷ್ಯದಲ್ಲಿ ಶ್ರೀಮದಾಚಾರ್ಯರು 'ಮುಖ್ಯ-

ಪ್ರಾಣವಶೇ ಸರ್ವಂ ಸ ವಿಷ್ಣೋರ್ವಶಗಃ ಸದಾ' ಎಂದರೆ 'ಮಿಕ್ಕ ಎಲ್ಲವೂ ಮುಖ್ಯಪ್ರಾಣನ ಅಧೀನವಾಗಿದೆ. ಅವನು ಸದಾ ವಿಷ್ಣುವಿಗೇ ಅಧೀನನಾಗಿದ್ದಾನೆ' ಎಂದು ಹೇಳಿದ್ದಾರೆ. ಅದರಂತೆ ವಾಯುವಿನ ಮಹಿಮೆ ಹೇಳಿದ ಮಾತ್ರದಿಂದಲೇ, ವಾಯುವೇ ಹರ್ಯಧೀನನಾದ್ದರಿಂದ, ವಿಷ್ಣುಮಹಿಮೆ ಹೇಳಿದಂತೆಯೇ ಆಗುತ್ತದೆ. ಆದಕಾರಣ ಪೂರ್ವದ ವಾಯುಸ್ತುತಿ ವ್ಯಾಖ್ಯಾನಕಾರರಾದ ಛಲಾರಿ ಆಚಾರ್ಯರೂ ವಿಶ್ವಪತಿತೀರ್ಥರೂ ಕೇವಲ ವಾಯುಪರವಾದ ಅರ್ಥವನ್ನೇ ಹೇಳಿದ್ದಾರೆ. ಏಕೆಂದರೆ ಈ ಅರ್ಥ ಸುಲಭವಾಗಿ ಗೊತ್ತಾಗುತ್ತದೆ. ಅವರಿಬ್ಬರಿಗಿಂತಲೂ ಈಚಿನವರಾದ ಪುಂಗನೂರು ರಾಘವೇಂದ್ರಾಚಾರ್ಯರು ಪ್ರತಿಶ್ಲೋಕಕ್ಕೂ ವಿಷ್ಣುಪರವಾದ ಇನ್ನೊಂದು ಅರ್ಥವನ್ನೂ ವಿಶೇಷವಾಗಿ ತೋರಿಸಿಕೊಟ್ಟಿದ್ದಾರೆ. ಈ ನಮ್ಮ ವ್ಯಾಖ್ಯಾನದಲ್ಲೂ ಉದ್ದಕ್ಕೂ ಆ ಎರಡು ಅರ್ಥಗಳನ್ನೂ ಆದಷ್ಟು ವಿವರವಾಗಿ ಬಿಡಿಸಿ ಬಿಡಿಸಿ ತೋರಿಸಿಕೊಡಲಾಗುವುದು.

**ಶ್ಲೋಕಗಳ ವರ್ಗೀಕರಣ** — "ಸಂಕ್ಷೇಪವಿಸ್ತರಾಭ್ಯಾಂ ಪ್ರವದಂತಿ ಮನೀಷಿಣಃ" ಎಂದರೆ ಜ್ಞಾನಿಗಳು ಮಹತ್ತರವಾದ ಯಾವ ವಿಷಯವನ್ನು ನಿರೂಪಣೆ ಮಾಡಬೇಕಾದರೂ ಅದನ್ನು ಮೊದಲು ಸಂಕ್ಷೇಪವಾಗಿ ಹೇಳಿ, ಹೇಳಿದ್ದು ಮನಸ್ಸಿಗೆ ಹತ್ತಿದ ಬಳಿಕ ವಿಸ್ತಾರಮಾಡಿ ತಿಳಿಸಿಕೊಡುತ್ತಾರೆ. ಅದರಂತೆ ನಾವೂ ಕೂಡ ಹೆಚ್ಚಿನ ಅರ್ಥ-ತಾತ್ಪರ್ಯಗಳನ್ನು ಹೇಳುವುದಕ್ಕೆ ಮೊದಲು ಪ್ರಾರಂಭದಲ್ಲಿ ಇಡೀ ವಾಯುಸ್ತುತಿಯ ವಿಹಂಗಾವಲೋಕನ ಮಾಡಿಸಿ ಇದರ ಸ್ಥೂಲಪರಿಚಯ ಮಾಡಿಕೊಡುವೆವು.

ವಾಯುಸ್ತುತಿಯಲ್ಲಿರುವ ನಲವತ್ತೊಂದು ಶ್ಲೋಕಗಳಲ್ಲಿ ಕಡೆಯ ಶ್ಲೋಕವು ಮಾತ್ರ ಫಲಶ್ರುತಿಯೆಂದೂ ಮಿಕ್ಕ ನಲವತ್ತು ಶ್ಲೋಕಗಳೂ ಸ್ತೋತ್ರರೂಪವೇ ಆಗಿವೆಯೆಂದೂ ಈ ಮೊದಲೇ ಹೇಳಿದ್ದಾಗಿದೆ. ಈ ನಲವತ್ತು ಶ್ಲೋಕಗಳಲ್ಲಿ ಮೊದಲ ಹದಿನಾರು ಶ್ಲೋಕಗಳು ಪೀಠಿಕಾರೂಪವಾಗಿವೆ; ಮುಂದಿನ ಇಪ್ಪತ್ತನಾಲ್ಕು ಶ್ಲೋಕಗಳು ಅವತಾರತ್ರಯದ ಸ್ತುತಿರೂಪವಾಗಿವೆ; ಆ ಇಪ್ಪತ್ತನಾಲ್ಕರ ಪೈಕಿ ಐದರಲ್ಲಿ ಹನುಮದವತಾರವನ್ನೂ, ಏಳರಲ್ಲಿ ಭೀಮಾವತಾರವನ್ನೂ ವರ್ಣಿಸಿ ಕಡೆಯ ಹನ್ನೆರಡು ಶ್ಲೋಕಗಳಲ್ಲಿ

ಮಧ್ವಾವತಾರವನ್ನೇ ಸ್ತುತಿಸಿದ್ದಾರೆ. ಹೀಗೆ ಶ್ರೀಹರಿವಾಯು ಸ್ತುತಿಯ ನಲವತ್ತೊಂದು ಶ್ಲೋಕಗಳನ್ನು ಕೆಳಗಿನಂತೆ ಸ್ಥೂಲವಾಗಿ **ಐದು ಗುಂಪಾಗಿ** ವಿಂಗಡಿಸಬಹುದು—

1. ಶ್ಲೋ. ೧–೧೬ (೧೬ ಶ್ಲೋಕಗಳು) ಪೀಠಿಕಾಭಾಗ (ಮೂಲರೂಪದ ಸ್ತುತಿ)
2. ,, ೧೭-೨೧ ( ೫ ಶ್ಲೋಕಗಳು) ಹನುಮದವತಾರ ಸ್ತುತಿ
3. ,, ೨೨-೨೮ ( ೭ ಶ್ಲೋಕಗಳು) ಭೀಮಾವತಾರಸ್ತುತಿ
4. ,, ೨೯-೪೦ (೧೨ ಶ್ಲೋಕಗಳು) ಮಧ್ವಾವತಾರಸ್ತುತಿ
5. ,, ೪೧ ( ೧ ಶ್ಲೋಕ) ಫಲಶ್ರುತಿ

ಈಗ ಈ ಐದು ಗುಂಪುಗಳನ್ನು ಒಂದೊಂದಾಗಿ ತೆಗೆದುಕೊಂಡು ಪ್ರತಿಯೊಂದರಲ್ಲೂ ಏನೇನು ವಿಷಯ ಪ್ರತಿಪಾದಿಸಿದೆಯೆಂಬುದನ್ನು ಕಂಡು-ಕೊಳ್ಳೋಣ. ಮೊದಲು ಪೀಠಿಕಾಭಾಗವನ್ನೇ ತೆಗೆದುಕೊಳ್ಳೋಣ.

**ಪೀಠಿಕಾಭಾಗ ಪುನರ್ವಿಭಜನೆ**—ಪೀಠಿಕಾಭಾಗಕ್ಕೆ ಸೇರಿದ ಹದಿನಾರು ಶ್ಲೋಕಗಳನ್ನು ಪುನಃ ಎಂಟೆಂಟು ಶ್ಲೋಕಗಳ ಎರಡು ವಿಭಾಗಗಳಾಗಿ ವಿಂಗಡಿಸಿ ಕೊಳ್ಳಬಹುದು. ಈ ಎಂಟು-ಎಂಟು ಶ್ಲೋಕಗಳನ್ನೂ ಪುನಃ ನಾಲ್ಕು-ನಾಲ್ಕು ಶ್ಲೋಕಗಳಾಗಿ ಉಪವಿಭಾಗಿಸಿಕೊಳ್ಳಬಹುದು. (ಅ) ಇವುಗಳಲ್ಲಿ ಮೊದಲನೆಯ ನಾಲ್ಕು ಶ್ಲೋಕಗಳಲ್ಲಿ ಮಧ್ವಾಚಾರ್ಯರ ಪಾದಧೂಳಿನ ಮಹಿಮೆಯನ್ನು ಸ್ತುತಿಸಿದ್ದಾರೆ. (ಆ) ಎರಡನೆ ಉಪವಿಭಾಗಕ್ಕೆ ಸೇರಿದ ನಾಲ್ಕು ಶ್ಲೋಕಗಳಲ್ಲಿ (೫–೮) ಜ್ಞಾನ-ಭಕ್ತಿಗಳನ್ನು ಕೊಟ್ಟು ರಕ್ಷಿಸುವಂತೆ ವಾಯುದೇವರಲ್ಲಿ ಮೊರೆ ಇಟ್ಟುಕೊಂಡಿದ್ದಾರೆ. (ಇ) ಮೂರನೆಯ ವಿಭಾಗ ದಲ್ಲಿ ೯ ರಿಂದ ೧೩ರ ವರೆಗೆ ಐದು ಶ್ಲೋಕಗಳಿವೆ. ಐದರ ಪೈಕಿ ಎರಡು ಶ್ಲೋಕಗಳಲ್ಲಿ (೯-೧೦) ಹರಿವಾಯುಭಕ್ತರಿಗೆ ದೊರಕುವ ಸೌಖ್ಯವನ್ನೂ, ಎರಡು ಶ್ಲೋಕಗಳಲ್ಲಿ (೧೧, ೧೩) ಹರಿ-ವಾಯುದ್ವೇಷಿಗಳು ಅನುಭವಿಸ ಬೇಕಾಗುವ ಘೋರ ನರಕಯಾತನೆಗಳನ್ನೂ, ಹರಿವಾಯುಗಳಲ್ಲಿ ಇತ್ತ ಭಕ್ತಿಯೂ ಇಲ್ಲ, ಅತ್ತ ದ್ವೇಷವೂ ಇಲ್ಲದ ಮಧ್ಯಸ್ಥರಿಗೆ ದೊರಕುವ ತ್ರಿಶಂಕುವಿನ ಪರಿಸ್ಥಿತಿಯನ್ನೂ ಮನಸ್ಸಿಗೆ ನಾಟುವಂತೆ ವರ್ಣಿಸಿದ್ದಾರೆ.

(ಈ) ಕಡೆಯ ಉಪವಿಭಾಗಕ್ಕೆ ಸೇರಿದ ಮೂರು ಶ್ಲೋಕಗಳಲ್ಲಿ (೧೪–೧೬) ವಿಷ್ಣು-ವೈಷ್ಣವ ದ್ವೇಷದಿಂದ ಬಂದೊದಗುವ ಘೋರಯಾತನೆಯನ್ನು ನೆನೆಸಿ ಕೊಂಡು, ಭಯಭೀತರಾದ ಪಂಡಿತಾಚಾರ್ಯರು ಮತ್ತೊಮ್ಮೆ ತಮಗೆ ವಿಷ್ಣು-ವೈಷ್ಣವರಲ್ಲಿ ತಾರತಮ್ಯಜ್ಞಾನಪೂರ್ವಕವಾದ ಜ್ಞಾನ-ಭಕ್ತಿಗಳನ್ನು ಅನುಗ್ರಹಿಸುವಂತೆ ಪ್ರಾರ್ಥಿಸಿಕೊಂಡಿದ್ದಾರೆ. ಕೆಳಗಿನ ಪಟ್ಟಿಯಿಂದ ಈ ವಿಚಾರ ಗಳೆಲ್ಲವೂ ಮತ್ತಷ್ಟು ಸ್ಫುಟವಾಗಿ ಮನಸ್ಸಿಗೆ ನಾಟುವುವು—

**ಪೀಠಿಕಾಭಾಗದ ೧೬ ಶ್ಲೋಕಗಳು—**

(ಕ) ಮೊದಲ ಎಂಟು ಶ್ಲೋಕ (೧–೮)

ಅ) ೧–೪ ಮಧ್ವಾಚಾರ್ಯರ ಪಾದಧೂಳಿನ ವರ್ಣನೆ

ಆ) ೫–೮ ಜ್ಞಾನ-ಭಕ್ತಿಗಾಗಿ ಪ್ರಾರ್ಥನೆ

(ಖ) ಕಡೆಯ ಎಂಟು ಶ್ಲೋಕ (೯–೧೬)

i) (ಇ) ೯–೧೦ ಭಕ್ತಿ ಮಾಡಿದರೆ ದೊರಕುವ ಸೌಖ್ಯ

(ಈ) ೧೧, ೧೩ ದ್ವೇಷ ಮಾಡಿದರೆ ಲಭಿಸುವ ಘೋರ ನರಕ-ಯಾತನೆ

(ಉ) ೧೨ ಉದಾಸೀನನಿಗೆ ತ್ರಿಶಂಕುಸ್ಥಿತಿ

ii) (ಊ) ೧೪–೧೬ ವಿಷ್ಣು-ವೈಷ್ಣವರಲ್ಲಿ ಭಕ್ತಿ ಕೊಡಲು ಪ್ರಾರ್ಥನೆ

(ಇದಕ್ಕೂ ಹೆಚ್ಚಿನ ವಿವರವನ್ನು ಮುಂದೆ ಕ್ರಮಶಃ ಕೊಡುವೆವು.)

**ಹನುಮದವತಾರಸ್ತುತಿ**—ವಾಯುದೇವರ ಪ್ರಥಮಾವತಾರವೇ ಆಂಜನೇಯ. ಈ ಅವತಾರದ ಮಹಿಮೆಯನ್ನು ಐದು ಶ್ಲೋಕಗಳಲ್ಲಿ (೧೭–೨೧) ಸ್ತುತಿಸಿದ್ದಾರೆ. ೧೭ನೇ ಶ್ಲೋಕದಲ್ಲಿ ಹನುಮಂತದೇವರಿಗೆ ವಂದಿಸಿ ಅವರ ಸ್ಮರಣೆಯಿಂದಲೇ ನಾವು ದಿನೇದಿನೇ ಪರಿಶುದ್ಧರಾಗುತ್ತೇವೆಂದು ಸ್ತುತಿಸಿದ್ದಾರೆ. ೧೮ ಮತ್ತು ೧೯ನೇ ಶ್ಲೋಕಗಳಲ್ಲಿ ಸಂಜೀವನ ಪರ್ವತ ವನ್ನು ಎತ್ತಿತಂದು ಅದನ್ನು ಪುನಃ ಹಿಂದಕ್ಕೆ ಎಸೆದುಬಿಟ್ಟ ಮಹಿಮೆಯನ್ನು ವರ್ಣಿಸಿದ್ದಾರೆ. ೨೦ನೇ ಶ್ಲೋಕದಲ್ಲಿ ಆ ಪ್ರಾಣದೇವರ ಹಸ್ತದ (ಮುಷ್ಟಿಯ) ಮಹಿಮೆಯನ್ನು ವರ್ಣಿಸಿ 'ಇಂಥಾ ಹಸ್ತವು ನನ್ನ ಇಷ್ಟಾರ್ಥವನ್ನು ನಡೆಸ

ಲಾರದೆ? ' ಎಂದು ಕಾಕೂಕ್ತಿಯಿಂದ ಸ್ತುತಿಸಿದ್ದಾರೆ. ೨೧ನೇ ಶ್ಲೋಕದಲ್ಲಿ ಹನುಮಂತನ ಸೇವೆಗೆ ಮೆಚ್ಚಿದ ಶ್ರೀರಾಮದೇವರು ಇವರಿಗೆ ಬ್ರಹ್ಮಪದವಿಯನ್ನು ಕರುಣಿಸಿದ್ದನ್ನು ಹೇಳಿದ್ದಾರೆ. ಇಲ್ಲಿಗೆ ಪ್ರಥಮಾವತಾರದ ಮಹಿಮೆಯನ್ನು ಮುಗಿಸುತ್ತಾರೆ. ಈ ವಿಷಯಗಳನ್ನು ನೆನಪಿಟ್ಟುಕೊಳ್ಳಲು ಕೆಳಗಿನ ಪಟ್ಟಿ ಸಹಾಯ ಮಾಡುತ್ತದೆ.

ಶ್ಲೋ. ೧೭ ಹನುಮಂತನನ್ನು ದಿನೇದಿನೇ ವಂದಿಸುತ್ತೇನೆ.
,, ೧೮ ಸಂಜೀವನ ಪರ್ವತವನ್ನು ನೀವು ತಂದಿರಿ.
,, ೧೯ ಪುನಃ ಹಿಂದಕ್ಕೆ ಎಸೆದುಬಿಟ್ಟಿರಿ.
,, ೨೦ ನಿಮ್ಮ ಆ ಮುಷ್ಟಿ (ಹಸ್ತ) ನನ್ನ ಇಷ್ಟಾರ್ಥ ಈಡೇರಿಸಲಾರದೇ ?
,, ೨೧ ರಾಮದೇವರು ನಿಮಗೆ ಬ್ರಹ್ಮಪಟ್ಟವನ್ನೂ ಸಹಭೋಗವನ್ನೂ ಕೊಟ್ಟರು.

**ಭೀಮಾವತಾರದ ಮಹಿಮೆ**—ವಾಯುದೇವರ ದ್ವಿತೀಯಾವತಾರವೇ ಭೀಮಸೇನ. ಈ ದ್ವಿತೀಯಾವತಾರದ ಮಹಿಮೆಯನ್ನು ಏಳು ಶ್ಲೋಕಗಳಲ್ಲಿ ವರ್ಣಿಸಿದ್ದಾರೆ. ೨೨ನೆಯ ಶ್ಲೋಕದಲ್ಲಿ ಬಕಾಸುರನನ್ನೂ ಕಿರ್ಮೀರನನ್ನೂ ಸಂಹಾರಮಾಡಿದ್ದನ್ನೂ ೨೩ ನೆಯ ಶ್ಲೋಕದಲ್ಲಿ ಜರಾಸಂಧನನ್ನು ವಧೆ ಮಾಡಿದ್ದನ್ನೂ ೨೪ ನೇ ಶ್ಲೋಕದಲ್ಲಿ ಭಾರತಯುದ್ಧದಲ್ಲಿ ಕೌರವಾದಿ ಹನ್ನೊಂದು ಅಕ್ಷೌಹಿಣೀ ಸೈನ್ಯ ನಾಶಮಾಡಿದ್ದನ್ನೂ ಸ್ತುತಿಸಿದ್ದಾರೆ. ೨೫ನೇ ಶ್ಲೋಕದಲ್ಲಿ ಭೀಮಸೇನನು ದ್ರೌಪದೀರಮಣನೆಂದೂ ೨೬ನೇ ಶ್ಲೋಕದಲ್ಲಿ ಭೀಮಾವತಾರದಿಂದ ಕೃಷ್ಣ-ವೇದವ್ಯಾಸರ ಕಾರ್ಯ ಸಾಧಿಸಿದ್ದನ್ನೂ ಸ್ತುತಿಸಿ, ೨೭-೨೮ ಎರಡು ಶ್ಲೋಕಗಳಲ್ಲೂ ಸೌಗಂಧಿಕಾಪುಷ್ಪವನ್ನು ತರುವುದಕ್ಕೆ ಹೋದಾಗ ಹನುಮಂತನನ್ನು ಕಂಡದ್ದನ್ನೂ ಗಂಧಮಾದನಪರ್ವತದಲ್ಲಿದ್ದ ಅನೇಕ ಕೋಟಿ ರಾಕ್ಷಸರನ್ನು ಸಂಹಾರ ಮಾಡಿದ್ದನ್ನೂ ಸ್ತುತಿಸಿ ಭೀಮಾವ-ತಾರದ ವರ್ಣನೆ ಮುಗಿಸಿದ್ದಾರೆ. ಈ ಅಂಶಗಳನ್ನು ಕೆಳಗಿನ ಪಟ್ಟಿಯು ಸುಲಭವಾಗಿ ತೋರಿಸಿಕೊಡುತ್ತದೆ—

ಶ್ಲೋ. ೨೨ ಬಕಾಸುರನ ವಧೆ. ಕಿರ್ಮೀರಾಸುರನ ಸಂಹಾರ ಮಾಡಿದ್ದು.
,, ೨೩ ಜರಾಸಂಧನ ಸಂಹಾರ.
,, ೨೪ ಹನ್ನೊಂದು ಅಕ್ಷೌಹಿಣೀ ಕೌರವಸೈನ್ಯವನ್ನು ಧ್ವಂಸ ಮಾಡಿದ್ದು.
,, ೨೫ ದ್ರೌಪದೀದೇವಿಯ ರಮಣ ಭೀಮಸೇನ.
,, ೨೬ ದುಷ್ಟಸಂಹಾರಮಾಡಿ ವ್ಯಾಸ-ಕೃಷ್ಣರೂಪೀ ಭಗವತ್-ಕಾರ್ಯ ಸಾಧಿಸಿದ್ದು.
,, ೨೭ ಸೌಗಂಧಿಕಾಪುಷ್ಪ ತರುವುದಕ್ಕೆ ಹೋಗಿದ್ದಾಗ ಹನುಮಂತನನ್ನು ಕಂಡದ್ದು.
,, ೨೮ ಅಲ್ಲಿದ್ದ ಅನೇಕ ಕೋಟಿ ದೈತ್ಯರನ್ನು ನಾಶಮಾಡಿದ್ದು.

**ಮಧ್ವಾವತಾರವರ್ಣನೆ**—ಶ್ರೀ ವಾಯುದೇವರ ತೃತೀಯಾವತಾರವೇ ಶ್ರೀಮನ್ಮಧ್ವಾಚಾರ್ಯರು. ಆನಂದತೀರ್ಥ ಅಥವಾ ಶ್ರೀಮದಾನಂದತೀರ್ಥ (ಭಗವತ್ಪಾದಾಚಾರ್ಯ), ಪೂರ್ಣಪ್ರಜ್ಞ ಅಥವಾ ಪೂರ್ಣಪ್ರಮತಿ ಎಂಬುದೂ ಅವರ ನಾಮಾಂತರಗಳೇ. ತೃತೀಯಾವತಾರರಾದ ಈ ಮಧ್ವಾಚಾರ್ಯರನ್ನು ಪಂಡಿತಾಚಾರ್ಯರು ಸಾಕ್ಷಾತ್ ಕಂಡು ಅರಿತವರಾದ ಕಾರಣವೂ ಅವರಿಂದ ಅನುಗೃಹೀತರಾದ ಕಾರಣವೂ ಭಕ್ತ್ಯುದ್ರೇಕದಿಂದ ತೃತೀಯಾವತಾರವನ್ನು ಹನ್ನೆರಡು ಶ್ಲೋಕಗಳಿಂದ ಸ್ತುತಿಸುತ್ತಾ ಹೋಗಿದ್ದಾರೆ. ಅಷ್ಟರಲ್ಲೇ ಮಧ್ಯೆ ಅವರ ನಿರ್ವಿಕಾರದ ಸ್ಮರಣೆ ಬಂತು; ಅದನ್ನೇ ಮೂರು ಶ್ಲೋಕಗಳಲ್ಲಿ ಸ್ತುತಿಸಿದರು. ಅನಂತರ ಅವರು ಬ್ರಹ್ಮಸೂತ್ರಭಾಷ್ಯ, ತಾತ್ಪರ್ಯ ನಿರ್ಣಯಾದಿ ಗ್ರಂಥಗಳನ್ನು ರಚಿಸಿದ ವಿಷಯವನ್ನು ಹೇಳಿ ಅವರ ವಂದನೆಯೊಡನೆ ವಾಯುಸ್ತುತಿಯನ್ನು ಮುಗಿಸಿದ್ದಾರೆ. ಹೀಗೆ ಈ ಹನ್ನೆರಡು ಶ್ಲೋಕಗಳಲ್ಲೇ ಮೂರು ಉಪವಿಭಾಗಗಳಿವೆ.

**ಮೂರು ಉಪವಿಭಾಗಗಳು**—ಉಪವಿಭಾಗಗಳಾಗಿ ವಿಂಗಡಿಸಿಕೊಂಡರೆ ಹನ್ನೆರಡು ಶ್ಲೋಕಗಳಲ್ಲಿ ಹೇಳಿದ ಪ್ರಮೇಯಾಂಶಗಳನ್ನು ಪ್ರತಿಪಾದಿಸುವುದಕ್ಕೆ ಅನುಕೂಲವಾಗುತ್ತದೆ. (ಅ) ೨೯ ರಿಂದ ೩೨ರ ವರೆಗಿನ ನಾಲ್ಕು ಶ್ಲೋಕಗಳಲ್ಲಿ—ಭೀಮಸೇನನಿಂದ ಸೌಗಂಧಿಕಾಪುಷ್ಪಹರಣ ಸಂದರ್ಭದಲ್ಲಿ

ಹತರಾದ ಮಣಿಮಂತನೇ ಮೊದಲಾದ ದೈತ್ಯರು ಕಲಿಯುಗದಲ್ಲಿ ಅವತರಿಸಿ ದುಸ್ತರ್ಕಗಳಿಂದ ತುಂಬಿದ 'ಕಷ್ಟಶಾಸ್ತ್ರ'ಗಳನ್ನು ರಚಿಸಿ ಸಜ್ಜನರನ್ನು ಮೋಹಗೊಳಿಸಿದರೆಂದೂ ವಾಯುದೇವರು ಮಧ್ವರಾಗಿ ಅವತರಿಸಿ ಆ ದುಶ್ಶಾಸ್ತ್ರಗಳನ್ನು ಖಂಡಿಸಿ ಆ ದುಷ್ಟರನ್ನು ಪರಾಜಯಗೊಳಿಸಿದರೆಂದೂ ಹೇಳಿದೆ. (ಆ) ವಾಯುದೇವರು ನಿರ್ವಿಕಾರರೆಂಬ ಸ್ಮರಣೆ ಬಂದಕಾರಣ ಮಧ್ಯೆ ಮೂರು ಶ್ಲೋಕಗಳಿಂದ (೩೩-೩೫) ಆ ಮಹಿಮೆಯನ್ನೇ ಸ್ತುತಿಸಿದರು (ಇ) ಪುನಃ ಪ್ರಸಕ್ತವಿಷಯಕ್ಕೆ ಬಂದು ಶ್ರೀಮದಾಚಾರ್ಯರು ಬ್ರಹ್ಮಸೂತ್ರಭಾಷ್ಯ, ತಾತ್ಪರ್ಯನಿರ್ಣಯಾದಿ ಗ್ರಂಥರಚನೆ ಮಾಡಿದ್ದನ್ನು ನಾಲ್ಕು ಶ್ಲೋಕಗಳಲ್ಲಿ (೩೬-೩೯) ಹೇಳಿದ್ದಾರೆ. ಬ್ರಹ್ಮಸೂತ್ರಭಾಷ್ಯದ ಪ್ರಸಕ್ತಿ ಬಂದದ್ದರಿಂದ ಬ್ರಹ್ಮಸೂತ್ರಗಳ ಬಗ್ಗೆಯೂ ಅದನ್ನು ರಚಿಸಿದ ವೇದವ್ಯಾಸರ ಬಗ್ಗೆಯೂ ಎರಡು ಶ್ಲೋಕಗಳನ್ನು ಪ್ರಸಂಗವಶಾತ್ ರಚಿಸಿದ್ದಾರೆ. ೩೬ನೇ ಶ್ಲೋಕದಲ್ಲಿ ಅಜ್ಞಾನಿಜನರ ಉದ್ಧಾರಕ್ಕಾಗಿ ನಾರಾಯಣನೇ ವೇದವ್ಯಾಸಮಹರ್ಷಿಗಳಾಗಿ ಅವತರಿಸಿದನೆಂದೂ ೩೭ನೇ ಶ್ಲೋಕದಲ್ಲಿ ವೇದಾರ್ಥಗಳ ನಿರ್ಣಯಕ್ಕಾಗಿ ಬ್ರಹ್ಮಸೂತ್ರಗಳನ್ನು ರಚಿಸಿದರೆಂದೂ ವರ್ಣಿಸಿದ್ದಾರೆ. ಮುಂದಿನ ಎರಡು ಶ್ಲೋಕಗಳಲ್ಲಿ (೩೮-೩೯) ದೇವಸಂಘಗಳಿಂದ ಪ್ರಾರ್ಥಿತರಾದ ವಾಯುದೇವರು ಪಾಜಕಕ್ಷೇತ್ರದಲ್ಲಿ ಮಧ್ಯಗೇಹಭಟ್ಟರ ಮಗನಾಗಿ ಅವತರಿಸಿ ಬ್ರಹ್ಮಸೂತ್ರಭಾಷ್ಯಾದಿ ಭಾಷ್ಯಗಳನ್ನೂ ಮಹಾಭಾರತ ತಾತ್ಪರ್ಯನಿರ್ಣಯಾದಿ ಗ್ರಂಥಗಳನ್ನೂ ರಚಿಸಿ ಭಗವತ್ಕಾರ್ಯವನ್ನು ಸಾಧಿಸಿದರೆಂದು ವಿವರಿಸಿದ್ದಾರೆ. ಕೊನೆಗೆ ಭಕ್ತಿಯಿಂದ ಪುಲಕಾಂಕಿತರಾದ ಪಂಡಿತಾಚಾರ್ಯರು ೪೦ನೇ ಶ್ಲೋಕದಲ್ಲಿ ತಮಗೆ ಪೂರ್ಣಾನುಗ್ರಹಮಾಡಿ ಉದ್ಧಾರಮಾಡಿದ ಶ್ರೀಮದಾಚಾರ್ಯರನ್ನು ಅತ್ಯಂತ ಶ್ರದ್ಧಾದರಗಳಿಂದ ಪುನಃಪುನಃ ವಂದಿಸಿ ಫಲಸ್ತುತಿ ಹೇಳಿ ತಮ್ಮ ಕೃತಿಯನ್ನು ಮುಕ್ತಾಯ ಮಾಡುತ್ತಾರೆ. ಇಲ್ಲಿಗೆ ಶ್ರೀಹರಿವಾಯುಸ್ತುತಿಯ ಸ್ಥೂಲವಾದ ವಿಹಂಗಾವಲೋಕನವು ಮುಗಿದಹಾಗಾಯಿತು. ಇದಕ್ಕೂ ಹೆಚ್ಚಿನ—ಶ್ಲೋಕ-ಶ್ಲೋಕದ ವಿವರಣೆಯನ್ನು ಮುಂದೆ ತೆಗೆದುಕೊಳ್ಳೋಣ. ಮೊದಲು ಮೇಲೆ ಹೇಳಿದ ಮಧ್ವಾವತಾರದ ಸ್ಥೂಲ ವಿವರಗಳನ್ನು ನೆನಪಿಟ್ಟುಕೊಳ್ಳಲು ಅನುಕೂಲವಾಗುವಂತೆ ವಿಷಯಗಳ ಪಟ್ಟಿ ಮಾಡೋಣ :—

**ಮಧ್ವಾವತಾರದ ೧೨ ಶ್ಲೋಕಗಳ ವರ್ಗೀಕರಣ—**

(ಅ) ಶ್ಲೋ. ೨೯–೩೨ (೪ ಶ್ಲೋ) ಮಣಿಮಂತಾದಿ ದೈತ್ಯರು ಕಷ್ಟಶಾಸ್ತ್ರಗಳನ್ನು ರಚಿಸಿದರು. ಮಧ್ವರಾಗಿ ಅವತರಿಸಿ ಅವನ್ನು ಖಂಡಿಸಿ ದುಷ್ಟರನ್ನು ಪರಾಜಯಗೊಳಿಸಿದರು.

(ಆ) ಶ್ಲೋ. ೩೩–೩೫ (೩ ಶ್ಲೋ) ವಾಯುದೇವರು ವೇದಾಭಿಮಾನಿ ದೇವತೆಗಳಿಂದಲೂ ಗಂಧರ್ವಾಪ್ಸರಸೆಯರಿಂದಲೂ ಸ್ತುತಿಸಲ್ಪಡುತ್ತಾರೆ.

(ಇ) ಶ್ಲೋ. ೩೬–೪೦ (೫ ಶ್ಲೋ) ಭಾಷ್ಯರಚನೆ ಮಾಡಿದ್ದು.

೩೬ ನಾರಾಯಣನೇ ವೇದವ್ಯಾಸರಾಗಿ ಅವತರಿಸಿದ್ದು.
೩೭ ವೇದಾರ್ಥನಿರ್ಣಯಕ್ಕಾಗಿ ಬ್ರಹ್ಮಸೂತ್ರ ರಚಿಸಿದ್ದು.
೩೮ ಮಧ್ವರಾಗಿ ಬ್ರಹ್ಮಸೂತ್ರಭಾಷ್ಯ ರಚಿಸಿದ್ದು.
೩೯ ಮಧ್ಯಗೇಹಭಟ್ಟರ ಮಗನಾಗಿ ಅವತರಿಸಿ ಭಾಷ್ಯಗಳನ್ನೂ ಭಾರತತಾತ್ಪರ್ಯನಿರ್ಣಯವನ್ನೂ ರಚಿಸಿದ್ದು.
೪೦ ಅಂಥಾ ಆನಂದತೀರ್ಥರಿಗೆ ನಮೋ ನಮಃ.

(ಈ) ಶ್ಲೋ. ೪೧ ಫಲಶ್ರುತಿ.

**ಬಿಡಿಸಿ ಬಿಡಿಸಿ ಹೇಳಿದ್ದನ್ನು ಕೂಡಿಸಿ ಹೇಳುವುದು—** ಇಲ್ಲಿಯವರೆಗೆ ಶ್ರೀಹರಿವಾಯುಸ್ತುತಿಯ ಶ್ಲೋಕಗಳಲ್ಲಿ ಏನೇನು ವಿಷಯ ಹೇಳಿದೆಯೆಂಬುದನ್ನು ವಿವರಿಸಿದೆವಾದರೂ ಅವುಗಳನ್ನು ಗುಂಪುಗುಂಪಾಗಿ ಹಂಚಿ ಹೇಳಿದೆವು. ಒಂದೊಂದು ಗುಂಪಿನಲ್ಲಿ ಏನೇನು ವಿಷಯ ವಿವರಿಸಿದೆಯೆಂಬುದು ಗೊತ್ತಾದರೂ ಒಟ್ಟು ಸ್ತುತಿಯಲ್ಲಿ ಏನು ಹೇಳಿದೆಯೆಂಬುದು ಸ್ಮೃತಿಗೆ ಬರುವುದಿಲ್ಲ. ಆದಕಾರಣ ಹಿಂದೆ ಹೇಳಿದ ಬಿಡಿಬಿಡಿ ಗುಂಪುಗಳನ್ನೇ ಈಗ ಒಟ್ಟಿಗೆ ಸೇರಿಸಿ ಕ್ರಮವಾಗಿ ನಿರೂಪಣೆ ಮಾಡುತ್ತೇವೆ. ಇದರಿಂದ ಇಡೀ ವಾಯುಸ್ತುತಿಯ ನಲವತ್ತೊಂದು ಶ್ಲೋಕಗಳಲ್ಲಿ ಪ್ರತಿಪಾದಿತವಾದ ಸಕಲ ವಿಚಾರಗಳು ಸ್ಥೂಲವಾಗಿ ಗೊತ್ತಾಗುವುವೆಂದು ಆಶಿಸಲಾಗಿದೆ. ಇಲ್ಲಿ ಪ್ರತಿ ಶ್ಲೋಕದಲ್ಲಿ ಏನೇನು ಹೇಳಿದೆಯೆಂಬುದರ ಗೋಜಿಗೆ ಹೋಗಿಲ್ಲ. ಈ ಸ್ಥೂಲವಿಚಾರ ಗೊತ್ತಾದ ಬಳಿಕ ಪ್ರತಿಶ್ಲೋಕದ ವಿಷಯಕ್ಕೆ ಮುಂದೆ ಹೋಗೋಣ.)

**ವಾಯುಸ್ತುತಿಯಲ್ಲಿ ಪ್ರತಿಪಾದಿಸಿರುವ ವಿಷಯಗಳ ಪಟ್ಟಿ—**

**ಒಂದನೇ ವರ್ಗ—(೧–೧೬ ಶ್ಲೋಕಗಳು) ಪೀಠಿಕಾಭಾಗ**

(ಅ) ೧– ೪ ಮಧ್ವಾಚಾರ್ಯರ ಪಾದಧೂಳಿನ ಸ್ತುತಿ

(ಆ) ೫– ೮ ಭಕ್ತಿಯನ್ನು ಕೊಡುವಂತೆ ಪ್ರಾರ್ಥನೆ

(ಇ) ೯–೧೩ ಭಕ್ತಿಯಿಂದ ಮುಕ್ತಿಸುಖ, ದ್ವೇಷದಿಂದ ಘೋರ ನರಕ-ಯಾತನೆ, ಉದಾಸೀನತೆಯಿಂದ ತ್ರಿಶಂಕುವಿನ ಗತಿ

(ಈ) ೧೪–೧೬ ತಾರತಮ್ಯಜ್ಞಾನಪೂರ್ವಕ ಭಕ್ತಿಯನ್ನು ಕರುಣಿಸಿರೆಂದು ಪ್ರಾರ್ಥನೆ.

**ಎರಡನೇ ವರ್ಗ—(೫ ಶ್ಲೋ—೧೭–೨೧) ಹನುಮದವತಾರಮಹಿಮೆ**

೧೭ ಹನುಮಂತನನ್ನು ನಿತ್ಯವೂ ವಂದಿಸುತ್ತೇನೆ

೧೮ ಸಂಜೀವನಪರ್ವತ ತಂದದ್ದು

೧೯ ಅದನ್ನು ಹಿಂದಕ್ಕೆ ಎಸೆದದ್ದು

೨೦ ಅವನ ಕೈ ನನ್ನ ಇಷ್ಟಾರ್ಥವನ್ನು ನಡೆಸಿಕೊಡಲಾರದೆ ?

೨೧ ಬ್ರಹ್ಮಪಟ್ಟವೂ ಸಹಭೋಗವೂ ದೊರಕಿತು.

**ಮೂರನೇ ವರ್ಗ—(೭ ಶ್ಲೋ—೨೨–೨೮) ಭೀಮಾವತಾರಮಹಿಮೆ**

೨೨ ಬಕಾಸುರ-ಕಿರ್ಮೀರರನ್ನು ಕೊಂದದ್ದು

೨೩ ಜರಾಸಂಧನನ್ನು ಸಂಹರಿಸಿದ್ದು

೨೪ ಹನ್ನೊಂದು ಅಕ್ಷೋಹಿಣಿ ಕೌರವಸೈನ್ಯ ನಾಶಮಾಡಿದ್ದು

೨೫ ದ್ರೌಪದೀರಮಣನ ಪ್ರಾರ್ಥನೆ

೨೬ ಕೃಷ್ಣ-ವೇದವ್ಯಾಸರ ಕಾರ್ಯ ಸಾಧಿಸಿದ್ದು

೨೭ ಸೌಗಂಧಿಕಾಪುಷ್ಪ ತರಲು ಹೋದಾಗ ಹನುಮಂತನನ್ನು ಕಂಡದ್ದು

೨೮ ಆಗಲೇ ಅಲ್ಲಿದ್ದ ಅನೇಕ ಕೋಟಿ ದೈತ್ಯರನ್ನು ನಾಶಮಾಡಿದ್ದು.

**ನಾಲ್ಕನೇ ವರ್ಗ—(೧೨ ಶ್ಲೋ—೨೯–೪೦) ಮಧ್ವಾವತಾರದ ಮಹಿಮೆ**

(ಕ) ೨೯–೩೨ ದೈತ್ಯರು ಕಷ್ಟಶಾಸ್ತ್ರರಚಿಸಿದ್ದು. ಮಧ್ವರು ಅವನ್ನು ನಿರಾಕರಿಸಿದ್ದು

(ಖ) ೩೩-೩೫ ವಾಯುದೇವರು ದೇವಾನುದೇವತೆಗಳಿಂದ ಸೇವಿಸಲ್ಪಡುತ್ತಾರೆ.

(ಗ) ೩೬-೩೮ ವ್ಯಾಸರು ರಚಿಸಿದ ಬ್ರಹ್ಮಸೂತ್ರಗಳಿಗೆ ಭಾಷ್ಯ ಬರೆದದ್ದು

(ಘ) ೩೯ ಪಾಜಕಕ್ಷೇತ್ರದಲ್ಲಿ ಅವತಾರಮಾಡಿ ಸೂತ್ರಭಾಷ್ಯಾದಿ ಗ್ರಂಥಗಳನ್ನೂ ತಾತ್ಪರ್ಯನಿರ್ಣಯವನ್ನೂ ರಚಿಸಿದ್ದು

(ಙ) ೪೦ ಶ್ರೀಮದಾನಂದತೀರ್ಥರಿಗೆ ನಮೋ ನಮಃ

**ಐದನೇ ವರ್ಗ—(೧ ಶ್ಲೋ—೪೧) ಫಲಶ್ರುತಿ**

೪೧ ಈ ಸ್ತೋತ್ರದಿಂದ ಶ್ರೀಹರಿ-ವಾಯುಗಳನ್ನು ಆರಾಧಿಸಿದರೆ ಮುಕ್ತಿಯನ್ನು ಹೊಂದುವನು.

**ಮೂಲಶ್ಲೋಕಗಳೊಡನೆ ಸಂಗಮ**—ಇದುವರೆಗೆ ನಾವು ಹೇಳಿದ್ದೆಲ್ಲವೂ ವಾಯುಸ್ತುತಿಯ ಸಾರಾಂಶವೇ, ಹೌದು. ಹೀಗಿದ್ದರೂ ನಮಗೆ ಇದುವರೆಗೂ ಮೂಲಶ್ಲೋಕಗಳ ಶಬ್ದಾವಳಿಯ ಸಂಬಂಧವೇ ಆಗಿಲ್ಲ, ಇದು ಅಯುಕ್ತ. ಏಕೆಂದರೆ ಮೂಲಶ್ಲೋಕಗಳನ್ನು ಬಿಟ್ಟು ವಿಚಾರಮಾಡುವುದು ತಳಪಾಯವಿಲ್ಲದ ಕಟ್ಟಡದಂತೆಯೇ ಸರಿ. ಅಷ್ಟೇ ಅಲ್ಲದೆ ವಾಯುಸ್ತುತಿಯ ಶ್ಲೋಕಗಳು ಸಾಮಾನ್ಯ ಶ್ಲೋಕಗಳಂತೆ ಸುಲಭವಾಗಿ ಅರ್ಥವಾಗುವುದಿಲ್ಲ. ಒಂದುಕಡೆ ಅವು ನವರತ್ನಜಟಿತವಾದ ಕುಂದಣದ ಕೆಲಸವುಳ್ಳ ದಿವ್ಯಾಭರಣದಂತೆ ವಾಕ್‌ಪ್ರೌಢಿಮೆಯ ಶಿಖರವನ್ನೇ ಮುಟ್ಟಿರುವ ಅದ್ಭುತ ಶಬ್ದಮಣಿಗಳ ವೈಖರಿಯಿಂದ ಕೂಡಿದ್ದರೆ ಇನ್ನೊಂದುಕಡೆ ಭಾವಗಾಂಭೀರ್ಯದ ಠೀವಿಯಿಂದ ಮೆರೆಯುವ ಆರಭಟೀಶೈಲಿಯಲ್ಲಿ ರಚಿತವಾಗಿವೆ.

ಮೂರು-ಮಾರುದ್ದದ ಸಮಾಸಗಳಿಂದ ತುಂಬಿರುವುದರಿಂದ ಗಂಭೀರಾಧ್ಯಯನ ಮಾಡದ ಹೊರತು ಅವುಗಳ ಒಟ್ಟು ಭಾವವೇ ಮನಸ್ಸಿಗೆ ಹತ್ತುವುದಿಲ್ಲ. ಆದಕಾರಣ ರತ್ನಖಚಿತವಾದ ನವರತ್ನಮಂಟಪದಂತಿರುವ ಈ ಮೂಲಶ್ಲೋಕಗಳಲ್ಲಿ ಏನು ವೈಭವವಿದೆಯೋ ಇಣಿಕಿಯಾದರೂ ನೋಡೋಣ, ಬನ್ನಿ. ಅರ್ಥಾತ್ ಪ್ರತಿಯೊಂದು ಮೂಲಶ್ಲೋಕದ ಸಾರಭಾಗವನ್ನೇ ಆಯ್ದು ಆಯ್ದು ಕೊಟ್ಟು ಅದರ ಕನ್ನಡಾರ್ಥವನ್ನೂ ಹೇಳುತ್ತಾ ಇನ್ನೊಮ್ಮೆ ಹಿಂದಿನ ವರ್ಗೀಕರಣದ ಕ್ರಮದಲ್ಲೇ ನಲವತ್ತೊಂದು ಶ್ಲೋಕಗಳ

ಭಾವಗಳನ್ನೂ ತಿಳಿಸುತ್ತಾ ಹೋಗುವೆವು. ಇದರಿಂದ ಹಿಂದಿನ 'ಪಕ್ಷಿನೋಟ'ದ ಪುನರಾವೃತ್ತಿಯೂ ಆಗುತ್ತದೆ, ಮೂಲದ ಸ್ಥೂಲಪರಿಚಯವೂ ಆಗುತ್ತದೆ ಯಲ್ಲದೆ ಇಡೀ ವಾಯುಸ್ತುತಿಯ ಸಿಂಹಾವಲೋಕನವೂ ಅನಾಯಾಸವಾಗಿ ಆಗುತ್ತದೆ. ಅದರ ಪರಿಣಾಮವಾಗಿ ಇಡೀ ವಾಯುಸ್ತುತಿಯ ರಚನಾ-ವಿನ್ಯಾಸವು ಹೃದ್ಗತವಾಗಿ ನಿಲ್ಲಲು ಅನುಕೂಲವಾಗುತ್ತದೆ.

## ಶ್ಲೋಕಗಳ ಸಿಂಹಾವಲೋಕನ

**೧ನೇ ವರ್ಗ—(೧–೧೬ ಶ್ಲೋಕಗಳು) ಪೀಠಿಕಾಭಾಗ.**

(ಕ) ಮೊದಲನೆಯ ಎಂಟು ಶ್ಲೋಕಗಳಲ್ಲಿ

**(ಅ)** ಒಂದನೇ ವಿಭಾಗ (ಮೊದಲ ನಾಲ್ಕು ಶ್ಲೋಕಗಳು)

ವಿಷಯ—**ಆಚಾರ್ಯರ ಪಾದಧೂಳಿಯ ಮಹಿಮೆ.**

ಶ್ಲೋ. ೧ : (ಮೂಲ) ಶ್ರೀಮದಾನಂದತೀರ್ಥ.... ಪಾದ.... ಜಲಜ.... ಪಾಂಸವಃ ಅಸ್ಮಾನ್ ಪುನಂತು ॥ (ಅರ್ಥ) ಶ್ರೀಮನ್ಮಧ್ವಾಚಾರ್ಯರ ಪಾದ-ಕಮಲದ ಧೂಳುಗಳು ನಮ್ಮನ್ನು ಪವಿತ್ರಮಾಡಲಿ. (ಸೂಚನೆ—'ಪಾಂಸವಃ' ಮುಂತಾದ ಕೆಲವು ಕ್ಲಿಷ್ಟಪದಗಳ ಅರ್ಥವನ್ನು ಇಲ್ಲಿ ಪ್ರತ್ಯೇಕವಾಗಿ ಕೊಟ್ಟಿಲ್ಲ. ಒಟ್ಟು ಅರ್ಥ ಕೊಟ್ಟಿರುವುದರಿಂದ ಸ್ಥೂಲವಾಗಿ ತಿಳಿದರೆ ಸಾಕೆಂಬುದೇ ನಮ್ಮ ಧ್ಯೇಯ.)

ಶ್ಲೋ. ೨: ಧೂಳಿಗಳ ಮಹಿಮೆ. (ಮೂಲ) ಸುಮನೋಮೌಲಿರತ್ನ.... ಭಕ್ತ್ಯುದ್ರೇಕ........ಸಂಘೃಷ್ಯಮಾಣ........ಅಂಘ್ರಿಪೀಠೋತ್ಥಿತಾಃ ॥ (ಅರ್ಥ) ಭಕ್ತ್ಯತಿಶಯದಿಂದ ಮುನ್ನುಗ್ಗುತ್ತಿರುವ ದೇವತೆಗಳ ಕಿರೀಟಗಳ ಶಿರೋಮಣಿಗಳು ತಗುಲುತ್ತಿರುವ ಪಾದಪೀಠದಿಂದ ಎದ್ದ ಪಾದಧೂಳಿಗಳು.

ಶ್ಲೋ. ೩ : ಸ್ತುತಿಸಲು ಸಮರ್ಥನಲ್ಲ. (ಮೂಲ) ಏಷಃ (ಅಹಂ) ಏತೇಷಾಂ (ಪಾಂಸೂನಾಂ) ಸಂಸ್ತವೇ ನಾಸ್ಮಿಶಕ್ತಃ ॥ (ಅರ್ಥ) ಈ ಮಂದ-ಮತಿಯಾದ ನಾನು ಇವುಗಳನ್ನು ಸಮಗ್ರವಾಗಿ ಸ್ತುತಿಸಲು ಸಮರ್ಥನಲ್ಲ.

ಸೂಚನೆ—ಕಂಸದಲ್ಲಿರುವ ಪದಗಳನ್ನು ಅರ್ಥವಾಗಲು ಸೇರಿಸಿಕೊಳ್ಳ-ಬೇಕು.

ಶ್ಲೋ. ೪ : ವಾಯುದೇವರನ್ನು ಹೇಗೆ ಸ್ತುತಿಸೇನು ? (ಮೂಲ) ಅಸ್ಯ ಮಾರುತಸ್ಯ (ಸಂಸ್ತವೇ) ಕಿಮುತ (ಶಕ್ತಃ) ? ॥ (ಅರ್ಥ) (ಅವರ ಪಾದಧೂಳನ್ನೇ ಸ್ತುತಿಸಲು ಅಶಕ್ತನಾದ) ನನಗೆ ಈ ವಾಯುದೇವರನ್ನು ಸ್ತುತಿಸುವ ಸಾಮರ್ಥ್ಯ ಎಲ್ಲಿಂದ ಬಂದೀತು ?

(ಅ) ಮೊದಲ ಎಂಟು ಶ್ಲೋಕಗಳಲ್ಲಿ ೨ನೇ ವಿಭಾಗ (ಶ್ಲೋ. ೫–೮)

**ವಿಷಯ—ವಾಯುದೇವರಲ್ಲಿ ಬಿನ್ನಪ (ವಿನಂತಿ)**

ಶ್ಲೋ. ೫ : ಸದ್ಬುದ್ಧಿಯ ಬೇಡಿಕೆ. (ಮೂಲ) ವಾಯುದೇವಃ ಮೇ ಸುಮತಿಂ ವಿದಧ್ಯಾತ್ ॥ (ಅರ್ಥ) ಆ ವಾಯುದೇವರು ನನಗೆ ಸದ್ಬುದ್ಧಿಯನ್ನು ಕರುಣಿಸಲಿ.

ಶ್ಲೋ. ೬: ಅನಿಷ್ಟನಿವಾರಣೆಗೆ ಕೋರಿಕೆ. (ಮೂಲ) ಶ್ರೀಮದಾನಂದ ತೀರ್ಥ ಕ್ಷೀರಾಂಬೋಧಿಃ ಮೇ ಅನಭಿಮತಂ ವಿಭಿಂದ್ಯಾತ್ ॥ (ಅರ್ಥ) ಶ್ರೀಮಧ್ವರೆಂಬ ಕ್ಷೀರಸಮುದ್ರವು ನನ್ನ ಸಕಲ ಅನಿಷ್ಟಗಳನ್ನೂ ಕತ್ತರಿಸಿ ತುಂಡುತುಂಡು ಮಾಡಲಿ.

ಶ್ಲೋ. ೭ : ಭಕ್ತಿಗಾಗಿ ಬೇಡಿಕೆ. (ಮೂಲ) ಮೇ ಏಷಃ ಅಂಜಲಿಃ ಮೂರ್ಧನಿ ಬಧ್ಯತೇ ॥ (ಅರ್ಥ) ಇಗೋ ಸ್ವಾಮಿ, ಕೈಮುಗಿದು ತಲೆಯ ಮೇಲಿಟ್ಟುಕೊಳ್ಳುತ್ತೇನೆ. (ಮೂಲ) ಮಾಧವಸ್ಯ ಉತತೇ ವಾಯೋಃ ಪದಯುಗೇ ಅಸ್ಮಾಕಂ ಪ್ರದಿಶ॥ (ಅರ್ಥ) ಶ್ರೀಹರಿಯ ಹಾಗೂ ತಮ್ಮ ಪಾದ-ದ್ವಯದಲ್ಲಿ ಏಕಾಂತ ಭಕ್ತಿಯನ್ನು ನಮಗೆ ಅನುಗ್ರಹಿಸಿರಿ.

ಶ್ಲೋ. ೮ : ಮಾಯಾವಾದಿಗಳಿಂದ ರಕ್ಷಣೆ. (ಮೂಲ) ತೇ ಭ್ರೂವಿ-ಭ್ರಮಃ ಮಾಯಿಭಿಕ್ಷೂನ್ ಸುಭೃಶಂ ಭ್ರಮಯತು ॥ (ಅರ್ಥ) ತಮ್ಮ ಭ್ರೂವಿಲಾಸವು (ಹುಬ್ಬಿನ ಚಲನೆಯು) ಮಾಯಾ ಸನ್ಯಾಸಿಗಳನ್ನು ಚೆನ್ನಾಗಿ ಭ್ರಮೆಗೊಳಿಸಲಿ. (ಅವರ ಕುತರ್ಕಗಳಿಗೆ ನನ್ನ ಮನಸ್ಸು ಒಳಗಾಗದಂತೆ ಸಲಹಿರಿ.)

(ಖ) ಪೀಠಿಕೆಯ ಕಡೆಯ ಎಂಟು ಶ್ಲೋಕಗಳಲ್ಲಿ

(ಇ) ಮೊದಲನೇ ಉಪವಿಭಾಗ—(೯–೧೩) ೫ ಶ್ಲೋಕಗಳು.

## ವಿಷಯ—ತ್ರಿವಿಧ ಉಪಾಸನೆಗೆ ತ್ರಿವಿಧ ಫಲ

i) (೯-೧೦) ಭಕ್ತಿಮಾಡಿದರೆ ಮೋಕ್ಷಸುಖ-ಅದರ ವರ್ಣನೆ.

ಶ್ಲೋ. ೯ : ಭಜಿಸುವವರಿಗೆ ಮೋಕ್ಷ. (ಮೂಲ) ಯೇ ಅಮುಂ ತೃತೀಯಂ ಭಾವಂ (= ಅವತಾರಂ) ಭಜಂತೇ, ತೇ ವೈಕುಂಠೇ ಭಾಸಂತೇ ॥ (ಅರ್ಥ) ಯಾರು ಈ ತೃತೀಯಾವತಾರವನ್ನು ಸೇವಿಸುತ್ತಾರೋ ಅವರು ವೈಕುಂಠದಲ್ಲಿ ಶೋಭಿಸುತ್ತಾರೆ.

ಶ್ಲೋ. ೧೦ : ಮೋಕ್ಷಸುಖದ ವರ್ಣನೆ. (ಮೂಲ) ಮೌಕುಂದೇ ಮಂದಿರೇ ಮರುತಃ ಆನಂದಾನ್ ದದತಿ ಹಿ॥ (ಅರ್ಥ) ಮೋಕ್ಷದಲ್ಲಿ ಗಾಳಿಗಳೇ ಆದಿಯಾಗಿ ಸಕಲವೂ ಕೇವಲ ನಾನಾವಿಧ ಆನಂದಗಳನ್ನೇ ಕೊಡುತ್ತವೆ. (ದುಃಖದ ಗಂಧವೂ ಇರುವುದಿಲ್ಲ.)

(ii) ೧೧ ಮತ್ತು ೧೩. ದ್ವೇಷಮಾಡಿದರೆ ನರಕಯಾತನೆ.

ಶ್ಲೋ. ೧೧ : ದ್ವೇಷಿಗಳನ್ನು ಪೀಡಿಸುತ್ತವೆ. (ಮೂಲ) ಉತ್ಕ್ವಾಥಿತೇ ತಮಸಿ ಗ್ರಾವ್ಣಾಂ ಪಂಕ್ತಿಃ ಭವದ್ದ್ವೇಷಿಣಃ ಗ್ಲಪಯತಿ ಹಿ॥ (ಅರ್ಥ) ಕೊತ ಕೊತ ಕುದಿಯುತ್ತಿರುವ ಅಂಧಂತಮಸ್ಸಿನಲ್ಲಿ ಬೆಣಚುಕಲ್ಲಿನ ರಾಶಿಯು ನಿಮ್ಮ ದ್ವೇಷಿಗಳನ್ನು ಪೀಡಿಸುತ್ತದೆ (ಕಬಳಿಸುತ್ತದೆ.)

ಶ್ಲೋ. ೧೩ : ನರಕಯಾತನೆಯ ವರ್ಣನೆ. (ಮೂಲ) (ಅತಿಕಷ್ಟೇ ಪಂಚಕಷ್ಟೇ ೧೨ನೇ ಶ್ಲೋ.) ವಜ್ರಕಲ್ಪಾಃ ಜಲೂಕಾಃ ತ್ವದ್ದ್ವಿಷಃ ಉಪಜಿಹತೇ ॥ (ಅರ್ಥ) ಘೋರವಾದ ರೌರವಾದಿ ನರಕಗಳಲ್ಲಿ ವಜ್ರದಂತೆ ಅಭೇದ್ಯವಾದ ಜಿಗಣೆಗಳು ನಿಮ್ಮ ದ್ವೇಷಿಗಳನ್ನು ಮುತ್ತಿಕೊಳ್ಳುತ್ತವೆ.

(iii) ೧೨ (ಒಂದು ಶ್ಲೋ.) ಉದಾಸೀನನಿಗೆ ದೊರಕುವ ಫಲ.

ಶ್ಲೋ. ೧೨: ಸಂಸಾರದಲ್ಲೇ ಸುತ್ತಾಟ. (ಮೂಲ) ಯಸ್ತು ಉದಾಸ್ತೇ ಸಃ ಅಧಿಭವಂ ಆಸ್ತೇ, ಪಂಚಕಷ್ಟೇ ನ ವಸತಿ ॥ (ಅರ್ಥ) ಯಾವನು ನಿಮ್ಮನ್ನು (ಭಜಿಸದೆ) ಉದಾಸೀನ ಮಾಡುತ್ತಾನೋ ಅವನು ಸಂಸಾರದಲ್ಲೇ ಸುತ್ತಾಡುತ್ತಿರುತ್ತಾನೆ, ಆದರೆ ರೌರವಾದಿ ನರಕಗಳಲ್ಲಿ ಬೀಳುವುದಿಲ್ಲ.

(ಈ) ಎರಡನೇ ಉಪವಿಭಾಗ—(೧೪-೧೬) ೩ ಶ್ಲೋಕಗಳು.

**ವಿಷಯ—ಪುನಃ ಭಕ್ತಿಗಾಗಿ ಪ್ರಾರ್ಥನೆ**

ಶ್ಲೋ. ೧೪: ಹರಿವಾಯುಗಳಲ್ಲಿ ಭಕ್ತಿ. (ಮೂಲ) ಹೇ ಮಾತರಿಶ್ವನ್ ದೇವ! ಗೋವಿಂದೇ ಭವತಿ ಚ ನಿಶ್ಚಲಾಂ ಭಕ್ತಿಂ ದೇಹಿ ॥ (ಅರ್ಥ) ಹೇ ವಾಯುದೇವರೇ! ಶ್ರೀಹರಿಯಲ್ಲೂ ನಿಮ್ಮಲ್ಲೂ ನಿಶ್ಚಲವಾದ ಭಕ್ತಿಯನ್ನು ಕೊಡಿ.

ಶ್ಲೋ. ೧೫: ಅದು ತಾರತಮ್ಯೋಪೇತವಾಗಿರಬೇಕು. (ಮೂಲ) ಯಃ ತತ್ರ (ವಿಷ್ಣೌ=) ಗರಿಷ್ಠಾಂ ಭಕ್ತಿಂ, ಅಥ ವಿರಿಂಚಿ....ಪೂರ್ವೇಷು ತಾರತಮ್ಯಂ ಆಧ್ಯಾಯನ್ (ಭಕ್ತಿಂ) ವಿಧತ್ತೇ, ತಂ ವಾಯುಃ ಸ್ಫುಟಂ ಅವತಿ ॥ (ಅರ್ಥ) ಯಾರು ಶ್ರೀಹರಿಯಲ್ಲಿ ಅತ್ಯಂತ ಹೆಚ್ಚಾದ (ನಿರವಧಿಕ) ಭಕ್ತಿಯನ್ನೂ ಬ್ರಹ್ಮಾದಿಗಳಲ್ಲಿ ತಾರತಮ್ಯಕ್ಕೆ ಅನುಗುಣವಾಗಿಯೂ ಭಕ್ತಿಮಾಡುತ್ತಾನೋ ಅವನನ್ನು ವಾಯುದೇವರು ನಿಸ್ಸಂದೇಹವಾಗಿ ಸಲಹುವರು.

ಶ್ಲೋ. ೧೬: ತ್ರಿವಿಧ ಜೀವರಿಗೆ ತ್ರಿವಿಧ ಫಲ. (i) ಹೇ ಗುರೋ! ತತ್ವಜ್ಞಾನ್ ಮುಕ್ತಿಭಾಜಃ ಸುಖಯಸಿ ॥ (ಅರ್ಥ) ಹೇ ಗುರುಗಳೇ! ತತ್ವಜ್ಞಾನಿಗಳಿಗೆ ಮೋಕ್ಷವನ್ನು ಕೊಟ್ಟು ಸುಖಪಡಿಸುವಿರಿ. (ii) ಮಿಶ್ರಬುದ್ಧೀನ್ ತ್ರಿದಿವ-ನಿರಯ-ಭೂ (ಲೋಕೇಷು) ಆಧತ್ಸೇ ॥ (ಅರ್ಥ) ಮಿಶ್ರಬುದ್ಧಿಯುಳ್ಳ ನಿತ್ಯಸಂಸಾರಿಗಳನ್ನು ಸ್ವರ್ಗ-ನರಕ-ಭೂಮಿಗಳಲ್ಲಿ ಸುತ್ತಿಸುತ್ತಿರುವಿರಿ. (iii) ಅನ್ಯಥಾಜ್ಞಾನ್ ತಮಸಿ ದುಃಖಯಸಿ ॥ (ಅರ್ಥ) ಮಿಥ್ಯಾಜ್ಞಾನಿಗಳನ್ನು ಅಂಧಂತಮಸ್ಸಿನಲ್ಲಿ ಹಾಕಿ ದುಃಖಪಡಿಸುವಿರಿ—ಇತ್ಥಂ ಶ್ರುತಿ ....ಆದಿಷು ಆಕರ್ಣಯಾಮಃ ॥ (ಅರ್ಥ) ಹೀಗೆಂದು ಶ್ರುತಿಸ್ಮೃತ್ಯಾದಿ ಶಾಸ್ತ್ರಗಳಲ್ಲಿ ಕೇಳುತ್ತೇವೆ.

ಇಲ್ಲಿಗೆ ಪೀಠಿಕಾಭಾಗ ಸಮಾಪ್ತವಾಯಿತು.

**೨ನೇ ವರ್ಗ** (೧೭-೨೧) ೫ ಶ್ಲೋಕಗಳು—ಪ್ರಥಮಾವತಾರ

**ವಿಷಯ—ಹನೂಮದವತಾರದ ಮಹಿಮೆ**

ಶ್ಲೋ. ೧೭: ಅವನಿಗೆ ವಂದನೆ. (ಮೂಲ) ಯಃ ಹನೂಮಾನಿತಿ ಅಗ್ರ್ಯೋಽವತಾರಃ, ತಂ ಅಹಂ ವಂದೇ ॥ (ಅರ್ಥ) ಹನೂಮಂತನೆಂಬ ಪ್ರಥಮಾವತಾರವನ್ನು ನಾನು ವಂದಿಸುತ್ತೇನೆ.

ಶ್ಲೋ. ೧೮: ಸಂಜೀವನ ಪರ್ವತ ತಂದದ್ದು. (ಮೂಲ) ಪ್ರಾಕ್ ತ್ವಂ ಸಂಜೀವನ....ಪರ್ವತಂ ಯಾವತ್ ಅನ್ವೈಷೀಃ, ತದಾ ಏಕಕ್ಷಣೇ ॥ (ಅರ್ಥ) ಹೇ ಆಂಜನೇಯ, ಹಿಂದೆ ನೀನು ಸಂಜೀವನ ಪರ್ವತವನ್ನು ಏನು ತಂದೆಯೋ ಅದು ಒಂದೇ ಕ್ಷಣದಲ್ಲಿ (ತಂದುಬಿಟ್ಟೆ).

ಶ್ಲೋ. ೧೯ : ಅದನ್ನು ಹಿಂದಕ್ಕೆ ಎಸೆದದ್ದು. (ಮೂಲ) ಪಶ್ಚಾತ್ ಸಃ ಉಪಲಲವ ಇವ ಸಲೀಲಂ ಕ್ಷಿಪ್ತಃ ॥ (ಅರ್ಥ) ಅನಂತರ ಅದನ್ನು ಸಣ್ಣ ಕಲ್ಲುಚೂರಿನಂತೆ ಅನಾಯಾಸವಾಗಿ ಎಸೆದುಬಿಟ್ಟೆ. (ಅದು ಎಸೆಯಲ್ಪಟ್ಟಿತು.)

ಶ್ಲೋ. ೨೦: ಅದರ ಹಸ್ತದ ಮಹಿಮೆ. (ಮೂಲ) ಯೇನ ದುಷ್ಟಾಧಿ-ಪೋರಃ ನಿಷ್ಪಿಷ್ಟಂ, ಸಃ ಮುಷ್ಟಿಃ ಮೇ ಇಷ್ಟಂ ಪ್ರದೇಷ್ಟುಂ ಕಿಂ ನೇಷ್ಟೇ ? ॥ (ಅರ್ಥ) ಯಾವ ಮುಷ್ಟಿಯಿಂದ ದುಷ್ಟನಾದ ರಾವಣನ ಎದೆಯು ಜಜ್ಜಿ-ಹಾಕಲ್ಪಟ್ಟಿತೋ, ಅಂಥಾ ನಿಮ್ಮ ಮುಷ್ಟಿಯು (ಹಸ್ತವು) ನನ್ನ ಇಷ್ಟಾರ್ಥ ವನ್ನು ಕೊಡಲಾರದೇ ?

ಶ್ಲೋ. ೨೧: ಬ್ರಹ್ಮಪಟ್ಟ ದೊರಕಿದ್ದು. (ಮೂಲ) ಸೇವಾ.... ದಯಾರ್ದ್ರಃ ರಾಮಾನಾಮಾ ಮುಕುಂದಃ ಪಾರಮೇಷ್ಠ್ಯೇ (ಪದೇ) ಸಹಭುಜಂ ಅಕರೋತ್ ॥ (ಅರ್ಥ) ನಿಮ್ಮ ಸೇವೆಯಿಂದ ಪ್ರಸನ್ನನಾದ ಮುಕುಂದಾವತಾರನಾದ ಶ್ರೀರಾಮನು ಬ್ರಹ್ಮಪದವಿಯಲ್ಲಿ ಸಹಭೋಗವನ್ನು ಅನುಗ್ರಹಿಸಿದನು.

ಇಲ್ಲಿಗೆ ಹನುಮದವತಾರಸ್ತುತಿ ಮುಗಿಯಿತು.

## ೩ನೇ ವರ್ಗ (೨೨-೨೮ ರವರೆಗೆ, ೭ ಶ್ಲೋಕಗಳು) ಎರಡನೇ ಅವತಾರ ವಿಷಯ—ಭೀಮಾವತಾರದ ಮಹಿಮೆ

(ಅ) ಮೊದಲನೆಯ ಉಪವಿಭಾಗ (೨೨-೨೪) ೩ ಶ್ಲೋಕಗಳು.

ದುಷ್ಟಸಂಹಾರದಿಂದ ಭೂಭಾರಹರಣ.

ಶ್ಲೋ. ೨೨: ಬಕ-ಕಿರ್ಮೀರರ ವಧೆ. (ಮೂಲ) ದೇವ (ಭೀಮ-ಸೇನ)! ಯೇನ ತ್ವಯಾ ಬಕ-ಧ್ವಂಸನಾತ್ ಏಕಚಕ್ರಾಜನಾನಾಂ ವಿಘ್ನಃ ಜಘ್ನೇ ॥ (ಅರ್ಥ) ಹೇ ಭೀಮಸೇನದೇವರೇ ! ಯಾವ ನಿಮ್ಮಿಂದ ಬಕಾಸುರನ

ಸಂಹಾರದ ಮೂಲಕ ಏಕಚಕ್ರನಗರಿಯ ಜನಗಳಿಗಿದ್ದ ದೊಡ್ಡ ಪೀಡೆಯು (ವಿಘ್ನವು) ನಿವಾರಿಸಲ್ಪಟ್ಟಿತೋ, ಯ (ಶ್ಚ) (ತ್ವಂ) ಕಿರ್ಮೀರಂ ನಿರ್ಮಮಾಥ ॥ (ಅರ್ಥ) ಯಾವ ನೀವು ಕಿರ್ಮೀರನೆಂಬ ಅಸುರನನ್ನು ಅರೆದುಹಾಕಿದಿರೋ, (ಮೂಲ) ತಸ್ಮೈ ತೇ ಪ್ರಣಾಮಾನ್ ಕುರ್ಮಃ ॥ (ಅರ್ಥ) ಅಂಥಾ ನಿಮಗೆ ಪ್ರಣಾಮಗಳನ್ನು ಮಾಡುವೆವು.

ಶ್ಲೋ. ೨೩ : ಜರಾಸಂಧನ ವಧೆ. (ಮೂಲ) ಹೇ ವಿಜರವರ! ತ್ವಂ ಯುದ್ಧೇ ಜರಾಸಂಧಕಾಯಾಸ್ಥೀ........ನ್ ನಿರ್ಮೃದ್ನನ್ ಪ್ರತ್ಯಕ್ಷಭೂತಂ (ಕೃಷ್ಣಂ) ತರ್ಪಯಾಮಾಸಿಥ ॥ (ಅರ್ಥ) ಹೇ ದೇವೋತ್ತಮರೇ! ನೀವು ಜರಾಸಂಧನ ದೇಹದ ಮೂಳೆಗಳನ್ನು ನುಚ್ಚಿ ನುರಿಮಾಡಿ ಅಲ್ಲೇ ಪ್ರತ್ಯಕ್ಷವಾಗಿ ಸನ್ನಿಹಿತನಾಗಿದ್ದ ಶ್ರೀಕೃಷ್ಣಪರಮಾತ್ಮನನ್ನು ತೃಪ್ತಿಪಡಿಸಿದಿರಿ.

ಶ್ಲೋ. ೨೪ : ಕೌರವರ ೧೧ ಅಕ್ಷೋಹಿಣೀ ಸೈನ್ಯ ನಾಶ. (ಮೂಲ) ಹೇ ಉದ್ದಾಮಬಾಹೋ! ಬಹ್ವಕ್ಷೌಹಿಣೀ-ಅನೀಕ-ಕ್ಷಪಣಂ ರಣಂ (ಕೃಷ್ಣಸ್ಯ) ಶುಶ್ರೂಷಾರ್ಥಂ ಚಕರ್ಥ॥ (ಅರ್ಥ) ಹೇ ಮಹಾಭುಜಪರಾಕ್ರಮಶಾಲಿಯಾದ ಭೀಮಸೇನನೇ! ನೀನು ಅನೇಕ ಅಕ್ಷೋಹಿಣೀ ಸೈನ್ಯವು ನಾಶವಾಗಿ ಹೋದ ಭಾರತಯುದ್ಧವನ್ನು ಶ್ರೀಕೃಷ್ಣನ ಮತ್ತು ವೇದವ್ಯಾಸರ ಶುಶ್ರೂಷೆಗಾಗಿಯೇ ಮಾಡಿದಿ.

(ಆ) ಮಧ್ಯದ ಉಪವಿಭಾಗ (ಶ್ಲೋ. ೨೫-೨೬, ಶ್ಲೋಕಗಳು)

### ಪ್ರಾಸಂಗಿಕ ಎರಡು ವಿಚಾರಗಳು

ಶ್ಲೋ. ೨೫ : ಅವಿದ್ಯಾಪರಿಹಾರಕ್ಕೆ ಪ್ರಾರ್ಥನೆ. (ಮೂಲ) ಹೇ ಪೂರ್ವಭೀಮ! ತೇ ದಯಿತಾ (ಯಾ) ದ್ರೌಪದೀ, ಸಾ ವಾಗ್ದೇವೀ ಅವಿದ್ಯಾ-ನಿದ್ರಾಂ ವಿದ್ರಾವ್ಯ, ಮಾಂ ಅಭದ್ರಾತ್ ರಹಯತು ॥ (ಅರ್ಥ) ಹಿಂದೆ ಭೀಮಾವತಾರ ಮಾಡಿದ್ದವರೇ! ಹಿಂದೆ ಯಾವ ದ್ರೌಪದಿಯು ನಿಮ್ಮ ಪತ್ನಿಯಾಗಿದ್ದಳೋ ಆ ಭಾರತೀದೇವಿಯು ನಮ್ಮ ಅವಿದ್ಯೆಯೆಂಬ ಅಜ್ಞಾನವನ್ನು ಓಡಿಸಿ ನನ್ನನ್ನು ಅಮಂಗಳದಿಂದ ದೂರಮಾಡಲಿ.

ಶ್ಲೋ. ೨೬ : ಶ್ರೀಹರಿವಾಯುಗಳಿಗೆ ನಮನ. (ಮೂಲ) ಕ್ಷೇಮ-ದೇಭ್ಯಃ ಕೃಷ್ಣನಾಮ....ಭ್ಯಾಂ ಅಮೂಭ್ಯಾಂ, ತುಭ್ಯಂ ಚ ನಮೋಽಸ್ತು ॥

(ಅರ್ಥ) ಮಂಗಳಪ್ರದರಾದ ವಾಸಿಷ್ಠಯಾದವಕೃಷ್ಣರಿಗೂ (ಕೃಷ್ಣ-ವ್ಯಾಸರಿಗೂ) ನಿಮಗೂ ನಮಸ್ಕಾರ.

(ಇ) ಕಡೆಯ ಉಪವಿಭಾಗ (೨೭-೨೮ನೇ ೨ ಶ್ಲೋಕಗಳು)

**ಸೌಗಂಧಿಕಾಪುಷ್ಪಹರಣ**

ಶ್ಲೋ. ೨೭: ಭೀಮನಿಗೆ ಹನೂಮಂತನ ಭೆಟ್ಟಿ. (ಮೂಲ) [i] ಸೌಗಂಧಿಕಾರ್ಥಂ ಗಚ್ಛನ್ ಭೀಮಃ ಹನುಮತಃ ಪುಚ್ಛಂ ಪ್ರೋದ್ಧರ್ತುಂ ನಾಶಕತ್ ॥ (ಅರ್ಥ) ಸೌಗಂಧಿಕಾಪುಷ್ಪವನ್ನು ತರುವುದಕ್ಕೆ ಹೋಗಿದ್ದಾಗ ಭೀಮನಿಗೆ ಹನುಮಂತನ ಬಾಲವನ್ನು ಎತ್ತುವುದಕ್ಕೆ ಸಾಧ್ಯವಾಗಲಿಲ್ಲವೆಂದೂ, (ಮೂಲ) [ii] ಸಃ ತು ಅಮುಂ ಭೀಷಯಾಮಾಸ ಚ ಇತಿ॥ (ಅರ್ಥ) ಅವನು ಈ ಭೀಮನನ್ನು ಹೆದರಿಸಿದನೆಂಬುದೂ, (ಮೂಲ) [iii] ಕ್ರೀಡಾಮಾತ್ರಂ ॥ (ಅರ್ಥ) ದೈತ್ಯರ ಮೋಹಕ್ಕಾಗಿ ರಚಿಸಿದ ಆಟ.

ಶ್ಲೋ. ೨೮: ದೈತ್ಯರ ನಾಶ. (ಮೂಲ) [i] ತಂ ಬಹ್ವೀಃ ಕೋಟೀಃ ಅರೀನ್ ಗದಯಾ ಪೋಥಯಾಮಾಸಿಥ॥ (ಅರ್ಥ) ನೀವು ಅನೇಕ ಕೋಟಿ ಶತ್ರುಗಳನ್ನು ಗದೆಯಿಂದ ಸಂಹರಿಸಿದಿರಿ. (ಮೂಲ) [ii] ಮಿಥ್ಯಾತ್ವ........ ವಚನಾನ್ ಅನ್ಯಾನ್ ಉನ್ಮಥ್ಯ ಸ್ವಪ್ರಿಯಾಯೈ ಕುಸುಮಂ ಪ್ರಾಯಚ್ಛಃ ॥ (ಅರ್ಥ) ಮಿಥ್ಯಾವಾದಿಗಳಾದ ಇತರ ದೈತ್ಯರನ್ನು ವಾದದಲ್ಲಿ ಸೋಲಿಸಿ ಸೌಗಂಧಿಕಾ ಪುಷ್ಪವನ್ನು ಪ್ರಿಯಳಾದ ದ್ರೌಪದೀದೇವಿಗೆ ತಂದುಕೊಟ್ಟಿರಿ.

ಇಲ್ಲಿಗೆ ಭೀಮಾವತಾರದ ಸ್ತುತಿ ಮುಗಿಯಿತು.

## ೪ನೇ ವರ್ಗ—(೨೯-೪೦, ೧೨ ಶ್ಲೋಕಗಳು) ಮೂರನೆಯ ಅವತಾರದ ಸ್ತುತಿ

**ಮಧ್ವಾವತಾರದ ಮಹಿಮೆ**

(ಅ) ಮೊದಲನೆಯ ಉಪವಿಭಾಗ (೨೯-೩೨, ೪ ಶ್ಲೋಕಗಳು)

ಮಧ್ವಾವತಾರದ ಉಪಕ್ರಮ

ಶ್ಲೋ. ೨೯: ಮಣಿಮಂತನ ಉದಯ. (ಮೂಲ) ದೇಹಾದುತ್ಕ್ರಾಮಿತಾನಾಂ ಅಸತಾಂ ಅಧಿಪತಿಃ ಮಣಿಮಾನ್ ಭೂಚಕ್ರಂ ಏತ್ಯ ಕಷ್ಟಶಾಸ್ತ್ರಂ ಚಕ್ರೇ॥ (ಅರ್ಥ) ಗಂಧಮಾದನಪರ್ವತದಲ್ಲಿ ಭೀಮನಿಂದ ಸಂಹರಿಸಲ್ಪಟ್ಟ

ದುಷ್ಟರಲ್ಲಿ ಅಗ್ರಗಣ್ಯನಾದ ಮಣಿಮಂತನು ಭೂಮಿಗೆ ಬಂದು ಕಷ್ಟಶಾಸ್ತ್ರ ವನ್ನು ರಚಿಸಿದನು.

ಶ್ಲೋ. ೩೦ : ಆ ಶಾಸ್ತ್ರದ ನಿರಸನ. (ಮೂಲ) ಹೇ ಪವನ ! ತೇ ತೃತೀಯಾವತಾರಃ ತದ್ವ್ಯಾಖ್ಯಾಭಾಸ ... ವಿಷತರೂದ್ದಾಹದಕ್ಷಪ್ರಮಾಣಾ..ಗ್ನಿ॥ (ಅರ್ಥ) ಹೇ ವಾಯುದೇವರೇ ! ನಿಮ್ಮ ತೃತೀಯಾವತಾರವು ಆ ಮಣಿ-ಮಂತನ ಯುಕ್ತಿಗಳಂತೆ ತೋರುವ ವಿಚಾರಗಳೆಂಬ ವಿಷವೃಕ್ಷವನ್ನು ದಹಿಸಲು ಪಟುವಾದ ಪ್ರಮಾಣಗಳೆಂಬ ಅಗ್ನಿಯ ಜ್ವಾಲಾಸ್ವರೂಪವಾಗಿದೆ.

ಶ್ಲೋ. ೩೧ : ನಿರಾಸದ ಪರಿಣಾಮ. (ಮೂಲ) ತ್ವದ್ವ್ಯಾಖ್ಯಾ ಸಿಂಹನಾದೇ ಮಾಯಿಗೋಮಾಯುವಃ ನಿರಾಶಾ ಧಾವಂತೋ ದದೃಶಿರೇ । (ಅರ್ಥ) ನಿಮ್ಮ ವ್ಯಾಖ್ಯಾನವೆಂಬ ಸಿಂಹಗರ್ಜನೆಯನ್ನು ಕೇಳಿ ಮಾಯಾವಾದಿ ಗಳೆಂಬ ನರಿಗಳು ನಿರಾಶರಾಗಿ ಪಲಾಯನ ಮಾಡಲಾರಂಭಿಸಿದುವು.

ಶ್ಲೋ. ೩೨ : ಮೂರು ಅವತಾರಗಳಲ್ಲೂ ಹೀಗೆಯೇ ಶತ್ರುಬಾಧೆ— (ಮೂಲ) ತ್ರಿಷ್ವಪಿ ಅವತಾರೇಷು ಅರಿಭಿಃ ಹಿಂಸಿತಃ (ಅಪಿ) ನಿರ್ವಿಕಾರಃ । ಕಿಂ ಚಿತ್ರಮತ್ರ ! ॥ (ಅರ್ಥ) ಮೂರು ಅವತಾರಗಳಲ್ಲೂ ಇದೇ ರೀತಿ ಶತ್ರು ಗಳಿಂದ ಹಿಂಸಿಸಲ್ಪಟ್ಟರೂ ನೀವು ಯಾವ ವಿಕಾರವನ್ನೂ ಹೊಂದಲಿಲ್ಲ. ಇದರಲ್ಲಿ ಆಶ್ಚರ್ಯವೇನಿದೆ !

### (ಆ) ಎರಡನೆಯ ಉಪವಿಭಾಗ (೩೩–೩೫, ೩ ಶ್ಲೋಕಗಳು)
### ಆಚಾರ್ಯರು ನಿರ್ವಿಕಾರರೆಂಬುದರ ವರ್ಣನೆ

ಶ್ಲೋ. ೩೩ : ಅವರ ಮುಖಚಂದ್ರದ ವರ್ಣನೆ. (ಮೂಲ) ಹೇ ಆನಂದತೀರ್ಥ ! ತೇ ಉದ್ಯನ್ಮಂದಸ್ಮಿತಶ್ರೀ........ವಕ್ತ್ರೇಂದುಬಿಂಬಂ ಕದಾನು ಸಂಪ್ರೇಕ್ಷ್ಯೇ ?॥ (ಅರ್ಥ) ಹೇ ಮಧ್ವಾಚಾರ್ಯರೇ ! ನಿತ್ಯವೂ ಮಂದಹಾಸ-ಲಕ್ಷ್ಮಿಯನ್ನು ಬೀರುವ ನಿಮ್ಮ ಮುಖಚಂದ್ರನ ದರ್ಶನವು ಯಾವಾಗ ಆದೀತು ?

ಶ್ಲೋ. ೩೪: ನಿಮ್ಮ ವ್ಯಾಖ್ಯಾನವನ್ನು ಶ್ರವಣಮಾಡಿಸಿರಿ. (ಮೂಲ) ಹೇ ಮಹಾಚಾರ್ಯ! ತೇ ಚಿತ್ರಾಂ ವ್ಯಾಖ್ಯಾಂ ಅಸ್ಮಾಂಶ್ಚ ಕಿಂಚಿತ್

ಶ್ರಾವಯ ॥ (ಅರ್ಥ) ಹೇ ಆಚಾರ್ಯವರ್ಯರೇ ! ನಿಮ್ಮ ಅದ್ಭುತವಾದ ವ್ಯಾಖ್ಯಾನವೈಖರಿಯನ್ನು ನಮಗೂ ಕಿಂಚಿತ್ ಶ್ರವಣ ಮಾಡಿಸಿರಿ.

ಶ್ಲೋ. ೩೫ : ನಿಮ್ಮ ಮಹಿಮೆಯು ದೇವಲೋಕದಲ್ಲೂ ಸಹ ಕೊಂಡಾಡಲ್ಪಡುತ್ತದೆ. (ಮೂಲ) [i] ಭಗವನ್! ರತ್ನೋಪಕ್ಲುಪ್ತೇ ಪೀಠೇ ನಿಷಣ್ಣಂ ತ್ವಾಂ ವೈದಿಕಾದ್ಯಾಃ ವಿದ್ಯಾಃ ಸೇವಂತೇ ॥ (ಅರ್ಥ) ಹೇ ಪೂಜ್ಯ ವಾಯುದೇವರೇ ! ತಾವು ರತ್ನಖಚಿತವಾದ ಸಿಂಹಾಸನದಲ್ಲಿ ಕುಳಿತಿರುವಾಗ ವೇದವಿದ್ಯಾಭಿಮಾನಿ ದೇವತೆಗಳೆಲ್ಲರೂ ತಮ್ಮನ್ನು ಸೇವಿಸುತ್ತಾರೆ. (ಮೂಲ) [ii] ತವ ಚರಿತಂ ದೇವಸಂಸತ್ಸು ದ್ಯೋವಧೂನರ್ತಿತಂ, ಗಂಧರ್ವಗೀತಂ (ಚ.) ॥ (ಅರ್ಥ) ನಿಮ್ಮ ಚರಿತ್ರೆಯನ್ನು ದೇವತೆಗಳ ಸಭೆಗಳಲ್ಲಿ ಅಪ್ಸರೆಯರು ನರ್ತನ ಮಾಡಿ ಕೊಂಡಾಡಿದರೆ ಗಂಧರ್ವರು ಹಾಡಿ ಹೊಗಳುತ್ತಾರೆ.

(೩) ಮೂರನೆಯ ಉಪವಿಭಾಗ (೩೬–೪೦, ೫ ಶ್ಲೋಕಗಳು)

ಸೂತ್ರಭಾಷ್ಯಾದಿ ಗ್ರಂಥರಚನೆ. (ಸೂತ್ರಭಾಷ್ಯ ಎಂದು ಹೇಳಿದ್ದರಿಂದ 'ಬ್ರಹ್ಮಸೂತ್ರ'ಗಳು ಪ್ರಸಕ್ತವಾದುವು. ಬ್ರಹ್ಮಸೂತ್ರಗಳೆಂದು ಹೇಳಿದ್ದರಿಂದ ಅವನ್ನು ರಚಿಸಿದ ವೇದವ್ಯಾಸರ ವಿಚಾರ ಪ್ರಸಕ್ತವಾಯಿತು. ಅದನ್ನೇ ಈಗ ಕ್ರಮವಾಗಿ ಹೇಳುತ್ತಾರೆ. (ಕ) ವೇದವ್ಯಾಸರು ಯಾರು ? (ಖ) ಬ್ರಹ್ಮಸೂತ್ರವನ್ನೇಕೆ ರಚಿಸಿದರು ? (ಗ) ಅವಕ್ಕೆ ಭಾಷ್ಯ ಬರೆಯಲು ಕಾರಣವೇನು ?

ಶ್ಲೋ. ೩೬ : ವೇದವ್ಯಾಸರು ಯಾರು ?— (ಮೂಲ) ಯುಷ್ಮಾಭಿಃ ಪ್ರಾರ್ಥಿತಃ ಜಲನಿಧಿಶಯನಃ (ವ್ಯಾಸತ್ವೇನ) ವ್ಯಕ್ತಃ ॥ (ಅರ್ಥ) ಬ್ರಹ್ಮ-ರುದ್ರಾದಿ ದೇವತೆಗಳಿಂದ ಪ್ರಾರ್ಥಿತನಾದ ನಾರಾಯಣನೇ ವ್ಯಾಸನಾಗಿ ಅವತಾರ ಮಾಡಿದನು.

ಶ್ಲೋ. ೩೭ : ಬ್ರಹ್ಮಸೂತ್ರಗಳ ರಚನೆ. (ಮೂಲ) ವ್ಯಾಸಾಭಿಧಾನಃ (ಸಃ) ಸಮಸ್ತಶ್ರುತಿಗತಂ ಅರ್ಥಂ ಸೂತ್ರಯಾಮಾಸ ॥ (ಅರ್ಥ) ಆ ವೇದ-ವ್ಯಾಸರು ಸಕಲ ಶ್ರುತ್ಯರ್ಥನಿರ್ಣಯಕ್ಕಾಗಿ ಬ್ರಹ್ಮಸೂತ್ರಗಳನ್ನು ರಚಿಸಿದರು.

ಶ್ಲೋ. ೩೮ : ಸೂತ್ರಭಾಷ್ಯರಚನೆ. (ಮೂಲ) ಆಜ್ಞಾಂ ದಧತ್ ಭೂಮೌ ಆಗತ್ಯ, ಮಣಿಮಂತ ಉದಿತಂ ದುರ್ಭಾಷ್ಯಂ ವ್ಯಸ್ಯ, ಬ್ರಹ್ಮಸೂತ್ರಸ್ಯ ಭಾಷ್ಯಂ ಅಕರೋಃ ॥ (ಅರ್ಥ) ಆ ಭಗವಂತನ ಆಜ್ಞೆಯನ್ನು ಶಿರಸಾವಹಿಸಿ, ಭೂಮಿಯಲ್ಲಿ ಅವತಾರ ಮಾಡಿ, ಮಣಿಮಂತನ ಭಾಷ್ಯವನ್ನು ಖಂಡಿಸಿ, ಸೂತ್ರಭಾಷ್ಯವನ್ನು ರಚಿಸಿದಿರಿ.

(ಆಚಾರ್ಯರು ರಚಿಸಿದುದು ಸೂತ್ರಭಾಷ್ಯ ಒಂದೇ ಅಲ್ಲ, ಇನ್ನೂ ಅನೇಕ ಗ್ರಂಥಗಳನ್ನೂ ರಚಿಸಿದರು ಎಂದು ಹೇಳುವುದಕ್ಕಾಗಿ ಸಂಕ್ಷೇಪವಾಗಿ ಶ್ರೀಮದಾಚಾರ್ಯರ ಜೀವನಚರಿತ್ರೆಯನ್ನೂ ಹೇಳಿ ಅವರ ಇತರ ಕೃತಿಗಳನ್ನೂ ಮುಂದಿನ ಶ್ಲೋಕದಿಂದ ಉಲ್ಲೇಖಿಸುತ್ತಾರೆ.)

ಶ್ಲೋ. ೩೯: ಉಡುಪಿ ಸಮೀಪದಲ್ಲಿ ಅವತರಿಸಿ ಕೃತಿಗಳನ್ನು ರಚಿಸಿದ್ದು. (ಮೂಲ) [i] ರೌಪ್ಯಕ್ಷೇತ್ರೇ ಮಧ್ಯಗೇಹ........ಗೇಹೇ ಭೂತ್ವಾ॥ (ಅರ್ಥ) ಉಡುಪಿಗೆ ಸಮೀಪದಲ್ಲಿರುವ ಪಾಜಕಕ್ಷೇತ್ರದಲ್ಲಿ ಮಧ್ಯಗೇಹಭಟ್ಟರ ಕುಟುಂಬದಲ್ಲಿ ಜನಿಸಿ, (ಮೂಲ) [ii] ಪಾರಿವ್ರಾಜ್ಯಂ (ಸ್ವೀಕೃತ್ಯ) ಬದರೀಂ ಪ್ರಾಪ್ಯ, ಕೃಷ್ಣಂ ಚ ನತ್ವಾ॥ (ಅರ್ಥ) ಸನ್ಯಾಸಸ್ವೀಕಾರ ಮಾಡಿ, ಬದರೀಗೆ ಹೋಗಿ, ವೇದವ್ಯಾಸರಿಗೆ ವಂದಿಸಿ (ಮೂಲ) [ iii] ಭಾಷ್ಯಾಣಿ ಕೃತ್ವಾ ಭವಾನ್ ಭಾರತಾರ್ಥ ಪ್ರಕಾಶಂ ವ್ಯತನುತ ಚ ॥ (ಅರ್ಥ) ಗೀತಾಭಾಷ್ಯ ಋಗ್ಭಾಷ್ಯ, ಉಪನಿಷದ್ಭಾಷ್ಯಗಳನ್ನು ರಚಿಸಿ ನೀವು ಶ್ರೀಮನ್ಮಹಾಭಾರತತಾತ್ಪರ್ಯ-ನಿರ್ಣಯವೆಂಬ ಗ್ರಂಥವನ್ನೂ ರಚಿಸಿದಿರಿ.

ಶ್ಲೋ. ೪೦ : ಪುನಃಪುನಃ ವಂದನೆ. (ಮೂಲ) [i] ತಂ ಸುಪೂರ್ಣ-ಪ್ರಮತಿಂ ತ್ವಾ ವಂದೇ ॥ (ಅರ್ಥ) ಅಂಥಾ ಪೂರ್ಣಪ್ರಜ್ಞರೆಂಬ ನಿಮ್ಮನ್ನು ವಂದಿಸುತ್ತೇನೆ. (ಮೂಲ) [ii] ಶ್ರೀಮದಾನಂದತೀರ್ಥಂ (ತ್ವಾ) ವಂದೇ ॥ (ಅರ್ಥ) ಶ್ರೀಮದಾನಂದತೀರ್ಥರೆಂಬ ನಿಮ್ಮನ್ನು ವಂದಿಸುತ್ತೇನೆ. (ಮೂಲ) [iii] ವಂದೇ, ದೇವ ! ಭಕ್ತ್ಯಾ ಅಹಂ ವಂದೇ ॥ (ಅರ್ಥ) ನಿಮ್ಮನ್ನು ಹೇ ಭಗವನ್, ನಾನು ಪುನಃಪುನಃ ಭಕ್ತಿಯಿಂದ ವಂದಿಸುತ್ತೇನೆ.

ಹೀಗೆ ಶ್ರೀಮದಾಚಾರ್ಯರನ್ನು ಭಕ್ತ್ಯತಿಶಯದಿಂದ ವಂದಿಸಿ ಈಗ ಫಲಶ್ರುತಿಯನ್ನು ಹೇಳಿ ಸಮಾಪ್ತಿ ಮಾಡುತ್ತಾರೆ.

## ೫ನೇ ವರ್ಗ ೪೧ನೇ ಒಂದು ಶ್ಲೋಕ ಫಲಶ್ರುತಿ

ಶ್ಲೋ. ೪೧ : ಫಲಶ್ರುತಿ. (ಮೂಲ) [i] ಸುಬ್ರಹ್ಮಣ್ಯಾಖ್ಯಸೂರೇಃ ಸುತಃ ಕೇಶವಾನಂದತೀರ್ಥ........ಪಾದಭಕ್ತಃ ಹರೇಃ ವಾಯುದೇವಸ್ಯ ಚ ಸ್ತುತಿಂ ಅಕೃತ॥ (ಅರ್ಥ) ಸುಬ್ರಮಣ್ಯಪಂಡಿತರ ಮಗನಾದ ತ್ರಿವಿಕ್ರಮ-ಪಂಡಿತನೆಂಬ ಶ್ರೀಹರಿವಾಯುಗಳ ಪಾದಭಕ್ತನು ಶ್ರೀಹರಿ ವಾಯುಗಳ ಸ್ತುತಿಯನ್ನು ರಚಿಸಿದನು. (ಮೂಲ) [ii] ಯೇ ಏತಯಾ ಪದ....ಮಾಲಯಾ ಅಮೂ ನಮಂತಿ, ಏತೇ ಮುಕ್ತಿಂ ವ್ರಜಂತಿ॥ (ಅರ್ಥ) ಯಾರು ಈ ಪದ್ಯಗಳ (ಶಬ್ದಗಳ) ಪುಷ್ಪಹಾರದಿಂದ ಇವರಿಬ್ಬರನ್ನೂ (ಶ್ರೀಹರಿವಾಯುಗಳನ್ನು) ವಂದಿಸುತ್ತಾರೋ ಅವರು ಮುಕ್ತಿಗೆ ಹೋಗುತ್ತಾರೆ.

ಇಲ್ಲಿಗೆ ಶ್ರೀಹರಿವಾಯುಸ್ತುತಿಯ ಮೂಲಾನುವಾದಪೂರ್ವಕ ಪ್ರತಿ ಶ್ಲೋಕದ ಸಾರಸಂಗ್ರಹರೂಪ **ಸಿಂಹಾವಲೋಕನವು** ಸಮಾಪ್ತವಾಯಿತು.

### ಸಮರ್ಪಣೆ

ವಾಯುಸ್ತುತೇಸ್ತು ಶ್ಲೋಕಾನಾಂ ಸಾರಭಾಗಾನ್ ಹಿ ಕೇವಲಾನ್ ।
ಉದ್ಧೃತ್ಯ ಸಾದರಂ ಶಬ್ದ—ಮಯೀ ಕುಸುಮಮಾಲಿಕಾ ॥
ರಚಿತಾ ವಿಷ್ಣುತೀರ್ಥೇನ ಮಧ್ವಮಾಧವತುಷ್ಟಯೇ ।
ಧ್ರಿಯತಾಂ ಹೃದಯೇ ಸೇಯಂ ಹರಿಣಾ ವ್ಯಾಸರೂಪಿಣಾ ॥

# ಪುರಶ್ಚರಣವಿಧಿ

**ಪುರಶ್ಚರಣೆ ಎಂದರೇನು?** ಪುರಸ್ ಶಬ್ದಾರ್ಥವನ್ನು ಮೇದಿನೀಕೋಶ ದಲ್ಲಿ "ಪುರೋಽಗ್ರೇ ಪ್ರಥಮೇ ಭೂಯಃ" ಎಂದು ಹೇಳಿರುವುದರಿಂದ ಪುರಃ ಎಂದರೆ ಎದುರಿಗೆ ಅಥವಾ ಸನ್ನಿಧಿಯಲ್ಲಿ ಎಂದೂ ಪುನಃಪುನಃ ಎಂದೂ ಅರ್ಥವಾಗುತ್ತದೆ. 'ಚರಗತಿಭಕ್ಷಣಯೋಃ' ಎಂಬ (ಭ್ವಾ.ಪ.) ಧಾತುವಿನ ರೂಪವಾದ್ದರಿಂದ ಚರಣ ಎಂದರೆ ಓಡಾಡುವುದು, ಅಡ್ಡಾಡುವುದು ಎಂದು ಸಾಮಾನ್ಯಾರ್ಥವಾದರೂ ಇಲ್ಲಿ ಲಕ್ಷಣಯಾ ಪಠನ ಮಾಡುವುದೆಂದೇ ಅರ್ಥ ವಾಗುತ್ತದೆ. ಹೀಗೆ ಪುರಸ್ + ಚರಣ = ಪುರಶ್ಚರಣ ಎಂದರೆ ಸಾಮಾನ್ಯ ರೀತಿ ದೇವತಾಸನ್ನಿಧಿಯಲ್ಲಿ ಅನೇಕ ವೇಳೆ ಪಠನ ಮಾಡುವುದು ಎಂದು ಅರ್ಥವಾದರೂ ಈ ಶಬ್ದದ ವ್ಯಾಪ್ತಿ ಬಹಳವಾಗಿದೆ. ದೇವತಾಪ್ರಸಾದ-ಸಿದ್ಧಿಗಾಗಿ ಹೋಮಾದಿಗಳೂ ಅನ್ನಶಾಂತಿಯೂ ಕಾರಣವಾದ್ದರಿಂದ ಅದೆಲ್ಲವೂ ಈ ಪದದಲ್ಲಿ ಅಡಕವಾಗಿದೆ.

ದೇವತಾಪ್ರೀತಿಸಿದ್ಧ್ಯರ್ಥಂ ಹೋಮಾದಿ ವಿಧಿಪೂರ್ವಕಮ್ ।
ಅಸಕೃನ್ಮಂತ್ರಪಠನಂ ಪುರಶ್ಚರಣಮೀರಿತಮ್ ॥

ಎಂಬ ಉಕ್ತಿಯಂತೆ ತಮ್ಮ ಇಷ್ಟದೇವತಾಪ್ರಸಾದಸಿದ್ಧಿಗಾಗಿ ಯಾವುದಾದರೂ ಮಂತ್ರವನ್ನೋ ಸೂಕ್ತವನ್ನೋ ಸ್ತೋತ್ರವನ್ನೋ ಆ ದೇವತೆಯ ಸನ್ನಿಧಿ ಯಲ್ಲಿ ವಿಧಿಪೂರ್ವಕವಾಗಿ ಅನೇಕಸಲ (ವೇಳೆ) ಪಠಿಸಿ ಅದಕ್ಕೆ ತಕ್ಕಷ್ಟು ತರ್ಪಣವನ್ನೂ ಹೋಮವನ್ನೂ ಅನ್ನಶಾಂತಿಯನ್ನೂ ಮಾಡುವುದಕ್ಕೇ **ಪುರಶ್ಚರಣೆ**ಯೆಂದು ಹೆಸರು. (ಪುನಶ್ಚರಣೆ ಎಂಬ ರೂಪ ಅಷ್ಟು ಶುದ್ಧವಲ್ಲ.) ಹೀಗೆ ಪುರಶ್ಚರಣೆಯೆಂಬುದು ಪ್ರದಕ್ಷಿಣ-ನಮಸ್ಕಾರ ಹಾಕಿದಂತೆ ಅಥವಾ ಅಷ್ಟೋತ್ತರಪಾಠ ಶತಪಾಠಸಹಸ್ರಪಾಠ ಮಾಡಿದಷ್ಟು ಸುಲಭವಲ್ಲ.

**ವಾಯುಸ್ತುತಿಯ ಪುರಶ್ಚರಣೆ—** ಪ್ರಕೃತ ಶ್ರೀಹರಿವಾಯುಗಳ ಪ್ರೀತ್ಯರ್ಥವಾಗಿ ತನ್ನತನ್ನ ಇಷ್ಟ ಸಿದ್ಧಿಸುವಂತೆ ವಾಯುಸ್ತುತಿಯನ್ನು ಹೇಗೆ ಪಠಿಸಬೇಕು? ಯಾವ ಶ್ಲೋಕದಿಂದ ಯಾವ ಇಷ್ಟಾರ್ಥಸಿದ್ಧಿಯಾಗು

ತ್ತದೆ? ಎಂಬ ಬಗ್ಗೆ ಶ್ರೀ ತ್ರಿವಿಕ್ರಮಪಂಡಿತಾಚಾರ್ಯರು, ಶ್ರೀ ವ್ಯಾಸ-ರಾಯರು, ಶ್ರೀ ವಾದಿರಾಜರು, ಶ್ರೀ ಯಾದವಾಚಾರ್ಯಪ್ರಭೃತಿ ದೊಡ್ಡ-ದೊಡ್ಡ ಮಹನೀಯರುಗಳು ತಮ-ತಮಗೆ ಸೂಕ್ತ ಕಂಡ ರೀತಿಯಲ್ಲಿ ತೋರಿಸಿಕೊಟ್ಟಿದ್ದಾರೆ. ಶ್ರೀಹರಿವಾಯುಗಳಿಗೆ ಈ ಸಕಲ ಕ್ರಮಗಳೂ ಪ್ರಿಯವೇ ಆಗಿವೆಯೆಂಬುದರಲ್ಲಿ ಕಿಂಚಿತ್ತೂ ಸಂದೇಹವಿಲ್ಲ. ಅನುಷ್ಠಾನ ಮಾಡುವವನಿಗೆ ಯಾವ ಕ್ರಮ ಸುಲಭವಾಗಿ ಕಾಣುತ್ತದೋ ಅಥವಾ ರುಚಿ-ಸುತ್ತದೋ ಅವನು ಅದನ್ನು ಅನುಷ್ಠಾನ ಮಾಡಲು ಯಾವ ಅಭ್ಯಂತರವೂ ಇಲ್ಲ, ಮಿಕ್ಕದ್ದನ್ನು ನಿಂದಿಸಬಾರದು.

**ವಿವಿಧ ಕ್ರಮಗಳ ಸಂಗ್ರಹ—** ಹೀಗೆ ಅನೇಕ ಮಹನೀಯರು ಅನೇಕ ಕ್ರಮಗಳನ್ನು ಹೇಳಿಕೊಟ್ಟಿದ್ದಾರಾದರೂ ಪ್ರಾಯಶಃ ಶ್ರೀ ವಾದಿರಾಜರ ಪುರಶ್ಚರಣವಿಧಿ 'ಯನ್ನು ಬಿಟ್ಟರೆ ಮಿಕ್ಕ ಕ್ರಮಗಳೆಲ್ಲವೂ ಗತಾನುಗತಿಕವಾಗಿ ಖಿಲರೂಪವಾಗಿ ನಮಗೆ ದೊರಕಿವೆಯೇ ಹೊರತು ಗ್ರಂಥಬದ್ಧವಾಗಿ ದೊರಕು ವುದಿಲ್ಲ. ಇನ್ನು ಶ್ರೀ ಗುರುರಾಜರ ಪುರಶ್ಚರಣಪದ್ಧತಿಯು ಇದುವರೆಗೆ ಎಲ್ಲೂ ಮುದ್ರಿತವಾಗಿಲ್ಲದಿದ್ದರೂ ಲಿಖಿತರೂಪದಲ್ಲಿ ಮೈಸೂರು ಪ್ರಾಚ್ಯ-ಸಂಶೋಧನಾಲಯಾದಿ ಅನೇಕ ಕಡೆ ಉಪಲಭ್ಯವಾಗಿದೆ. ಇದರಲ್ಲಿ ಪುರಶ್ಚರಣ ಕ್ರಮವನ್ನು ತೋರಿಸಿರುವುದು ಮಾತ್ರವಲ್ಲದೆ ಪ್ರತಿಯೊಂದು ಶ್ಲೋಕಕ್ಕೂ ಯಾವಯಾವ ಭಗವನ್ಮೂರ್ತಿ ಧ್ಯಾನ ಮಾಡಬೇಕು? ಯಾವ ಪುಷ್ಪಾದಿ ಗಳಿಂದ ಪೂಜಿಸಬೇಕು? ಏನು ನೈವೇದ್ಯ ಇಡಬೇಕು? ಹೋಮದ್ರವ್ಯ ಯಾವುದು? ತಾನು ಏನು ಆಹಾರ ಸೇವಿಸಬೇಕು? ಇತ್ಯಾದಿ ವಿಷಯಗಳನ್ನು ಆ ಮಹನೀಯರು ವಿಸ್ತಾರವಾಗಿ ನಿರೂಪಣೆ ಮಾಡಿದ್ದಾರೆ. ಹೀಗೆ ಅದೇ ಒಂದು ಚಿಕ್ಕ ಗ್ರಂಥವಾಗಿದೆ. ಅಷ್ಟೆಲ್ಲಾ ಇಲ್ಲಿ ಹೇಳುವುದು ಅಸಾಧ್ಯವೇ ಆಗಿದೆ. ಆದರೂ ಭಿನ್ನ ಭಿನ್ನ ಮಹನೀಯರು ಸೂಚಿಸಿದ ಎಲ್ಲಾ ಕ್ರಮ ಗಳನ್ನೂ ಸಂಗ್ರಹಿಸಿ, ಎಲ್ಲದಕ್ಕೂ ಮುಖ್ಯವಾಗಿ ಅನುಸರಿಸಬೇಕಾದ ಕೆಲವು ವಿಧಿಗಳನ್ನೂ ತಿಳಿಸಿ ಶ್ಲೋಕಗಳ ಫಲಶ್ರುತಿಯನ್ನು ಮಾತ್ರ ಇಲ್ಲಿ ಸಂಗ್ರಹ ಮಾಡಿದ್ದೇವೆ.

**ಸರ್ವಸಾಧಾರಣ ನಿಯಮಗಳು—** ಪಂಡಿತಭೂಷಣಂ ಇತ್ಯಾದಿ ಬಿರುದಾಂಕಿತರಾದ ಸ್ವ.ಷ.ಪಂ. ಲಕ್ಷ್ಮೀನಾರಾಯಣ ಉಪಾಧ್ಯಾಯರು

'ಗುರುಸಾರ್ವಭೌಮ' ಪತ್ರಿಕೆಯಲ್ಲಿ ಪ್ರಕಟಿಸಿದ ವಾಯುಸ್ತುತಿ ಅರ್ಥದಲ್ಲಿ (ಹೇಳಿರುವಂತೆ."ಭಕ್ತಿ ಸದಾಚಾರ ಮತ್ತು ನಿಯಮಗಳು ಈ ಪುರಶ್ಚರಣಕ್ಕೆ ಅತಿ ಮು ಖ್ಯವಾಗಿವೆ. ಅವುಗಳಿಲ್ಲದೆ....ಫಲವು ಸಿಗಲಾರದು. ಕೆಲವು ಅನಿಷ್ಟಗಳೂ ಏರ್ಪಡುತ್ತವೆ." ಈ ಪುರಶ್ಚರಣೆಯನ್ನು ತನ್ನ ಮನೆಯಲ್ಲಿ ಮಾಡುವುದಕ್ಕಿಂತ ದೇವತಾ ಸನ್ನಿಧಿಯಲ್ಲೋ (ಪ್ರಾಣದೇವರ ಗುಡಿಯಾದರೆ ಮತ್ತೂ ಶ್ರೇಷ್ಠ), ನದೀತೀರದಲ್ಲೋ, ಒಳ್ಳೆಯ ಕ್ಷೇತ್ರದಲ್ಲೋ, ಮಹನೀಯರ ವೃಂದಾವನಗಳ ಸನ್ನಿಧಿಯಲ್ಲಿ ಕಡೇ ಪಕ್ಷ ಅಶ್ವತ್ಥಮರದ ಬಳಿ ಮಾಡುವುದು ಶ್ರೇಷ್ಠ. ಒಂದು ಸ್ಥಳದಲ್ಲಿ ಪುರಶ್ಚರಣೆ ಆರಂಭಿಸಿದರೆ ಮುಗಿಯುವವರೆಗೂ ಅಲ್ಲೇ ಮಾಡಬೇಕು. ಮತ್ತು ಮಧ್ಯೆ ಬೇರೆ ಊರುಗಳಿಗೆ ಹೋಗಬಾರದು. ಉದ್ದಕ್ಕೂ ದೇವರಿಗೆ ನೈವೇದ್ಯ ಮಾಡದ ವೈಶ್ವದೇವವಿಲ್ಲದ ಅನ್ನಾದಿಗಳನ್ನು ಭೋಜನ ಮಾಡಬಾರದು. ಅಲ್ಲದೆ ಪುರಶ್ಚರಣಕಾಲದಲ್ಲಿ ಉಪ್ಪು ಕಾರ ಹುಳಿ ಮೊದಲಾದ ರಾಜಸ-ತಾಮಸ ಪದಾರ್ಥಗಳನ್ನು ಸೇವಿಸಬಾರದು; ಇದರಿಂದ ಮನಸ್ಸು ಸ್ಥಿಮಿತಕ್ಕೆ ಬರುತ್ತದೆ. ಹಾಲು-ಅನ್ನ ಇತ್ಯಾದಿಗಳೇ ಶ್ರೇಷ್ಠ. ರಾತ್ರಿ ಭೋಜನ ಮಾಡುವುದು, ತಾಂಬೂಲಾದಿ ಸೇವನೆ, ಪರಾನ್ನ ಭೋಜನ ಇವೆಲ್ಲ ನಿಷಿದ್ಧ. ಪ್ರತಿನಿತ್ಯ ಪುರಶ್ಚರಣ ಮುಗಿದಮೇಲೆ ಯೋಗ್ಯತೆಗೆ ತಕ್ಕಂತೆ ಸ್ವಲ್ಪವಾದರೂ ಹೋಮ ಮಾಡಬೇಕೆಂದು ಶ್ರೀ ವಾದಿರಾಜಸ್ವಾಮಿಗಳು ಅಪ್ಪಣೆ ಕೊಡಿಸಿದ್ದಾರೆ—

ದ್ರವ್ಯಕರ್ಮಾನುಸಾರೇಣ ಹೋತವ್ಯಂ ಚ ಹುತಾಶನೇ ।
ಅಷ್ಟಾವಿಂಶತಿರಾಹುತ್ಯಾ ಶ್ಲೋಕೇನೈಕೇನ ನಿತ್ಯಶಃ ॥

ಪ್ರತಿದಿನ ಇಷ್ಟಶ್ಲೋಕದಿಂದ ಇಪ್ಪತ್ತೆಂಟು ಆಹುತಿಗಳನ್ನಾದರೂ ಕೊಡಬೇಕು ಎನ್ನುತ್ತಾರೆ. ಕದಾಚಿತ್ ಅದು ಸಾಧ್ಯವಿಲ್ಲದಿದ್ದರೆ ಕಡೆಯ ದಿವಸವಾದರೂ ಎಲ್ಲಾ ಶ್ಲೋಕಗಳಿಂದಲೂ ಅಲ್ಲದೆ ಇಷ್ಟಶ್ಲೋಕದಿಂದಲೂ ಯಥಾಶಕ್ತಿ ಯಾದರೂ ಹೋಮ ಮಾಡಬೇಕು ಅದೇ ರೀತಿ ಪ್ರತಿನಿತ್ಯ ಬ್ರಾಹ್ಮಣ ಭೋಜನ ಮಾಡಿಸುವುದು ಉತ್ತಮ; ಯೋಗ್ಯತೆ ಇಲ್ಲದಿದ್ದರೆ ಕಡೆಯ ದಿವಸವಾದರೂ ಮಾಡಿಸಬೇಕು. ಹೋಮಕ್ಕೆ ಮೊದಲು ನಖಸ್ತುತಿಯಿಂದಲೂ ಇಷ್ಟಶ್ಲೋಕದಿಂದಲೂ ಪಾರಾಯಣದ ದಶಾಂಶ ತರ್ಪಣ ಕೊಡಬೇಕು:

ಇದನ್ನಾದರೂ ತಪ್ಪದೆ ನಿತ್ಯ ಮಾಡಿ ಕಡೆಯ ದಿವಸ ಆಕಳ ಹಾಲು, ಸಕ್ಕರೆ, ಸ್ವಲ್ಪ ತುಪ್ಪ ಸೇರಿಸಿ ಅದರಿಂದ ತರ್ಪಣವನ್ನು ವಿಶೇಷವಾಗಿ ಕೊಡಬೇಕು.

**ಎಷ್ಟು ದಿನ ಮಾಡಬೇಕು?** ಪುರಶ್ಚರಣವನ್ನು ಎಷ್ಟು ದಿವಸ ಮಾಡಬೇಕೆಂದರೆ—

ಸಪ್ತರಾತ್ರಂ ದ್ವಿಸಪ್ತಂ ವಾ ತ್ರಿಸಪ್ತಮಥ ಮಂಡಲಮ್ ।
ಕುರ್ಯಾಜ್ಜಪಂ ಚ ಹೋಮಂ ಚ ಸರ್ವಕಾಮಾರ್ಥಸಿದ್ಧಯೇ ॥

ಎಂದರೆ ಒಂದು ವಾರ ಅಥವಾ ಹದಿನೈದು ದಿವಸ (ಒಂದು ಪಕ್ಷ), ಇಪ್ಪತ್ತ ಒಂದು ದಿನ ಅಥವಾ ನಲವತ್ತೆಂಟು ದಿನ (ಒಂದು ಮಂಡಲ) ಜಪವನ್ನೂ ಹೋಮವನ್ನೂ ಮಾಡಬೇಕೆಂದು ಶ್ರೀ ವಾದಿರಾಜರು ಹೇಳುತ್ತಾರೆ. ಇದು ಇಪ್ಪತ್ತೆಂಟನೆಯ ಕಲಿಯುಗ ಎಂಬ ಲೆಕ್ಕದಿಂದ ೨೮ ದಿನಗಳೂ ವಾಯು-ಸ್ತುತಿಯಲ್ಲಿ ೪೧ ಶ್ಲೋಕಗಳಿರುವುದರಿಂದ ೪೧ ದಿನಗಳೂ ಮಾಡಬಹುದೆಂದು ಕೆಲವರ ಅಭಿಪ್ರಾಯ. ಅಲ್ಲದೆ ಯಾರು ಎಷ್ಟು ಶ್ರದ್ಧಾಭಕ್ತಿಗಳಿಂದ ಮಾಡುತ್ತಾರೋ ವಾಯುಸ್ತುತಿಯು ಅಷ್ಟರಮಟ್ಟಿಗೇ ಫಲಪ್ರದವಾಗುತ್ತದೆ. ಅಲ್ಲದೆ, ತಾನೇ ಮಾಡುವುದು ಸರ್ವಶ್ರೇಷ್ಠ. ಅದು ಸಾಧ್ಯವಿಲ್ಲದೆ ಇತರರಿಂದಲೇ ಮಾಡಿಸಬೇಕಾಗಿದ್ದರೆ ಹಾಗೆ ಮಾಡುವವರು ಕೇವಲ ದುಡ್ಡಿನ ಲೋಭಕ್ಕಾಗಿ ಮಾಡದೆ ಶ್ರದ್ಧಾವಂತರೂ ವಿಷ್ಣುಭಕ್ತರೂ ಗುರುಭಕ್ತರೂ ಆಗಿರುವ ಋತ್ವಿಜರನ್ನು ಆರಿಸಿಯೇ ಮಾಡಿಸಬೇಕು. ಏಕೆಂದರೆ ಶ್ರೀರಾಜರು (ಭಾವಿ ಸಮೀರರು) ಹೇಳುವಂತೆ "ಬ್ರಾಹ್ಮಣೈರ್ವಿಷ್ಣುಭಕ್ತೈಶ್ಚ ಗುರುಭಕ್ತೈಶ್ಚ ಸಿದ್ಧ್ಯತಿ ।" ಬ್ರಾಹ್ಮಣರೂ ವಿಷ್ಣುಭಕ್ತರೂ ಗುರುಭಕ್ತರೂ ಆಗಿದ್ದರೆ ಮಾತ್ರ ಫಲಸಿದ್ಧಿ-ಯಾಗುತ್ತದೆ ಇದಕ್ಕೆ ಪ್ರತಿಯಾಗಿ

ವಿಷ್ಣುಭಕ್ತಿವಿಹೀನಸ್ಯ ನ ತು ಸಿದ್ಧಿಃ ಕದಾಚನ ॥

ವಿಷ್ಣುಭಕ್ತಿಯೇ ಇಲ್ಲದವನಿಗೆ ಎಂದಿಗೂ ಸಿದ್ಧಿಸಲಾರದು.

**ಅನುಷ್ಠಾನಕ್ರಮ (ಸಂಕ್ಷಿಪ್ತ)—** ಪುರಶ್ಚರಣೆ ಮಾಡಲು ಇಚ್ಛಿಸುವವನು ಸುದಿನವನ್ನು ನೋಡಿಕೊಂಡು ತನ್ನ ಶಕ್ತ್ಯನುಸಾರ ಎಷ್ಟು ದಿನ ಮಾಡಲು ಸಾಧ್ಯವೋ ಅದನ್ನೂ, ಎಲ್ಲಿ ಮಾಡಬೇಕೆಂಬುದನ್ನೂ ನಿಶ್ಚಯಿಸಿ-ಕೊಂಡು ಪ್ರಾರಂಭದಿನ ಸ್ನಾನ ಮಾಡಿ ನಿತ್ಯನೈಮಿತ್ತಿಕ ಕರ್ಮಗಳನ್ನೂ

ದೇವತಾರ್ಚನಾದಿಗಳನ್ನೂ ಮುಗಿಸಿ ಕ್ಲುಪ್ತವಾದ ಸ್ಥಳಕ್ಕೆ ಬಂದು ಆಚಮನ ಮಾಡಿ ಪ್ರಾಣಾಯಾಮ ಸಂಕಲ್ಪಗಳನ್ನು ಮಾಡಿ (ದೇಶಕಾಲ ತಿಥ್ಯಾದಿಗಳನ್ನು ಉಚ್ಚರಿಸಿ) ಹೀಗೆ ಸಂಕಲ್ಪ ಮಾಡಬೇಕು—

ಮನುನಾಮಕಭಾರತೀರಮಣಮುಖ್ಯಪ್ರಾಣಾಂತರ್ಗತ (ಸಂಕೇತ: ಮ.ಭಾ.ಮು.) ಶ್ರೀಮದನಿರುದ್ಧಪ್ರದ್ಯುಮ್ನಸಂಕರ್ಷಣವಾಸುದೇವನಾರಾಯಣಾತ್ಮಕ ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ — ಇಷ್ಟದೇವತಾಕುಲದೇವತಾತ್ಮಕ — ಶ್ರೀಲಕ್ಷ್ಮೀನೃಸಿಂಹಪ್ರೇರಣಯಾ ಮ.ಭಾ.ಮು. ಶ್ರೀಮದನಿರುದ್ಧ....(ಇತ್ಯಾದಿ ಎಲ್ಲವೂ ಪುನಃ ಹಿಂದಿನಂತೆ ಹೇಳಿ) ....ಶ್ರೀಲಕ್ಷ್ಮೀನೃಸಿಂಹಪ್ರೀತ್ಯರ್ಥಂ ಮಮ ಸಕಲಾನಿಷ್ಟನಿವಾರಣಪೂರ್ವಕ ಸಕಲಾಭೀಷ್ಟಸಿದ್ಧ್ಯರ್ಥಂ ಯಥಾಶಕ್ತಿ (ತನ್ನ ಸಂಕಲ್ಪಾನುಸಾರ ಸಪ್ತಾಹಂ ದ್ವಿಸಪ್ತಾಹಂ (೧೪ ದಿನ) ತ್ರಿಸಪ್ತಕಂ (೨೧ ದಿನ) ಮಂಡಲಪರ್ಯಂತಂ ಎಂದು ಹೇಳಿಕೊಂಡು) ಶ್ರೀಹರಿಗುರುಸನ್ನಿಧೌ ವಾಯುಸ್ತುತಿಪುರಶ್ಚರಣಂ ಕರಿಷ್ಯೇ (ಎಂದು ಸಂಕಲ್ಪಮಾಡಿ) ದೇವರ ಸನ್ನಿಧಿಯಲ್ಲಿ ದಕ್ಷಿಣೆ ತಾಂಬೂಲ ಸಹಿತ ಒಂದು ತೆಂಗಿನಕಾಯನ್ನು ಸ್ಥಾಪನೆ ಮಾಡಿ ಮಂತ್ರಾಕ್ಷತೆ ನೀರು ಬಿಡಬೇಕು. ಇದು ಮೊದಲನೆಯ ದಿನ ಮಾತ್ರ.

ಅನಂತರ ಗುರುಮಂತ್ರ, ತತ್ವನ್ಯಾಸ, ಮಾತೃಕಾನ್ಯಾಸಗಳನ್ನು ಹಂಸಷಡಕ್ಷರಮಂತ್ರ ಮೂಲಮಂತ್ರಗಳನ್ನೂ ಯಥಾಶಕ್ತಿ ಮಾಡಿ ಅನಂತರ ವಾಯುಸ್ತುತಿಯ ಪುರಶ್ಚರಣೆ ಆರಂಭಿಸಬೇಕು. ಇದೇ ರೀತಿ ಪ್ರತಿನಿತ್ಯವೂ ಮಾಡಬೇಕು.

**ಪುರಶ್ಚರಣಾರಂಭಕ್ರಮ**—ಮೊದಲು ಗುರುನಮಸ್ಕಾರ (ದ್ವಾದಶ ಗುರುಗಳಿಗೆ) ಏಕಾದಶಸ್ಥಾನದಲ್ಲಿ ಸಂಕಲ್ಪದಲ್ಲಿ ಹೇಳಿದಂತೆ ಮಂತ್ರದೇವತಾ ಶ್ರೀ ಮ.ಭಾ.ಮು. ಅನಿರುದ್ಧ........ಇತ್ಯಾದಿ ಹೇಳಿಕೊಂಡು 'ಶ್ರೀಲಕ್ಷ್ಮೀನೃಸಿಂಹಾಯ ನಮಃ' ಎಂದು ಉಚ್ಚರಿಸಬೇಕು. ಅನಂತರ ಓಂ ಭೂಃ, ಓಂ ಭುವಃ....ಮೃತಂ ಬ್ರಹ್ಮ ಭೂರ್ಭುವಸ್ಸುವರೋಂ ಎಂಬ ದಶಪ್ರಣವ ಗಾಯತ್ರಿಯಿಂದಾಗಲಿ ಮೂಲಮಂತ್ರದಿಂದಾಗಲಿ ಪ್ರಾಣಾಯಾಮ ಮಾಡಬೇಕು. ಕರನ್ಯಾಸ-ಅಂಗನ್ಯಾಸಗಳನ್ನು ಪ್ರಾಣೋಪಾನವ್ಯಾನೋದಾನ

ಬ್ರಹ್ಮ (ಅಥವಾ ಆತ್ಮ) ಎಂಬ ಆರು ಮಂತ್ರಗಳಿಂದಲೋ (ಪ್ರಾಣಾಯ ಅಂಗುಷ್ಠಾಭ್ಯಾಂ ನಮಃ ಇತ್ಯಾದಿ) ಅಥವಾ ಪ್ರಾಣಾದಿ ಪಂಚಪ್ರಾಣಮಂತ್ರಗಳಿಂದಲೋ ಪಂಚಾಂಗನ್ಯಾಸ) ಮಾಡಿಕೊಳ್ಳಬೇಕು.

ಋಷ್ಯಾದಿನ್ಯಾಸಃ ॥ ಅಸ್ಯ ಶ್ರೀಹರಿವಾಯುಸ್ತುತಿಮಂತ್ರಪುರಶ್ಚರಣಸ್ಯ ಮನುನಾಮಕ ಬ್ರಹ್ಮಾಋಷಿಃ [ಶಿರಸಿ]। ಅತಿಧೃತಿಶ್ಛಂದಃ [ಮುಖೇ]। ಮ.ಭಾ.ಮು. ಶ್ರೀಮದನಿರುದ್ಧ.... [ಇತ್ಯಾದಿ ಹಿಂದಿನಂತೆ] ಶ್ರೀಲಕ್ಷ್ಮೀನೃಸಿಂಹೋ ದೇವತಾ। ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ ಇಷ್ಟದೇವತಾಕುಲದೇವತಾತ್ಮಕ ಶ್ರೀಲಕ್ಷ್ಮೀನೃಸಿಂಹಪ್ರೀತ್ಯರ್ಥಂ* ಶ್ರೀಹರಿವಾಯುಸ್ತುತಿಮಂತ್ರಪುರಶ್ಚರಣೇ ವಿನಿಯೋಗಃ ॥ ಅಥ ಧ್ಯಾನಶ್ಲೋಕಾಃ—

೧. ಶುಕ್ಲಾಂಬರಧರಂ.... ೨. ಸರ್ವವಿಘ್ನಪ್ರಶಮನಂ.... ೩. ಲಕ್ಷ್ಮೀನಾರಾಯಣಂ....ಪ್ರವರೋಹಿ ಯಃ ॥ ೪. ಉದ್ಯದ್ಭಾಸ್ವತ್ ಸಮಾಭಾಸಃ.... [ಮೂಲಮಂತ್ರ ಧ್ಯಾನ] ೫. ಶ್ಯಾಮಂ ರವೀಂದ್ವಮಿತ.... [ರಾಮಧ್ಯಾನ] ೬. ಧ್ಯಾಯೇದ್ಧರಿನ್ಮಣಿನಿಭಂ....[ಕೃಷ್ಣಧ್ಯಾನ] ೭. ವಂದೇ ತುರಂಗವದನಂ.... [ಹಯಗ್ರೀವ ಧ್ಯಾನ] ೮. ಚಂದ್ರೌಘಕಾಂತಿ.... [ಧನ್ವಂತರಿಧ್ಯಾನ] ೯. ಕೌಶೇಯಪೀತವಸನಾಂ.... [ಲಕ್ಷ್ಮೀಧ್ಯಾನ] ೧೦. ಧ್ಯಾಯೇನ್ನಿಷಣ್ಣ.... [ಬ್ರಹ್ಮಧ್ಯಾನ] ೧೧. ಉದ್ಯದ್ರವಿ........ [ವಾಯುಧ್ಯಾನ] ೧೨. ಭವತಿ ಯದನುಭಾವಾತ್.... [ಸುಧೋಕ್ತ ಭಾರತೀಸ್ತೋತ್ರ] ೧೩. ಮನೋಜವಂ ೧೪. ಬುದ್ಧಿರ್ಬಲಂ.... ೧೫. ಉಲ್ಲಂಘ್ಯ ಸಿಂಧೋಃ ಸಲಿಲಂ........ [ಇತ್ಯಾದಿ ಹನುಮತ್ ಸ್ತೋತ್ರಗಳು] ೧೬. [ಭೀಮಸ್ತೋತ್ರ] ಆದಿತ್ಯಕೋಟಿಪ್ರಭ-

---

* ಕೆಲವರು ಹೆಜ್ಜೆ ಹೆಜ್ಜೆಗೂ 'ಮಮ ಮನೋಭೀಷ್ಟಾರ್ಥಸಿದ್ಧ್ಯರ್ಥಂ' ಎಂದು ಹೇಳುವುದು ರೂಢಿ. ಶ್ರೀಮದಾಚಾರ್ಯರು 'ಸಕಾಮೇಭ್ಯೋಽಮಿತಗುಣಾ ಹ್ಯಕಾಮೈಸ್ತು ಕೃತಾಃ ಕ್ರಿಯಾಃ।' ಎಂದರೆ ಕಾಮ್ಯಕರ್ಮಗಳಿಗಿಂತ ನಿಷ್ಕಾಮಕರ್ಮವು ಅನಂತಗುಣ ಉತ್ತಮವೆಂದು ತಂತ್ರಸಾರದಲ್ಲಿ ಹೇಳಿರುವುದರಿಂದ ಮತ್ತೆಮತ್ತೆ 'ಅಭೀಷ್ಟಸಿದ್ಧ್ಯರ್ಥಂ' ಎಂದು ಹೇಳುವುದು ಅನುಚಿತವೂ ಆಗಿದೆ, ಅನವಶ್ಯಕವೂ ಆಗಿದೆ.

ಮುಗ್ರತೇಜಸಂ ಕಿರೀಟಕೇಯೂರಮುಹಾವಿಭೂಷಣಂ। ಧ್ಯಾಯೇದ್ಗದಾಭಯ ಕರಾಮಿತಬಾಹುವಿಕ್ರಮಂ ಭೀಮಂ ಮಹಾಭಯಹರಂ ಸುರವೈರಿಶತ್ರುಮ್॥ ೧೭. ಶ್ರೀಮದಾಚಾರ್ಯರ ಧ್ಯಾನ [ಪಂಚರಾತ್ರೋಕ್ತ]: ನವಾರ್ಕಕಾಂತಿ-ಸ್ಮಿತಸುಂದರಾಸ್ಯಂ ಸುವರ್ಣಕೌಪೀನಭೃತಾಂಕಸೌಖ್ಯಮ್। ಪ್ರಬೋಧ-ಮುದ್ರಾಭಯಪದ್ಮಹಸ್ತಂ ನಮಾಮಿ ವಿದ್ಯಾಧಿಪಮಾದಿಮಧ್ವಮ್॥ ೧೮. ಯೋ ವಿಪ್ರಲಂಭ.... ೧೯. ಅಭ್ರಮಂ ಭಂಗರಹಿತಂ.... ೨೦. ಶ್ರೀಮದಾ-ನಂದತೀರ್ಥಾರ್ಯ—ಪಾದಪಂಕಜರೇಣವಃ। ಪವಿತ್ರಯಂತು ಮಾಂ ನಿತ್ಯಂ ಪಾಪಪಾಟನಪಂಡಿತಾಃ॥ [ಚಂದ್ರಿಕಾದಲ್ಲಿ ಶ್ರೀ ವ್ಯಾಸರಾಯರು] ೨೧. ಶರ್ವಾದಿಸರ್ವಗೀರ್ವಾಣ—ನಿರ್ವಾಣಗತಿಹೇತವಃ। ಪೂರ್ಣಪ್ರಜ್ಞಪದಾಂ-ಭೋಜ—ಪಾಂಸವಃ ಪಾಂತುನಸ್ಸದಾ॥ [ಚಂದ್ರಿಕಾಪ್ರಕಾಶದಲ್ಲಿ ಮಂತ್ರಾ-ಲಯದ ರಾಯರು].

ಹೀಗೆ ಯಥಾಶಕ್ತಿ ಧ್ಯಾನಶ್ಲೋಕಗಳನ್ನು ಹೇಳಿಕೊಂಡು ಪುರಶ್ಚರಣಕ್ಕೆ ಈ ರೀತಿ ಸಂಕಲ್ಪ ಮಾಡಬೇಕು—

ಮ. ಭಾ. ಮು. ಶ್ರೀಮದನಿರುದ್ಧಪ್ರದ್ಯುಮ್ನಸಂಕರ್ಷಣವಾಸುದೇವ-ನಾರಾಯಣಾತ್ಮಕ ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣ-ವೇದವ್ಯಾಸಹಯಗ್ರೀವಾತ್ಮಕ ಶ್ರೀಲಕ್ಷ್ಮೀನೃಸಿಂಹಪ್ರೇರಣಯಾ ಮ.ಭಾ.-ಮು. ಶ್ರೀಮದನಿರುದ್ಧ.............. [ಹಿಂದಿನಂತೆಯೇ] ಶ್ರೀಲಕ್ಷ್ಮೀನೃಸಿಂಹ-ಪ್ರೀತ್ಯರ್ಥಂ ಶ್ರೀಹರಿವಾಯುಸ್ತುತಿಮಂತ್ರಪುರಶ್ಚರಣಂ ಕರಿಷ್ಯೇ॥ [ಎಂದು ಹೇಳಿ ಮಂತ್ರಾಕ್ಷತೆ ನೀರು ಬಿಟ್ಟು ಪುರಶ್ಚರಣೆ ಆರಂಭಿಸಬೇಕು.] ಪುರಶ್ಚರಣ-ಕ್ರಮವನ್ನು ಮುಂದೆ ಕೊಟ್ಟಿದೆ.

**ಪುರಶ್ಚರಣಸಮಾಪನಕ್ರಮ.** ಪುರಶ್ಚರಣೆ ಮುಗಿದಮೇಲೆ ಪುನಃ ಹಿಂದಿನಂತೆಯೇ ಪ್ರಾಣಾಯಾಮ, ಕರನ್ಯಾಸ, ಅಂಗನ್ಯಾಸ, ಋಷ್ಯಾದಿನ್ಯಾಸ ಗಳನ್ನು ಮಾಡಿ ಧ್ಯಾನಶ್ಲೋಕಗಳನ್ನು ಪಠಿಸಿ, ಅನೇನ ಯಥಾಶಕ್ತಿ ಶ್ರೀಹರಿ-ವಾಯುಸ್ತುತಿಮಂತ್ರಪುರಶ್ಚರಣೇನ ಮ.ಭಾ.ಮು. ಶ್ರೀಮದನಿರುದ್ಧ........ ಹಯಗ್ರೀವಾತ್ಮಕ ಶ್ರೀಲಕ್ಷ್ಮೀನೃಸಿಂಹಃ ಪ್ರೀಯತಾಂ, ಸುಪ್ರೀತೋ ವರದೋ ಭವತು। ಶ್ರೀಕೃಷ್ಣಾರ್ಪಣಮಸ್ತು॥ ಎಂದು ಹೇಳಿ ಮಂತ್ರಾಕ್ಷತೆ

ನೀರು ಬಿಡಬೇಕು. ಅನಂತರ ಪ್ರತಿನಿತ್ಯವೂ ಕೆಳಗೆ ತೋರಿಸಿದಂತೆ ಹತ್ತು ಸಾರಕ್ಕೆ ಒಂದು ಅರ್ಘ್ಯದಂತೆಯಾದರೂ ಸಾಧ್ಯವಾದರೆ ಗೋಕ್ಷೀರದಿಂದ, ಆಗದಿದ್ದರೆ ನೀರಿನಿಂದಾದರೂ ಅರ್ಘ್ಯ ಕೊಡಬೇಕು.

**ಅರ್ಘ್ಯಕ್ರಮ.** ಹಾಲನ್ನು ಅಥವಾ ನೀರನ್ನು ಮೂಲಮಂತ್ರದಿಂದ ಹನ್ನೆರಡು ಸಾರಿ ಅಭಿಮಂತ್ರಿಸಿ ನಂತರ ಎಲ್ಲಕ್ಕೂ ಒಂದೊಂದು ತರ್ಪಣದಂತೆ ತರ್ಪಣವನ್ನೂ ಇಷ್ಟಶ್ಲೋಕಕ್ಕೆ ಹತ್ತು ತರ್ಪಣವನ್ನೂ ಕೊಡಬೇಕು. ೧. ಓಂ ನಮೋ ನಾರಾಯಣಾಯ ನಾರಾಯಣಂ ತರ್ಪಯಾಮಿ। ೨. ಉಗ್ರಂ ವೀರಂ........ [ಎಂಬ ಶ್ಲೋಕದಿಂದ] ನೃಸಿಂಹಂ ತರ್ಪಯಾಮಿ। ೩. ಓಂ ಹಂ ಹನುಮತೇ ನಮಃ ಹನುಮಂತಂ ತರ್ಪಯಾಮಿ। ೪. ಓಂ ಭೀಂ ಭೀಮಾಯ ನಮಃ ಭೀಮಂ ತರ್ಪಯಾಮಿ। ೫. ಓಂ ಮಂ ಮಧ್ವಾಯ ನಮಃ ಮಧ್ವಂ ತರ್ಪಯಾಮಿ। ೬. ಓಂ ಪಾಂತ್ವಸ್ಮಾನ್........ [ಎಂಬ ಶ್ಲೋಕ] ಶ್ರೀಲಕ್ಷ್ಮೀನೃಸಿಂಹಾಯ ನಮಃ ಲಕ್ಷ್ಮೀನೃಸಿಂಹಂ ತರ್ಪಯಾಮಿ। ೭. ಲಕ್ಷ್ಮೀಕಾಂತ.... [ಎಂಬ ಶ್ಲೋಕ] ಲಕ್ಷ್ಮೀನೃಸಿಂಹಂ ತರ್ಪಯಾಮಿ। ೮. ಇಷ್ಟಶ್ಲೋಕದಿಂದ ಹತ್ತು ತರ್ಪಣ ಕೊಟ್ಟನಂತರ ಅನೇನ ಯಥಾಶಕ್ತಿ ಶ್ರೀಹರಿವಾಯುಸ್ತುತಿಪುರಶ್ಚರಣಾಂಗತರ್ಪಣೇನ ಶ್ರೀಮದ್ಧನುಮದ್ಭೀಮ-ಮಧ್ವಾಂತರ್ಗತ........ಶ್ರೀಲಕ್ಷ್ಮೀನೃಸಿಂಹಃ ಪ್ರೀತೋ ವರದೋ ಭವತು॥

**ನಿತ್ಯದ ಹೋಮ.** ಮೇಲಿನಂತೆಯೇ ಹೋಮವನ್ನೂ ಮಾಡಿ 'ಯಸ್ಯ ಸ್ಮೃತ್ಯಾ ಚ....' ಹೇಳಿ ಪುರಶ್ಚರಣವನ್ನು ಮುಗಿಸಬೇಕು.

**ಕಡೆಯ ದಿನ.** ಸಂಕಲ್ಪಾನುಸಾರ ಪುರಶ್ಚರಣ ಮುಗಿಸಿದ ಮರುದಿನ ಅವಭೃತಸ್ನಾನ ಮಾಡಿ ಅರ್ಘ್ಯವನ್ನು ವಿಸ್ತಾರವಾಗಿ ನಲವತ್ತೊಂದು ಶ್ಲೋಕಗಳಿಂದಲೂ ಕೊಡಬೇಕಲ್ಲದೆ ಇಷ್ಟಶ್ಲೋಕದಿಂದಲೂ ೧೦೮ ಸರಿ ಕೊಡುವುದು ಉತ್ತಮ. ಅನಂತರ ಪುಣ್ಯಾಹವಾಚನಪೂರ್ವಕ ಅಗ್ನಿಪ್ರತಿಷ್ಠೆ, ಅನ್ವಾಧಾನಗಳನ್ನು ಮಾಡಿಸಿ ಕ್ರಮಪ್ರಕಾರವಾಗಿ ಹೋಮ ಮಾಡಬೇಕು. ಅದರಲ್ಲಿ ಪ್ರಧಾನದೇವತೆಗಳು ಮೂಲಮಂತ್ರದಿಂದ ನಾರಾಯಣ, ಉಗ್ರಂ ವೀರಂ ಎಂಬ ಮಂತ್ರದಿಂದ ನರಸಿಂಹ, ಪ್ರಾಣಾದಿ ಪಂಚರೂಪಾಂತರ್ಗತ ಅನಿರುದ್ಧಾದಿ ಪಂಚಮೂರ್ತಿಗಳು, ಹನುಮ-ಭೀಮ-ಮಧ್ವಾಖ್ಯ ಅವತಾರತ್ರಯಾತ್ಮಕ

ಭಾರತೀರಮಣಮುಖ್ಯಪ್ರಾಣ ಇವರಿಗೆ ಅವರವರ ಹೆಸರು ಹೇಳಿ ಗೋಘೃತ ದಿಂದ ಎಂಟೆಂಟು ಸರಿ, ಹಾಗೆಯೇ ನಖಸ್ತುತಿಯಿಂದಲೂ ಎಂಟೆಂಟು ಸರಿ, ಅನಂತರ ವಾಯುಸ್ತುತಿಯ ಒಂದೊಂದು ಶ್ಲೋಕಕ್ಕೆ ಒಂದೊಂದರಂತೆ ೪೧ ಸರಿ, ಪುನರತ್ರ ಪ್ರಧಾನಂ ಸ್ವಾಪೇಕ್ಷಿತ ಶ್ಲೋಕದಿಂದ ೧೦೮ ಹೋಮ, ತ್ಯಾಗ —ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನೃಸಿಂಹಾಯೇದಂ ನ ಮಮ, ಅನಂತರ ಪ್ರಾಯಶ್ಚಿತ್ತಹೋಮ, ಸ್ವಿಷ್ಟಕೃದಾದಿಗಳನ್ನು ಮಾಡಿ ಯಜ್ಞೇಶ್ವರನ ಪೂಜೆ ಮಾಡಿ ಹೋಮವನ್ನು ಮುಗಿಸಿ ಯಥಾಶಕ್ತಿ ಬ್ರಾಹ್ಮಣ ಭೋಜನ ಮಾಡಿಸಿ ದಾನ-ದಕ್ಷಿಣೆಗಳನ್ನು ಕೊಟ್ಟು ತಾನೂ ಭೋಜನ ಮಾಡ ಬೇಕು. ಹೆಚ್ಚಿನ ವಿವರಗಳನ್ನು ಕುಂಭಕೋಣದ ಟಿ. ಆರ್. ಕೃಷ್ಣಾಚಾರ್ಯರು ಸಂಗ್ರಹಿಸಿದ "ಮಾಧ್ವಮಂತ್ರರತ್ನಾಕರ"ದಲ್ಲೂ ವಾದಿರಾಜರ ಪುರಶ್ಚರಣವಿಧಿ ಯಿಂದಲೂ ತಿಳಿದುಕೊಳ್ಳಬಹುದು.

**ಪುರಶ್ಚರಣಕ್ರಮ.** ಮುಖ್ಯವಾಗಿ ಈ ಕ್ರಮವು ೧. ತ್ರಿವಿಕ್ರಮ-ಪಂಡಿತಾಚಾರ್ಯರ ಕ್ರಮ, ೨. ವ್ಯಾಸರಾಯರ ಪದ್ಧತಿ, ೩. ವಾದಿರಾಜರ ಪದ್ಧತಿ ಮತ್ತು ೪. ಯಾದವಾರ್ಯರ ಪದ್ಧತಿ ಎಂದು ನಾಲ್ಕು ವಿಧವಾಗಿದೆ.

**೧. ತ್ರಿವಿಕ್ರಮಪಂಡಿತಾಚಾರ್ಯರ ಪದ್ಧತಿಯಂತೆ.** ನಖಸ್ತುತಿ ಪಾಠಪೂರ್ವಕ ಮೊದಲಿಂದ ಕಡೆಯವರೆಗೆ ದಿನಕ್ಕೆ ಏಳು ಸರಿ ಪಠಿಸಬೇಕು. ಇದು ಒಂದು ಪಾಠ. ಸಾಧ್ಯವಿದ್ದರೆ ಪ್ರತಿನಿತ್ಯ ಹೀಗೆ ಎರಡು ಅಥವಾ ಮೂರು ಪಾಠ ಎಂದರೆ ೧೪ ಅಥವಾ ೨೧ ಸಾರಿ ಪಠಿಸಬೇಕು.

**೨. ಶ್ರೀ ವ್ಯಾಸರಾಯರ ಪದ್ಧತಿ.** ಮೊದಲು ನಖಸ್ತುತಿ, ಅನಂತರ ಇಷ್ಟಶ್ಲೋಕದಿಂದ ಆರಂಭಿಸಿ ಕೊನೆಯವರೆಗೆ, ಅನಂತರ 'ಶ್ರೀಮದ್ವಿಷ್ಣು....' ಎಂಬ ಶ್ಲೋಕದಿಂದ ಆರಂಭಿಸಿ ಇಷ್ಟಶ್ಲೋಕದವರೆಗೆ ಪಠಿಸಿ ನಖಸ್ತುತಿ, ಪುನಃ ನಖಸ್ತುತಿಯಿಂದ ಆರಂಭ ಮಾಡಿ ಕೊನೆಯ ಶ್ಲೋಕದವರೆಗೆ ಪಠಿಸಿ ನಖಸ್ತುತಿ ಪಠಿಸಿದರೆ ಒಂದು ಪುರಶ್ಚರಣೆಯಾಗುತ್ತದೆ. ಇಂಥಾದ್ದು ದಿನಕ್ಕೆ ಮೂರಕ್ಕೆ ಕಡಿಮೆಯಿಲ್ಲದೆ ಯಥಾಶಕ್ತಿ ಪಠಿಸಬೇಕು. ಇಷ್ಟಶ್ಲೋಕವನ್ನೇ ಯಥಾಶಕ್ತಿ ಪಠಿಸಬೇಕು.

**೩. ಗುರುರಾಜೀಯ (ವಾದಿರಾಜರ) ಪದ್ಧತಿ.** ಮೊದಲು ನಖಸ್ತುತಿ, ಅನಂತರ ೧ರಿಂದ ೪೧ರವರೆಗೆ ಕ್ರಮವಾಗಿ ಹೇಳಿ ನಖಸ್ತುತಿ ಪಠಿಸಬೇಕು. ಅನಂತರ ಸ್ವಾಭೀಷ್ಟ ಶ್ಲೋಕದಿಂದ ಕಡೆಯವರೆವಿಗೂ ೧ರಿಂದ ಸ್ವಾಭೀಷ್ಟ ಶ್ಲೋಕದವರೆಗೂ ಪಠಿಸಿ ನಖಸ್ತುತಿ. ಪುನಃ ನಖಸ್ತುತಿಯಿಂದ ಕಡೆಯವರೆಗೆ ಪಠಿಸಿದರೆ ಒಂದು ಪುರಶ್ಚರಣೆ. ಈ ರೀತಿ ಐದು ಮಾಡಿದರೆ ಪಂಚಕ. ಯಥಾಶಕ್ತಿ ಮಾಡಬಹುದು.

**೪. ಇನ್ನೊಂದು ಕ್ರಮ.** ನಖಸ್ತುತಿ, ೧ರಿಂದ ೪೧, ಪುನಃ ನಖಸ್ತುತಿ. ಪುನಃ ೪೧ರಿಂದ ೧ರವರೆಗೆ ಹಿಂದೆಹಿಂದಕ್ಕೆ ಬಂದು, ನಖಸ್ತುತಿ, ಪುನಃ ೧ರಿಂದ ೪೧ ಪಠಿಸಿ, ಇಷ್ಟಶ್ಲೋಕವನ್ನು ಯಥಾಶಕ್ತಿ ೨೮, ೪೧, ೧೦೮ ಸರಿ ಪಠಿಸುವುದು. ಇದು ವ್ಯಾಸರಾಯರ ಇನ್ನೊಂದು ಕ್ರಮವೆಂದು ಹೇಳುತ್ತಾರೆ.

**೫. ಮತ್ತೊಂದು ಕ್ರಮ.** [ಗುರುರಾಜೀಯ—ಕ್ರಮಾಂತರ] ನಖಸ್ತುತಿ, ೧—೪೧, ಅನಂತರ ಇಷ್ಟಶ್ಲೋಕದಿಂದ ಹಿಂದೆಹಿಂದಕ್ಕೆ ಹೋಗುತ್ತಾ ೧ನೇ ಶ್ಲೋಕದವರೆಗೆ ಪಠಿಸಿ, ೪೧ ಶ್ಲೋಕದಿಂದ ಉದ್ದಿಷ್ಟಶ್ಲೋಕದವರೆಗೆ ಪಠಿಸಿ ಉದ್ದಿಷ್ಟ ಶ್ಲೋಕವನ್ನೇ ೧೦೮ ಸರಿ ಪಠಿಸಿ ಕೊನೆಗೆ ಪುನಃ ೧ರಿಂದ ೪೧ ಪಠಿಸುವುದು, ಅನಂತರ ನಖಸ್ತುತಿ.

**೬. ಯಾದವಾರ್ಯರ ಕ್ರಮ.** ಮೊದಲು ಮನ್ಯುಸೂಕ್ತ, ಬಳಿತ್ಥಾಸೂಕ್ತ, ಋಷಭಸೂಕ್ತಗಳನ್ನು ಪಠಿಸಿ ನಖಸ್ತುತಿಯಿಂದ ಆರಂಭಿಸಿ ಕೊನೆಯವರೆಗೆ ಆರೋಹಣಕ್ರಮದಿಂದ [೧ರಿಂದ ೪೧] ಒಂದು ಸರಿ, ಪುನಃ ನಖಸ್ತುತಿಯಿಂದ ಅವರೋಹಣಕ್ರಮದಿಂದ [೪೧ರಿಂದ ೧ರವರೆಗೆ] ಹೇಳಿ ನಖಸ್ತುತಿ, ಪುನಃ ಆರೋಹಣಕ್ರಮದಿಂದ [೧ರಿಂದ ೪೧] ಕೊನೆಯವರೆಗೆ ಪಠಿಸಿ ನಖಸ್ತುತಿ ಹೇಳಿ ಋಷಭಸೂಕ್ತ ಬಳಿತ್ಥಾಸೂಕ್ತ ಮನ್ಯುಸೂಕ್ತಗಳನ್ನು ಹೇಳಿಕೊಂಡು ಮುಗಿಸುವುದು.

ಯಾರಿಗೆ ಯಾವುದು ಅನುಕೂಲವೋ ಅವರು ಹಾಗೆ ಮಾಡಬಹುದು. ಇನ್ನು ಯಾವ ಯಾವ ಶ್ಲೋಕಕ್ಕೆ ಏನು ಫಲವೆಂಬುದನ್ನು ತಿಳಿಸಿ ಪುರಶ್ಚರಣ ವಿಧಿಯನ್ನು ಸಮಾಪ್ತಿ ಮಾಡುವೆವು.

# ಶ್ಲೋಕಗಳ ಫಲಶ್ರುತಿಗಳು



| ಶ್ಲೋಕ ಸಂಖ್ಯಾ | ಶ್ಲೋಕದ ಪ್ರತೀಕ | ಲಭಿಸುವ ಫಲ |
|---|---|---|
| ೧. | ಪಾಂತ್ವಸ್ಮಾನ್ | ೧೦೮ ಆವೃತ್ತಿ ಪಾರಾಯಣದಿಂದ ಸಕಲಾನಿಷ್ಟ ಪರಿಹಾರ, ಸರ್ವಾಭೀಷ್ಟಲಾಭ |
| ೨. | ಲಕ್ಷ್ಮೀಕಾಂತ | |
| ೧. | ಶ್ರೀಮದ್ವಿಷ್ಣ್ವಂಘ್ರಿ | ವಾಕ್‌ಸಿದ್ಧ್ಯರ್ಥ, ವಾಕ್ಪಟುತ್ವ, ವಿದ್ಯಾಸಿದ್ಧಿ, ಸರ್ವಾಭೀಷ್ಟಸಿದ್ಧಿ |
| ೨. | ಉತ್ಕಂಠಾ | ಯಜ್ಞಸಿದ್ಧಿ, ಪ್ರಜ್ಞಾಪ್ರಾಪ್ತಿ, ಜ್ಞಾನಲಾಭ |
| ೩. | ಜನ್ಮಾಧಿ | ಸಕಲ ವಿಧದ ಆಧಿ-ವ್ಯಾಧಿ-ಪೀಡಾ ಪರಿಹಾರ, ಚಿಂತಾಪರಿಹಾರ |
| ೪. | ಅಸ್ಯಾವಿಷ್ | ಜಪಸಿದ್ಧಿ, ಮಂತ್ರಸಿದ್ಧಿ, ಜಯಸಿದ್ಧಿ |
| ೫. | ಉದ್ಯದ್ವಿದ್ಯುತ್ | ಪರಾಕ್ರಮಸಿದ್ಧಿ, ಬುದ್ಧಿವೈಶದ್ಯಸಿದ್ಧಿ, ಶತ್ರುನಾಶ |
| ೬. | ಸಂಸಾರೋತ್ತಾಪ | ಸ್ನೇಹಲಾಭ, ಪುಣ್ಯಲಾಭ, ಸಂತಾಪನಾಶ |
| ೭. | ಮೂರ್ಧನ್ಯೇಷು | ಬಂಧಮೋಕ್ಷ, ಶರೀರದಾರ್ಢ್ಯ, ಸಂಸಾರದಿಂದ ಬಿಡುಗಡೆ |
| ೮., | ಸಾಭ್ರೋಷ್ಣ | ಉನ್ಮಾದಪರಿಹಾರ (ಹುಚ್ಚು ಬಿಡುಗಡೆಯಾಗುವುದು), ಪರರಿಗೆ ಹುಚ್ಚು ಹಿಡಿಯುವಂತೆ ಮಾಡುವುದು |
| ೯. | ಯೇಮುಂ ಭಾವಂ | ಸ್ತ್ರೀವಶ್ಯ, ವಶ್ಯಳಾಗದ ರಮಣಿಯು ವಶವಾಗುವುದು, ವಿವಾಹಸಿದ್ಧಿ ದಂಪತಿಗಳಲ್ಲಿ ಕಲಹವಿದ್ದರೆ ಅದರ ಶಾಂತಿ (ಪರಿಹಾರ) |

| ಶ್ಲೋಕ ಸಂಖ್ಯಾ | ಶ್ಲೋಕದ ಪ್ರತೀಕ | ಲಭಿಸುವ ಫಲ |
|---|---|---|
| ೧೦. | ಆನಂದಾನ್ | ಸಂತಾನಲಾಭ, ಅದರಿಂದ ಸುಖಪ್ರಾಪ್ತಿ |
| ೧೧. | ಉತ್ತಪ್ತ | ಶತ್ರುಪರಾಜಯ, ಶತ್ರುವಶ್ಯ, ಶತ್ರುಜಯಸಿದ್ಧಿ |
| ೧೨. | ಅಸ್ಮಿನ್ನಸ್ಮದ್ | ಹರಿಧ್ಯಾನ, ಕ್ಲೇಶನಿವಾರಣ, ಹರಿಭಕ್ತಿಸಿದ್ಧಿ |
| ೧೩. | ಕ್ಷುತ್ಕ್ಷಾಮಾನ್ | ದಾರಿದ್ರ್ಯಪರಿಹಾರ, ಶತ್ರುಮೋಹನ, ಬಾಧಾಪರಿಹಾರ |
| ೧೪. | ಮಾತರ್ಮೇ | ಹರಿಭಕ್ತಿ, ಪಿತೃಭಕ್ತಿ, ಮಾತೃಭಕ್ತಿ, ಜನವಶೀಕರಣ ಸಿದ್ಧಿ, ಹರಿಯಲ್ಲಿ ಪೂರ್ಣಾವಲಂಬನೆ, ಅನನ್ಯಶರಣಾಗತಿ |
| ೧೫. | ವಿಷ್ಣೋರತ್ಯುತ್ತಮ | ಹರಿಭಕ್ತಿಸಿದ್ಧಿ, ವಿಷ್ಣುಸರ್ವೋತ್ತಮತ್ವ ಜ್ಞಾನಸಿದ್ಧಿ |
| ೧೬. | ತತ್ವಜ್ಞಾನ್ | ಮೋಕ್ಷಲಾಭ, ಮೋಕ್ಷಸಾಧನೆ |
| ೧೭. | ವಂದೇಹಂ | ಪೌರುಷಸಿದ್ಧಿ, ಪರಾಕ್ರಮಸಿದ್ಧಿ |
| ೧೮. | ಪ್ರಾಕ್‌ಪಂಚಾ- | ಔಷಧವೀರ್ಯವತ್ವಸಿದ್ಧಿ, ಔಷಧಸಿದ್ಧಿ, ವೀರ್ಯಸಿದ್ಧಿ |
| ೧೯. | ಕ್ಷಿಪ್ತಃ ಪಶ್ಚಾತ್ | ಸ್ಥಿರಪ್ರಯೋಜನಾರ್ಥಂ, ಯುದ್ಧಭಗ್ನಾಂಗಲಾಭ, ಕೈ ತಪ್ಪಿದ ರಾಜ್ಯದ ಪುನರ್‌ಲಾಭ, ಶಾಶ್ವತ ಅವಸ್ಥಾಸಿದ್ಧಿ (ಉದ್ಯೋಗಗಳು 'ಕಾಯಂ' ಆಗುವುದು ಇತ್ಯಾದಿ) |
| ೨೦. | ದೃಷ್ಟ್ವಾದುಷ್ಟಾ | ಸಂಗ್ರಾಮಜಯ, ಯುದ್ಧದಲ್ಲಿ ಜಯಸಿದ್ಧಿ, ಶತ್ರುನಾಶ |
| ೨೧. | ದೇವ್ಯಾದೇಶ | ಅಸಾಧ್ಯ ಕಾರ್ಯಸಿದ್ಧಿ, ಸಂಶೋಧನಾಕಾರ್ಯ ಜಯ, ಶತ್ರುಪರಾಜಯ, ನಷ್ಟದ್ರವ್ಯಪ್ರಾಪ್ತಿ, ಪತ್ನೀಪುತ್ರಾದಿಗಳ ವಿರಹನಿವೃತ್ತಿ, ರಕ್ಷಣೆ |

| ಶ್ಲೋಕ ಸಂಖ್ಯಾ | ಶ್ಲೋಕದ ಪ್ರತೀಕ | ಲಭಿಸುವ ಫಲ |
|---|---|---|
| ೨೨. | ಜಘ್ನೇನಿಘ್ನೇನ | ವಿಘ್ನನಾಶ, ದುಷ್ಟನಿಗ್ರಹ |
| ೨೩. | ನಿರ್ಮೃದ್ನನ್ | ಯುದ್ಧದ ತಯಾರಿಕೆ, ಯುದ್ಧಸನ್ನಾಹಸಿದ್ಧಿ, ಯುದ್ಧಸಂಹನನ ಸಾಧನ) |
| ೨೪. | ಕ್ಷ್ವೇಲಾಕ್ಷೀಣ | ರಾಜವಶ್ಯಸಿದ್ಧಿ, ರಾಜ್ಯಲಾಭ, ರಾಜಸೇವಾಲಾಭ |
| ೨೫. | ದ್ರುಹ್ಯಂತೀಂ | ವಾಕ್ಪಟುತ್ವಸಿದ್ಧಿ, ಕವಿತ್ವಶಕ್ತಿ, ಅಜ್ಞಾನನಾಶ |
| ೨೬. | ಯಾಭ್ಯಾಂ | ಗುರುಸೇವಾಲಾಭ |
| ೨೭. | ಗಚ್ಛನ್ ಸೌ | ಜ್ಞಾನಸಿದ್ಧಿ, ಕಾರ್ಯಸಿದ್ಧಿ |
| ೨೮. | ಬಹ್ವೀಃ ಕೋ- | ಮಿಥ್ಯಾಪವಾದ ಪರಿಹಾರ |
| ೨೯. | ದೇಹಾದುತ್ | ಜನವಶ್ಯತಾಸಿದ್ಧಿ, ರಾಜವಶ್ಯತಾ, ಜನವಶೀಕರಣಸಿದ್ಧಿ |
| ೩೦. | ತದ್ದುಷ್ಪ್ರೇ- | ಪ್ರತಿವಾದಿನಿರಸನ, ಪ್ರತಿವಾದಿಜಯಸಿದ್ಧಿ |
| ೩೧. | ಆಕ್ರೋಶಂ- | ಉಚ್ಚಾಟನಾರ್ಥ, ಶತ್ರೂಚ್ಚಾಟನ, ಭೂತೋಚ್ಚಾಟನ |
| ೩೨. | ತ್ರಿಷ್ವಪ್ಯೇ | ಅಪಮೃತ್ಯುಪರಿಹಾರ, ಸರ್ವರಿಂದಲೂ ಶ್ರೇಷ್ಠತ್ವಸಿದ್ಧಿ |
| ೩೩. | ಉದ್ಯನ್ಮಂದ | ರೂಪಲಾವಣ್ಯ (ಸಿದ್ಧಿ) ಪ್ರಾಪ್ತಿ ಅಥವಾ ವೃದ್ಧಿ |
| ೩೪. | ಪ್ರಾಚೀನಾ- | ವಿಚಕ್ಷಣಾರ್ಥಂ, ಪಾಂಡಿತ್ಯಲಾಭ, ವಿದ್ಯಾಸಂರಕ್ಷಣೆ, ವ್ಯಾಖ್ಯಾನಚಾತುರ್ಯಸಿದ್ಧಿ, ಅಗಲಿದ ಪತ್ನೀಪುತ್ರಾದಿಗಳ ಪ್ರಾಪ್ತಿ, ಕೆಲಸದಲ್ಲಿ ಕೌಶಲ್ಯಪ್ರಾಪ್ತಿ |
| ೩೫. | ಪೀಠೇರತ್ನೋ- | ಮಹೈಶ್ವರ್ಯಲಾಭ, ಸರ್ವಾಧಿಕ್ಯಸಿದ್ಧಿ, ಋಣಪರಿಹಾರ |

| ಶ್ಲೋಕ ಸಂಖ್ಯಾ | ಶ್ಲೋಕದ ಪ್ರತೀಕ | ಲಭಿಸುವ ಫಲ |
|---|---|---|
| ೩೬. | ಸಾನುಕ್ರೋ- | ವೈರಾಗ್ಯ (ಸಿದ್ಧಿ) ಲಾಭ, ಸತ್ಪುತ್ರಲಾಭ |
| ೩೭. | ಅಸ್ತವ್ಯಸ್ತಂ | ಅದೃಶ್ಯವಸ್ತು (ಪ್ರಾಪ್ತಿ) ದರ್ಶನ, ಅದೃಶ್ಯತ್ವಪ್ರಾಪ್ತಿ, ವಸ್ತುಸಿದ್ಧಿ |
| ೩೮. | ಆಜ್ಞಾಮನ್ಯೈ- | ರಾಜವಿಡ್ವರ ಶಮನ, ರಾಜಬಂಧಪರಿಹಾರ, ರಾಜಪ್ರತಿಬಂಧನಿವೃತ್ತಿ, ನಿಧಿಪ್ರಾಪ್ತಿ, ನಿಕ್ಷೇಪಸಂದರ್ಶನ |
| ೩೯. | ಭೂತ್ವಾಕ್ಷೇತ್ರೇ | ಸಂತಾನಪ್ರಾಪ್ತಿ, ಸಂತಾನಪ್ರತಿಬಂಧಕನಿವೃತ್ತಿ |
| ೪೦. | ವಂದೇ ತಂ | ಸರ್ವಾಭೀಷ್ಟಸಿದ್ಧಿ, ದಿಗ್ಬಂಧನ, ಗ್ರಹಪೀಡಾಪರಿಹಾರ, ರಾಜಬಂಧನಪರಿಹಾರ, ಪ್ರಮೋದಸಿದ್ಧಿ |
| ೪೧. | ಸುಬ್ರಹ್ಮಣ್ಯಾ- | ಸಕಲಾಭೀಷ್ಟಸಿದ್ಧಿ, ಗ್ರಹ-ರಾಜ-ಚೋರ-ವ್ಯಾಧಿ-ದುಷ್ಟಪ್ರಾಣಿ ಮೊದಲಾದ ವಿವಿಧ ಬಾಧಾಪರಿಹಾರ, ದಿಗ್ಬಂಧನ-ಜ್ಞಾನಭಕ್ತಿವೈರಾಗ್ಯಲಾಭ, ಮೋಕ್ಷಪ್ರಾಪ್ತಿ |

# ಅತಿ ಸುಲಭವಾದ ಪುರಶ್ಚರಣವಿಧಿ

ಶ್ರೀಮದಾಚಾರ್ಯರು ಹೇಳಿದಂತೆ (ಪುಟ ೨೪ರ ಪಾದಟಿಪ್ಪಣಿ) ಸಕಾಮ-ಕ್ರಿಯೆಗಳಿಗಿಂತ ನಿಷ್ಕಾಮಕ್ರಿಯೆಗಳು ಅನಂತಗುಣ ಶ್ರೇಷ್ಠವಾದುವು. ಆದ-ಕಾರಣ ಅದಕ್ಕಾಗಿ-ಇದಕ್ಕಾಗಿ ಎಂದು ಸಂಕಲ್ಪ ಮಾಡದೆ ಕೇವಲ ಶ್ರೀಹರಿ-ವಾಯುಪ್ರೀತ್ಯರ್ಥವಾಗಿಯೇ ಈ ವಾಯುಸ್ತುತಿಯನ್ನು ಸರಳವಾಗಿ ೧ರಿಂದ ೪೧ರ ವರೆಗೆ ಯಥಾಶಕ್ತಿ ಪ್ರತಿನಿತ್ಯ ಪಾರಾಯಣ ಮಾಡಿದರೂ ಅಥವಾ ಪ್ರತಿ ದಿನ ಆರೋಹಣಾವರೋಹಣ-ಆರೋಹಣ ಕ್ರಮದಿಂದಾಗಲೀ ಪಠಿಸಿದರೂ ಅಥವಾ ಪ್ರಾಣದೇವರಿಗೆ (ಸಪ್ತಕ—೪೧ ದಿನ ಅಥವಾ ೪೮ ದಿನ) ಈ ರೀತಿಯೇ ಪಠಿಸುತ್ತಾ ಅಭಿಷೇಕ ಮಾಡಿದರೂ (ಆಕಳ ಹಾಲಿನಿಂದ ಮಾಡಿದರೆ ಮತ್ತಷ್ಟು ಶ್ರೇಷ್ಠ, ಜೇನುತುಪ್ಪದಿಂದ ಅಭಿಷೇಕವೂ ಶೀಘ್ರ ಫಲಪ್ರದ) ಶ್ರೀಹರಿ-ವಾಯುಗಳು ನಿಶ್ಚಯವಾಗಿಯೂ ಪ್ರಸನ್ನರಾಗೇ ಆಗುತ್ತಾರೆ. ಅಭಿಷೇಕ ಮಾಡುವಾಗ ಪ್ರಾಣದೇವರ ಪ್ರತಿಮೆಯಲ್ಲಿ ಗೋಳಕತ್ರಯ ಚಿಂತನೆ ಮಾಡಿ ಪ್ರಣವಾದಿ ಮಂತ್ರಗಳಿಂದ ವಿಧ್ಯುಕ್ತಪ್ರಕಾರ ಅಭಿಷೇಕ ಮಾಡಿದರೆ ಶ್ರೀಹರಿ-ವಾಯುಗಳು ಅತ್ಯಂತ ಪ್ರಸನ್ನರಾಗುತ್ತಾರೆ; ಈ ಕ್ರಮವನ್ನು ನಾವು 'ಮುಖ್ಯಪ್ರಾಣಾಭಿಷೇಕವಿಧಿ' ಎಂಬ ಚಿಕ್ಕ ಪುಸ್ತಕರೂಪವಾಗಿ ಪ್ರಕಟಿಸಿದ್ದೇವೆ; ಅದರಿಂದ ಆ ವಿಧಿ ತಿಳಿಯುತ್ತದೆ. ಈ ಪ್ರಕಾರ ಮಾಡಿದರೆ ಶ್ರೀ-ಹರಿವಾಯುಗಳು ಖಂಡಿತವಾಗಿಯೂ ಪ್ರೀತರಾಗಿ ಆ ಭಕ್ತರ ಸಕಲಾನಿಷ್ಟಗಳನ್ನೂ ನಿವಾರಣೆ ಮಾಡಿ ಸಮಸ್ತಾಭೀಷ್ಟಗಳನ್ನೂ ನಿಸ್ಸಂದೇಹವಾಗಿ ನೆರವೇರಿಸಿಕೊಡುತ್ತಾರೆಂಬುದಕ್ಕೆ ಶ್ರೀಮದಾಚಾರ್ಯರ ಈ ಉಕ್ತಿಯೇ ಸಾಕ್ಷಿಯೆಂದು ಹೇಳಿ ಅವರ ವಾಕ್ಯದಿಂದಲೇ ನಮ್ಮ ಈ ಪುರಶ್ಚರಣ ವಿಧಿಯನ್ನು ಮುಗಿಸುವೆವು—

ಅಕುರ್ವಂಶ್ಚ ಕ್ರಿಯಾ ಭಕ್ತ್ಯಾ ನಿರಪೇಕ್ಷೋ ಭಜನ್ ಹರಿಮ್ ।
ಸರ್ವಮೇತದವಾಪ್ನೋತಿ ವಿಶೇಷೇಣ ನ ಸಂಶಯಃ ॥

(ತಂತ್ರಸಾರ ೪ ಅ. ೧೩೧ ಶ್ಲೋ.)

(ಅರ್ಥ) ಪುರಶ್ಚರಣವಿಧಿಗಳಲ್ಲಿ ಹೇಳಿದ ಅಂಗನ್ಯಾಸ-ಕರನ್ಯಾಸ-ಜಪ-ತರ್ಪಣ-ಬ್ರಾಹ್ಮಣಭೋಜನಾದಿ ಕಾಮ್ಯಕರ್ಮ **ವಿಧಿಗಳನ್ನು ಮಾಡದೇ ಇದ್ದರೂ ಕೂಡ** ಫಲಾಪೇಕ್ಷೆಯಿಲ್ಲದೆ ವಾಯುಸ್ತುತಿಯಿಂದ ಶ್ರೀಹರಿ-ವಾಯುಗಳನ್ನು (ಹರಿ ಶಬ್ದಕ್ಕೆ ವಿಷ್ಣು ಎಂದೂ ವಾಯು ಎಂದೂ ಅರ್ಥವಿದೆ) ಯಥಾಶಕ್ತಿ ಆರಾಧಿಸುತ್ತಿದ್ದರೆ (ಇಲ್ಲಿ ಭಜನ್ ಎಂದು ಶತೃಂತ ಶಬ್ದ-ಪ್ರಯೋಗ ಮಾಡಿದ್ದರಿಂದ 'ನಿತ್ಯವೂ ಮಾಡುತ್ತಾ ಹೋದರೆ' ಎಂದರ್ಥ) ಆ ಭಕ್ತನು ಪುರಶ್ಚರಣವಿಧಿಯಲ್ಲಿ ಹೇಳಿದ ಸಕಲ ಫಲಗಳನ್ನೂ ಸಕಾಮನಾ-ಕರ್ಮದಿಂದ ಲಭಿಸುವುದಕ್ಕೂ ಮಿಗಿಲಾಗಿ (ವಿಶೇಷವಾಗಿ) ನಿರಾಯಾಸವಾಗಿ ಪಡೆಯುತ್ತಾನೆ. ಇದರಲ್ಲಿ ಯಾವ ಸಂಶಯವೂ ಇಲ್ಲ.

# ವಾಯುಸ್ತುತಿಯನ್ನು ಓದುವ ಕ್ರಮ

**ಸ್ತೋತ್ರದ ಮಹಿಮೆ.** ವಾಯುಸ್ತುತಿಯು ಇತರ ಅನೇಕ ಸ್ತೋತ್ರಗಳಂತೆ ಏನೋ ಒಂದು ಸಾಮಾನ್ಯಸ್ತೋತ್ರವಲ್ಲವೆಂದೂ ಇದರ ಒಂದೊಂದು ಶ್ಲೋಕವೂ ಒಂದೊಂದು ಮಂತ್ರಪ್ರಾಯವಾದುದೆಂದೂ ನಾವು ಪ್ರಾರಂಭದಲ್ಲೇ ಪುಟ ೬, ನಖಸ್ತುತಿ) ನಿವೇದಿಸಿದ್ದೇವೆ. ಆದಕಾರಣ ಈ ವಾಯು-ಸ್ತುತಿಯನ್ನು ಮೊದಲನೆಯ ಸರಿಯಾದರೂ ಗುರುಮುಖೇನ ಶ್ರವಣ ಮಾಡಿ ಮುಂದೆ ಅಭ್ಯಾಸ ಮಾಡಬೇಕು. ಹೆಚ್ಚು ಅವಕಾಶವಿಲ್ಲದಿದ್ದ ಪಕ್ಷದಲ್ಲಿ ನಖಸ್ತುತಿಯನ್ನೂ ಕನಿಷ್ಠಪಕ್ಷ ವಾಯುಸ್ತುತಿಯ ಆದ್ಯಂತ (ಮೊದಲನೆಯ ಮತ್ತು ಕಡೆಯ) ಎರಡು ಶ್ಲೋಕಗಳನ್ನಾದರೂ ಗುರುಮುಖೇನ ಕಲಿಯುವುದು ಅತ್ಯಾವಶ್ಯಕ. ಇಲ್ಲದಿದ್ದರೆ ಈ ಸ್ತುತಿಯು ಫಲಿಸಲಾರದು. ನಲವತ್ತೊಂದು ಶ್ಲೋಕಗಳನ್ನೂ ಗುರುಮುಖೇನ ಕೇಳಿ ಕಲಿಯುವುದು ಉತ್ತಮ ಪಕ್ಷ. ಅದು ಸಾಧ್ಯವಿಲ್ಲದಿದ್ದರೆ ಮೇಲೆ ಹೇಳಿದಂತೆ ಆದ್ಯಂತ ಶ್ಲೋಕಗಳನ್ನಾದರೂ ಗುರುಮುಖೇನ ಕೇಳಿ ಮಿಕ್ಕ ಶ್ಲೋಕಗಳನ್ನು ಅಭ್ಯಾಸ ಮಾಡಬಹುದು. ಹಾಗೆ ಅಭ್ಯಾಸ ಮಾಡುವವರ ಅನುಕೂಲಕ್ಕಾಗಿ ಈ ಮುಂದಿನ ಸೂಚನೆಗಳನ್ನು ಕೊಟ್ಟಿದ್ದೇವೆ.

**ಈ ಸ್ತುತಿ ಸ್ರಗ್ಧರಾವೃತ್ತದಲ್ಲಿದೆ.** ವಾಯುಸ್ತುತಿಯ ನಲವತ್ತೊಂದು ಶ್ಲೋಕಗಳೂ 'ಸ್ರಗ್ಧರಾ' ಎಂಬ ವೃತ್ತದಲ್ಲೇ ರಚಿತವಾಗಿವೆ. ಸ್ರಗ್ಧರಾ-ವೃತ್ತವು ಒಂದೊಂದು ಪಾದದಲ್ಲೂ ಇಪ್ಪತ್ತೊಂದು-ಇಪ್ಪತ್ತೊಂದು ಅಕ್ಷರ ಗಳಿರುವ ನಾಲ್ಕು ಪಾದಗಳುಳ್ಳ ಸಮವೃತ್ತ. ಈ ಇಪ್ಪತ್ತೊಂದು ಅಕ್ಷರಗಳು ಏಳೇಳು ಅಕ್ಷರಗಳ ಮೂರು ಗುಂಪಾಗಿರುತ್ತವೆ. ಎಂದರೆ ಪ್ರತಿ ಏಳನೇ ಅಕ್ಷರಕ್ಕೆ ಪದಚ್ಛೇದ ಆಗಲೇಬೇಕು; ಇದನ್ನು ಛಂದಸ್ ಶಾಸ್ತ್ರದಲ್ಲಿ 'ಯತಿ' ಎನ್ನುತ್ತಾರೆ. ಸ್ರಗ್ಧರಾವೃತ್ತದ ಲಕ್ಷಣ ಹೇಳುವಾಗ 'ತ್ರಿಮುನಿಯತಿಯುತಾ' ಎಂದು ಹೇಳಿದ್ದಾರೆ. ಮುನಿ ಎಂದರೆ ಸಪ್ತಋಷಿಗಳಿಂದ ಏಳು ಎಂದರ್ಥ; ಅಂಥಾ ಮೂರು ಯತಿಗಳು ಉಳ್ಳದ್ದು.

ಹೀಗೆ ಒಂದೊಂದು ಪಾದದಲ್ಲೂ ಏಳೇಳು ಅಕ್ಷರಗಳ ಮೂರು ಗುಂಪು ಗಳಿರುತ್ತವೆ. ಅಂಥಾ ನಾಲ್ಕು ಪಾದಗಳು ಸೇರಿ ಒಂದು ಶ್ಲೋಕವಾಗುತ್ತದೆ. ಎರಡನೇ ಪಾದಕ್ಕೊಮ್ಮೆ ನಾಲ್ಕನೇ ಪಾದಕ್ಕೊಮ್ಮೆ ವಿರಾಮ ಕೊಡುವುದು ಪದ್ಧತಿ. ಆದಕಾರಣ ವಾಯುಃಸ್ತುತಿ ಶ್ಲೋಕಗಳನ್ನು ಅಭ್ಯಾಸ ಮಾಡುವಾಗ ಮೊದಲು ಏಳೇಳು ಅಕ್ಷರಗಳಿಗೆ ಒಂದು ಸಣ್ಣ ಗುರುತು ಹಾಕಿಕೊಳ್ಳಬೇಕು. ಅನಂತರ ಮೂರನೇ ಗುಂಪಾದ ಬಳಿಕ ಒಂದು ಪಾದ ಮುಗಿಯುವುದರಿಂದ ಅಲ್ಲಿಗೆ ಒಂದು ದೊಡ್ಡ ಗೀಟು ಹಾಕಿಕೊಳ್ಳಬಹುದು; ಹೀಗೆ ನಾಲ್ಕೂ ಪಾದ ಗಳನ್ನು ಗುರುತುಹಾಕಿಕೊಳ್ಳಬೇಕು.

**ಅಭ್ಯಾಸ ಮಾಡುವ ಸುಲಭಕ್ರಮ.** ಮೊದಲು ಮೊದಲನೆಯ ಏಳು ಅಕ್ಷರಗಳನ್ನು ಜೋಡಿಸಿಕೊಂಡು ಓದುವುದನ್ನು ಚೆನ್ನಾಗಿ—ಹತ್ತು-ಹನ್ನೆರಡು ಸಾರಿ—ಹೇಳಿ ಹೇಳಿ ಅಭ್ಯಾಸ ಮಾಡಬೇಕು. ಅನಂತರ ಎರಡನೇ ಏಳಕ್ಷರ ಗಳನ್ನು ಅದೇ ರೀತಿ ಅಭ್ಯಾಸ ಮಾಡಬೇಕು ಆಮೇಲೆ ಮೊದಲನೇ ಗುಂಪನ್ನೂ ಎರಡನೇ ಗುಂಪನ್ನೂ ಸೇರಿಸಿ ಹೇಳುವುದನ್ನು ಪುನಃ ಹತ್ತು-ಹನ್ನೆರಡು ಸರಿ ಒಟ್ಟಿಗೆ ಹೇಳಿ-ಹೇಳಿ ಅಭ್ಯಾಸ ಮಾಡಬೇಕು. ಕೊನೆಗೆ ಮೂರನೇ ಗುಂಪಿನ ಏಳಕ್ಷರಗಳನ್ನು ಮಾತ್ರ ಹೇಳಿ ಹೇಳಿ ಅಭ್ಯಾಸ ಮಾಡಿಕೊಂಡು ಅನಂತರ ಮೂರೂ ಗುಂಪುಗಳನ್ನೂ ಒಟ್ಟಿಗೆ ಸರಾಗವಾಗಿ ಹೇಳುವ ಅಭ್ಯಾಸ ಮಾಡಿ-ಕೊಳ್ಳಬೇಕು.

ಹೀಗೆ ಮೊದಲನೇ ಪಾದವು ಅಭ್ಯಾಸವಾದ ಬಳಿಕ ಎರಡನೇ ಪಾದದ ಮೊದಲನೇ ಗುಂಪಿಗೆ ಹೋಗಬೇಕು. ಅದನ್ನೂ ಅಭ್ಯಾಸ ಮಾಡಿದ ಬಳಿಕ ಎರಡನೇ ಪಾದದ ಎರಡನೇ ಗುಂಪು ಅಭ್ಯಾಸ ಮಾಡಬೇಕು. ಹೀಗೆಯೇ ಎರಡನೇ ಪಾದದ ಮೂರೂ ಗುಂಪುಗಳನ್ನು ಸರಾಗವಾಗಿ (ಸಲೀಸಾಗಿ—ತೊಡಕಿಲ್ಲದೆ) ಹೇಳಲು ಕಲಿತನಂತರ ಒಂದನೇ ಪಾದವನ್ನೂ ಎರಡನೇ ಪಾದವನ್ನೂ ಒಟ್ಟಿಗೆ ಸೇರಿಸಿ ಹೇಳುವ ಅಭ್ಯಾಸ ಮಾಡಿಕೊಳ್ಳಬೇಕು. ಇಲ್ಲಿಗೆ ಪೂರ್ವಾರ್ಧ ಬಂದಹಾಗಾಯಿತು.

ಅನಂತರ ಮೂರನೇ ಪಾದವನ್ನೂ, ನಾಲ್ಕನೇ ಪಾದವನ್ನೂ ಇದೇ ರೀತಿ ಬೇರೆ ಬೇರೆ ಅಭ್ಯಾಸ ಮಾಡಿ ಎರಡನ್ನೂ ಸೇರಿಸಿ ಹೇಳುವುದನ್ನೂ ಅಭ್ಯಾಸ ಮಾಡಬೇಕು. ಇಲ್ಲಿಗೆ ಉತ್ತರಾರ್ಧ ಬಂದಹಾಗಾಯಿತು. ಕೊಟ್ಟ-ಕೊನೆಗೆ ನಾಲ್ಕೂ ಪಾದಗಳನ್ನೂ ಕ್ರಮವಾಗಿ ಹೇಳುವುದನ್ನು ಅಭ್ಯಾಸ ಮಾಡಿಕೊಳ್ಳುವುದು ಬಹಳ ಸುಲಭವಾಗುತ್ತದೆ.

ಈ ವಿಚಾರವನ್ನೇ ವಾಯುಸ್ತುತಿಯ ಪ್ರಥಮ ಶ್ಲೋಕಕ್ಕೆ ಅನ್ವಯಿಸಿ ವಿವರಿಸುವೆನು. ಆಗ ಸ್ಪಷ್ಟವಾಗುತ್ತದೆ.

**ವಾಯುಸ್ತುತಿಯ ಪ್ರಥಮ ಶ್ಲೋಕ.** ವಾಯುಸ್ತುತಿಯ ಮೊದಲನೆ ಶ್ಲೋಕವು "ಶ್ರೀಮದ್ವಿಷ್ಣ್ವಂಘ್ರಿನಿಷ್ಠಾ—" ಎಂದು ಆರಂಭವಾಗುತ್ತದೆ. ಇದರಲ್ಲಿ 'ಶ್ರೀಮದ್—' ಎಂದಾರಂಭಿಸಿ 'ಶ್ರೀಮದಾನಂದತೀರ್ಥ' ಎಂಬುವ ವರೆಗೆ ಪ್ರಥಮ ಪಾದ. 'ತ್ರೈಲೋಕ್ಯಾ' ಎಂಬುದರಿಂದ 'ಪುನಂತು' ವರೆಗೆ ಎರಡನೇ ಪಾದ. ಇವೆರಡೂ ಸೇರಿದರೆ ಪೂರ್ವಾರ್ಧವಾಗುತ್ತದೆ. 'ವಾಚಾಂ' ಎಂಬುದರಿಂದ 'ಶಾರದೇಂದು' ವರೆಗೆ ಮೂರನೇ ಪಾದ. 'ಜ್ಯೋತ್ಸ್ನಾ' ಇಂದ 'ಬಭಾರ' ವರೆಗಿರುವುದು ನಾಲ್ಕನೇ ಪಾದ. ಮೂರು-ನಾಲ್ಕು ಎರಡು ಪಾದಗಳೂ ಸೇರಿ ಉತ್ತರಾರ್ಧ. ಹೀಗೆ ಮೊದಲನೇ ಶ್ಲೋಕವು 'ಶ್ರೀಮದ್-ವಿಷ್ಣ್ವಂಘ್ರಿ' ಎಂದು ಆರಂಭವಾಗಿ 'ಬಭಾರ' ಎಂದು ಕೊನೆಯಾಗುತ್ತದೆ. ಒಂದೊಂದು ಪಾದದಲ್ಲೂ ಇಪ್ಪತ್ತೊಂದು ಅಕ್ಷರಗಳಿರುವುದರಿಂದ ನಾಲ್ಕು ಪಾದಗಳಿಂದ ಒಟ್ಟು ಇಡೀ ಶ್ಲೋಕದಲ್ಲಿ ಎಂಭತ್ತನಾಲ್ಕು (೮೪) ಅಕ್ಷರಗಳಿವೆಯೆಂದು ಅರ್ಥವಾಯಿತು. ಹೀಗೆಯೇ ನಲವತ್ತೊಂದು ಶ್ಲೋಕಗಳಲ್ಲೂ ಪಾದಗಳೂ ಅಕ್ಷರಸಂಖ್ಯೆಯೂ ಇರುತ್ತದೆಂದು ತಿಳಿಯಬೇಕು.

**ಪ್ರಥಮ ಪಾದದ ವಿವರಣೆ.** 'ಶ್ರೀಮದ್........ನಂದತೀರ್ಥ' ಎಂಬ ಪ್ರಥಮ ಪಾದದಲ್ಲಿ 'ಶ್ರೀಮದ್‌ವಿಷ್ಣ್ವಂಘ್ರಿನಿಷ್ಠಾ' ಎಂಬ ಭಾಗ ಮೊದಲನೇ ಏಳಕ್ಷರದ ಗುಂಪು ಅಥವಾ ಯತಿ ; ಅಲ್ಲಿಗೆ ನಿಲ್ಲಿಸಬೇಕು. ಪ್ರಾಯಶಃ ಎಲ್ಲಾ ಪುಸ್ತಕಗಳಲ್ಲೂ 'ಶ್ರೀಮದ್ವಿಷ್ಣ್ವಂಘ್ರಿನಿಷ್ಠಾ' ಎಂದು ಸೇರಿಸಿಯೇ ಕೊಟ್ಟಿರುತ್ತದೆ. ಇದನ್ನು ಬಿಡಿಸಿದರೆ 'ಶ್ರೀಮದ್, ವಿಷ್ಣು, ಅಂಘ್ರಿ, ನಿಷ್ಠಾ' ಎಂದು ನಾಲ್ಕು ಪದಗಳಿವೆ. ವಿಷ್ಣು + ಅಂಘ್ರಿ ಸೇರಿದಾಗ ಯಣ್‌ಸಂಧಿಯಾಗಿ ಉಕಾರಕ್ಕೆ ವಕಾರಾದೇಶ ಬರುವುದರಿಂದ ವಿಷ್ಣ್ವಂಘ್ರಿ ಎಂದಾಗುತ್ತದೆ. ಇದು ಹೇಳಲು ಸ್ವಲ್ಪ ತೊಡಕಾಗುತ್ತದೆ—ನಿಜ. ಆದರೆ ಅದನ್ನೇ ಬಿಡಿಸಿ ವಿಷ್–ಣ್ವಂಘ್ರಿ ಎಂದು ಹೇಳಿಕೊಂಡು-ಹೇಳಿಕೊಂಡು ಒಟ್ಟಿಗೆ ಸೇರಿಸಿದರೆ ಈ ತೊಡಕು ಪರಿಹಾರವಾಗುತ್ತದೆ. ಹಾಗೆಯೇ ಪ್ರಾರಂಭದಲ್ಲಿ ಶ್ರೀಮದ್-ವಿಷ್ಣ್ವಂಘ್ರಿ-ನಿಷ್ಠಾ ಎಂದು ಮೊದಲುಮೊದಲು ಬಿಡಿಸಿಬಿಡಿಸಿ ಹೇಳಿಕೊಂಡು ಆಮೇಲೆ ಸೇರಿಸಿ ಹೇಳುತ್ತಾ ಹೋದರೆ 'ಶ್ರೀಮದ್–ವಿಷ್ಣ್ವಂಘ್ರಿ–ನಿಷ್ಠಾ' ಎಂಬುದು ಸ್ಪಷ್ಟವಾಗಿ ಹೇಳಲು ಸುಲಭವಾಗುತ್ತದೆ.

'ತಿಗುಣ-ಗುರುತಮ' ಎಂಬುದು ಎರಡನೇ ಗುಂಪು (ಯತಿ). ಇಲ್ಲಿ ಉದ್ದಕ್ಕೂ ಲಘು ಅಕ್ಷರಗಳೇ ಬಂದಿರುವುದರಿಂದ ಹೇಳುವುದೂ ಸುಲಭ. ಹೀಗೆ ಎರಡನ್ನೂ ಬೇರೆಬೇರೆ ಅಭ್ಯಾಸ ಮಾಡಿದ ಬಳಿಕ 'ಶ್ರೀಮದ್-ವಿಷ್ಣ್ವಂಘ್ರಿನಿಷ್ಠಾ–ತಿಗುಣಗುರುತಮ' ಎಂದು ಹೇಳುವುದನ್ನು ಅಭ್ಯಾಸ ಮಾಡಿಕೊಳ್ಳಬೇಕು.

ಅನಂತರ 'ಶ್ರೀಮದಾನಂದತೀರ್ಥ' ಎಂಬ ಮೂರನೇ ಗುಂಪನ್ನು (ಯತಿಯನ್ನು) ಕೆಲವು ಸರಿ ಹೇಳಿಕೊಂಡರೆ ಕೊನೆಗೆ 'ಶ್ರೀಮದ್—' ಎಂದು ಆರಂಭಿಸಿ 'ನಂದತೀರ್ಥ'ವರೆಗೆ ಇರುವ 'ಶ್ರೀಮದ್ವಿಷ್ಣ್ವಂಘ್ರಿನಿಷ್ಠಾ–ತಿಗುಣ. ಗುರುತಮ–ಶ್ರೀಮದಾನಂದತೀರ್ಥ' ಎಂಬ ಇಡೀ ಪ್ರಥಮಪಾದವನ್ನು ಸುಲಭವಾಗಿ ಹೇಳುವುದಕ್ಕೆ ಕಷ್ಟವಿಲ್ಲದೆ ಬರುತ್ತದೆ.

**ಎರಡನೇ ಪಾದ.** ಹೀಗೆ ಒಂದನೇ ಪಾದವನ್ನು ಸುಲಭವಾಗಿ ಹೇಳುವ ಅಭ್ಯಾಸ ಮಾಡಿಕೊಂಡ ಬಳಿಕ ಎರಡನೇ ಪಾದಕ್ಕೆ ಬರೋಣ. ಇದರಲ್ಲಿ— ತ್ರೈಲೋಕ್ಯಾಚಾರ್ಯ-ಪಾದೋ ಎಂಬ ಏಳು ಅಕ್ಷರಕ್ಕೆ ಒಂದು ಯತಿ;

—ಜ್ವಲ-ಜಲಜ-ಲಸತ್ ಎಂಬ ಏಳಕ್ಕೆ ಎರಡನೇ ಯತಿ ; ಪಾಂಸವೋ-ಸ್ಮಾನ್ ಪುನಂತು ಎಂಬ ಏಳಕ್ಕೆ ಒಂದು ಯತಿ—ಹೀಗೆ ಮೂರು ವಿಭಾಗ-ಗಳಿವೆ. ಎರಡನೇ ಯತಿ ಹೇಳಿಕೊಳ್ಳುವಾಗ 'ಜ್ವಲಜಲಜಲಸ' ಎಂದು ಸೇರಿಸಿ ಹೇಳಿಕೊಂಡರೆ ಜಕಾರ ಲಕಾರಗಳು ಹೇಳಿಕೊಳ್ಳುವುದಕ್ಕೆ ತೊಡ ಕಾಗುತ್ತದೆ. ಅದಕ್ಕೇ ನಾವು 'ಜ್ವಲ ಜಲಜ-ಲಸತ್' ಎಂದು ಪದಗಳನ್ನು ಬಿಡಿಸಿ ಬಿಡಿಸಿ ತೋರಿಸಿದ್ದೇವೆ; ಉಜ್ವಲವಾದ (ಜಲಜ) ಕಮಲದಂತೆ (ಲಸತ್) ಶೋಭಿಸುವ ಎಂದು ಅರ್ಥವನ್ನೂ ತಿಳಿದುಕೊಂಡರೆ ಇನ್ನೂ ಸುಲಭ ವಾಗುತ್ತದೆ. ಈ ಮೂರು ಯತಿಗಳನ್ನೂ ಬೇರೆಬೇರೆಯಾಗಿಯೂ ಮೇಲಿನಂತೆ ಸೇರಿಸಿಯೂ ಹೇಳಿ ಅಭ್ಯಾಸ ಮಾಡಿಕೊಂಡ ಬಳಿಕ ಈ ಎರಡೂ ಪಾದಗಳನ್ನೂ ಸೇರಿಸಿ 'ಶ್ರೀಮದ್....ಪುನಂತು' ವರೆಗೆ ಇಡೀ ಪೂರ್ವಾರ್ಧವನ್ನು ಒಟ್ಟಿಗೆ ಹೇಳುವುದನ್ನು ಅಭ್ಯಾಸ ಮಾಡಿಕೊಳ್ಳಬೇಕು.

**ಉತ್ತರಾರ್ಧದ ಅಭ್ಯಾಸ.** ಮೂರನೇ ಪಾದದಲ್ಲಿ 'ವಾಚಾಂ ಯತ್ರ ಪ್ರಣೇತ್ರೀ । ತ್ರಿಭುವನ-ಮಹಿತಾ । ಶಾರದಾ ಶಾರದೇಂದು' ಎಂದು ಮೂರು ಗುಂಪುಗಳೂ ನಾಲ್ಕನೇ ಪಾದದಲ್ಲಿ 'ಜ್ಯೋತ್ಸ್ನಾ ಭದ್ರಸ್ಮಿತಶ್ರೀ । ಧವಳಿತ-ಕಕುಭಾ । ಪ್ರೇಮ ಭಾರಂ ಬಭಾರ' ಎಂದು ಮೂರು ಗುಂಪುಗಳೂ ಇವೆ. ಇವನ್ನೂ ಹಿಂದಿನಂತೆಯೇ ಒಂದೊಂದಾಗಿಯೂ ಅನಂತರ ಸೇರಿಸಿ ಸೇರಿಸಿಯೂ ಅಭ್ಯಾಸ ಮಾಡಿಕೊಂಡರೆ ಮೊದಲು ಇಡೀ ಉತ್ತರಾರ್ಧ ಚೆನ್ನಾಗಿ ಬರುತ್ತದೆ. ಅನಂತರ ಶ್ರೀಮದ್ ಇಂದ ಆರಂಭಿಸಿ ಬಭಾರ ವರೆಗೆ ಇಡೀ ಶ್ಲೋಕವನ್ನು ಪಾದ-ಪಾದವಾಗಿ ಹೇಳಿ ಹೇಳಿ ಒಟ್ಟಿಗೆ ಹೇಳುವುದನ್ನು ಅಭ್ಯಾಸ ಮಾಡಿ-ಕೊಳ್ಳಬೇಕು.

ಹೀಗೆ ಒಂದೊಂದು ಶ್ಲೋಕವನ್ನೇ ಹೇಳಿಕೊಳ್ಳುತ್ತಾ ಇಡೀ ವಾಯು-ಸ್ತುತಿಯ ನಲವತ್ತೊಂದು ಶ್ಲೋಕಗಳನ್ನೂ ಕ್ರಮವಾಗಿ ಅಭ್ಯಾಸ ಮಾಡಿ-ಕೊಳ್ಳಬಹುದು. ತನಗೆ ತಾನೇ ಹೇಳಿಕೊಳ್ಳುವುದಕ್ಕಿಂತ ಯಾರಾದರೂ ಬಲ್ಲವರ ಮುಖದಿಂದ ಹೇಳಿಸಿಕೊಂಡು ಕಲಿಯುವುದು ಹೆಚ್ಚು ಪ್ರಶಸ್ತ.

ಈ ಗ್ರಂಥದಲ್ಲಿ ಶ್ಲೋಕಗಳನ್ನು ಕೊಡುವಾಗ ಈ ರೀತಿ ಯತಿಗಳಾಗಿಯೂ ಪಾದಗಳಾಗಿಯೂ ವಿಂಗಡಿಸಿಯೇ ನಲವತ್ತೊಂದು ಶ್ಲೋಕಗಳನ್ನು ಕೊಟ್ಟಿದ್ದೇವೆ.

**ಸಂಯುಕ್ತಾಕ್ಷರಗಳ ಉಚ್ಚಾರಣೆಯ ಬಗ್ಗೆ ನಮ್ಮ ಸಲಹೆ.** ವಾಯುಸ್ತುತಿಯಲ್ಲಿ ಶ್ರೀಮದ್ವಿಷ್ಣ್ವಂಘ್ರಿ, ಜ್ಯೋತ್ಸ್ನಾ, ಭಕ್ತ್ಯುದ್ರೇಕ, ಪ್ರಾಗ್ರ್ಯಾಂಘ್ರಿ, ಕ್ಷ್ವೇಲಾಕ್ಷೀಣ ಇಂತಹ ಜಟಿಲವಾದ ಸಂಯುಕ್ತಾಕ್ಷರಗಳು ಮಧ್ಯೇಮಧ್ಯೇ ಬರುತ್ತವೆ; ನಿಜ. ಆದರೆ ಅವನ್ನು ಬಿಡಿಸಿಕೊಂಡು 'ಶ್ರೀಮದ್-ವಿಷ್-ಣ್ವಂಘ್ರಿ', 'ಜ್ಯೋತ್-ಸ್ನಾ', 'ಭಕ್-ತ್ಯುದ್ರೇಕ', 'ಪ್ರಾಗ್-ರ್ಯಾಂಘ್ರಿ' ಎಂದು ಹೇಳಿಕೊಂಡರೆ ಅವು ಸುಲಭವಾಗಿಬಿಡುತ್ತವೆ. ಈ ವಿಷಯ 'ಯತಿ'ಗಳಾಗಿ ಬಿಡಿಸುವಾಗಲೂ, ಪಾದಗಳನ್ನು ಬೇರ್ಪಡಿಸುವಾಗಲೂ ಬಹಳ ಉಪಕಾರಿಯಾಗುತ್ತದೆ. ಒಂದೆರಡು ಉದಾಹರಣೆಗಳನ್ನು ಕೊಟ್ಟು ಸ್ಪಷ್ಟಪಡಿಸುವೆನು.

**ಯತಿಗಳಾಗಿ ಬಿಡಿಸುವಾಗ.** ಮೊದಲನೇ ಶ್ಲೋಕವನ್ನೇ ಕೊಡುವಾಗ ಅನೇಕ ಪುಸ್ತಕಗಳಲ್ಲಿ '—ಜಲಜಲಸತ್ಪಾಂಸವೋಸ್ಮಾನ್ಪುನಂತು' ಎಂದು ಕೊಟ್ಟಿರುತ್ತಾರೆ. ಅದನ್ನು 'ಜಲಜ-ಲಸತ್। ಪಾಂಸವೋ-ಸ್ಮಾನ್ ಪುನಂತು' ಎಂದು ಬಿಡಿಸಿ ಹೇಳಿಕೊಂಡರೆ ಉಚ್ಚಾರಣೆ ಮಾಡಲು ಸುಲಭವೂ ಆಗುತ್ತದೆ, ಅಲ್ಲದೆ ಬೇರೆಬೇರೆ ಪಾದಗಳನ್ನು ವಿಂಗಡಿಸಿಕೊಳ್ಳಲೂ ಸಹ ಅನುಕೂಲವಾಗುತ್ತದೆ. ಎರಡನೇ ಶ್ಲೋಕದ ಮೂರನೇ ಪಾದದಲ್ಲಿ 'ಪ್ರಘಟನಸ(ಘ)ಧಟಾತ್ಕಾರಸಂಘೃಷ್ಯಮಾಣ' ಎಂದಿದೆ. ಇದರಲ್ಲಿ ಯತಿಯಾಗಿ ಬಿಡಿಸಿದರೆ 'ಪ್ರಘಟನ-ಸ(ಘ)ಧಟಾತ್ । ಕಾರ-ಸಂಘೃಷ್ಯಮಾಣ' ಎಂದು ಯತಿಯನ್ನು ಬಿಡಿಸಿಕೊಳ್ಳಬೇಕು.

ಇದೇ ರೀತಿ ಆರನೇ ಶ್ಲೋಕದ ಕಡೆಯ ಚರಣದ ಪಾಠವು ಹೀಗಿದೆ— ಕ್ಷೀರಾಂಭೋಧಿರ್ವಿಭಿಂದ್ಯಾದ್ಭವದನಭಿಮತಂ........ ಇತ್ಯಾದಿ ಇದನ್ನು— ಕ್ಷೀರಾಂಭೋಧಿರ್ವಿಭಿಂದ್ಯಾದ್ । ಭವದನಭಿಮತಂ। ಹೀಗೆ ಬಿಡಿಸಿಕೊಂಡು ಹೇಳಿದರೆ ಸುಲಭವಾಗುತ್ತದೆ.

ಹನ್ನೊಂದನೇ ಶ್ಲೋಕದಲ್ಲಿ ಅನೇಕ ತಕಾರ ಟಕಾರಗಳು ಸಾಲುಸಾಲಾಗಿ ಬರುವುದರಿಂದ ಅಭ್ಯಾಸವಿಲ್ಲದೆ ಅದನ್ನು ಪಠಿಸುವುದು ಬಹಳ ತೊಡಕಾಗುತ್ತದೆ. ಆದಕಾರಣ ಆ ಶ್ಲೋಕವನ್ನು ಈ ರೀತಿ ವಿಭಾಗ ಮಾಡಿಕೊಂಡು ಹೇಳಿದರೆ, ಎಂದರೆ ಅಭ್ಯಾಸ ಮಾಡಿದರೆ ಸುಲಭವಾಗುತ್ತದೆ: ಉತ್ತಪ್ತಾ-ತ್ಯುತ್ಕಟ-

ತ್ವಿಟ್ । ಪ್ರಕಟ-ಕಟಕಟ । ಧ್ವಾನ-ಸಂಘಟ್ಟ-ನೋದ್ಯದ್ ॥ ವಿದ್ಯುದ್-ವ್ಯೂಢ-ಸ್ಫುಲಿಂಗ । ಪ್ರಕರ-ವಿಕಿರಣೋತ್-' ಕ್ವಾಥಿತೇ ಬಾಧಿತಾಂಗಾನ್ ॥

ಇದೇ ರೀತಿ ಹದಿಮೂರನೇ ಶ್ಲೋಕದ ಉತ್ತರಾರ್ಧದಲ್ಲಿ ಈ ರೀತಿ ಯತಿವಿಭಾಗ ಮಾಡಿಕೊಳ್ಳಬೇಕು — ಪೂಯಾಸೃಜ್-ಮೂತ್ರವಿಷ್ಠಾ-। `ಕ್ರಿಮಿ-ಕುಲಕಲಿಲೇ । ತತ್‌ಕ್ಷಣ-ಕ್ಷಿಪ್ತ-ಶಕ್ತ್ಯಾ-॥ ದ್ಯಸ್ತ್ರ-ವ್ರಾತಾರ್ದಿತಾಂ-ಸ್ತ್ವದ್-। ದ್ವಿಷ ಉಪಜಿಹತೇ । ವಜ್ರಕಲ್ಪಾ ಜಲೂಕಾಃ ॥

ಹದಿನೆಂಟನೇ ಶ್ಲೋಕದಲ್ಲಿ 'ಪ್ರಾಕ್ಪಂಚಾಶತ್ಸಹಸ್ರೈರ್ವ್ಯವಹಿತಮಮಿತಂ' ಎಂಬುದನ್ನು ಪ್ರಾಕ್-ಪಂಚಾಶತ್-ಸಹಸ್ರೈರ್-। ವ್ಯವಹಿತ-ಮಮಿತಂ ಎಂದು ಬಿಡಿಸಿಕೊಳ್ಳಬೇಕು. ಇದೇ ಪ್ರಕಾರ ಇಪ್ಪತ್ತನೇ ಶ್ಲೋಕದಲ್ಲಿ 'ಪಟು-ರ್ಮುಷ್ಟಿರಿಷ್ಟಂ' ಎಂಬಲ್ಲಿ 'ಪಟುರ್-ಮುಷ್ಟಿರಿಷ್ಟಂ' ಎಂದೂ, ೨೨ರಲ್ಲಿ 'ಶೋಚದ್ವಿಪ್ರಾನು....' ಎಂಬಲ್ಲಿ 'ಶೋಚದ್-ವಿಪ್ರಾನು' ಎಂದೂ, ೨೬ರಲ್ಲಿ 'ವಿಶೇಷಾದ್-। ದ್ವಿವಚನ-ವಿಷಯಾ-। ಭ್ಯಾಮುಭಾಭ್ಯಾ-ಮಮೂಭ್ಯಾಂ' ಎಂದೂ ಪ್ರಸಂಗೋಚಿತವಾಗಿ ಬಿಡಿಸಿಕೊಂಡು ಅಭ್ಯಾಸ ಮಾಡಿದರೆ ಪ್ರಾರಂಭ ದಲ್ಲಿ ಸ್ವಲ್ಪ ಕಷ್ಟವಾಗಿ ತೋರಿದರೂ ಕೊನೆಕೊನೆಗೆ ಸುಲಭವೇ ಆಗಿಬಿಡು ತ್ತದೆ. ಇಷ್ಟು ಹೇಳಿ ಈ ವಿಚಾರವನ್ನು ಮುಗಿಸುವೆನು.

ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ
ಶ್ರೀಲಕ್ಷ್ಮೀನೃಸಿಂಹಾಯ ನಮಃ

# ಶ್ರೀ ಹರಿವಾಯುಸ್ತುತಿಃ

## ಶ್ರೀಹರಿವಾಯೂಭಯಪರವಿಸ್ತೃತವ್ಯಾಖ್ಯೋಪೇತಾ

---

## ವ್ಯಾಖ್ಯಾಲೇಖಕನ ಮಂಗಳಾಚರಣೆ

ಲಕ್ಷ್ಮೀನೃಸಿಂಹಮಾರ್ತಾಂಡಃ ಪ್ರತ್ಯೂಹತಿಮಿರಾಪಹಃ ।
ಆನಂದತೀರ್ಥಹೃತ್ಪದ್ಮ—ಸದಾನಂದಪ್ರವರ್ಧನಃ ॥ ೧ ॥

ಜ್ಞಾನಾನಂದಗುಣಜ್ಯೋತಿ—ರ್ನಿರಸ್ತಾಶೇಷಶಾತ್ರವಃ ।
ಆಶ್ರಿತಾಭೀಷ್ಟಮಂದಾರೋ ಭಾಸತಾಂ ಮೇ ಹೃದಂಬರೇ ॥ ೨ ॥

(ಅರ್ಥ) ಶ್ರೀಲಕ್ಷ್ಮೀನೃಸಿಂಹನೆಂಬ ಸೂರ್ಯನು ವಿಘ್ನಗಳೆಂಬ ಕಗ್ಗತ್ತಲನ್ನು ನಿರ್ಮೂಲ ಮಾಡುತ್ತಾನೆ. ಆನಂದತೀರ್ಥರ ಹೃದಯವೆಂಬ ಕಮಲವನ್ನು ಸದಾ ಉತ್ತಮ (ಸತ್) ವಾದ ಆನಂದವನ್ನು ಕೊಡುತ್ತಾ ಉಲ್ಲಾಸಗೊಳಿಸುತ್ತಿರುತ್ತಾನೆ. ಜ್ಞಾನಾನಂದಾದಿ ಅನಂತಗುಣಗಳೇ ಇವನ ಜ್ಯೋತಿ. ಇವನು ಸಕಲ ಶತ್ರುಗಳನ್ನೂ ನಾಶಮಾಡುತ್ತಾನೆ ತನ್ನನ್ನು ಆಶ್ರಯಿಸಿದ ಭಕ್ತರ ಇಷ್ಟಾರ್ಥಗಳನ್ನು ನೆರವೇರಿಸುವುದರಲ್ಲಿ ಕಲ್ಪವೃಕ್ಷದಂತಿದ್ದಾನೆ. ಇಂಥಾ ಲಕ್ಷ್ಮೀನೃಸಿಂಹನೆಂಬ ಸೂರ್ಯನು ನನ್ನ ಹೃದಯವೆಂಬ (ಮನಸ್ಸೆಂಬ) ಆಕಾಶದಲ್ಲಿ ಪ್ರಕಾಶಿಸುತ್ತಿರಲಿ.

ಪ್ರಣಮ್ಯ ಶ್ರೀಮದಾನಂದ—ತೀರ್ಥಾದಿ ಗುರುಶೇಖರಾನ್ ।
ವಾಯುಸ್ತುತಿಂ ತು ವ್ಯಾಖ್ಯಾಸ್ಯೇ ಹರಿವಾಯೂಭಯಾತ್ಮನಾ ॥ ೩ ॥

(ಭಾವಾರ್ಥ) ಶ್ರೀಮನ್ಮಧ್ವಾಚಾರ್ಯರು, ಅವರ ಸಾಕ್ಷಾಚ್ಛಿಷ್ಯರಾದ ಶ್ರೀಮತ್ಪದ್ಮನಾಭತೀರ್ಥಾದಿ ಗುರುಗಳು, ಶ್ರೀಮಟ್ಟೀಕಾಕೃತ್ಪಾದರು, ನನ್ನ

ಕುಲಗುರುಗಳಾದ ಶ್ರೀಮದ್ವ್ಯಾಸರಾಜರು, ಕಲಿಕಲ್ಪವೃಕ್ಷರಾದ ಶ್ರೀಮದ್-ರಾಘವೇಂದ್ರಸ್ವಾಮಿಗಳೇ ಮೊದಲಾದ ಸಕಲ ಗುರುಗಳನ್ನೂ ನನ್ನ ವಿದ್ಯಾ-ಗುರುಗಳನ್ನೂ ಭಕ್ತಿಪೂರ್ವಕ ನಮಸ್ಕಾರ ಮಾಡಿ ಧ್ಯಾನಿಸಿ ಕ್ರಮಪ್ರಾಪ್ತವಾದ ಮುಖ್ಯಭಾಗವಾದ ಶ್ರೀಹರಿವಾಯುಸ್ತುತಿಗೆ ಶ್ರೀಹರಿಪರವಾಗಿಯೂ ವಾಯುಪರವಾಗಿಯೂ ಎರಡೂ ಅರ್ಥವನ್ನು ತಿಳಿಯಪಡಿಸುತ್ತಾ ವ್ಯಾಖ್ಯಾನ ಬರೆಯುತ್ತೇನೆ.

ಛಲಾರೀ ವಿಶ್ವಪತ್ಯಾದಿ—ಪೂರ್ವಟೀಕಾಃಸಮೀಕ್ಷ್ಯ ವೈ।
ಸಾರಮುದ್ಧೃತ್ಯ ವಿಸ್ತಾರಃ ಕ್ರಿಯತೇ ಹಿ ಯಥಾಮತಿ ॥ ೪ ॥

(ಅರ್ಥ) ಛಲಾರೀಯ ಟೀಕೆ, ವಿಶ್ವಪತಿತೀರ್ಥರ ಟೀಕೆ, ವೇದಾತ್ಮ-ಯತಿಗಳ ಕವಿಕರ್ಣಾಮೃತ ಟೀಕೆ, ಪುಂಗನೂರು ರಾಘವೇಂದ್ರಾಚಾರ್ಯರ ಕನ್ನಡ ಟೀಕೆ, ಕೌಜಲಗಿ ಬಂಡ್ಯಾಚಾರ್ಯರ ಅರ್ಥ, ಉಡುಪಿಯ ಕೃಷ್ಣ ಮುದ್ರಣಾಲಯದವರ ಅರ್ಥ ಮೊದಲಾದ ದೊರಕಿದ ಸಕಲ ಪೂರ್ವಟೀಕೆಗಳನ್ನೂ ಚೆನ್ನಾಗಿ ಅಧ್ಯಯನ ಮಾಡಿ ಅವುಗಳ ಸಾರಭಾಗವನ್ನು ತೆಗೆದು ಅದನ್ನೇ ಯಥಾಮತಿ ವಿಸ್ತರಿಸಿ ಹೇಳುವೆನು.

ನಖಸ್ತುತ್ಯರ್ಥ ಏವಾದೌ ಪೂರ್ವೋಕ್ತಃ ಸಂಗ್ರಹೀಷ್ಯತೇ ।
ತತ್ಸ್ಮೃತೇಃ ಸಿದ್ಧಿಹೇತುತ್ವಾತ್ ಫಲಾಧಿಕ್ಯಾಚ್ಚ ಶಾಸನಾತ್ ॥ ೫ ॥

(ಅರ್ಥ) ಈಗ ವಾಯುಸ್ತುತಿಯ ಶ್ಲೋಕಗಳ ಅರ್ಥ ಪ್ರಾರಂಭಿಸುವುದಕ್ಕೆ ಮೊದಲಲ್ಲೇ ನಖಸ್ತುತಿಯ ಅರ್ಥವನ್ನು ಹಿಂದೆ ಹೇಳಿದ್ದನ್ನೇ ಸಂಗ್ರಹಿಸಿ ಹೇಳುವೆನು. ಏಕೆಂದರೆ ಶ್ರೀಮದಾಚಾರ್ಯರೇ ವಾಯುಸ್ತುತಿಯ ಫಲ ಸಿದ್ಧಿಸಬೇಕಾದರೆ ನಖಸ್ತುತಿಯನ್ನು ಹೇಳಿಕೊಳ್ಳಲೇಬೇಕೆಂದು ಶಾಸನ ಮಾಡಿದ್ದಾರೆ. ಜೊತೆಗೆ ಆಚಾರ್ಯರ ಉಕ್ತಿಯನ್ನು ಮತ್ತೆಮತ್ತೆ ಸ್ಮರಿಸಿಕೊಂಡರೆ ಸಿದ್ಧಿಯೂ ಬೇಗ ಆಗುವುದಲ್ಲದೆ ಫಲಾಧಿಕ್ಯವೂ ಉಂಟು. ಆದ ಕಾರಣ ಮೊದಲು ನಖಸ್ತುತಿಯ ಪ್ರಥಮ ಶ್ಲೋಕವನ್ನು ಪಠಿಸಿ ಅದರ ಅರ್ಥವನ್ನು ಹೇಳುವೆನು.

ಶ್ರೀಗುರುಭ್ಯೋ ನಮಃ   ಹರಿಃ ಓಂ

**ಪಾಂತ್ವಸ್ಮಾನ್ ಪುರುಹೂತವೈರಿ-ಬಲವನ್-**
**ಮಾತಂಗಮಾದ್ಯದ್ ಘಟಾ-**
**ಕುಂಭೋಚ್ಚಾದ್ರಿವಿಪಾಟನಾಧಿಕಪಟು-**
**ಪ್ರತ್ಯೇಕವಜ್ರಾಯಿತಾಃ ।**
**ಶ್ರೀಮತ್ ಕಂಠೀರವಾಸ್ಯ-ಪ್ರತತಸುನಖರಾ**
**ದಾರಿತಾರಾತಿ, ದೂರ-**
**ಪ್ರಧ್ವಸ್ತಧ್ವಾಂತ, ಶಾಂತ-ಪ್ರವಿತತಮನಸಾ**
**ಭಾವಿತಾ ನಾಕಿವೃಂದೈಃ (ಭೂರಿಭಾಗ್ಯೈಃ) ॥ ೧ ॥**

## ಶ್ಲೋಕಕ್ಕೆ ಸಂಕ್ಷಿಪ್ತ ವಿವರಣೆ

**ಪ್ರಧಾನವಾಕ್ಯ.** ಈ ಶ್ಲೋಕದಲ್ಲಿ ಮೂರನೆಯ ಪಾದದಲ್ಲಿರುವ **ಶ್ರೀಮತ್ಕಂಠೀರವಾಸ್ಯಪ್ರತತಸುನಖರಾಃ** ಎಂಬುದೇ ಕರ್ತೃಪದ. ಪ್ರಾರಂಭದಲ್ಲಿರುವ **ಪಾಂತು** ಎಂಬುದು ಕ್ರಿಯಾಪದ; ಅದರ ಮುಂದಿರುವ **ಅಸ್ಮಾನ್** ಕರ್ಮಪದ. ಹೀಗೆ 'ಶ್ರೀಮತ್....ಸುನಖರಾಃ ಅಸ್ಮಾನ್ ಪಾಂತು' ಎಂಬುದೇ ಪ್ರಧಾನವಾಕ್ಯ. ಇದಕ್ಕೆ ಸಾಮಾನ್ಯವಾಗಿ 'ನರಸಿಂಹನ ಉಗುರುಗಳು ನಮ್ಮನ್ನು ಕಾಪಾಡಲಿ' ಎಂದು ಸರಳಾರ್ಥ. ಕರ್ತೃಪದದಲ್ಲಿ **ಶ್ರೀಮತ್-ಕಂಠೀರವಾಸ್ಯ** ಎಂದೇ ಬೇರೆ ಪದವಾಗಿ ಹೇಳುವುದಕ್ಕೂ ಬರುತ್ತದೆ. ಆಗ ಅದು ಸಂಬೋಧನೆಯಾಗುತ್ತದೆ. ಅದಕ್ಕೆ—ಕಂಠೀರವ-ಸಿಂಹದಂತೆ, ಆಸ್ಯ-ಮುಖವುಳ್ಳ, ಹೇ, ನೃಸಿಂಹನೇ ಎಂದು ನರಸಿಂಹನನ್ನು ಪ್ರತ್ಯಕ್ಷವಾಗಿ ಸಂಬೋಧಿಸಿ ಹೇಳಿದಂತೆ ಆಗುತ್ತದೆ. ಶ್ರೀಮದಾಚಾರ್ಯರು ಜಾತಾಪರೋಕ್ಷಿಗಳೂ ನಿತ್ಯಾಪರೋಕ್ಷಿಗಳೂ ಆದ್ದರಿಂದ ಅವರಿಗೆ ನರಸಿಂಹದೇವರು ಸದಾ ಸ್ಪಷ್ಟವಾಗಿಯೇ ಕಾಣಿಸುತ್ತಾ ಇರುತ್ತಾರೆ. ಆದಕಾರಣ ಆಚಾರ್ಯರು ನರಸಿಂಹನನ್ನು ಪ್ರತ್ಯಕ್ಷವಾಗಿ ಕಾಣುತ್ತಿದ್ದುದರಿಂದ ಹೀಗೆ ಸಂಬೋಧಿಸಿ ಹೇಳಿದ್ದು ಯುಕ್ತವಾಗಿಯೇ ಇದೆ. ಹೀಗೆ ಸಂಬೋಧನೆಯಾಗಿ ಹೇಳಿದರೆ ಸುನಖರಾಃ ಎಂಬುದರ ಜೊತೆಗೆ ತೇ–ನಿನ್ನ ಎಂಬ ಪದ ಅಧ್ಯಾಹಾರ ಮಾಡಿ-

ಕೊಳ್ಳಬೇಕಾಗುತ್ತದೆ — ಹೇ ನೃಸಿಂಹಸ್ವಾಮಿ! ನಿನ್ನ ಉಗುರುಗಳು ನಮ್ಮನ್ನು ಕಾಪಾಡಲಿ ಎಂದು ಅರ್ಥವಾಗುತ್ತದೆ. ಶ್ರೀಮದಾಚಾರ್ಯರಲ್ಲದೆ ಮಿಕ್ಕವರಿಗೆಲ್ಲ ನರಸಿಂಹದೇವರು ಸದಾ ಪ್ರತ್ಯಕ್ಷವಾಗಿ ಕಾಣುವುದಿಲ್ಲವಾದ ಕಾರಣ ಕಂಠೀರವಾಸ್ಯ ಎಂಬುದನ್ನು ಬೇರೆ ಮಾಡದೆ ಒಂದೇ ದೊಡ್ಡಪದವೆಂದು ಭಾವಿಸಬೇಕು.

**'ಶ್ರೀಮತ್' ಎಂಬುದರ ವಿವರಣೆ.** ಕಂಠೀರವಾಸ್ಯನಿಗೆ ಕೊಟ್ಟಿರುವ ಶ್ರೀಮತ್ ಎಂಬ ವಿಶೇಷಣ ಅನೇಕ ವಿಚಾರಗಳನ್ನು ಸೂಚಿಸುತ್ತದೆ. ಕೋಶಗಳಲ್ಲಿ ಶ್ರೀಶಬ್ದಕ್ಕೆ ಮಂಗಳ, ಸಂಪತ್ತು, ಭಾಗ್ಯ, ಕೀರ್ತಿ ಮತ್ತು ಲಕ್ಷ್ಮೀದೇವಿ ಎಂದು ಅನೇಕಾರ್ಥಗಳನ್ನು ಹೇಳಿದೆ. ಶ್ರೀಕಾರದ ಮುಂದಿರುವ **ಮತ್** (ಮತುಪ್) ಪ್ರತ್ಯಯವು ಅತಿಶಯವನ್ನೂ ನಿತ್ಯಯೋಗವನ್ನೂ ತೋರಿಸುವುದರಿಂದ **ಶ್ರೀಮತ್** ಎಂಧರೆ ನರಸಿಂಹದೇವರು ನಿತ್ಯದಲ್ಲೂ ಅಪರಿಮಿತವಾಗಿ ಮಂಗಳಸ್ವರೂಪನೆಂದೂ ( ಮಂಗಳಾನಾಂ ಚ ಮಂಗಳಂ ) ನಿರವಧಿಕಾನಂತೈಶ್ವರ್ಯವುಳ್ಳವನೆಂದೂ ಸಕಲ ವೇದಾದಿ ಸಚ್ಛಾಸ್ತ್ರಪ್ರತಿಪಾದ್ಯತಾರೂಪ ಅಸದೃಶಕೀರ್ತಿಯುಳ್ಳವನೆಂದೂ, ಭಾಗ್ಯದೇವತೆಯಾದ ಸಾಕ್ಷಾಲ್ಲಕ್ಷ್ಮೀದೇವಿಗೆ ಆ ಭಾಗ್ಯವನ್ನು ಕೊಟ್ಟ ಸ್ವಾಮಿ (ಒಡೆಯ) ಎಂದೂ ಅರ್ಥವಾಗುತ್ತದೆ. ಅಷ್ಟೇ ಅಲ್ಲದೆ ಶ್ರೀಶಬ್ದಗ್ರಹಣ ಮಾಡಿದ್ದರಿಂದಲೇ ನರಸಿಂಹನ ಜೊತೆಯಲ್ಲೇ ಲಕ್ಷ್ಮೀದೇವಿಯ ಸ್ಮರಣೆಯನ್ನೂ ಮಾಡಿದಂತೆಯೇ ಆಯಿತು. ಏಕೆಂದರೆ ಸಕಲ ವಾಙ್ಮನೋನಿಯಾಮಕಳೂ ಭಾಗ್ಯದೇವತೆಯೂ ಆದ ರಮಾದೇವಿಯನ್ನು ಗ್ರಂಥಾರಂಭದಲ್ಲಿ ಸ್ಮರಿಸುವುದು ಯುಕ್ತವಾಗಿದ್ದರೂ ಭಗವದ್ಗೀತೆಯಲ್ಲಿ (೧೨ನೇ ಅ., ೫ ಶ್ಲೋ.) ಅವ್ಯಕ್ತೋಪಾಸನೆಯು ಕ್ಲೇಶಾಧಿಕವೆಂದು ನಿಷಿದ್ಧವಾದ್ದರಿಂದ ಭಗವಂತನ ಜೊತೆಯೇ ಸೇರಿಸಿ ಮಾಡಿದ್ದಾರೆಂದು ತಿಳಿಯಬೇಕು.

**ನಖಗಳ ವಿಶೇಷಣಗಳು.** ನರಸಿಂಹನ ಉಗುರುಗಳು ಸಾಮಾನ್ಯ ಉಗುರುಗಳಂತೆ ಅಲ್ಲ, ಅವುಗಳ ಮಹಿಮೆಯೇ ವಿಚಿತ್ರವಾಗಿದೆಯೆಂಬುದನ್ನು ಶ್ರೀಮದಾಚಾರ್ಯರು ಅನೇಕ ಪ್ರಕಾರಗಳಿಂದ ಸೂಚಿಸಿ ತೋರಿಸಿಕೊಟ್ಟಿದ್ದಾರೆ. ನಖ-ನಖರ ಎರಡಕ್ಕೂ ಉಗುರೇ ಎಂದು ಅರ್ಥವಿದ್ದರೂ ಆಚಾರ್ಯರು

ನಖರ ಎಂಬ ಶಬ್ದವನ್ನೇ ಆರಿಸಿಕೊಂಡರು. ಈ ಎರಡು ಶಬ್ದಗಳಿಗೂ ನಪುಂಸಕಲಿಂಗದಲ್ಲೂ ಪ್ರಯೋಗವಿದ್ದರೂ ಇಲ್ಲಿ 'ನಖರಾಃ' ಎಂದು ಪುಲ್ಲಿಂಗದಲ್ಲೇ ಹೇಳಿದ್ದಾರೆ. ಜೊತೆಗೆ 'ಸು' ಎಂಬ ಉಪಪದವನ್ನೂ 'ಪ್ರ–ತತ' ಎಂಬ ವಿಶೇಷಣವನ್ನೂ ಸೇರಿಸಿದ್ದಾರೆ. ಇದರಿಂದ ಏನು ಹೇಳಿ ದಂತಾಯಿತೆಂದರೆ ೧) ಸಾಮಾನ್ಯವಾದ ಉಗುರು ಇಂದ್ರಿಯವಲ್ಲ, ಅದನ್ನು ಕತ್ತರಿಸಿದರೆ ರಕ್ತ ಬರುವುದಿಲ್ಲ. ಆದ್ದರಿಂದಲೇ ಅದಕ್ಕೆ ಖ–ಇಂದ್ರಿಯವು, ನ–ಅಲ್ಲ—ನಖ ಎಂದು ಹೆಸರು. ಆದರೆ ನರಸಿಂಹನಲ್ಲಿ ಅನ್ವಯಿಸುವಾಗ ಇದರ ವ್ಯುತ್ಪತ್ತಿಯೇ ಬೇರೆ ಆಗುತ್ತದೆ. ಹೇಗೆಂದರೆ **ನಕಾರವು** ನಿಷೇಧ-ವಾಚಕ ; ಆದಕಾರಣ ನರಸಿಂಹನು ಬೇರೆ ಯಾರಂತೆಯೂ ಅಲ್ಲ—ಅರ್ಥಾತ್ ರಮಾಬ್ರಹ್ಮಾದಿ ಸಕಲ ಜಗತ್ತಿಗಿಂತಲೂ ಭಿನ್ನನೂ ವಿಲಕ್ಷಣನೂ ಆಗಿದ್ದಾನೆಂಬುದನ್ನು ಈ 'ನ' ತೋರಿಸುತ್ತದೆ. ಇದು ಉಗುರಿಗೂ ಅನ್ವಯಿಸುತ್ತದೆ. ಖ ಶಬ್ದಕ್ಕೆ ಛಾಂದೋಗ್ಯಭಾಷ್ಯದಲ್ಲಿ (೬/೧೦/೫) ಬಲಜ್ಞಾನ-ಸ್ವರೂಪನೆಂದು ಅರ್ಥ ಹೇಳಿದರೆ ಬೃಹದ್ಭಾಷ್ಯದಲ್ಲಿ (೭/೧/೨) ಪ್ರಕಾಶ-ಸ್ವರೂಪನೆಂದೂ, ಸುಖರೂಪನೆಂದೂ, ಖ್ಯಾತನೆಂದೂ ಅರ್ಥ ಹೇಳಿದೆ. ರಮು ಕ್ರೀಡಾಯಾಂ ಎಂಬ ಧಾತುವಿನಿಂದ ನಿಷ್ಪನ್ನವಾಗುವುದರಿಂದ **ರಕಾರವು** ರತಿ ಅಥವಾ ಆನಂದವನ್ನೂ ರಹ ತ್ಯಾಗೇ ಎಂಬ ಧಾತುವಿನ ರೂಪವಾಗಿ ನಿರ್ದೋಷತ್ವವನ್ನೂ ಸೂಚಿಸುತ್ತದೆ. ಹೀಗೆ ನರಸಿಂಹನ ಉಗುರುಗಳು ಅಪ್ರಾಕೃತವಾದುವು ಎಂಬುದನ್ನು ಶಬ್ದಪ್ರಯೋಗದಿಂದಲೇ ಸೂಚಿಸಿದರು. (೨) ಪುಲ್ಲಿಂಗಪ್ರಯೋಗದಿಂದ ನರಸಿಂಹನ ಉಗುರಿಗೂ ನರಸಿಂಹನಿಗೂ ಅಭೇದವನ್ನು ಸೂಚಿಸಿ ದೇಹ–ದೇಹಿ, ಆಶ್ರಯಾಶ್ರಯಿ ಇತ್ಯಾದಿ ಯಾವ ಭೇದವಿಲ್ಲವೆಂಬುದನ್ನೂ, ನರಸಿಂಹನಿಗೂ ಅವನ ಉಗುರುಗಳಿಗೂ ಅತ್ಯಂತಾ-ಭೇದವನ್ನೂ ಸೂಚಿಸಿದರು. (೩) ನರಸಿಂಹನ ಉಗುರುಗಳು ಕೈಗಳಲ್ಲಿ ಅಥವಾ ಕಾಲುಗಳಲ್ಲಿ ಮಾತ್ರ ಇದ್ದಂತೆ ಕಂಡರೂ ಅವು ವಿಶ್ವವ್ಯಾಪಿ ಯಾಗಿವೆ ಎಂಬುದನ್ನೂ ಹತ್ತು-ಇಪ್ಪತ್ತು ಮಾತ್ರ ಇದ್ದಂತೆ ಕಂಡರೂ ವಸ್ತುತಃ ಅವು ಅನಂತವಾಗಿ ಅಪಾರವಾಗಿದೆಯೆಂಬುದನ್ನೂ ಪ್ರತತ ಎಂಬ ವಿಶೇಷಣ ತೋರಿಸುತ್ತದೆ. (೪) ಅನಂತವಾಗಿ ಅಪಾರವಾಗಿ ಸರ್ವತ್ರವ್ಯಾಪ್ತ

ವಾಗಿದ್ದರೂ ಅವು ಮಿತವಾಗಿ ಅಲ್ಪಸಂಖ್ಯೆಯುಳ್ಳಂತೆ ಏಕೆ ಅಥವಾ ಹೇಗೆ ಕಾಣಿಸುತ್ತದೆ ? ಎಂದರೆ 'ವಿಶೇಷ'ವೆಂಬ ಮಹಾಶಕ್ತಿಯಿಂದಲೇ ಹೀಗೆ ಕಾಣಿಸುತ್ತದೆಯೆಂಬುದನ್ನು 'ಸು' ಎಂಬ ಉಪಪದ ತೋರಿಸುತ್ತದೆಯೆಂದು ಹೇಳಬಹುದು. ಕೆಲವರು ನರಸಿಂಹದೇವರನ್ನು ನೋಡಿ ಉಗ್ರನೆಂದು ಹೆದರಿ-ಕೊಳ್ಳುವುದುಂಟು. ಅದು ಕೇವಲ ಅವರ ಭ್ರಮೆ ; ನಮ್ಮ ಸ್ವಾಮಿ ದಯಾಮಯ, ಕರುಣಾಸಮುದ್ರನೆಂದು ತೋರಿಸುವುದಕ್ಕಾಗಿ ಅವನ ಉಗುರು ಗಳು **ಖರ**–ಉಗ್ರಗಳು, ತೀಕ್ಷ್ಣಗಳು, **ನ**–ಅಲ್ಲ ಎಂದು ತೋರಿಸುವುದ ಕ್ಕಾಗಿಯೂ **ನಖರ**ಗಳೆಂದೇ ಹೇಳಿದ್ದಾರೆ. ಹೀಗೆ ನರಸಿಂಹನ ಉಗುರುಗಳು ಮಹಾ ಮಹಿಮೋಪೇತವಾದುದರಿಂದ ಅವುಗಳನ್ನೇ ಪ್ರಾರಂಭದಲ್ಲಿ ಪ್ರಾರ್ಥಿ-ಸುವುದು ಸೂಕ್ತವಾಗಿದೆಯೆಂದು ಹೇಳಿದಂತಾಯಿತು.

**ಕರ್ಮಪದದ ವಿವರಣೆ**—ಇಂಥಾ ನಖಗಳು **ಅಸ್ಮಾನ್** ಎಂದರೆ 'ನಮ್ಮನ್ನು' ಕಾಪಾಡಲಿ ಎಂದು ಪ್ರಾರ್ಥಿಸಿದ್ದಾರೆ. ಇಲ್ಲಿ ಅಸ್ಮಾನ್ ಎಂಬು ದಕ್ಕೆ ಮೂರು ವಿಧವಾಗಿ ಅರ್ಥ ಹೇಳಬಹುದು. ೧) 'ಗುರಾವಾತ್ಮನಿ ಬಹುವಚನಮ್' ಎಂದಿರುವುದರಿಂದ ನನ್ನನ್ನು ಎಂಬ ಏಕವಚನಾರ್ಥದಲ್ಲೇ 'ನಮ್ಮನ್ನು' ಎಂದು ಹೇಳಿದ್ದಾರೆ ಎಂಬುದು ಒಂದು ಅರ್ಥ. ೨) ಬಹು-ವಚನಮಾದ್ಯರ್ಥೇ' ಎಂಬ ರೂಢಿಯಿಂದ ಅಸ್ಮಾನ್ ಎಂದರೆ ನಾನೇ ಮೊದಲಾದ ಸಕಲ ವಿಷ್ಣುಭಕ್ತರನ್ನು ಎಂದು ಆದ್ಯರ್ಥದಲ್ಲಿ ಬಹುವಚನ ಬಂದಿದೆಯೆಂದೂ ಹೇಳಬಹುದು. ೩) ಅಥವಾ ಏತೇ ಚ ಅಹಂ ಚ ವಯಮ್। ತಾನ್–ಅಸ್ಮಾನ್ ಎಂದರೆ ಸಕಲ ಶಿಷ್ಯರಾದ ಭಕ್ತರ ಪರಿವಾರವೂ ಸೇರಿದ ನಾನು ಎಂಬ ಅರ್ಥದಲ್ಲಿ ಏಕಶೇಷವೃತ್ತಿಯಿಂದ ನಮ್ಮನ್ನು ಎಂದು ಹೇಳಿದ್ದಾ ರೆಂದೂ ಅರ್ಥಮಾಡುವುದು ಸಾಧ್ಯ. ಈ ರೀತಿ ಶಿಷ್ಯರನ್ನೂ ಭಕ್ತರನ್ನೂ ತಮ್ಮ ಜೊತೆ ಸೇರಿಸಿಕೊಂಡದ್ದರಿಂದ ಆಚಾರ್ಯರ ಶಿಷ್ಯವಾತ್ಸಲ್ಯವೂ ಕಾರುಣ್ಯವೂ ಅಭಿವ್ಯಕ್ತವಾಗುತ್ತದೆ.

**ಕ್ರಿಯಾಪದದ ವಿವರಣೆ**—೧) ಈ ಶ್ಲೋಕಾರಂಭದಲ್ಲೇ ಇರುವ **ಪಾಂತು** ಎಂಬ ಕ್ರಿಯೆಗೆ 'ರಕ್ಷಿಸಲಿ' ಎಂದರ್ಥವಾಗುತ್ತದೆ. ಆದರೆ ರಕ್ಷಣೆಯು ಭಯದಿಂದ ಹೆದರಿದವನಿಗೆ (ಭೀತನಿಗೆ) ಅಥವಾ ದುಃಖಾರ್ತನಿಗೆ (ಸಂಕಟಕ್ಕೆ

ಸಿಕ್ಕಿದವನಿಗೆ) ಮಾತ್ರ ಕೊಡುತ್ತದೆ. ಪ್ರಸ್ತುತ ಶ್ರೀಮದಾಚಾರ್ಯರಿಗೆ ಯಾವ ಭಯವೂ ಇಲ್ಲ, ದುಃಖ ಮೊದಲೇ ಇಲ್ಲ. ಆದರೂ 'ಪಾಂತು' ಎಂದು ಪ್ರಾರ್ಥಿಸುವುದು ಕೇವಲ ಭಗವತ್ಪ್ರೀತ್ಯರ್ಥ ಎಂದು ತಿಳಿಯಬೇಕು. ಅವರು ನಿಷ್ಕಾಮಿಗಳಾದರೂ ಸದಾ ಅವರ ಮನಸ್ಸು ಭಗವಂತನಲ್ಲೇ ಲೀನ ವಾಗಿರುವುದರಿಂದ ಇದಕ್ಕೆ ಭಗವತ್ಪ್ರೀತಿಯೇ ಫಲ. ೨) ಅಥವಾ ತಮ್ಮ ಭಕ್ತರೂ ಶಿಷ್ಯರೂ ಅನೇಕ ರೀತಿ ಕಷ್ಟಕಾರ್ಪಣ್ಯಗಳಿಗೆ ಸಿಲುಕಿರುವುದನ್ನು ಕಂಡು ಅವರ ಪರವಾಗಿ ಆಚಾರ್ಯರೇ ಅವರ ಭಯವನ್ನು ಪರಿಹರಿಸಲಿ, ಅವರ ದುಃಖಗಳನ್ನೂ ಅನಿಷ್ಟಗಳನ್ನೂ ನಿವಾರಿಸಿ ರಕ್ಷಿಸಲಿ ಎಂದು ನರಸಿಂಹ ನನ್ನು ಪ್ರಾರ್ಥಿಸಿದ್ದಾರೆಂದು ತಿಳಿಯಬೇಕು. ಹಾಗೆ ದುಖದಿಂದ ಸಂತಪ್ತರಾದ ಜನಗಳಿಗೆ ಆಶ್ವಾಸನಕೊಡುವುದಕ್ಕಾಗಿಯೇ ಕ್ರಿಯಾಪದದಿಂದಲೇ ಶ್ಲೋಕವನ್ನು ಆರಂಭಿಸಿದ್ದಾರೆಂದೂ ತಿಳಿಯ ಬೇಕು. ಇದರಿಂದಲೂ ಪುನಃ ಆಚಾರ್ಯರ ಕಾರುಣ್ಯವೂ ಶಿಷ್ಯವಾತ್ಸಲ್ಯವೂ ಅಭಿವ್ಯಕ್ತವಾಗುತ್ತದೆ. ೩) ಅಥವಾ ತಮಗೆ ಯಾವ ಪ್ರಯೋಜನವಿಲ್ಲದಿದ್ದರೂ ಲೋಕಶಿಕ್ಷಣಾರ್ಥ, ಎಲ್ಲರೂ ನರಸಿಂಹ ನನ್ನು ಸರ್ವಭಾವೇನ ಧ್ಯಾನಿಸಲಿ ಎಂಬ ಮೇಲ್ಪಂಕ್ತಿಯನ್ನು ಹಾಕಿ-ಕೊಡುವುದಕ್ಕಾಗಿ, ಹೀಗೆ ಪ್ರಾರ್ಥಿಸಿದ್ದಾರೆಂದೂ ಹೇಳಬಹುದು.

**ರಕ್ಷಣೆಯ ಎರಡು ಬಗೆ**—'ಪಾಂತು' ಎಂದು ಪ್ರಾರ್ಥಿತವಾದ ರಕ್ಷಣೆ ಎರಡು ಬಗೆಯದಾಗಿರುತ್ತದೆ. ಅ) ಅನಿಷ್ಟವನ್ನು ನಿವಾರಿಸುವುದು ಅಥವಾ ಬಂದಿರುವ ಭಯವನ್ನು ಪರಿಹರಿಸುವುದು ಒಂದು ವಿಧವಾದ ರಕ್ಷಣೆ. ಆದರೆ ಅಷ್ಟೇ ಮಾಡಿದರೆ ಸಾಲದು. ಆ) ಜೊತೆಗೆ ಅವನ ಈಪ್ಸಿತಾರ್ಥ ವನ್ನು ಈಡೇರಿಸುವುದೂ ಸಹ ರಕ್ಷಣೆಗೆ ಸೇರಿರುತ್ತದೆ. ಸದ್ಯಃ ನರಸಿಂಹನ ನಖಗಳಿಗೆ ಈ ಎರಡು ಶಕ್ತಿಯೂ ಇದೆ ಎಂಬುದನ್ನು ಪೂರ್ವಾರ್ಧ—ಉತ್ತರಾರ್ಧಗಳಲ್ಲಿ ಹೇಳಿರುವ ಒಂದೊಂದು ವಿಶೇಷಣದಿಂದ ಸಾಧಿಸಿ ತೋರಿ ಸಿದ್ದಾರೆ. ಅನಿಷ್ಟವು ಅಥವಾ ಪ್ರಾಪ್ತವಾದ ಭಯದ ಪರಿಹಾರವಾಗುವ ಪರ್ಯಂತ ಇಷ್ಟಾರ್ಥವು ಲಭಿಸಿದರೂ ನಿಷ್ಪ್ರಯೋಜನ, ಮನಸ್ಸಿಗೆ ಶಾಂತಿ ಇರುವುದಿಲ್ಲ. ಆದಕಾರಣ ಮೊದಲು ಪೂರ್ವಾರ್ಧದಲ್ಲಿಯೇ ನರಸಿಂಹನ ನಖಗಳಿಗೆ ಅನಿಷ್ಟನಿವಾರಣಶಕ್ತಿಯನ್ನು ಉಪಪಾದಿಸುತ್ತಾ **ಪುರುಹೂತ....**

**ವಜ್ರಾಯಿತಾಃ** ಎಂಬ ವಿಶೇಷಣ ಕೊಟ್ಟಿದ್ದಾರೆ. ಅನಿಷ್ಟನಿವಾರಣೆಯಾದ ಕೂಡಲೇ ಇಷ್ಟಪ್ರಾಪ್ತಿಯೂ ಲಭಿಸುತ್ತದೆ ಎಂದು ತೋರಿಸುವುದಕ್ಕಾಗಿ ಉತ್ತರಾರ್ಧದ ಕಡೆಯಲ್ಲಿ **ಭಾವಿತಾನಾಕಿವೃಂದೈಃ(ಭೂರಿಭಾಗೈಃ)** ಎಂಬ ವಿಶೇಷಣ ಕೊಟ್ಟಿದ್ದಾರೆ. ಈಗ ಈ ವಿಶೇಷಣಗಳ ಔಚಿತ್ಯವನ್ನು ವಿಮರ್ಶಿಸೋಣ.

**ಪ್ರಥಮ ವಿಶೇಷಣ**—ಪೂರ್ವಾರ್ಧದಲ್ಲಿರುವ **ಪುರುಹೂತ.... ವಜ್ರಾಯಿತಾಃ** ಎಂಬುದಿಷ್ಟು ಒಂದೇ ದೊಡ್ಡ (ಉದ್ದವಾದ) ಸಮಸ್ತಪದ. ಮನುಷ್ಯರಿಗೆ ಒದಗುವ ಕಷ್ಟಗಳೂ ಅನಿಷ್ಟಗಳೂ ಎಷ್ಟು ಜಟಿಲವಾಗಿರುತ್ತವೆಯೆಂಬುದನ್ನೂ ಅವುಗಳಿಂದ ಪಾರಾಗುವುದು ಎಷ್ಟು ಕಷ್ಟವೆಂಬುದನ್ನೂ ಸೂಚಿಸುವುದಕ್ಕಾಗಿಯೇ ಹೀಗೆ ಉದ್ದವಾದ ಮತ್ತು ಜಟಿಲವಾದ ಸಮಾಸ ಹೇಳಿದ್ದಾರೆಂದು ತಿಳಿಯಬೇಕು.

**ಆನೆಗಳಿಗೆ ಹೋಲಿಕೆ**—ಸಕಲರಿಗೆ ಸಂಭವಿಸುವ ಸಮಸ್ತಕಷ್ಟಗಳಿಗೂ ಅವರವರು ಮಾಡಿದ ಮತ್ತು ಮಾಡುವ ಪಾಪಕೃತ್ಯಗಳೇ ಕಾರಣ. ಹೀಗೆ ಪಾಪಕೃತ್ಯಗಳನ್ನು ಪ್ರೇರಿಸುವ ದುಷ್ಟಶಕ್ತಿಯೇ ಜೀವರಲ್ಲಿರುವ ತಾಮಸೀವೃತ್ತಿ. ಇದನ್ನೇ ಆಚಾರ್ಯರು **ಪುರುಹೂತವೈರಿ**ಗಳೆಂದು ಕರೆದಿದ್ದಾರೆ. ಪುರುಹೂತ ಎಂದರೆ ದೇವೇಂದ್ರ, ಅವನಿಗೆ ವೈರಿಗಳೆಂದರೆ ಶತ್ರುಗಳು ಅರ್ಥಾತ್ ದುಷ್ಟಶಕ್ತಿಗಳು ಎಂದರ್ಥ. ಈ ಶ್ಲೋಕದಲ್ಲಿ ಸ್ತುತಿಸುತ್ತಿರುವುದು ನರಸಿಂಹನ ನಖಗಳುನ್ನು. ಆ ನಖಗಳಿಗೂ ಈ ಪುರುಹೂತ-ವೈರಿಗಳಿಗೂ ಸಂಬಂಧವನ್ನು ಕಲ್ಪಿಸುವುದಕ್ಕಾಗಿ ಪುರುಹೂತವೈರಿಗಳನ್ನು (ದೈತ್ಯರನ್ನು) ಆನೆಗಳಿಗೆ ಹೋಲಿಸಿದರು. ಆನೆಗಳು ಸಾಮಾನ್ಯವಾಗಿ ಒಂಟೊಂಟಿಯಾಗಿರುವುದಿಲ್ಲ, ಸದಾ ತಂಡತಂಡವಾಗಿಯೇ ಸಂಚರಿಸುತ್ತಿರುತ್ತವೆ. ಅದನ್ನು ಲಕ್ಷಿಸಿ ಪುರುಹೂತವೈರಿಗಳನ್ನು ಆನೆ (**ಮಾತಂಗ**)ಗಳ **ಘಟಾ** (ಗುಂಪು)ಗಳಿಗೆ ಹೋಲಿಸಿದರು. ಸಿಂಹಕ್ಕೂ ಆನೆಗಳಿಗೂ ನಿತ್ಯ-ವೈರವು ಸಿದ್ಧವಾದ ಕಾರಣ ಈ ಉಕ್ತಿ ಸರಿಹೊಂದುತ್ತದೆ. ಆನೆಗಳು ಪಳಗಿದ್ದರೆ ಅವುಗಳ ಬಲ ಕಡಿಮೆಯೆಂದು ಭಾವಿಸಿ ಅವುಗಳ ಗುಂಪಿಗೇ **ಮಾದ್ಯತ್** ಎಂದರೆ ಮದಿಸಿದ ಎಂಬ ವಿಶೇಷಣ ಕೊಟ್ಟರು. ಆದರೂ

ತೃಪ್ತರಾಗದೆ ಆನೆಗಳಿಗೇ **ಬಲವನ್ಮಾತಂಗ** ಎಂಬ ವಿಶೇಷಣ ಕೊಟ್ಟರು. ಹೀಗೆ ಆನೆಗಳು ಸ್ವಯಂ ಬಲಿಷ್ಠವಾಗಿರುವುದರಿಂದಲೂ, ಅವು ಮದಿಸಿರುವುದರಿಂದಲೂ, ಸದಾ ಗುಂಪುಗುಂಪಾಗಿಯೇ ಸಂಚರಿಸುತ್ತಿರುವುದರಿಂದಲೂ, ಅಭೇದ್ಯವೂ, ಅಜೇಯವೂ ಆಗಿವೆಯೆಂದು ಹೇಳಿ ಅದರಂತೆ ಜೀವರಿಗೆ ಒದಗುವ ಕಷ್ಟಕಾರ್ಪಣ್ಯಗಳೂ ತಂಡೋಪತಂಡವಾಗಿ ಬರುತ್ತಿರುವುದರಿಂದ ಅವುಗಳಿಂದ ಪಾರಾಗುವುದು ದುಸ್ತರವೆಂದು ಸೂಚಿಸಿದರು.

**ಅವುಗಳ ವಿಪಾಟನೆ**—ಆನೆಗಳು ಗುಂಪುಗುಂಪಾಗಿಯೇ ಸಂಚರಿಸುತ್ತಿದ್ದರೇನು, ಎಷ್ಟೇ ಮದಿಸಿದ್ದರೇನು, ಎಷ್ಟೇ ಬಲಿಷ್ಠವಾಗಿದ್ದರೇನು ? ಸಿಂಹವು ಆನೆಗಳ ಸಹಜಶತ್ರುವಾದ್ದರಿಂದ ಅವುಗಳನ್ನು ಧ್ವಂಸ ಮಾಡದೆ ಬಿಡುವುದಿಲ್ಲ. ಒಂದು ರೀತಿಯಿಂದ ಆನೆ ಬಲವಾಗಿದ್ದಷ್ಟೂ ಬಲಿಷ್ಠವಾಗಿದ್ದಷ್ಟೂ ಸಿಂಹಕ್ಕೆ ಉತ್ಸಾಹ ಹೆಚ್ಚುತ್ತದೆ. ಹೀಗೆ ಆನೆಗಳ ಗುಂಪುಗಳನ್ನು **ವಿಪಾಟನ** (ಧ್ವಂಸ) ಮಾಡುವುದರಲ್ಲಿ ಸಿಂಹವು **ಅಧಿಕಪಟು** ಎಂದರೆ ಅತ್ಯಂತ ದಕ್ಷವಾಗಿರುವಂತೆಯೇ ನರಸಿಂಹನ ಉಗುರುಗಳು ಈ ವಿಘ್ನಕಾರಿಗಳೂ ವಿನಾಶಹೇತುಗಳೂ ಆದ ಪುರುಹೂತವೈರಿಗಳೆಂಬ ದುಷ್ಟಶಕ್ತಿಗಳನ್ನು ದಮನ ಮಾಡಿ ನಿರ್ಮೂಲ ಮಾಡುವುದರಲ್ಲಿ ಅಧಿಕಪಟುಗಳೆಂದು ಸೂಚಿಸಿದರು. ಮತ್ತು ಆನೆಗಳಿಗೆ ಅವುಗಳ ಕುಂಭಸ್ಥಳವೇ ಮರ್ಮಸ್ಥಳ; ಆ **ಕುಂಭಸ್ಥಳ**ಕ್ಕೆ ಏಟು ಬಿತ್ತೆಂದರೆ ಆನೆಯ ಕೆಲಸವೇ ಮುಗಿದು ಹೋಗುತ್ತದೆ. ಆದಕಾರಣ ಸಿಂಹವು ಮೊಟ್ಟಮೊದಲು ಆ **ಕುಂಭಸ್ಥಳ**ವನ್ನೇ ಆಕ್ರಮಿಸಿ ಆನೆಗಳನ್ನು ನಾಶಮಾಡುವುದೆಂದು ತೋರಿಸಲು ಶ್ರೀಮದಾ-ಚಾರ್ಯರು ಆನೆಗಳ **ಕುಂಭಸ್ಥಳ**ವನ್ನು **ವಿಪಾಟನ** ಮಾಡುವುದರಲ್ಲಿ **ಅಧಿಕಪಟು** ಎಂದು ಹೇಳಿದ್ದಾರೆ.

**ಸಿಂಹದ ಹೋಲಿಕೆಯಲ್ಲಿ ನ್ಯೂನತೆಗಳು**–ಆದರೆ ನಖಗಳಿಗೆ ಸಿಂಹದ ಹೋಲಿಕೆ ಕೊಟ್ಟು ಈ ವಿಚಾರವನ್ನು ಮುಗಿಸಲು ಕೆಲವು ಅನೌಚಿತ್ಯಗಳು ಅಡ್ಡಬರುತ್ತವೆ. ಅದೇನೆಂದರೆ—ಸಿಂಹವು ಆನೆಯ ತಂಡಗಳಲ್ಲಿ ಒಂದಾನೆಯನ್ನು ಕೊಂದೀತು, ಅಪ್ಪಪ್ಪಾ ಎಂದರೆ ಎರಡಾನೆಗಳನ್ನು ಒಟ್ಟಿಗೆ ಕೊಂದೀತು. ಒಂದೇ ಸಿಂಹ ಹಿಂಡು–ಹಿಂಡು ಆನೆಗಳನ್ನು ಒಂದೇ ಏಟಿಗೆ

ಕೊಲ್ಲುವುದು ಅಸಂಭವ, ಅಸಾಧ್ಯ—ಏಕೆಂದರೆ ಸಿಂಹದ ಬಲ ಸೀಮಿತ ವಾಗಿರುತ್ತದೆ. ಎರಡನೆಯದಾಗಿ ಆನೆಯನ್ನು ಕೊಲ್ಲುವಾಗ ಸಿಂಹಕ್ಕೆ ತನ್ನ ಅನೇಕ ಅಥವಾ ಎಲ್ಲಾ ನಖಗಳನ್ನೂ ಉಪಯೋಗಿಸಬೇಕಾಗುತ್ತದೆ. ಆದರೆ ನರಸಿಂಹನ ನಖಗಳಾದರೋ ಅನಂತಬಲವುಳ್ಳವು, ಅಪಾರಶಕ್ತಿಯುಳ್ಳವು ; ಹೀಗೆ ನರಸಿಂಹನ ನಖಗಳಿಗೆ ಸಿಂಹದ ಸಾದೃಶ್ಯ ಹೊಂದಿಕೆಯಾದರೂ ಸಿಂಹದ ನಖಗಳ ಸಾದೃಶ್ಯ ಸರಿಹೊಂದುವುದಿಲ್ಲವೆಂದು ತಿಳಿದು ಸಿಂಹದ ನಖಗಳಿಗೆ ಸರ್ವಥಾ ಭಿನ್ನವಾದ, ಸಿಂಹದ ನಖಗಳಿಗಿಂತಲೂ ಅಪಾರ ಶಕ್ತಿಯುಳ್ಳ **ವಜ್ರಾ**ಯುಧದ ಹೋಲಿಕೆಯನ್ನು ಕೊಟ್ಟರು.

**ವಜ್ರಾಯುಧದ ಹೋಲಿಕೆ**—ಇಂದ್ರನ ಒಂದೇ ಒಂದು ವಜ್ರಾ-ಯುಧವೇ ಪ್ರಪಂಚದಲ್ಲಿದ್ದ ಸಕಲ ಪರ್ವತಗಳನ್ನೂ ಅವುಗಳಿಗಿದ್ದ ರೆಕ್ಕೆಗಳನ್ನು ಕತ್ತರಿಸಿ ನಾಶಮಾಡಿತು. ಅದರಂತೆ ನರಸಿಂಹನ ಒಂದೊಂದು ನಖವೇ ಪುರುಹೂತವೈರಿಗಳ ತಂಡಗಳು ಎಷ್ಟೇ ಬಲಿಷ್ಠವಾಗಿದ್ದರೂ ಎಷ್ಟೇ ಸಂಖ್ಯೆಯಲ್ಲಿದ್ದರೂ ನಾಶಮಾಡುವುದರಲ್ಲಿ ಅತ್ಯಂತ ದಕ್ಷ (**ವಿಪಾಟನಾಧಿಕ-ಪಟು**)ವಾಗಿವೆಯೆಂದು ಸೂಚಿಸಿದರು. ಇಷ್ಟೇ ಹೇಳಿಬಿಟ್ಟರೆ ನರಸಿಂಹನ ಎಲ್ಲಾ ಉಗುರುಗಳೂ ಸೇರಿ ಒಂದು ವಜ್ರಾಯುಧಕ್ಕೆ ಸರಿಸಮಾನ ಎಂಬ ತಪ್ಪುಕಲ್ಪನೆಗೆ ಅವಕಾಶವಾಗುತ್ತದೆ ; ಅದರ ನಿವಾರಣೆಗಾಗಿ **ಪ್ರತ್ಯೇಕ ವಜ್ರಾಯಿತಾಃ** ಎಂದು ಅಪ್ಪಣೆಕೊಡಿಸಿದರು. ಒಂದೊಂದು ಉಗುರೂ ಒಂದೊಂದು ವಜ್ರಾಯುಧವಿದ್ದಂತೆ ಎಂದು ಹೇಳಿದ ಹಾಗಾಯಿತು. ಒಂದು ವಜ್ರಾಯುಧವೇ ಸಕಲ ಶತ್ರುಗಳನ್ನೂ ನಾಶಮಾಡಲು ಸಮರ್ಥವಾಗಿರುವಾಗ ಅನೇಕ ವಜ್ರಾಯುಧಗಳು ಸೇರಿದಾಗ ಹೇಳುವುದೇನು ಎಂಬ ನ್ಯಾಯವನ್ನು ತೋರಿಸಿದ್ದಾರೆ.

**ಉಚ್ಚಾದ್ರಿಯ ಹೋಲಿಕೆ**—ಮೊದಲು ವಿವರಿಸಿದ್ದು ಆನೆಗಳ ಗುಂಪುಗಳ ಕುಂಭಸ್ಥಳ—ಮಧ್ಯೆ ಏಕಾಏಕಿ ವಜ್ರಾಯುಧದ ಹೋಲಿಕೆ ಕೊಟ್ಟರು. ವಜ್ರಾಯುಧ ನಾಶಮಾಡಿದ್ದು ಬೆಟ್ಟಗಳನ್ನು, ಆನೆಗಳನ್ನಲ್ಲ. ಆದ್ದರಿಂದ ಆನೆಗಳ ಕುಂಭಸ್ಥಳಗಳಿಗೂ ವಜ್ರಾಯುಧಕ್ಕೂ ಹೇಗೆ ಸಂಬಂಧ ? ಎಂಬ ದೋಷಪರಿಹಾರಕ್ಕಾಗಿ **ಕುಂಭ**ಗಳಿಗೇ **ಉಚ್ಚಾದ್ರಿ**ಗಳ ಹೋಲಿಕೆ

ಕೊಟ್ಟರು. ಇದರಿಂದ ಕುಂಭಸ್ಥಳಗಳ ಪ್ರಾಬಲ್ಯವನ್ನು ಮತ್ತಷ್ಟು ಹೆಚ್ಚಿಸಿದಂತೆಯೇ ಆಯಿತು. ಆ ಕುಂಭಸ್ಥಳಗಳು ಎತ್ತರವಾದ ಬೆಟ್ಟಗಳಂತೆ ಏರುವುದಕ್ಕೇ ಕಷ್ಟ; ಜೊತೆಗೆ ಬೆಟ್ಟಗಳಾದ್ದರಿಂದ ಅತ್ಯಂತ ಅಭೇದ್ಯ ಎಂಬುದೂ ಸೂಚಿತವಾಗುತ್ತದೆ. ಹೀಗೆ ಒಟ್ಟಿನಲ್ಲಿ ವಜ್ರಾಯುಧವು ಒಂದೇ ಆದರೂ, ಅಭೇದ್ಯವೇ ಆಗಿದ್ದ ಸಕಲ ಬೆಟ್ಟಗಳನ್ನೂ ಒಂದೇ ಹೊಡೆತಕ್ಕೆ ಹೇಗೆ ನಾಶಮಾಡಿಬಿಟ್ಟಿತೋ ಅದೇ ರೀತಿ ನರಸಿಂಹನ ಒಂದೊಂದು ನಖವೇ **(ಪ್ರತ್ಯೇಕ)** ಆನೆಗಳ ಹಿಂಡುಗಳ, ಬೆಟ್ಟದಂತೆ **ಉಚ್ಚ**ವಾಗಿಯೂ ಅಭೇದ್ಯವಾಗಿಯೂ ಇರುವ **ಕುಂಭಸ್ಥಳ**-ಗಳಂತಿರುವ ಸಕಲಶತ್ರು **(ಪುರುಹೂತವೈರಿ)**ಗಳನ್ನೂ ನಾಶ**(ವಿಪಾಟನ)** ಮಾಡುವುದರಲ್ಲಿ **ಅಧಿಕಪಟು**ಗಳಾಗಿವೆ. ಹೀಗೆ ಒಂದು ಉಗುರಿಗೇ ಇಂಥಾ ಅಮೋಘ ಶಕ್ತಿಯಿರುವಾಗ ನರಸಿಂಹನ ಅನಂತ ಉಗುರುಗಳಿಗೆ ಸಕಲಾನಿಷ್ಟಗಳನ್ನೂ ಸಕಲ ವಿಘ್ನಗಳನ್ನೂ ವಿನಾಶಮಾಡುವ ಅನಂತವಾದ ಅಸಾಧಾರಣ ಶಕ್ತಿಯುಂಟೆಂಬುದು ಸ್ವಯಂಸಿದ್ಧವಾಗುತ್ತದೆ. ಮತ್ತು ಈ ಪ್ರಕಾರ ನರಸಿಂಹನ ಉಗುರುಗಳಿಗೆ ಇಂಥಾ ಅಪಾರಶಕ್ತಿಯಿರುವುದರಿಂದ ಅವುಗಳನ್ನೇ **ಪಾಂತ್ವಸ್ಮಾನ್** ಎಂದು ಪ್ರಾರ್ಥಿಸಿದ್ದು ಯುಕ್ತವಾಗಿಯೇ ಇದೆ.

**ಎರಡನೇ ವಿಶೇಷಣ**—ರೋಗವನ್ನೇ ಪರಿಹರಿಸಬಲ್ಲ ವೈದ್ಯರು ಹೇಗೆ ಶಕ್ತಿಯನ್ನು ಕೊಡಿಸಬಲ್ಲರೋ ಅದರಂತೆ ಅನಿಷ್ಟನಿವಾರಣೆ ಮಾಡಬಲ್ಲ ನರಸಿಂಹನ ನಖರಗಳು ಮೋಕ್ಷಾದಿ ಸಕಲ ಪುರುಷಾರ್ಥಗಳನ್ನೂ ಕೊಡಬಲ್ಲವೆಂಬುದನ್ನು ಉತ್ತರಾರ್ಧದಲ್ಲಿ ಪ್ರತಿಪಾದಿಸುತ್ತಾರೆ. ಲೋಕದಲ್ಲಿ ಬೇಡಿದ ಇಷ್ಟಾರ್ಥಗಳನ್ನು ನೆರವೇರಿಸಿಕೊಡಬಲ್ಲ ಶಿವಸೂರ್ಯಗಣಪತ್ಯಾದಿ ಅನೇಕ ದೇವತೆಗಳು ಪ್ರಸಿದ್ಧರಾಗಿದ್ದರೂ ಆ ದೇವತೆಗಳಿಗೇ ಅವರ ಇಷ್ಟಾರ್ಥಗಳನ್ನೇ ನಡೆಸಿಕೊಡುವ ಮಹಾಪ್ರಭು ನಮ್ಮ ನರಸಿಂಹಸ್ವಾಮಿ; ನರಸಿಂಹನ ನಖಧ್ಯಾನದಿಂದಲೇ ಆ ಬ್ರಹ್ಮಾದಿ ದೇವತೆಗಳು ಕೃತಾರ್ಥರಾಗಿದ್ದಾರೆಂಬುದನ್ನು **ನಾಕಿವೃಂದೈಃ** (ಅಥವಾ ಉಡುಪಿಕಡೆಯ ಪಾಠಾಂತರ—**ಭೂರಿ-ಭಾಗ್ಯೈಃ**) **ಭಾವಿತಾಃ** ಎಂಬುದರಿಂದ ಹೇಳಿದರು. ನರಸಿಂಹನ ಉಗುರುಗಳು ಬ್ರಹ್ಮಾದಿ ಸಕಲ ದೇವತೆಗಳಿಂದಲೂ ಧ್ಯಾನಮಾಡಲ್ಪಡುವಂಥವು

ಎಂದರ್ಥ. ಧ್ಯಾನವು ಮಾನಸಿಕ ಕ್ರಿಯೆಯಾದ್ದರಿಂದ **ಮನಸಾ ಭಾವಿತಾಃ** (ಮನಸ್ಸಿನಿಂದ ಧ್ಯಾನಿಸಲ್ಪಡುವ ಉಗುರುಗಳು) ಎಂದು ಹೇಳಿದರು.

**ಮಾನಸಿಕಸ್ಥಿತಿಯ ವಿಶ್ಲೇಷಣೆ**–ಮನಸ್ಸು ಧ್ಯಾನಮಾಡಲು ಯೋಗ್ಯವಾಗಿರಬೇಕಾದರೆ ಮನಸ್ಸಿಗೆ ಯಾವ ಆತಂಕವೂ ಇರಬಾರದು, ಅಜ್ಞಾನ ತುಂಬಿಕೊಂಡಿರಬಾರದು, ಯಾವ ಬಾಧೆಯೂ ಇರಬಾರದು, ಜೊತೆಗೆ ಧ್ಯಾನಮಾಡುವ ಪ್ರವೃತ್ತಿಯೂ ಅಥವಾ ಉತ್ಸಾಹವೂ ಇರಬೇಕು. ಈ ವಿಚಾರಗಳನ್ನೇ ಮನಸ್ಸಿಗೆ ಕೊಟ್ಟಿರುವ ನಾಲ್ಕು ವಿಶೇಷಣಗಳು ಹೊರಪಡಿಸುತ್ತವೆ.. ಹೇಗೆಂದರೆ—೧) **ದಾರಿತಾರಾತಿ.** ದಾರಿತ–ಸೀಳಲ್ಪಟ್ಟ, ಅರಾತಿ–ಶತ್ರುಗಳುಳ್ಳ, ಮನಸ್ಸು ಶತ್ರುಗಳ ಕಾಟವಿಲ್ಲದಂತೆ ಆಗಿದೆ. ೨) **ದೂರ-ಪ್ರಧ್ವಸ್ತ-ಧ್ವಾಂತ.** ದೂರ–ದೂರಕ್ಕೆ, ಪ್ರಧ್ವಸ್ತ–ಓಡಿಸಲ್ಪಟ್ಟ, ಅಟ್ಟಿ-ಬಿಟ್ಟ, ಧ್ವಾಂತ–ಅಂಧಕಾರ, ಅಜ್ಞಾನ. ಅಜ್ಞಾನವನ್ನು ದೂರ ಅಟ್ಟಿ-ಬಿಟ್ಟಿದೆ. ೩) **ಶಾಂತ**–ಮನಸ್ಸು ಪರಮಾತ್ಮನಲ್ಲಿ ಆಸಕ್ತವಾಗಿದೆ. 'ಶಮೋ ಮನ್ನಿಷ್ಠತಾ ಬುದ್ಧಿಃ'–ನನ್ನಲ್ಲಿ (ಎಂದರೆ ಭಗವಂತನಲ್ಲಿ) ಆಸಕ್ತವಾಗಿರುವ ಬುದ್ಧಿಗೇ ಶಮ ಎಂದು ಹೆಸರೆಂದು ಭಾಗವತದಲ್ಲಿ (ಉದ್ಧವಗೀತೆಯಲ್ಲಿ) ಹೇಳಿದೆ. ಶಾಂತ ಎಂದರೆ ಶಮಾಗುಣಯುಕ್ತವಾದುದು ಅರ್ಥಾತ್ ಭಗವಂತನಲ್ಲಿ ಆಸಕ್ತಿಯುಳ್ಳದ್ದು. ೪) **ಪ್ರ-ವಿ-ತತ**—ಜ್ಞಾನಭಕ್ತಿವೈರಾಗ್ಯಗಳಿಂದ ಪುಷ್ಟವಾಗಿ ಅಪರೋಕ್ಷಜ್ಞಾನಕ್ಕೆ ಕಾರಣೀಭೂತವಾದ ಎಂದರ್ಥ. ಇಂಥಾ ಮನಸ್ಸಿನಿಂದ ನಿರಾತಂಕವಾಗಿ ತದೇಕಚಿತ್ತದಿಂದ ಬ್ರಹ್ಮಾದಿ ಸಕಲದೇವತೆಗಳೂ ನರಸಿಂಹದೇವರ ಯಾವ ಸರ್ವವ್ಯಾಪಿಯಾದ (**ಪ್ರತತ**) ಜ್ಞಾನಾ-ನಂದಾದ್ಯನಂತ ಗುಣಮಯವಾದ ಆದ್ದರಿಂದಲೇ ಅಪ್ರಾಕೃತವಾದ ಉಗುರು-ಗಳನ್ನು ಧ್ಯಾನ ಮಾಡುತ್ತಾರೋ ಅಂಥಾ ಸುನಖರಗಳು ನಮ್ಮನ್ನು ಸಕಲ ಅನಿಷ್ಟಗಳಿಂದಲೂ ಸಕಲ ವಿಘ್ನಗಳಿಂದಲೂ ಪಾರುಮಾಡಿ ಸಂರಕ್ಷಿಸಲಿ ಎಂಬುದೇ ಈ ಶ್ಲೋಕದ ಒಟ್ಟು ಭಾವ.

**ಕೆಲವು ವಿಶೇಷ ವಿಚಾರಗಳು**–ನರಸಿಂಹನ ಅನಂತ–ಅಪಾರಮಹಿಮೆಯನ್ನು ಸೂಚಿಸುವುದಕ್ಕಾಗಿಯೇ ಶ್ರೀಮದಾಚಾರ್ಯರು ನರಸಿಂಹನನ್ನೇ ಸ್ತುತಿಸದೆ ಅವನ ನಖಗಳನ್ನೇ ಸ್ತುತಿಸಿದರು. ನಖಗಳಿಗೇ ಇಂಥಾ ಮಹಿಮೆ

ಯಿರುವಾಗ ನರಸಿಂಹನ ವಿಷಯ ಹೇಳುವುದೇನಿದೆ ಎಂದು ಕೈಮುತ್ಯನ್ಯಾಯ ದಿಂದ ತಿಳಿಸಿದ್ದಾರೆ. ಅಥವಾ ನರಸಿಂಹನಿಗೂ ಅವನ ನಖಶಿಖಾದಿ ಸಕಲ ಅಂಗಗಳಿಗೂ ಅವನ ಗುಣಕ್ರಿಯಾದಿಗಳಿಗೂ ಅತ್ಯಂತಾಭೇದವನ್ನು ಸೂಚಿಸು ವುದಕ್ಕಾಗಿಯೂ, ಸಂಖ್ಯೆಗೆ—ಅಳತೆಗೆ ಒಳಪಟ್ಟಂತೆ ಕಂಡರೂ ಅವು ಅನಂತವೂ ವಿಶ್ವವ್ಯಾಪಿಯೂ ಆಗಿವೆಯೆಂಬ ಪ್ರಮೇಯವನ್ನು ಸೂಚಿಸುವುದಕ್ಕಾಗಿಯೂ **ನಖಗಳನ್ನೇ ಸ್ತುತಿಸಿದ್ದಾರೆ.**

ನಖಗಳಿಗೆ ಕೊಟ್ಟ ವಿಶೇಷಣಗಳಿಂದ ಅವುಗಳ ವಿಶಿಷ್ಟತ್ವ ಇಷ್ಟತ್ವ ಅಧಿಕೃತತ್ವವೆಂಬ ವಂದ್ಯತ್ವೋಪಪಾದಕ ಗುಣಗಳನ್ನೂ ತೋರಿಸಿದ್ದಾರೆ. ಹೇಗೆಂದರೆ ಪ್ರತತ, ಸು, ರ ಇತ್ಯಾದಿಗಳಿಂದ ವಿಶಿಷ್ಟತ್ವವನ್ನೂ, ಪುರುಹೂತ-ವೈರಿವಿಪಾಟನಾಧಿಕಪಟು–ವಜ್ರಾಯಿತಾಃ ಎಂಬುದರಿಂದ ಇಷ್ಟತ್ವವನ್ನೂ ನಾಕಿವೃಂದೈಃ ಭಾವಿತಾಃ ಎಂಬುದರಿಂದ ಅಧಿಕೃತತ್ವವನ್ನೂ ತೋರಿಸಿಕೊಟ್ಟಿ ದ್ದಾರೆ. (ಹೆಚ್ಚಿನ ವಿವರಗಳಿಗೆ ನಖಸ್ತುತಿಯ ಪುಟ ೫೦–೫೧ ನೋಡಿ.)

**ಅನುಬಂಧಚತುಷ್ಟಯ**—ಕಡೆಯದಾಗಿ ಯಾವ ಶಾಸ್ತ್ರಗ್ರಂಥವನ್ನು ಓದಬೇಕಾದರೂ ಅನುಬಂಧಚತುಷ್ಟಯವನ್ನು ತಿಳಿದುಕೊಳ್ಳಲೇಬೇಕು. ಶ್ರೀಮಟ್ಟೀಕಾಕೃತ್ಪಾದರು ತತ್ವಪ್ರಕಾಶಿಕೆಯಲ್ಲಿ ಮಂಗಳಶ್ಲೋಕಕ್ಕೆ ವ್ಯಾಖ್ಯಾನ ಮಾಡುವ ಸಂದರ್ಭದಲ್ಲಿ ಅಧಿಕಾರಿ ವಿಷಯ ಪ್ರಯೋಜನ ಸಂಬಂಧವೆಂಬ ಈ ಅನುಬಂಧಚತುಷ್ಟಯವು 'ಶ್ರೋತೃಪ್ರವೃತ್ತಿ'ಗೆ ಅಂಗ-ಭೂತವಾಗಿವೆಯೆಂದೂ ಆದ್ದರಿಂದ ಇವನ್ನು ತಿಳಿದುಕೊಳ್ಳಲೇಬೇಕೆಂದೂ ಹಾಗೆ ತಿಳಿದುಕೊಂಡು ಅಧ್ಯಯನ ಮಾಡಿದರೆ ಮಹಾಫಲವುಂಟೆಂದೂ ಹೇಳಿ ಅದಕ್ಕೆ ಪ್ರಮಾಣವಾಗಿ ಭಾಗವತ ಪ್ರಥಮಸ್ಕಂಧ ತಾತ್ಪರ್ಯದಲ್ಲಿ (೧ ಅಧ್ಯಾ. ೨ ಶ್ಲೋ.) ಹೇಳಿದ ವಾಮನಪುರಾಣ ವಾಕ್ಯವನ್ನೇ ಉದಹರಿಸಿ ದ್ದಾರೆ.

ಅಧಿಕಾರಂ ಫಲಂ ಚೈವ ಪ್ರತಿಪಾದ್ಯಂ ಚ ವಸ್ತು ಯತ್ ।
ಸ್ಮೃತಾ ಪ್ರಾರಭತೋ ಗ್ರಂಥಂ ಕರೋತೀಶೋ ಮಹತ್ಫಲಮ್ ॥

ಇದರ ಅರ್ಥ ಸುಲಭವಾಗಿಯೇ ಇದೆ. ಪ್ರಕೃತ ಆ ಚತುಷ್ಟಯ ವನ್ನು ತಿಳಿದುಕೊಳ್ಳಬೇಕು. 'ನಾಕಿವೃಂದೈಃ ಭಾವಿತಾಃ' ಎಂದು ಹೇಳಿದ್ದ

ರಿಂದ ಈ ನಖಸ್ತುತಿಗೆ ಬ್ರಹ್ಮರುದ್ರಾದಿ ದೇವತೆಗಳೂ, **ಅಸ್ಮಾನ್** ಎಂದು ಹೇಳಿದ್ದರಿಂದ ಶಮದಮಾದಿ ಗುಣಗಳುಳ್ಳ ಮತ್ತು ಸಾಂಸಾರಿಕತಾಪತ್ರಯ ಗಳಿಂದ ನೊಂದ ಸಕಲ ವಿಷ್ಣುಭಕ್ತರೂ ಅಧಿಕಾರಿಗಳೆಂದು ತಿಳಿಯಬೇಕು. ಕಂಠೀರವಾಸ್ಯನ ಉಗುರುಗಳೇ ವಿಷಯ. ದಾರಿತಾರಾತಿ, ಪ್ರಧ್ವಸ್ತ-ಧ್ವಾಂತ ಎಂದು ಹೇಳಿದ್ದರಿಂದ ಅನಿಷ್ಟನಿವಾರಣೆಯೂ ಅಜ್ಞಾನಾದಿ ದೋಷ-ಪರಿಹಾರವೂ ಅವಾಂತರಪ್ರಯೋಜನಗಳೆಂದೂ, ಶಾಂತ, ಭಾವಿತಾಃ ಎಂದು ಹೇಳಿದ್ದರಿಂದ ಶಾಂತಿಯೆಂಬ ವಿಷ್ಣುಭಕ್ತಿಯಿಂದ ಲಭಿಸುವ ಮುಕ್ತಿಯು ಪರಮಪ್ರಯೋಜನವೆಂದೂ ಸೂಚಿಸಿದ ಹಾಗಾಯಿತು. ಅಧಿಕಾರಿಗಳಿಗೂ ನರಸಿಂಹನಿಗೂ ಜ್ಞಾತೃ–ಜ್ಞೇಯ, ಪ್ರಾಪ್ತೃ–ಪ್ರಾಪ್ಯ ಮೊದಲಾದುವೇ ಸಂಬಂಧವೆಂದೂ ತಿಳಿಯಬೇಕು. ಇಲ್ಲಿಗೆ ಪ್ರಥಮ ಶ್ಲೋಕದ ವಿವರಣೆಯನ್ನು ಮುಗಿಸಬಹುದು.

## ನಖಸ್ತುತಿಯಲ್ಲಿ ಎರಡನೇ ಶ್ಲೋಕ

**ಶ್ಲೋಕಕ್ಕೆ ಅವತಾರಿಕೆ**—ಪ್ರಥಮ ಶ್ಲೋಕದಲ್ಲಿ ನರಸಿಂಹನ ನಖ ಗಳನ್ನೇ ಸ್ತುತಿಸುತ್ತಾ ಪ್ರತತ, ಸು ಇತ್ಯಾದಿ ವಿಶೇಷಣಗಳಿಂದ ನರಸಿಂಹ ನಿಗೂ ಅವನ ನಖಗಳಿಗೂ ಅತ್ಯಂತಾಭೇದವನ್ನು ಹೇಳಿದರು ; ಆ ಅಭೇದ ವನ್ನೇ ಸ್ಪಷ್ಟಪಡಿಸುವುದಕ್ಕಾಗಿ ನರಸಿಂಹನನ್ನೇ ಸ್ತುತಿಸುತ್ತಾ ಅವನ ಸರ್ವೋತ್ತಮತ್ವವನ್ನು ಪ್ರತಿಪಾದಿಸುತ್ತಾರೆ. ಅಥವಾ ಮೋಕ್ಷವಾಗ ಬೇಕಾದರೆ ಕೇವಲ ನಖಗಳನ್ನು ಧ್ಯಾನಿಸಿದರೆ ಸಾಲದು, ನಖಶಿಖಾಂತ ಇಡೀ ರೂಪವನ್ನೇ ಧ್ಯಾನಿಸಬೇಕೆಂಬುದನ್ನೂ, ಅನಿಷ್ಟಪರಿಹಾರವಾಗಲು ಮುಖ್ಯವಾಗಿ ನರಸಿಂಹನ ಲಯಕರ್ತೃತ್ವಶಕ್ತಿಯನ್ನು ಚಿಂತಿಸಬೇಕೆಂಬು ದನ್ನೂ ತೋರಿಸುತ್ತಾ ಪ್ರಕಾರಾಂತರದಿಂದ ಅವನ ಸರ್ವೋತ್ತಮತ್ವವನ್ನೇ ಸ್ಥಾಪಿಸುತ್ತಾರೆ. ಅಥವಾ ಜಗತ್ತಿನಲ್ಲಿ ಇಷ್ಟಾರ್ಥಗಳನ್ನು ನಡೆಸಿಕೊಡುವ ಅನೇಕ ದೇವತೆಗಳಿರುವಾಗ ಈ ನರಸಿಂಹನನ್ನೇ ಏಕೆ ಚಿಂತಿಸಬೇಕೆಂದರೆ ಅದಕ್ಕೆ ಉತ್ತರವಾಗಿಯೂ ಅವನ ಸರ್ವೋತ್ತಮತ್ವವನ್ನು 'ಲಕ್ಷ್ಮೀಕಾಂತ—' ಎಂಬ ಶ್ಲೋಕದಿಂದ ತೋರಿಸಿಕೊಡುತ್ತಾರೆ—

**ಲಕ್ಷ್ಮೀಕಾಂತ ಸಮಂತತೋ ವಿ(ಪಿ)ಕಲಯನ್ ನೈವೇಶಿತುಸ್ತೇ ಸಮಂ**
**ಪಶ್ಯಾಮ್ಯುತ್ತಮವಸ್ತು ದೂರತರತೋಽಪಾಸ್ತಂ**
**ರಸೋ ಯೋಽಷ್ಟಮಃ ।**
**ಯದ್ರೋಷೋತ್ಕರದಕ್ಷನೇತ್ರಕುಟಿಲ-ಪ್ರಾಂತೋತ್ಥಿತಾಗ್ನಿಸ್ಫುರತ್**
**ಖದ್ಯೋತೋಪಮ-ವಿಸ್ಫು(ಸ್ಫು)ಲಿಂಗಭಸಿತಾ ಬ್ರಹ್ಮೇಶ-**
**ಶಕ್ರೋತ್ಕರಾಃ ॥ ೨ ॥**

**ಸಂಕ್ಷಿಪ್ತವಿವರಣೆ**—ಈ ಶ್ಲೋಕದಲ್ಲಿ ಮುಖ್ಯವಾಗಿ ನಾಲ್ಕು ವಾಕ್ಯಗಳಿವೆ. ಎಲ್ಲದಕ್ಕೂ **ಲಕ್ಷ್ಮೀಕಾಂತ** ಎಂಬ ಸಂಬೋಧನೆಯೇ ಮೂಲ. ೧) ಲಕ್ಷ್ಮೀಕಾಂತ, ತೇ ಸಮಂ ನೈವ ಪಶ್ಯಾಮಿ, ೨) ಉತ್ತಮವಸ್ತು ದೂರತರತೋಽಪಾಸ್ತಮ್, ೩) ಯಃ ಅಷ್ಟಮಃ ರಸಃ, ೪) ಬ್ರಹ್ಮೇಶಶಕ್ರೋತ್ಕರಾಃ, ಯತ್–ನೇತ್ರ–ಉತ್ಥಿತಾಗ್ನಿ–ವಿಸ್ಫುಲಿಂಗಭಸಿತಾಃ. ಈ ನಾಲ್ಕು ವಾಕ್ಯಗಳಿಗೆ ಕ್ರಮವಾಗಿ ಹೀಗೆ ಅರ್ಥ—೧) ಹೇ ಲಕ್ಷ್ಮೀನರಸಿಂಹ, ನಿನಗೆ ಸಮಾನರಾದವರನ್ನೇ ಎಲ್ಲೂ ಕಾಣೆನು. ೨) ನಿನಗಿಂತ ಉತ್ತಮವಾದ ವಸ್ತು ಇರುವುದು ಸರ್ವಥಾ ಸಾಧ್ಯವಿಲ್ಲ. ೩) ಏಕೆಂದರೆ ನೀನು ಎಂಟನೆಯ ರಸ. ೪) ನಿನ್ನ ಕಣ್ಣಿನಿಂದ ಉದ್ಭವಿಸಿದ ಅಗ್ನಿಯ ಕಣದಿಂದಲೇ ಬ್ರಹ್ಮ-ರುದ್ರೇಂದ್ರಾದಿಗಳೆಲ್ಲ ಸುಟ್ಟು ಬೂದಿಯಾಗಿಹೋಗುತ್ತಾರೆ.

**ಲಕ್ಷ್ಮೀಕಾಂತ** ಎಂಬ ಸಂಬೋಧನೆಯಲ್ಲೇ ಅನೇಕ ಮಹತ್ವದ ವಿಚಾರಗಳು ಅಡಗಿವೆ. ೧) ಪ್ರಥಮ ಶ್ಲೋಕದಲ್ಲಿ ಲಕ್ಷ್ಮಿಯ ಹೆಸರನ್ನು ಪ್ರತ್ಯಕ್ಷವಾಗಿ ಹೇಳಿರಲಿಲ್ಲ, ಶ್ರೀಮತ್ ಎಂಬುದರಲ್ಲೇ ಅಡಕವಾಗಿತ್ತು; ಅದರ ವಿವರಣೆಯೇ ಲಕ್ಷ್ಮೀಕಾಂತ. ೨) ಸಕಲವಾಙ್ಮನೋನಿಯಾಮಕಳೂ ಭಾಗ್ಯದೇವತೆಯೂ ಆದ ಅವಳ ಸ್ಮರಣೆಯು ಅವಶ್ಯ ಕರ್ತವ್ಯವಾದರೂ 'ಕ್ಲೇಶೋಧಿಕತರಃ' ಎಂದು ಕೇವಲ ಅವಳ ಸ್ಮರಣೆ ಕ್ಲೇಶದಾಯಕವಾದ್ದರಿಂದ ಭಗವದುಪಸರ್ಜನತಯಾ ಮಾಡಬೇಕೆಂದು ತೋರಿಸಿದ್ದಾರೆ. ೩) ಯಾವ ಲಕ್ಷ್ಮೀದೇವಿಯ ಕೃಪಾಕಟಾಕ್ಷದಿಂದ ಬ್ರಹ್ಮಾದಿ ದೇವತೆಗಳೂ ಅವರವರ ಸ್ಥಾನವನ್ನು ಹೊಂದುವರೋ ಅಂಥಾ ಲಕ್ಷ್ಮಿಯೂ ಕೂಡ ಭಗವದಧೀನಳೆಂಬ ಪ್ರಮೇಯವನ್ನೂ ಇದರಿಂದ ತಿಳಿಸಿದ್ದಾರೆ. ೪) ದೇಶತಃ ಕಾಲತಃ

ವ್ಯಾಪ್ತಿಯಲ್ಲೂ ಸ್ವರೂಪದೇಹದಿಂದ ಭಿನ್ನವಾದ ದೇಹವಿಲ್ಲದಿರುವುದು, ಕರ್ಮಬಂಧನವಿಲ್ಲದಿರುವುದೇ ಮೊದಲಾದ ಅನೇಕ ವಿಚಾರಗಳಲ್ಲಿ ಲಕ್ಷ್ಮಿಯು ನಾರಾಯಣನಿಗೆ ಸಮಾನಳಾದರೂ ಗುಣಪೂರ್ಣತ್ವದಲ್ಲೂ ಸೂಕ್ಷ್ಮತಮತ್ವಾದಿ ವಿಚಾರಗಳಲ್ಲೂ ಅವನಿಗೆ ಅಸಮಳು ಎಂದು ಬ್ರಹ್ಮಸೂತ್ರಗಳ ಸಮಾನಾಧಿ-ಕರಣದಲ್ಲಿ ಹೇಳಿದ ವಿಷಯವನ್ನು ಲಕ್ಷ್ಮೀಕಾಂತ ಎಂಬ ಶಬ್ದದಿಂದ ಸೂಚಿಸಿದ್ದಾರೆ. ೫) ಅಲ್ಲದೆ ಅವಳು ಶ್ರೀಹರಿಗೆ ಅತ್ಯಂತ ಪ್ರಿಯತಮಳೆಂಬ ವಿಚಾರವೂ 'ಕಾಂತ' ಶಬ್ದದಿಂದಲೇ ಸೂಚಿತವಾಗಿದೆ. ೬) ಲಕ್ಷ್ಮಿಯು ಭಗವದಧೀನಳಾದರೂ ಭಗವಂತ ಅವಳ ಅಧೀನನಲ್ಲ; ಅವನು ಸ್ವತಂತ್ರ, ಸ್ವರಮಣ; ಅವನಿಗೆ ಲಕ್ಷ್ಮಿಯಿಂದ ಆಗಬೇಕಾದುದೇನೂ ಇಲ್ಲವೆಂಬ ಪ್ರಮೇಯವೂ ಇದರಲ್ಲೇ ಅಡಕವಾಗಿದೆ. ಹೀಗೆಯೇ ಅನೇಕ ವಿಚಾರಗಳು ಈ ಸಂಬೋಧನೆಯಲ್ಲಿ ಗುಂಫಿತವಾಗಿವೆಯೆಂದು ತಿಳಿಯಬೇಕು.

**ತೇ ಸಮಂ ನೈವ ಪಶ್ಯಾಮಿ**—ನಿನಗೆ ಸಮಾನವಾದ ವಸ್ತುವನ್ನು ಎಲ್ಲೂ ಕಾಣಲಿಲ್ಲ ಎಂದು ಹೇಳಿದ್ದು ಬಹಳ ಶೋಧನೆ ಮಾಡಿದ ಬಳಿಕ ಎಂದು ತೋರಿಸುವುದಕ್ಕಾಗಿ **ಸಮಂತತೋ(ಪಿ) ವಿ-ಕಲಯನ್** ಎಂದು ಹೇಳಿದ್ದಾರೆ. ಆಚಾರ್ಯರು ಋಜುಯೋಗಿಗಳ ಗುಂಪಿಗೆ ಸೇರಿದ್ದಾರಾದ್ದರಿಂದ ಅವರಿಗೆ ಆಲೋಚನೆ ಮಾಡಿದರೆ ಭಗವದಿತರತ್ರ ಭೂತಭವಿಷ್ಯದ್ವರ್ತಮಾನಗಳಲ್ಲಿನ ಎಲ್ಲವೂ ತಿಳಿಯುತ್ತದೆ. ಆದ್ದರಿಂದ ಅವರು ಸಕಲ ಶಾಸ್ತ್ರಗಳನ್ನೂ ತ್ರಿಕಾಲದಲ್ಲೂ ಶೋಧಿಸಿ ಈ ನಿರ್ಣಯ ಹೇಳಿದ್ದಾರೆಂದು ತಿಳಿಯಬೇಕು. ಜೊತೆಗೆ **ಏವಕಾರ**ವನ್ನು ಸಮಂ ಏವ ಎಂದೂ ಸೇರಿಸಿಕೊಳ್ಳಲು ಬರುವುದರಿಂದ ಸಮವಾದ ವಸ್ತುವೇ ಇಲ್ಲದಿರುವಾಗ ಉತ್ತಮ ವಸ್ತು ಎಲ್ಲಿ ಬರುತ್ತದೆ ಎಂಬ ಎರಡನೇ ವಾಕ್ಯಕ್ಕೆ ಪುಷ್ಟಿಕೊಟ್ಟಂತೆ ಆಗುತ್ತದೆ.

**ದೂರತರತೋಽಪಾಸ್ತಂ** ಎಂಬ ತರಪ್ (ತರ) ಪ್ರತ್ಯಯವು ಸರ್ವಥಾ ಅಸಾಧ್ಯವೆಂಬುದನ್ನು ತೋರಿಸುತ್ತಾ ಅನೇಕ ಪ್ರಮಾಣಗಳಲ್ಲಿ ಹೇಳಿದ 'ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯಃ' ಎಂಬಿವೇ ಮೊದಲಾದ ಪ್ರಮೇಯವನ್ನೇ ಪುಷ್ಟೀಕರಿಸುತ್ತದೆ.

**ರಸೋಽಯೋಽಷ್ಟಮಃ** ಎಂಬಲ್ಲಿ ರಸ ಎಂದರೆ ಹುಳಿ ಉಪ್ಪು ಮೊದಲಾದ ಷಡ್ರಸವೆಂದೂ ಅರ್ಥವಾಗುತ್ತದೆ ಮತ್ತು ಛಾಂದೋಗ್ಯ ಭಾಷ್ಯದಲ್ಲಿ

ಹೇಳಿದಂತೆ ಸಾರ ಅಥವಾ ವರ (ರಸಃ ಸಾರೋ ವರಶ್ಚೇತಿ) ಎಂಬ ಅರ್ಥ ದಲ್ಲೂ ಬರುತ್ತದೆ. ಷಡ್ರಸಗಳನ್ನು ಮೀರಿದ ಏಳನೇ ರಸ ಆಕಸ್ಮಾತ್ ಬಂದರೂ ಸಹ ನೀನು ಆ ಏಳನೇ ರಸವನ್ನೂ ಮೀರಿದ ಎಂಟನೇ ರಸ ವಾಗಿದ್ದೀಯೇ—ಎಂಬುದು ಒಂದರ್ಥ. ಛಾಂದೋಗ್ಯದಲ್ಲಿ ಹೇಳಿದಂತೆ ಧರಾಧಿ ಏಳು ಪದಾರ್ಥಗಳು ಒಂದಕ್ಕಿಂತ ಒಂದು ರಸವಾದವು ಎಂದರೆ ಹೆಚ್ಚು ಹೆಚ್ಚು ಶ್ರೇಷ್ಠವಾದುವು. ಅಲ್ಲದೆ ಇವುಗಳೆಲ್ಲದರ ಶ್ರೇಷ್ಠತ್ವಕ್ಕೆ ಒಂದು ಮಿತಿ (ಅಥವಾ ಅಳತೆ)ಯುಂಟು. ಲಕ್ಷ್ಮೀನರಸಿಂಹನು ಆ ಏಳನ್ನೂ ಮೀರಿದ ಮತ್ತು ಅಳತೆಯಿಲ್ಲದಷ್ಟು ಅನಂತಪಟ್ಟು ಉತ್ತಮವಾದ ಎಂಟನೆಯ ರಸವಾಗಿದ್ದಾನೆ ಎಂದು ಎರಡನೇ ಅರ್ಥ.

**ಎರಡನೇ ವಾಕ್ಯಕ್ಕೂ ಮೂರನೇವಾಕ್ಯಕ್ಕೂ ಹೊಂದಾಣಿಕೆ**— ಎರಡನೇ ವಾಕ್ಯದಲ್ಲಿ ನರಸಿಂಹನಿಗಿಂತ ಉತ್ತಮವಾದ ವಸ್ತು ಇಲ್ಲವೆಂದು ಹೇಳಿದ್ದನ್ನು ಕೇಳಿ ಹೀಗೆ ಆಕ್ಷೇಪ ಮಾಡಬಹುದು—ಉತ್ತಮವಸ್ತು ಇಲ್ಲ ವೆಂದು ಹೇಗೆ ಹೇಳಿದಿರಿ ? ಛಾಂದೋಗ್ಯದಲ್ಲಿ ಎಲ್ಲವನ್ನೂ ಮೀರಿದ ಎಂಟನೇ ವಸ್ತು ಇದೆಯೆಂದು ಹೇಳಿದೆಯಲ್ಲವೇ ? ಎಂದರೆ, ಹೌದು, ಆ ಎಂಟನೇ ರಸವೇ ಈ ನರಸಿಂಹ ಎಂಬುದೇ ಸಮಾಧಾನ. ಅಥವಾ ನಿನಗಿಂತ ಉತ್ತಮವಸ್ತು ಬೇರೆ ಯಾರೂ ಇಲ್ಲ ಏಕೆಂದರೆ ಸರ್ವವಿಲಕ್ಷಣವಾದ ಎಂಟ ನೆಯ ರಸವೆಂಬ ವಸ್ತುವು 'ತ್ವಮೇವ' ನೀನೇ ಆಗಿದ್ದೀಯೆ ಎಂದು ಅಧ್ಯಾಹಾರ ಮಾಡಿಕೊಂಡು ಸಮಾಧಾನ ಮಾಡಿಕೊಳ್ಳಬೇಕು.

**ಈ ವಾಕ್ಯದ ಮೇಲೆ ಪುನಃ ಆಕ್ಷೇಪ**—ನರಸಿಂಹನಿಗಿಂತಲೂ ಉತ್ತಮವಸ್ತು ಇಲ್ಲವೆಂಬ ಮಾತು ಸರಿಯಲ್ಲ, ಏಕೆಂದರೆ—ಪರಮೇಶ್ವರನು ಸರ್ವವನ್ನೂ ಸಂಹರಿಸಬಲ್ಲ ಲಯಕರ್ತನೆಂದು ಪ್ರಸಿದ್ಧಿಯಿರುವುದರಿಂದ ಆ ಶಿವನು ನರಸಿಂಹನನ್ನೂ ಸಂಹರಿಸಬಲ್ಲನಾದ್ದರಿಂದ ನರಸಿಂಹನಿಗಿಂತ ಶಿವನೇ ಶ್ರೇಷ್ಠನೆಂದು ಆಗುತ್ತದೆಯಲ್ಲವೆ ? ಎಂದು ಆಕ್ಷೇಪ ಬಂದರೆ ಶ್ರೀಮದಾ- ಚಾರ್ಯರು ಸೃಷ್ಟ್ಯಾದ್ಯಷ್ಟಕಾರ್ಯಗಳೂ ನರಸಿಂಹನ ಅಧೀನವೇ ಆಗಿವೆ, ನರಸಿಂಹನೇ ಶಿವರೂಪದಿಂದ ಸಂಹಾರಮಾಡುವನಲ್ಲದೆ ಶಿವನಿಗಿಂತಲೂ ಶ್ರೇಷ್ಠರಾದ ಬ್ರಹ್ಮಾದಿಗಳನ್ನೂ ಸಹ ಸಂಹರಿಸುತ್ತಾನೆಂಬುದನ್ನು ಸಾಧಿಸುವುದ

ಕ್ಕಾಗಿ ಉತ್ತರಾರ್ಧದಲ್ಲಿ ನರಸಿಂಹನ ಸಂಹಾರಶಕ್ತಿಯನ್ನೇ ಮುಖ್ಯವಾಗಿ ವಿವರಿಸುತ್ತಾರೆ.

**ನರಸಿಂಹನ ಸಂಹಾರಶಕ್ತಿ**–ಶಿವನ ಸಂಹಾರಶಕ್ತಿ ಪರಿಮಿತವಾದದ್ದು, ನರಸಿಂಹನದಾದರೋ ಅಪಾರವಾದದ್ದು. ಶಿವನಿಗೆ ಕೇವಲ ಸಂಹಾರಶಕ್ತಿ ಒಂದೇ ಇರುವುದಲ್ಲದೆ ಆ ಶಕ್ತಿಯೂ ನರಸಿಂಹನ ಅಧೀನ. ಶಿವನು ತನಗಿಂತ ಅವರರಾದ ಶಕ್ರಸೂರ್ಯಾದಿಗಳನ್ನು ಸಂಹರಿಸಬಲ್ಲನೇ ಹೊರತು ಬ್ರಹ್ಮಾದಿಗಳ ಮೇಲೆ ಅವನ ಶಕ್ತಿ ಏನೂ ಮಾಡಲಾರದು. ನರಹರಿಯು ಬ್ರಹ್ಮನಲ್ಲಿ ನಿಂತು ಸೃಷ್ಟಿಯನ್ನೂ ಈಶ್ವರನಲ್ಲಿ ನಿಂತು ಸಂಹಾರವನ್ನೂ ಮಾಡುವನಲ್ಲದೆ ತಾನೇ ಸ್ವತಃ ಸ್ಥಿತಿ–ನಿಯಮನಾದಿಗಳನ್ನು ನಡೆಸುವನು. ಅಲ್ಲದೆ ನರಸಿಂಹನ ಶಕ್ತಿಯು ಅಪಾರವಾಗಿದೆ ಎಂದು ತೋರಿಸುವುದಕ್ಕಾಗಿ ಅವನ ಕಣ್ಣಿನ ಅಂಚಿನಿಂದ ಹೊರಟ ಅಗ್ನಿಯ ಒಂದು ಕಣದಿಂದಲೇ ಬ್ರಹ್ಮರುದ್ರೇಂದ್ರಾದಿ ಸಕಲರೂ ಸುಟ್ಟುಬೂದಿಯಾಗಿಹೋಗುತ್ತಾರೆ(**ಭಸಿತಾಃ**) ಎಂದು ಹೇಳಿದ್ದಾರೆ. ಮೋಕ್ಷದಲ್ಲಿ ಸ್ವರೂಪಾನಂದಾವಿರ್ಭಾವ ಆಗಬೇಕಾದರೆ ಪ್ರಾರಬ್ಧಕರ್ಮವೆಂಬ ಅನಿಷ್ಟವು ಮೊದಲು ನಾಶವಾಗಬೇಕು. ಅದಕ್ಕೆ ಲಯಜ್ಞಾನ ಆವಶ್ಯಕವೆಂದು ಈಶಾವಾಸ್ಯಶ್ರುತಿಯಲ್ಲಿ ಹೇಳಿರುವುದರಿಂದ ಇಲ್ಲಿ ಸರ್ವಸಂಹಾರಕಶಕ್ತಿಯನ್ನು ಹೇಳಿದ್ದಾರೆಂದು ತಿಳಿಯಬೇಕು.

**ಎರಡು ಶ್ಲೋಕಗಳೂ ಏಕಾರ್ಥಪ್ರತಿಪಾದಕ**—ನಖಸ್ತುತಿಯಲ್ಲಿ ಎರಡು ಶ್ಲೋಕಗಳಿದ್ದರೂ ಅವೆರಡೂ ಒಂದೇ ಮುಖ್ಯವಾದ ಪ್ರಮೇಯವನ್ನೇ ಸಮರ್ಥಿಸುತ್ತವೆಯೆಂಬುದು ಗಮನಾರ್ಹವಾದ ವಿಷಯ. ನರಸಿಂಹನಲ್ಲಿ ಹೇಗೆ ನರತ್ವವೂ ಸಿಂಹತ್ವವೂ ಸೇರಿಕೊಂಡು ಒಂದಾಗಿವೆಯೋ ಹಾಗೆ ಇಲ್ಲಿಯೂ ಎರಡರ್ಥಗಳು ಸೇರಿಕೊಂಡು ಒಂದಾಗಿವೆ. ಮೊದಲನೆಯ ಶ್ಲೋಕದಲ್ಲಿ ನರಸಿಂಹನ ನಖಗಳನ್ನು ಕಾಪಾಡಬೇಕೆಂದು ಪ್ರಾರ್ಥಿಸಿದರು. ಅನಂತರ ಆ ನಖಗಳಿಗೆ ಅನಿಷ್ಟಪರಿಹಾರಕ ಶಕ್ತಿಯೂ ಇಷ್ಟಾರ್ಥ ನೆರವೇರಿಸುವ ಶಕ್ತಿಯೂ ಉಂಟೆಂದು ಸಮರ್ಥಿಸಿದರು. ಈ ಎರಡೂ ಶಕ್ತಿಗಳು ಬೇರೆಯವರಿಗೂ ಇರಬಹುದಲ್ಲ ಎಂದು ಆಕ್ಷೇಪಿಸಿದರೆ ಅದಕ್ಕೆ ಉತ್ತರವಾಗಿ ನರಸಿಂಹನ ಸರ್ವೋತ್ತಮತ್ವವನ್ನು ಎರಡನೇ ಶ್ಲೋಕದಲ್ಲಿ ಸಾಧಿಸಿದರು.

ಇದರಿಂದ ಅವನನ್ನೇ ಪ್ರಾರ್ಥಿಸಿದ್ದು ಯುಕ್ತವೆಂದು ಹೇಳಿದಂತಾಗುತ್ತದೆ. ಇನ್ನು ನರಸಿಂಹನ ಉಗುರುಗಳನ್ನೇ ಏಕೆ ಪ್ರಾರ್ಥಿಸಿದಿರಿ ಎಂದು ಕೇಳಿದರೆ ಅದಕ್ಕೂ ಸಮಾಧಾನವಾಗಿ ಅವನ ಉಗುರಿಗೂ ಅವನ ದೇಹಕ್ಕೂ ಭೇದವಿಲ್ಲ, ಆದ್ದರಿಂದ ಯುಕ್ತವಾಗಿದೆಯೆಂದೂ ತೋರಿಸಿಕೊಟ್ಟರು. ಇನ್ನು ವಿಷ್ಣುಶಬ್ದದಲ್ಲಿ ಹೇಗೆ ಪೂರ್ವಪದ ಉತ್ತರಪದ, ಸಂಹಿತೆಗಳೆಂದು ಭೇದವಿದೆಯೋ ಅದರಂತೆ ಪ್ರಥಮ ಶ್ಲೋಕವು ಪೂರ್ವಪದಸ್ಥಾನೀಯ, ಎರಡನೇ ಶ್ಲೋಕವು ಉತ್ತರಪದಸ್ಥಾನೀಯ ಮತ್ತು ಎರಡೂ ಸೇರಿದ ನಖಸ್ತುತಿಯು ವಿಷ್ಣುವಾಚಕವೆಂಬುದನ್ನೂ ತೋರಿಸಿಕೊಟ್ಟರು. ಅಥವಾ ನಿರ್ಭುಜವಕ್ತ್ರರು ಹೇಳುವಂತೆ ಒಂದೊಂದು ಶ್ಲೋಕವೇ ಹೇಳಿಕೊಂಡರೆ ಪದಪಾಠಕ್ಕೆ ಸಮಾನ, ಎರಡನ್ನೂ ಕೂಡಿಸಿ ಹೇಳಿಕೊಂಡರೆ ಕ್ರಮಪಾಠಕ್ಕೆ ಸಮಾನವಾಗುವುದರಿಂದ ಮೋಕ್ಷದಲ್ಲಿ ಆನಂದಪ್ರಾಪ್ತಿಗೂ ಅನ್ನಾದಿ ಭೋಗಗಳ ಪ್ರಾಪ್ತಿಗೂ ಕಾರಣವಾಗುವುದೆಂದು ತೋರಿಸುವುದಕ್ಕಾಗಿಯೂ ಶ್ರೀಮದಾಚಾರ್ಯರು ಎರಡು ಶ್ಲೋಕ ಹೇಳಿರುವುದು ಮಹತ್ತರವಾದ ವಿಷಯವೆಂದು ತಿಳಿಯಬೇಕು. ಕೇವಲ ಶ್ಲೋಕಗಳಲ್ಲಿ ಮಾತ್ರವಲ್ಲದೆ ವೃತ್ತಗಳ ಸಂಗ್ರಹದಲ್ಲೂ ವೈಶಿಷ್ಟ್ಯವನ್ನು ತೋರಿಸಿದ್ದಾರೆ. ಪ್ರಥಮ ಶ್ಲೋಕದ ಪೂರ್ವಾರ್ಧವು ಶಾರ್ದೂಲವಿಕ್ರೀಡಿತದಲ್ಲಿದ್ದರೆ ಉತ್ತರಾರ್ಧವು ಸ್ರಗ್ಧರಾವೃತ್ತದಲ್ಲಿದೆ. ವಾಯುಸ್ತುತಿಯ ನಲವತ್ತೊಂದು ಶ್ಲೋಕಗಳೂ ಸ್ರಗ್ಧರಾವೃತ್ತದಲ್ಲೇ ರಚಿತವಾಗಿದ್ದು ವಾಯುದೇವರ ಮಹಿಮೆಯನ್ನು ಹೇಳುವುದರಿಂದ ನಖಶ್ತುತಿಯ ಎರಡನೇ ಶ್ಲೋಕವನ್ನು ಸ್ರಗ್ಧರಾವೃತ್ತಕ್ಕೆ ಅತ್ಯಂತ ಭಿನ್ನವಾದ ಶಾರ್ದೂಲವಿಕ್ರೀಡಿತವೃತ್ತದಲ್ಲೇ ರಚಿಸಿ ನರಸಿಂಹನು ವಾಯುದೇವರಿಗಿಂತ ಅತ್ಯಂತ ಭಿನ್ನನೂ ಅತ್ಯುತ್ತಮನೂ ಆಗಿದ್ದಾನೆಂಬ ಪ್ರಮೇಯವನ್ನೂ ಸೂಚಿಸಿದರು. ವಾಯುದೇವರು ನರಸಿಂಹನ ಅಧೀನವೆಂದು ತೋರಿಸುವುದಕ್ಕಾಗಿ ಪ್ರಥಮ ಶ್ಲೋಕದ ಪೂರ್ವಾರ್ಧದಲ್ಲಿ ಶಾರ್ದೂಲ-ವಿಕ್ರೀಡಿತವನ್ನೂ ಉತ್ತರಾರ್ಧದಲ್ಲಿ ಸ್ರಗ್ಧರಾವೃತ್ತವನ್ನೂ ಬಳಸಿದರೆಂದೂ ತಿಳಿಯಬೇಕು.

**ವಚನವ್ಯತ್ಯಾಸದ ಮಹತ್ವ**—ನಾವು ಹಿಂದೆ ನಖಸ್ತುತಿಯಲ್ಲಿ ಶ್ರೀ ಶ್ರೀಪಾದರಾಯರ ಪ್ರೇರಣೆಯಿಂದ ಎರಡು ಶ್ಲೋಕಗಳಲ್ಲಿರುವ ವಚನ-

ವ್ಯತ್ಯಾಸದಿಂದಲೇ ಶ್ರೀಮದಾಚಾರ್ಯರು ಮಹತ್ತರವಾದ ಶಾಸ್ತ್ರಾರ್ಥಗಳನ್ನು ಸೂಚಿಸಿದ್ದಾರೆಂದು ಪ್ರತಿಪಾದಿಸಿದ್ದೇವೆ. ಅದನ್ನೇ ಇಲ್ಲಿ ಸಂಗ್ರಹವಾಗಿ ಪುನರಾವೃತ್ತಿ ಮಾಡಿ ಹೇಳುವೆವು. ಪ್ರಥಮ ಶ್ಲೋಕದಲ್ಲಿ ಉದ್ದಕ್ಕೂ ಪಾಂತು, ಅಸ್ಮಾನ್, ವಜ್ರಾಯಿತಾಃ, ಸುನಖರಾಃ, ಭಾವಿತಾಃ, ನಾಕಿವೃಂದೈಃ ಎಂದು ಬಹುವಚನವನ್ನೇ ಬಳಸಿದ್ದಾರೆ. ಇದಕ್ಕೆ ವಿರುದ್ಧವಾಗಿ ದ್ವಿತೀಯ ಶ್ಲೋಕದಲ್ಲಿ ಲಕ್ಷ್ಮೀಕಾಂತ, ವಿಕಲಯನ್, ಪಶ್ಯಾಮಿ, ಈಶಿತುಃ, ತೇಯಃ ಇತ್ಯಾದಿ ರೀತಿಯಾಗಿ ಏಕವಚನವನ್ನೇ ಬಳಸಿದ್ದಾರೆ. ಹೀಗೆ ವಚನವ್ಯತ್ಯಾಸದಿಂದಲೇ ಮಹತ್ತರ ಪ್ರಮೇಯಗಳನ್ನು ತೋರಿಸಿಕೊಟ್ಟಿದ್ದಾರೆ.

**ಬಹುವಚನದ ಅರ್ಥ**—ನಮಗೆ ನೋಡಿದಾಗ ನರಸಿಂಹನ ನಖಗಳು ಕೈಗಳಲ್ಲೂ ಕಾಲುಗಳಲ್ಲೂ ಕಾಣುವುದರಿಂದ ಅನೇಕವಿದ್ದಂತೆಯೂ ಕೈಗಳನ್ನೂ ಕಾಲುಗಳನ್ನೂ ಆಶ್ರಯಿಸಿಕೊಂಡಂತೆಯೂ ಕಾಲು–ಕೈಗಳಿಗಿಂತಲೂ ಚಿಕ್ಕವಾಗಿಯೂ ಕಾಣಿಸುತ್ತವೆ. ಇದೇ ರೀತಿ ಕೈಗಳು ಕಾಲುಗಳು ಕಣ್ಣು ಕಿವಿ ಮೊದಲಾದ ಅನೇಕ ಅವಯವಗಳೂ ಬೇರೆಬೇರೆಯಾಗಿ ಇದ್ದಂತೆಯೂ ಅಳತೆಯುಳ್ಳವುಗಳಂತೆಯೂ ಒಂದಕ್ಕೊಂದು ಭಿನ್ನವಾಗಿದ್ದಂತೆಯೂ ಕಾಣಿಸುವುವಷ್ಟೆ. ಹೀಗೆ ಕಾಣಿಸುವುದು ಅಸತ್ಯವೂ ಅಲ್ಲ–ಭ್ರಮೆಯೂ ಅಲ್ಲ. ಪ್ರತ್ಯುತ ಸರ್ವಥಾ ಸತ್ಯವೇ ಎಂಬುದನ್ನು ಬಹುವಚನಪ್ರಯೋಗದಿಂದ ತೋರಿಸಿದರು. ಹೀಗೆ ಬೇರೆಬೇರೆಯಾಗಿಯೂ ಭಿನ್ನವಾಗಿದ್ದಂತೆಯೂ ಪರಿಮಿತವಾಗಿದ್ದಂತೆಯೂ ಕಾಣುವುದು 'ವಿಶೇಷ'ವೆಂಬ ಅದ್ಭುತಶಕ್ತಿಯ ಮಹಿಮೆಯಿಂದ ಎಂದು ತಿಳಿಯಬೇಕು.

**ಏಕವಚನದ ಅರ್ಥ**—ಹೀಗೆ ಮೊದಲು ನೋಡಿದಾಗ ಭಿನ್ನಭಿನ್ನವೆಂದೂ ಅನೇಕವೆಂದೂ ಪರಿಮಿತಿಯುಳ್ಳವುಗಳಾಗಿಯೂ ಕಂಡರೂ ಕೂಡ ಅವು ಒಂದೊಂದೂ ಅಪಾರವೆಂದೂ ಅನಂತವೆಂದೂ ಆದಿಮಧ್ಯಾಂತರಹಿತವೆಂದೂ ಅಲ್ಲದೆ ಪರಸ್ಪರ ಭೇದಶೂನ್ಯವಾದುವೆಂದೂ ಹೀಗೆ ಅನಂತವಾಗಿ ಕಂಡರೂ ಒಂದೇ—ಅಭಿನ್ನ ಎಂಬ ಪ್ರಮೇಯವನ್ನು ಏಕವಚನ ಪ್ರಯೋಗದಿಂದ ತೋರಿ

ಸಿದ್ದಾರೆ. ಆ ನರಸಿಂಹನ ಗುಣ-ಗುಣಗಳಿಗೂ, ಅಂಗಾಂಗಗಳಿಗೂ ಕ್ರಿಯೆ ಗಳಿಗೂ, ರೂಪಗಳಿಗೂ, ಅವತಾರಗಳಿಗೂ ಪರಸ್ಪರ ಯಾವ ಭೇದವೂ ಇಲ್ಲವೆಂಬ ಬ್ರಹ್ಮಸೂತ್ರಗಳ ಅನೇಕ ಅಧಿಕರಣಗಳಲ್ಲೂ ಅನೇಕ ಸೂತ್ರ ಗಳಲ್ಲೂ ಪ್ರತಿಪಾದ್ಯವಾದ ರಹಸ್ಯಗಳನ್ನೂ ಈ ಏಕವಚನಪ್ರಯೋಗದಿಂದಲೇ ಸೂಚಿಸಿದರು.

**ಒಂದು ರೂಪದಲ್ಲೇ ಅನೇಕ ರೂಪಗಳು**—ನರಸಿಂಹನ ರೂಪ ದಲ್ಲೇ ಅನೇಕ ಭಗವದ್ರೂಪಗಳು ಅಡಗಿವೆಯೆಂಬುದನ್ನು ಸೂಚಿಸುವುದ-ಕ್ಕಾಗಿಯೂ ಭಗವಾನ್ ಆಚಾರ್ಯರು ಒಂದು ಶ್ಲೋಕದಲ್ಲಿ ಬಹುವಚನ ವನ್ನೂ ಮತ್ತೊಂದರಲ್ಲಿ ಏಕವಚನವನ್ನೂ ಬಳಸಿದ್ದಾರೆ. ಸೂತ್ರಭಾಷ್ಯ ದಲ್ಲೂ (೧/೧/೬ಅಧಿ. ೧೫ಸೂ) ತೈತ್ತಿರೀಯ-ಐತರೇಯ ಉಪನಿಷದ್ಭಾಷ್ಯ ಗಳಲ್ಲೂ ಹೇಳಿರುವ ವಿಚಾರಗಳನ್ನೇ ಯಥಾಮತಿ ಅನುಸಂಧಾನ ಮಾಡಿ-ಕೊಳ್ಳಬೇಕೆಂಬುದೇ ಇದರ ಪ್ರಧಾನೋದ್ದೇಶ. ಹೇಗೆಂದರೆ ನರಸಿಂಹನ ಬಲಗೈಗಳು ಅನಿರುದ್ಧರೂಪವೂ ಎಡಗೈಗಳು ಪ್ರದ್ಯುಮ್ನರೂಪವೂ ಕಾಲುಗಳು ಸಂಕರ್ಷಣರೂಪವೂ ಮುಂಡವು (ಸಂದೋಹವು) ವಾಸುದೇವರೂಪವೂ ತಲೆಯು ನಾರಾಯಣರೂಪವೂ ಆಗಿವೆ. ಅಥವಾ ಮುಂಡವು ನಾರಾಯಣ-ರೂಪವೂ ತಲೆಯು ವಾಸುದೇವರೂಪವೂ ಆಗಿವೆ. ಕಣ್ಣುಗಳು ಕಪಿಲ-ರೂಪಗಳೂ ಬಾಯಿಯು ಪರಶುರಾಮರೂಪವೂ ಆಗಿವೆ. ಅಥವಾ ಐತರೇಯ ಭಾಷ್ಯದಲ್ಲಿ ನಿರೂಪಿಸಿದಂತೆ (೨/೧/೬) ನರಸಿಂಹನ ರೋಮಗಳು ಉಷ್ಣಿಕ್ ಛಂದೋರೂಪವೂ ಗಾಯತ್ರೀಛಂದಸ್ಸೇ ತ್ವಗ್ರೂಪವೂ ತ್ರಿಷ್ಟುಪ್ಪುಗಳು ಮಾಂಸರೂಪವಾಗಿಯೂ ಅನುಷ್ಟುಪ್ ಸ್ನಾಯುರೂಪವಾಗಿಯೂ ಜಗತೀ-ಛಂದಸ್ಸುಗಳೇ ಅಸ್ಥಿರೂಪವಾಗಿಯೂ ಪಂಕ್ತಿಛಂದಸ್ಸುಗಳು ಮಜ್ಜಾರೂಪ ವಾಗಿಯೂ ಬೃಹತೀಛಂದಸ್ಸೇ ಪ್ರಾಣರೂಪವಾಗಿಯೂ ನೆಲೆಸಿವೆಯೆಂದೂ ತಿಳಿಯಬೇಕು. ಹೀಗೆ ನರಸಿಂಹನಲ್ಲೇ ನಾನಾ ರೂಪಗಳಿದ್ದರೂ ಅವುಗಳಲ್ಲಿ ಪರಸ್ಪರ ಭೇದವನ್ನು ತಿಳಿಯಬಾರದು. ಇದೇ ರೀತಿ ಆ ಭಗವಂತ ಅನಂತ-ಕೋಟಿ ಜೀವರಾಶಿಗಳಲ್ಲಿ ಕಣ್ಣು ಕಿವಿ ಮೂಗು ಮೊದಲಾದ ಭಿನ್ನಾಂಗ ಗಳಲ್ಲಿಯೂ ಅನಂತಕೋಟಿ ಭಿನ್ನಭಿನ್ನರೂಪಗಳಿಂದ ಸನ್ನಿಹಿತನಾಗಿದ್ದರೂ

ಅವೆಲ್ಲವೂ ಅಭಿನ್ನ—ಒಂದೇ, ಕಿಂಚಿನ್ಮಾತ್ರವೂ ಭೇದವಿಲ್ಲದವು, ಚಿಕ್ಕದಾಗಿದ್ದಂತೆ, ಅಳತೆಯುಳ್ಳಂತೆ ಕಂಡರೂ ಅನಂತವಾದುವು—ಅಪರಿಮಿತವಾದುವು—ಇತ್ಯಾದಿ ಅನೇಕ ಪ್ರಮೇಯಗಳನ್ನು ಶ್ರೀ ಸರ್ವಜ್ಞಾಚಾರ್ಯರು ವಚನ-ವ್ಯತ್ಯಾಸಮಾತ್ರದಿಂದ ಸೂಚಿಸಿದ್ದಾರೆಂದು ತಿಳಿಸಿ ಈ ಪ್ರಮೇಯವನ್ನು ಮುಗಿಸುವೆವು.

**ಸಕಲ ಶಾಸ್ತ್ರಾರ್ಥವೂ ಅಡಕವಾಗಿದೆ**—ವೇದಗಳು ಅನಂತವಾಗಿದ್ದರೂ ಮುಖ್ಯವಾಗಿ ವಿಷ್ಣುವನ್ನೇ ಹೇಳುತ್ತವೆಯೆಂಬುದು "ವೇದೇ-ರಾಮಾಯಣೇ ಚೈವ—" ಎಂಬ ಹರಿವಂಶವಚನದಿಂದ ಸಿದ್ಧವಾಗುತ್ತದೆ. ಆ ಅನಂತವೇದಗಳ ಅರ್ಥನಿರ್ಣಯಕ್ಕಾಗಿಯೇ ಬ್ರಹ್ಮಸೂತ್ರಗಳು ಹೊರಟಿವೆ. ಸಕಲ ವೇದವಾಕ್ಯಗಳೂ ಕೇವಲ ವಿಷ್ಣುವಾಚಕವೆಂಬುದನ್ನೇ ಈ ಸೂತ್ರಗಳು ನಿರ್ಣಯಿಸಿಕೊಡುತ್ತವೆ. ಇದನ್ನೇ "ಏತಾಃ ಸರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾ ಏಕೈವ ವ್ಯಾಹೃತಿಃ" ಎಂಬ ಐತರೇಯವಾಕ್ಯವು (೨/೨/೨) ಹೇಳುತ್ತಾ ಸಕಲ ವೇದಗಳೂ ಸಕಲ ವರ್ಣಾತ್ಮಕ ಧ್ವನ್ಯಾತ್ಮಕ ಶಬ್ದಗಳೂ ಓಂಕಾರಕ್ಕೆ ವ್ಯಾಖ್ಯಾನರೂಪವಾಗಿದ್ದು ವಿಷ್ಣುವನ್ನೇ ತಿಳಿಸುತ್ತವೆಯೆಂದು ತೋರಿಸಿಕೊಡುತ್ತದೆ. ಈ ಪ್ರಣವದ (ಓಂಕಾರದ) ವಿವರಣೆಯೇ ವ್ಯಾಹೃತಿಗಳು. ವ್ಯಾಹೃತಿಗಳ ವಿವರಣವೇ ತ್ರಿಪಾದಾತ್ಮಕವಾದ ಗಾಯತ್ರೀ. ಗಾಯತ್ರಿಯ ವಿವರಣವೇ ತ್ರಿವರ್ಗಾತ್ಮಕವಾದ ಪುರುಷಸೂಕ್ತ. "ವೇದಾಃ ಪುರುಷಸೂಕ್ತಗಾಃ" ಎಂಬ ಸ್ಮೃತಿಯು (ತಂತ್ರಸಾರ ೧, ೧೬) ಹೇಳುವಂತೆ ಸಕಲ ವೇದಗಳೂ ಪುರುಷಸೂಕ್ತದಲ್ಲಿ ಅಡಗಿವೆ. ಮತ್ತು ಕೊಟ್ಟಕೊನೆಗೆ ಇವೆಲ್ಲವೂ **ವಿಷ್ಣು**ಶಬ್ದಕ್ಕೆ ವ್ಯಾಖ್ಯಾನರೂಪವಾಗಿವೆ. ಇದೇ ಸಕಲ ಶಾಸ್ತ್ರದ ಸಾರ. ನಖಸ್ತುತಿಯಲ್ಲಿ ಬ್ರಹ್ಮಸೂತ್ರಾರ್ಥವೂ ಪ್ರಣವ, ವ್ಯಾಹೃತ್ಯಾದಿ ಸಕಲಾರ್ಥಗಳೂ ಹೇಗೆ ಅಡಗಿವೆಯೆಂದು ಹಿಂದೆ ತೋರಿಸಿಕೊಡಲಾಗಿದೆ. ಮತ್ತು ವಿಷ್ಣುಶಬ್ದಾರ್ಥಬೋಧಕವಾಗಿರುವಂತೆ ನಖಸ್ತುತಿಯಲ್ಲಿಯ ಎರಡು ಶ್ಲೋಕಗಳೂ ಎರಡು ಛಂದಸ್ಸುಗಳೂ ಹೇಗೆ ಹೆಣೆಯಲ್ಪಟ್ಟಿವೆಯೆಂಬುದನ್ನೂ ತೋರಿಸಿಕೊಡಲಾಗಿದೆ. ಅದನ್ನು ಇಲ್ಲಿ ಪುನರಾವೃತ್ತಿ ಮಾಡಿಕೊಳ್ಳಬಹುದು.

**ಪ್ರಾಮಾಣ್ಯತ್ರೈವಿಧ್ಯ**—ಕಟ್ಟಕಡೆಯದಾಗಿ ಒಂದು ಗ್ರಂಥಕ್ಕೆ ಪ್ರಾಮಾಣ್ಯವು ಸಿದ್ಧಿಸಬೇಕಾದರೆ ಅದಕ್ಕೆ ಆಪ್ತಿಮೂಲ, ಶ್ರುತಿಮೂಲ ಮತ್ತು ಯುಕ್ತಿಮೂಲವಿರಬೇಕೆಂದು ಶ್ರೀಮದಾಚಾರ್ಯರು ಅನು-ವ್ಯಾಖ್ಯಾನದಲ್ಲಿ ಹೇಳಿದ್ದನ್ನು ಸರ್ವಜ್ಞಕಲ್ಪರಾದ ಟೀಕಾಕೃತ್ಪಾದರು ನ್ಯಾಯ-ಸುಧಾದಲ್ಲಿ ವಿವರಿಸಿ ಸ್ಪಷ್ಟಪಡಿಸಿದ್ದಾರೆ. ಪ್ರಸ್ತುತ ನಖಸ್ತುತಿಯಲ್ಲಿ ಆ ಮೂರೂ ಮೂಲತ್ವಗಳು ಯಥೇಷ್ಟ ಉಪಲಭ್ಯಮಾನವಾಗಿವೆ. ಹೇಗೆಂದರೆ ನಖಸ್ತುತಿಯನ್ನು ರಚಿಸಿದ ಶ್ರೀಮದಾಚಾರ್ಯರು ಸರ್ವಜ್ಞಶಿಖಾಮಣಿಗಳೂ ಅಜ್ಞಾನಾದಿ ದೋಷದೂರರೂ ಆದ್ದರಿಂದ ವಕ್ತ್ರಾನುಕೂಲ್ಯ ಚೆನ್ನಾಗಿದೆ. ಭಕ್ತಿಭರದಿಂದ ಮೈಯುಬ್ಬಿ ಭಕ್ತ್ಯುದ್ರೇಕಾವಸ್ಥೆಯಲ್ಲಿ ತಾವು ರಚಿಸಿದ ಈ ವಾಯುಸ್ತುತಿಯನ್ನು ಪಂಡಿತಾಚಾರ್ಯರು ಶ್ರೀಮದಾಚಾರ್ಯರಿಗೆ ಸಮರ್ಪಿಸಿ ಅದಕ್ಕೆ ಫಲಸಿದ್ಧಿಯನ್ನು ಅನುಗ್ರಹಿಸಬೇಕೆಂದು ಪ್ರಾರ್ಥಿಸಿ-ಕೊಂಡಾಗ ಫಲಸಿದ್ಧಿಗಾಗಿಯೇ ನಖಸ್ತುತಿ ರಚಿತವಾಯಿತು. ಆದಕಾರಣ ಶ್ರೋತ್ರಾನುಕೂಲ್ಯವೂ ಪ್ರಸಂಗಾನುಕೂಲ್ಯವೂ ನಿಬಿಡವಾಗಿದೆ. ಹೀಗೆ ನಖಸ್ತುತಿಗೆ ಆಪ್ತಿಮೂಲತ್ವ ಅತ್ಯಂತ ಸಮರ್ಪಕವಾಗಿದೆ. ಈ ಸ್ತುತಿಯ ಪ್ರತಿಯೊಂದು ಪದದಲ್ಲಿಯೂ ಪ್ರತಿ ಪಾದದಲ್ಲಿಯೂ ಮೇಲೆ ನಿರೂಪಿಸಿದಂತೆ ಅನೇಕ ಶ್ರುತಿಸ್ಮೃತಿಪ್ರತಿಪಾದಿತ ಗಹನಾರ್ಥಗಳು ತುಂಬಿರುವುದರಿಂದ ಶ್ರುತಿ-ಮೂಲತ್ವವೂ ಅತ್ಯುತ್ಕೃಷ್ಟವಾಗಿದೆ. ಇದೇ ರೀತಿ ಪ್ರತಿಪದಕ್ಕೂ ಪ್ರತ್ಯಕ್ಷರಕ್ಕೂ ಯುಕ್ತಿಗಳು ಗರ್ಭಿತವಾಗಿ ಹೆಣೆದುಕೊಂಡಿರುವುದರಿಂದ ಯುಕ್ತಿಮೂಲತ್ವವೂ ತುಂಬಿತುಳುಕಾಡುತ್ತಿದೆ. ಆದಕಾರಣವೇ ಈ ನಖಸ್ತುತಿಯು ಇಡೀ ವಾಯುಸ್ತುತಿಗೇ ಕಿರೀಟಪ್ರಾಯವಾಗಿ ಶೋಭಿಸುತ್ತಾ ಸಕಲಾನಿಷ್ಟ-ನಿವಾರಕವೂ ಸರ್ವಾಭೀಷ್ಟಪ್ರದಾಯಕವೂ ಆಗಿದೆಯೆಂದು ಹೇಳಿ ಈ ಸಂಕ್ಷಿಪ್ತ ಪುನರಾವರ್ತನೆಯನ್ನು ಮುಗಿಸಿ ಶ್ರೀಲಕ್ಷ್ಮೀನರಸಿಂಹನ ಪಾದಾರವಿಂದಗಳಲ್ಲಿ ಸಮರ್ಪಿಸಿ ಅವನೇ ನಮ್ಮ ಬುದ್ಧಿಯಲ್ಲಿ ನಿಂತು ವಾಯುಸ್ತುತಿಯ ವ್ಯಾಖ್ಯಾನವು ನಿರ್ವಿಘ್ನವಾಗಿ ಮುಂದರಿದು ಮುಗಿಯುವಂತೆ ಕರುಣಿಸಲೆಂದು ಪ್ರಾರ್ಥಿಸುವೆವು.

# ಶ್ರೀಹರಿವಾಯುಸ್ತುತಿಃ

## ಪ್ರಥಮಃ ಶ್ಲೋಕಃ



ನಿತ್ಯಾನಿತ್ಯಸ್ಯ ವಿಶ್ವಸ್ಯ ಧಿಯೋ ಯಸ್ತು ಪ್ರಚೋದಯಾತ್ ।
ಶ್ರೀನೃಸಿಂಹಂ ಪ್ರಪನ್ನೋಽಸ್ಮಿ ನಿರ್ಮಲಜ್ಞಾನಸ್ಫೂರ್ತಯೇ ॥

1. **ಅವತಾರಿಕೆ**—ಶ್ರೀಮದ್ವಿಜಯೀಂದ್ರಸ್ವಾಮಿಗಳು ಶ್ರೀ ವ್ಯಾಸ-ರಾಜಸ್ತೋತ್ರದಲ್ಲಿ ಗುರುಭಕ್ತಿಯ ಮಹಿಮೆಯನ್ನು ವರ್ಣಿಸುತ್ತಾ

ಗುರುಭಕ್ತ್ಯಾ ಭವೇದ್ವಿಷ್ಣು—ಭಕ್ತಿರವ್ಯಭಿಚಾರಿಣೀ ।
ತಯಾ ಸರ್ವಂ ಲಭೇದ್ ಧೀಮಾನ್....

ಎಂದರೆ 'ಗುರುಭಕ್ತಿ ಮಾಡುವುದರಿಂದ ನಿಶ್ಚಲವಾದ ವಿಷ್ಣುಭಕ್ತಿ ಉದಯಿಸುತ್ತದೆಂದೂ ಅದರಿಂದ ಸಕಲೇಷ್ಟಾರ್ಥಗಳೂ ಸಿದ್ಧಿಸುತ್ತವೆ' ಯೆಂದೂ ಹೇಳಿದ್ದಾರೆ. ಅದರಂತೆ ಆದಿಗುರುಗಳಾದ ಶ್ರೀಮದಾಚಾರ್ಯರಲ್ಲಿ ಭಕ್ತಿ ಮಾಡುವುದರಿಂದ ನಿಶ್ಚಲವಾದ ವಿಷ್ಣುಭಕ್ತಿಯು ಸಿದ್ಧಿಸಿ ಸಕಲಾ-ನಿಷ್ಟಗಳೂ ನಿವಾರಣೆಯಾಗಿ ಐಹಿಕಾಮುಷ್ಮಿಕ ಸಮಸ್ತಾಭೀಷ್ಟಗಳೂ ನೆರವೇರುವುವೆಂಬುದನ್ನು ಸಜ್ಜನರಿಗೆ ತೋರಿಸಿಕೊಡುತ್ತಾ ಶ್ರೀಹರಿಯ ಮತ್ತು ಅವತಾರತ್ರಯೋಪೇತರಾದ ಶ್ರೀವಾಯುದೇವರ ಸ್ತುತಿಯನ್ನು ಒಟ್ಟಿಗೆ ಮಾಡುವ ಉದ್ದೇಶದಿಂದ ಶ್ರೀಮತ್ತ್ರಿವಿಕ್ರಮಪಂಡಿತಾಚಾರ್ಯರು 'ಶ್ರೀಮದ್ವಿಷ್ಣ್ವಂಘ್ರಿ—' ಎಂಬ ಶ್ಲೋಕದ್ವಯದಿಂದ ಶ್ರೀಹರಿಯ ಪಾದ-ಧೂಳಿಯನ್ನೂ ಹಾಗೂ ತಮಗೆ ಪ್ರತ್ಯಕ್ಷಸನ್ನಿಹಿತರಾದ, ವಾಯುದೇವರ ಮೂರನೇ ಅವತಾರಭೂತರಾದ ಶ್ರೀಮನ್ಮಧ್ವಾಚಾರ್ಯರ ಪಾದಧೂಳಿಯನ್ನೂ ಪ್ರಾರ್ಥಿಸುತ್ತಾ ಆಶೀರಾತ್ಮಕ ಮಂಗಳಾಚರಣೆಯನ್ನು ಮಾಡುತ್ತಾರೆ. ಹಾಗೆಯೇ ಗ್ರಂಥಾರಂಭದಲ್ಲಿ ಸಕಲವಾಙ್ಮನೋನಿಯಾಮಕರಾದ ರಮಾ-ಭಾರತೀದೇವಿಯರ ಸ್ಮರಣೆಯನ್ನು ಮಾಡುವುದು ಅತ್ಯವಶ್ಯಕವಾದ್ದರಿಂದ ಪ್ರಥಮಶ್ಲೋಕದ ಉತ್ತರಾರ್ಧದಲ್ಲಿ ಅವರ ಸ್ಮರಣೆಯನ್ನೂ ಮಾಡಿದ್ದಾರೆ.

2. **ಕವಿಕರ್ಣಾಮೃತದ ಅವತಾರಿಕೆ**—ಉಡುಪಿಯ ಅಷ್ಟಮಠಗಳ ಪೈಕಿ ವಿಷ್ಣುತೀರ್ಥರಿಂದ ಪ್ರಸೃತವಾದ ಸೋದೇಮಠದ ಪರಂಪರೆಗೆ ಸೇರಿದ ವೇದಾತ್ಮಯತಿಗಳು ವಾಯುಸ್ತುತಿಗೆ "ಕವಿಕರ್ಣಾಮೃತ"ವೆಂಬ ಟೀಕೆ ಬರೆದಿದ್ದಾರೆ.* ಅದರಲ್ಲಿ ಈ ರೀತಿ ಅವತಾರಿಕೆ ಕೊಟ್ಟಿದ್ದಾರೆ—ಸಕಲಕವಿಕುಲ-ಶಿರೋಮಣಿಗಳಾದ ಪಂಡಿತವರ್ಯರಾದ ಶ್ರೀಮತ್ತ್ರಿವಿಕ್ರಮಪಂಡಿತಾಚಾರ್ಯರು ಸಜ್ಜನರಿಗೆ ಮುಖ್ಯಪ್ರಾಣದೇವರ ಅವತಾರತ್ರಯದ ಪ್ರಯೋಜನವನ್ನು ತಿಳಿಸಿಕೊಟ್ಟು ಆ ಸುಜೀವರನ್ನು ಉದ್ಧಾರಮಾಡಲು ವಾಯುಸ್ತುತಿಯನ್ನು ರಚಿಸಲು ಇಚ್ಛಿಸಿದವರಾಗಿ ಆರಂಭಿಸಿದ ಆ ಸ್ತುತಿಯು ನಿರ್ವಿಘ್ನವಾಗಿ ಸಮಾಪ್ತಿಯಾಗಿ ಸಕಲಾಭೀಷ್ಟಪ್ರದವೂ ಆಗಿ ಪ್ರಸಿದ್ಧಿಗೂ ಬರುವುದಕ್ಕಾಗಿ ಶಿಷ್ಯಶಿಕ್ಷಾರ್ಥ ಆಶೀರ್ವಾದಾತ್ಮಕಮಂಗಳವನ್ನು 'ಶ್ರೀಮತ್' ಎಂಬ ಶ್ಲೋಕದಿಂದ ರಚಿಸುತ್ತಾರೆ.

3. **ವಿಶ್ವಪತಿತೀರ್ಥೀಯ ಟೀಕೆ†ಯಿಂದ**—ಶ್ರೀವಿಷ್ಣುವಿನ ಅತ್ಯರ್ಥಪ್ರಸಾದದಿಂದಲೇ ಸ್ವರೂಪಾನಂದಾವಿರ್ಭಾವರೂಪವಾದ ಮೋಕ್ಷಪ್ರಾಪ್ತಿಯಾಗುವುದರಿಂದ ಶ್ರೀವಿಷ್ಣುವೇ ಇಷ್ಟದೇವತೆಯಾದ್ದರಿಂದಲೂ ವಾಯುದೇವರೇ ಸಕಲರಿಗೂ ಮುಖ್ಯಗುರುಗಳಾದ್ದರಿಂದಲೂ ಆ ಹರಿವಾಯುಗಳಲ್ಲಿ ಸ್ವಯಂಭಕ್ತಿಯುಳ್ಳವರಾದಾಗ್ಯೂ ಶ್ರೀತ್ರಿವಿಕ್ರಮಪಂಡಿತಾಚಾರ್ಯರು

---

*ಈ ವ್ಯಾಖ್ಯಾನವು ಶ್ರೀಮಾನ್ ಬನ್ನಂಜೆ ಗೋವಿಂದಾಚಾರ್ಯರಿಂದ ಸಂಪಾದಿತವಾಗಿ ಉಡುಪಿಯ ಶ್ರೀ ಫಲಿಮಾರುಮಠದಿಂದ 1972ರಲ್ಲಿ ಪ್ರಕಾಶಿತವಾಗಿದೆ. ಈ ವ್ಯಾಖ್ಯಾನವು ಉಪಲಭ್ಯವಾಗಿದೆ. (ಮುಂದೆ ಈ ಟೀಕೆಯನ್ನು ಕ.ಕ. ಎಂಬ ಸಂಕೇತದಿಂದ ಸೂಚಿಸುವೆವು.)

†ವಿಶ್ವಪತಿತೀರ್ಥರು ಉಡುಪಿಯ ಪೇಜಾವರಮಠಕ್ಕೆ ಸೇರಿದವರು ; ಇವರು ಶ್ರೀಮಧ್ವಾಚಾರ್ಯರಿಂದ ಹತ್ತೊಂಬತ್ತನೆಯ ಮಠಾಧೀಶರು. ಇವರ ಟೀಕೆಯು ಶ್ರೀಕೃಷ್ಣ ಪ್ರೆಸ್ಸಿನಲ್ಲಿ ಮುದ್ರಿತವಾಗಿ ಪಾವಂಜೆ ಗುರುರಾಯರಿಂದ ಎರಡು ಸಾರಿ ಪ್ರಕಟಿತವಾಗಿತ್ತು. ಈಗ ದೊರಕುವುದಿಲ್ಲ. (ಮುಂದೆ ಈ ಟೀಕೆಯನ್ನು ವಿ. ಎಂಬ ಸಂಕೇತದಿಂದ ಸೂಚಿಸುವೆವು.)

ಸಕಲಸೌಭಾಗ್ಯದೇವತೆಯೂದ ಶ್ರೀದೇವಿಯನ್ನೂ ಸ್ಮರಿಸುತ್ತಾ ಶ್ರೀಹರಿವಾಯು ಗಳಿಬ್ಬರ ಸ್ತುತಿಯನ್ನು 'ಶ್ರೀಮತ್–' ಎಂಬ ಶ್ಲೋಕದಿಂದ ರಚಿಸುತ್ತಾರೆ.

**4. ಮಂದಬೋಧಿನೀ ಅವತಾರಿಕೆ**—ಋಗ್ಭಾಷ್ಯಟೀಕೆಗೆ ಟಿಪ್ಪಣೀ ಬರೆದ ಛಲಾರೀ ನರಸಿಂಹಾಚಾರ್ಯರ ಶಿಷ್ಯರಿಂದ ಛಲಾರೀ ಶೇಷಾಚಾರ್ಯರು ಬರೆದ 'ಮಂದಬೋಧಿನೀ' ಟೀಕೆಯಲ್ಲಿ* ಹೀಗೆ ಅವತಾರಿಕೆ ಬರೆದಿದ್ದಾರೆ— ಸಕಲಕವಿಕುಲತಿಲಕರೂ ಶ್ರೀಮದಾಚಾರ್ಯರ ಪೂರ್ಣಾನುಗ್ರಹಕ್ಕೆ ಪಾತ್ರರೂ ಪರಮಾಸ್ತಿಕಶಿಖಾಮಣಿಗಳೂ ಆದ ಶ್ರೀ ತ್ರಿವಿಕ್ರಮಪಂಡಿತಾ-ಚಾರ್ಯರು ವಿಶಿಷ್ಟಗುಣೋಪೇತವಾದ ದೇವತಾಸಂಕೀರ್ತನರೂಪವಾದ ಮಂಗಳವನ್ನು ರಚಿಸುತ್ತಲೇ ಸಾಧುಗಳನ್ನು ಉದ್ಧಾರ ಮಾಡುವುದಕ್ಕಾಗಿ ಮೂಲರೂಪಿ ವಾಯುದೇವರ ಹಾಗೂ ಅವರ ಅವತಾರಗಳ ಸ್ತೋತ್ರವನ್ನು 'ಶ್ರೀಮದ್ವಿಷ್ಣ್ವಂಘ್ರಿ—' ಮೊದಲಾದ ಗ್ರಂಥದಿಂದ ರಚಿಸುತ್ತಾರೆ. ಅದರಲ್ಲಿ ಮೊಟ್ಟಮೊದಲು ಶ್ರೀಮದಾಚಾರ್ಯರ ಪಾದರೇಣುಗಳನ್ನು 'ಶ್ರೀಮತ್—' ಎಂಬ ಎರಡು ಶ್ಲೋಕಗಳಿಂದ ಪ್ರಾರ್ಥಿಸುತ್ತಾರೆ.

**5. ಪ್ರಂಗನೂರು ರಾಘವೇಂದ್ರಾಚಾರ್ಯರ† ಅವತಾರಿಕೆ**— ಶ್ರೀಮತ್ತ್ರಿವಿಕ್ರಮಪಂಡಿತಾಚಾರ್ಯರು ಶ್ರೀಹರಿವಾಯುಗಳ ಸ್ತುತಿಯನ್ನು ರಚಿಸಲಿಚ್ಛಯಿಸಿ ಸಮಗ್ರಗ್ರಂಥವೂ ಭಗವತ್ಸ್ತುತಿರೂಪವೇ ಆಗಿರುವ ಕಾರಣ ಗ್ರಂಥಾರಂಭದಲ್ಲಿ ಪ್ರತ್ಯೇಕವಾಗಿ ಮಂಗಳಾಚರಣವು ಅವಶ್ಯಕವಾಗಿಲ್ಲ

---

*ಈ ಟೀಕೆಯು ಶಕೆ ೧೮೦೯ನೇ ಸರ್ವಜಿತ್ ಸಂವತ್ಸರ (ಕ್ರಿ.ಶ. 1887)ದಲ್ಲಿ ಬೆಳಗಾಂ ಸಮಾಚಾರ ಛಾಪಾಖಾನೆಯಲ್ಲಿ ಹರಿಃ ಭಿಕಾಜೀ ಸಾಮಂತ ಇವರಿಂದ ಮುದ್ರಿ-ಸಲ್ಪಟ್ಟಿತ್ತು. ಈಗ ಉಪಲಭ್ಯವಿಲ್ಲ. ನನ್ನ ಹತ್ತಿರ ಈ ಟೀಕೆಯ ಹಸ್ತಪ್ರತಿಯೊಂದೂ ಸಹ ಇದೆ. (ಈ ಟೀಕೆಯನ್ನು ಛ. ಎಂಬ ಸಂಕೇತದಿಂದ ಸೂಚಿಸುವೆವು.)

†ಈ ವ್ಯಾಖ್ಯಾನವು ಕನ್ನಡಭಾಷೆಯಲ್ಲಿ ತೆಲುಗುಲಿಪಿಯಲ್ಲಿ ಕ್ರಿ.ಶ. 1915ರಲ್ಲಿ ಮೈಸೂರಿನ ಜಯಾಲಯ ಮುದ್ರಣಾಲಯದಲ್ಲಿ ಮುದ್ರಿತವಾಗಿತ್ತು. ಇದು ಪುನಃ ಶ್ರೀ ಹೆಚ್. ಕೆ. ರಂಗನಾಥಾಚಾರ್ಯರಿಂದ ಶ್ರೀ ಉತ್ತರಾದಿಮಠ, ಬೆಂಗಳೂರು-4 ದ್ವಾರಾ 1967ರಲ್ಲಿ ಪ್ರಕಾಶಿತವಾಗಿ ಬೆಲೆಗೆ ದೊರಕುತ್ತದೆ. (ವಾಯುಸ್ತುತಿಗೆ ಶ್ರೀಹರಿ-ಪರವಾಗಿ ಅರ್ಥಮಾಡಲು ಈ ವ್ಯಾಖ್ಯಾನವೇ ನಮಗೆ ಮುಖ್ಯ ಆಧಾರ.) (ಈ ಟೀಕೆಯನ್ನು ಮುಂದೆ ಪುರಾ. ಎಂಬ ಸಂಕೇತದಿಂದ ಸೂಚಿಸುವೆವು.)

ದಿದ್ದರೂನು, ಶಿಷ್ಟಾಚಾರವು ಪರಿತ್ಯಾಜ್ಯವಲ್ಲವೆಂತ ಸೂಚಿಸಲು, ಆದಿಯಲ್ಲಿ ವಿಷ್ಣುಸಂಕೀರ್ತನರೂಪವಾದ ಮಂಗಳವನ್ನಾಚರಿಸುತ್ತಾ 'ಶ್ರೀಮದಿ–'ತ್ಯಾದಿ ಶ್ಲೋಕದ್ವಯದಿಂದ ಹರಿವಾಯುಗಳ ಪಾದಪಾಂಸುಗಳನ್ನು ಪ್ರಾರ್ಥಿಸುತ್ತಾರೆ.

**ಹರಿಃ ಓಂ ||**

**ಶ್ರೀಮದ್-ವಿಷ್ಣ್ವಂಘ್ರಿನಿಷ್ಠಾ–ತಿಗುಣಗುರುತಮ–**
**ಶ್ರೀಮದಾನಂದತೀರ್ಥ–|**
**ತ್ರೈಲೋಕ್ಯಾಚಾರ್ಯಪಾದೋ—ಜ್ವಲ-ಜಲಜ-ಲಸತ್–**
**ಪಾಂಸವೋಽಸ್ಮಾನ್ ಪುನಂತು |**
**ವಾಚಾಂ ಯತ್ರ ಪ್ರಣೇತ್ರೀ, ತ್ರಿಭುವನಮಹಿತಾ**
**ಶಾರದಾ ಶಾರದೇಂದು—|**
**ಜ್ಯೋತ್ಸ್ನಾಭದ್ರಸ್ಮಿತಶ್ರೀ**–(ಪಾಠಾಂತರ—ಜ್ಯೋತ್ಸ್ನಾಭದ್ರಸ್ಮಿತಶ್ರೀಃ)
**ಧವಳಿತ-ಕಕುಭಾ ಪ್ರೇಮಭಾರಂ ಬಭಾರ || ೧ ||**

6. **ಪದವಿಭಾಗ**–ಶ್ರೀಮದ್....ಪಾಂಸವಃ (ಒಂದೇ ಪದ), ಅಸ್ಮಾನ್, ಪುನಂತು, ವಾಚಾಂ, ಯತ್ರ, ಪ್ರಣೇತ್ರೀ, ತ್ರಿಭುವನಮಹಿತಾ, ಶಾರದಾ, ಶಾರದೇಂದು....ಕಕುಭಾ, ಪ್ರೇಮಭಾರಂ, ಬಭಾರ. (ಪಾಠಾಂತರ ರೀತ್ಯಾ–ಶಾರದೇಂದು....ಸ್ಮಿತಶ್ರೀಃ, ಧವಳಿತಕಕುಭಾ)

7. **ಶ್ಲೋಕದ ವಿಶ್ಲೇಷಣೆ**—ಈ ಶ್ಲೋಕದಲ್ಲಿ ಮುಖ್ಯವಾಗಿ ಪಾಂಸವಃ ಎಂಬುದೇ ಕರ್ತೃಪದ, ಅಸ್ಮಾನ್ ಕರ್ಮಪದ, ಪುನಂತು ಕ್ರಿಯಾ-ಪದ. ಹೀಗೆ ಪಾಂಸವಃ ಅಸ್ಮಾನ್ ಪುನಂತು=ಧೂಳಿಗಳು ನಮ್ಮನ್ನು ಕಾಪಾಡಲಿ ಎಂಬುದೇ ಪ್ರಧಾನವಾಕ್ಯ. ಧೂಳಿಗಳಿಗೆ ಅಂಥಾ ಶಕ್ತಿ ಎಲ್ಲಿ ಬಂತು ? ಎಂಬ ಆಕಾಂಕ್ಷೆ ಬಂದರೆ ಅದರ ಪರಿಹಾರಕ್ಕಾಗಿ 'ಶ್ರೀಮದಾನಂದ-ತೀರ್ಥ....ಪಾದ....ಪಾಂಸವಃ' ಎಂದು ಹೇಳುತ್ತಾರೆ. ಪಾದಕ್ಕೆ 'ಉಜ್ವಲ-ಜಲಜ'ದಂತಿರುವ ಎಂಬ ವಿಶೇಷಣ(ಉಪಮಾನ)ವನ್ನೂ ಶ್ರೀಮದಾಚಾರ್ಯ ಎಂಬುದಕ್ಕೆ 'ಶ್ರೀಮದ್....ಗುರುತಮ' ಎಂದೂ 'ತ್ರೈಲೋಕ್ಯಾಚಾರ್ಯ' ಎಂದೂ, ಪಾಂಸವಃ ಎಂಬುದಕ್ಕೆ 'ಲಸತ್' ಎಂದೂ ವಿಶೇಷಣ ಕೊಟ್ಟಿದ್ದಾರೆ.

ಒಟ್ಟಿನಲ್ಲಿ ಶ್ರೀಮದಾಚಾರ್ಯರ ಪಾದಕಮಲದ ಧೂಳು ನಮ್ಮನ್ನು ಕಾಪಾಡಲಿ —ಎಂಬುದೇ ಮುಖ್ಯಭಾಗ.

**8. ಉತ್ತರಾರ್ಧದ ಅನ್ವಯ**—ಇಲ್ಲಿ 'ಯತ್ರ ಶಾರದಾ ಪ್ರೇಮ-ಭಾರಂ ಬಭಾರ' ಎಂಬುದೇ ಮುಖ್ಯಭಾಗ. ಇದಕ್ಕೆ 'ಯಾವ ಪಾದಧೂಳುಗಳಲ್ಲಿ ಭಾರತೀದೇವಿಯೇ ಪ್ರೇಮದ ಹೊರೆಯನ್ನು ಹೊತ್ತಿದ್ದಾಳೋ' ಎಂದರ್ಥ. ಆ ಶಾರದೆಯ ಮಹಿಮೆಯನ್ನು ೧) ವಾಚಾಂ ಪ್ರಣೇತ್ರೀ, ೨) ತ್ರಿಭುವನಮಹಿತಾ, ೩) ಶಾರದೇಂದು....ಕಕುಭಾ ಎಂಬ ಮೂರು ವಿಶೇಷಣಗಳಿಂದ ವರ್ಣಿಸಿದ್ದಾರೆ.

**9. ವಿಶೇಷ**—ಪಂಡಿತಾಚಾರ್ಯರು ತೋರಿಸಿಕೊಟ್ಟ ಮಾರ್ಗವನ್ನೇ ಅವಲಂಬಿಸಿ ಮಹಾನುಭಾವರಾದ ವ್ಯಾಸರಾಯರೂ ಮಂತ್ರಾಲಯದ ರಾಯರೂ ಆಚಾರ್ಯರ ಪಾದಧೂಳಿಯ ಮಹಿಮೆಯನ್ನೇ ಮನಸ್ಸಿಗೆ ನಾಟುವಂತೆ ವರ್ಣಿಸಿದ್ದಾರೆ. ಇವರಿಬ್ಬರ ಹೇಳಿಕೆಗಳೂ ಚಿಕ್ಕ ಶ್ಲೋಕಗಳಾಗಿರುವುವಲ್ಲದೆ ಅವುಗಳಿಂದ ಈ ಪ್ರಥಮಶ್ಲೋಕದ ಅರ್ಥಕ್ಕೆ ಪುಷ್ಟಿ ಕೊಟ್ಟಂತೆ ಆಗುವುದರಿಂದ ಆ ಎರಡು ಶ್ಲೋಕಗಳನ್ನೂ ಅರ್ಥಸಹಿತ ಇಲ್ಲಿ ಸೇರಿಸಿದೆ.

**10. ಶ್ರೀ ವ್ಯಾಸರಾಯರು ಮಾಡಿರುವ ಸ್ತುತಿ**—ಶ್ರೀ ವ್ಯಾಸ-ರಾಯರು ತಮ್ಮ 'ತಾತ್ಪರ್ಯಚಂದ್ರಿಕಾ'ದ ಮಂಗಳಶ್ಲೋಕದಲ್ಲಿ ಹೀಗೆ ಸ್ತುತಿಸಿದ್ದಾರೆ.

> ಶ್ರೀಮದಾನಂದತೀರ್ಥಾರ್ಯ—ಪಾದಪಂಕಜರೇಣವಃ ।
> ಪವಿತ್ರಯಂತು ಮಾಂ ನಿತ್ಯಂ ಪಾಪಪಾಟನಪಂಡಿತಾಃ ॥

(ಕಠಿನ ಶಬ್ದಾರ್ಥ) ಪಂಕಜ–ಕಮಲ, ರೇಣವಃ–ಧೂಳಿಗಳು, ಪಾಟನ–ಧ್ವಂಸಮಾಡುವುದರಲ್ಲಿ, ಪಂಡಿತಾಃ–ನಿಸ್ಸೀಮವಾದ, ಅತ್ಯಂತಪಟುವಾದ. ನಿತ್ಯಂ ಎಂಬುದನ್ನು ಕ್ರಿಯಾಪದದ ಜೊತೆಯೂ, ಪಾಪಪಾಟನ ಎಂಬುದರ ಜೊತೆಯೂ ಎರಡೂ ಕಡೆ ಅನ್ವಯಿಸಿಕೊಳ್ಳಬೇಕು. (ಭಾವಾರ್ಥ) ನಿತ್ಯವೂ ಪಾಪಗಳನ್ನು ಧ್ವಂಸ ಮಾಡುವುದರಲ್ಲಿ ನಿಸ್ಸೀಮಗಳಾದ ಶ್ರೀಮನ್ಮಧ್ವಾ-ಚಾರ್ಯರ ಪಾದಕಮಲಗಳ ರೇಣುಗಳು ನನ್ನನ್ನು ನಿತ್ಯವೂ ಪರಿಶುದ್ಧ ಮಾಡಲಿ. ಮನುಷ್ಯರು ಎಷ್ಟೇ ಪರಿಶುದ್ಧರಾದರೂ ಮತ್ತೆಮತ್ತೆ ಪಾಪ

ಗಳನ್ನು ಮಾಡುತ್ತಲೇ ಇರುತ್ತಾರೆ. ಮತ್ತೆಮತ್ತೆ ಅಶುದ್ಧರಾಗುತ್ತಲೇ ಇರುತ್ತಾರೆ. ಆದಕಾರಣ ವ್ಯಾಸರಾಯರು 'ಮಾಂ ನಿತ್ಯಂ ಪವಿತ್ರಯಂತು' ದಿನೇದಿನೇ ಕ್ಷಣೇಕ್ಷಣೇ ಪವಿತ್ರಮಾಡುತ್ತಿರಲಿ ಎನ್ನುತ್ತಾರೆ. ಪುನಃಪುನಃ ಶುದ್ಧಿಮಾಡುವ ಶಕ್ತಿ ಆ ರೇಣುಗಳಿಗೆ ಉಂಟೆಂದು ಪ್ರತಿಪಾದಿಸುವುದಕ್ಕಾಗಿ 'ನಿತ್ಯಂ' ಎಂಬುದನ್ನು ಪಾಪಪಾಟನಪಂಡಿತಾಃ ಎಂಬುದರ ಹಿಂದೆಯೇ ಸೇರಿ-ಸಿದ್ದಾರೆ. ವಾಯುಸ್ತುತಿಯಲ್ಲಿ ಹೇಳಿದ 'ಪುನಂತು' ಎಂಬುದನ್ನೇ ಸ್ಪಷ್ಟ ಪಡಿಸುತ್ತಾ 'ಪವಿತ್ರಯಂತು' ಎಂದು ಹೇಳಿದ್ದಾರೆ.

**11. ಶ್ರೀ ರಾಘವೇಂದ್ರಸ್ವಾಮಿಗಳು ಮಾಡಿರುವ ಸ್ತುತಿ—** 'ಚಂದ್ರಿಕಾಪ್ರಕಾಶ'ವೆಂಬ ಟಿಪ್ಪಣೀಗ್ರಂಥದ ಮಂಗಳಾಚರಣೆಯಲ್ಲಿ ಶ್ರೀಮದಾಚಾರ್ಯರ ಪಾದಧೂಳಿಗಳನ್ನು ಹೀಗೆ ಪ್ರಾರ್ಥಿಸಿದ್ದಾರೆ—

ಶರ್ವಾದಿಸರ್ವಗೀರ್ವಾಣ—ನಿರ್ವಾಣಗತಿಹೇತವಃ ।
ಪೂರ್ಣಪ್ರಜ್ಞ-ಪದಾಂಭೋಜ—ಪಾಂಸವಃ ಪಾಂತು ನಃ ಸದಾ ॥

(ಕಠಿನ ಶಬ್ದಾರ್ಥ) ಶರ್ವ–ರುದ್ರದೇವರು, ಗೀರ್ವಾಣ–ದೇವತೆಗಳು, ನಿರ್ವಾಣ–ಮೋಕ್ಷ, ಮುಕ್ತಿ, ಗತಿ–ದಿಕ್ಕು, ಗುರಿ, ಹೇತವ-(ಬಹುವಚನ) ಕಾರಣೀಭೂತವಾದ, ಪೂರ್ಣಪ್ರಜ್ಞ–ಸರ್ವಜ್ಞರಾದ ಶ್ರೀಮದಾಚಾರ್ಯರು, ಪದ+ಅಂಭೋಜ–ಪಾದಕಮಲಗಳ, ಪಾಂಸವಃ-ಧೂಳಿನ ಕಣಗಳು, ಪಾಂತು-ರಕ್ಷಿಸಲಿ, ಕಾಪಾಡಲಿ, ನಃ–ನಮ್ಮನ್ನು. (ಭಾವಾರ್ಥ) ರುದ್ರಾದಿ ಸಕಲ ದೇವತೆಗಳಿಗೂ ಮೋಕ್ಷಪ್ರಾಪ್ತಿಗೆ (ಮುಕ್ತಿಯೆಂಬ ಗುರಿಯನ್ನು ಸಾಧಿಸುವು-ದಕ್ಕೆ) ಕಾರಣೀಭೂತವಾದ ಶ್ರೀಮದಾಚಾರ್ಯರ ಪಾದಕಮಲಗಳ ಧೂಳು ಗಳು ಸದಾ (ಮೋಕ್ಷಕ್ಕೆ ಪೂರ್ವದಲ್ಲೂ ಮೋಕ್ಷಾನಂತರದಲ್ಲೂ ಯಾವಾ-ಗಲೂ) ನಮ್ಮನ್ನು ಕಾಪಾಡಲಿ. (ಸೂಚನೆ) ತ್ರಿವಿಕ್ರಮಪಂಡಿತಾಚಾರ್ಯರು ಭಾರತಿಯು ಆ ಪಾದಧೂಳಿನಲ್ಲಿ ಪ್ರೇಮದ ಹೊರೆಯನ್ನೇ ಧರಿಸಿದ್ದಾಳೆ ಎಂದು ಹೇಳಿ ಅವಳಿಗಿಂತ ಅವರರಾದ ರುದ್ರಾದಿಗಳೂ ಅವಶ್ಯ ಧರಿಸುತ್ತಾರೆ ಎಂದು ಸೂಚಿಸಿದ್ದನ್ನೇ ಮಹಾನುಭಾವರಾದ ರಾಯರು ಸ್ಪಷ್ಟಪಡಿಸಿ, ರುದ್ರಾದಿ ಸರ್ವದೇವತೆಗಳೂ ಆದರಿಸುತ್ತಾರೆ ಎಂದು ಹೇಳಿದರು. ಆ ಆದರಕ್ಕೆ ಕಾರಣವನ್ನು ತೋರಿಸುತ್ತಾ 'ನಿರ್ವಾಣಗತಿಹೇತವಃ' ಎಂದರು.

ರುದ್ರಾದಿಗಳ ಮೋಕ್ಷಕ್ಕೇ ಕಾರಣೀಭೂತವಾಗಿರುವಾಗ ಆ ಪಾದಧೂಳು ನಮಗೂ ಮೋಕ್ಷಕ್ಕೆ ಕಾರಣವಾಗಿವೆಯೆಂದು ಹೇಳುವುದೇನಿದೆ ಎಂದು ಸೂಚಿಸಿದ್ದಾರೆ.

**12. ಶ್ರೀಹರಿಪರವಾಗಿ ಅನ್ವಯ**—ಈ ಶ್ಲೋಕಕ್ಕೆ ಶ್ರೀಹರಿ ಪರವಾಗಿ ಅರ್ಥ ಹೇಳುವಾಗ ಕೆಲವು ಶಬ್ದಗಳಿಗೆ ಬೇರೆ ರೀತಿ ಅರ್ಥ ಹೇಳ-ಬೇಕಾಗುತ್ತದೆ. ಆಗ ಈ ರೀತಿ ಅರ್ಥವಾಗುತ್ತದೆ:—ಶ್ರೀಹರಿಯ ಪಾದಧೂಳು ಅವನ ಪಾದಗಳನ್ನೇ ಆಶ್ರಯಿಸಿವೆ, ಅದೇ ಅವುಗಳ ಮಹತ್ವ. ಅವುಗಳೇ ರಮಾಬ್ರಹ್ಮಾದಿ ಸಕಲ ಚೇತನವರ್ಗದ ಆನಂದಕ್ಕೂ ಕಾರಣೀಭೂತವಾಗಿವೆ. ಆದಕಾರಣ ಅವುಗಳನ್ನು ಬ್ರಹ್ಮಾದಿ ದೇವತೆಗಳೆಲ್ಲರೂ ತಮ್ಮ ಹೃದಯದಲ್ಲಿ ಧ್ಯಾನಿಸುತ್ತಿರುತ್ತಾರೆ. ಇಂಥಾ ಶ್ರೀಹರಿಯ ಪಾದಧೂಳು ನಮ್ಮನ್ನು ಪವಿತ್ರ ಮಾಡಲಿ ಎಂಬುದು ಪೂರ್ವಾರ್ಧದ ಭಾವ. ಆ ಧೂಳಿಯನ್ನು ಸಕಲ ವಾಗಭಿಮಾನಿಯಾದ ರಮಾದೇವಿಯೂ ಪ್ರೇಮದಿಂದ ಗೌರವಿಸುತ್ತಾಳೆ ಎಂಬುದು ಉತ್ತರಾರ್ಧದ ಭಾವ.

ಅನ್ವಯಾರ್ಥ ಹೇಳುವುದಕ್ಕೆ ಮೊದಲು ಈ ಶ್ಲೋಕದಲ್ಲಿರುವ ಮುಖ್ಯ ಪದಗಳಿಗೆ ಹರಿಪರ ವಾಯುಪರ ಎರಡೂ ಅರ್ಥವನ್ನು ವಿವರಿಸುವೆವು. ಆಗ ಅನ್ವಯಾರ್ಥ ಸುಲಭವಾಗಿ ತಿಳಿಯುತ್ತದೆ.

## ಶಬ್ದಗಳ ಅರ್ಥವಿವರಣೆ

**13. ಶ್ರೀಮಾನ್**—ನಖಸ್ತುತಿಯ ವಿವರಣೆಯಲ್ಲೇ (ಪುಟ ೧೮—೨೧) ಈ ಶಬ್ದದ ಅರ್ಥವನ್ನು ವಿಷ್ಣುಪರವಾಗಿ ವಿವರಿಸಿರುವುದರಿಂದ ಪುನಃ ಹೇಳುವುದು ಅನಾವಶ್ಯಕ. ಆದರೆ ಆಚಾರ್ಯರ ಪರವಾಗಿಯೂ ಶ್ರೀಮಚ್ಛಬ್ದಪ್ರಯುಕ್ತವಾಗಿರುವುರಿಂದ ಕೆಲವು ಹೆಚ್ಚಿಗೆ ವಿಷಯಗಳನ್ನು ಹೇಳಬೇಕಾಗುತ್ತದೆ..

**14. ಶ್ರೀಮಾನ್–ವಾಯುಪರಾರ್ಥ**—**ಶ್ರೀ** ಶಬ್ದಕ್ಕೆ ಸಂಪತ್ತು ಎಂದರ್ಥವಿರುವುದರಿಂದ ಶ್ರೀಮತ್ ಎಂದರೆ ಸಂಪತ್ತುಳ್ಳ ಎಂದರ್ಥ. ಬೃಹದಾರಣ್ಯಕದಲ್ಲಿ (೨/೨/೨೫–೬) 'ತಸ್ಯ ಹೈತಸ್ಯ ಸ್ವಂ ವೇದ', 'ತಸ್ಯ ಹೈತಸ್ಯ ಸಾನ್ನೋ ಯಃ ಸುವರ್ಣಂ ವೇದ' ಎಂದು ವಾಯುದೇವರಿಗೆ ಗೃಹ-

ಕೋಶಾದಿಗಳಿಗೆ ಒಡೆತನದ ಒಂದು ಮಹಿಮೆಯೂ ಭೂಷಣಗಳಿಗೂ ಸ್ವರ್ಣ (ಬಂಗಾರ)ಕ್ಕೂ, ಅಭಿಮಾನಿತ್ವವೆಂಬ ಮಹಿಮೆಯಿದೆಯೆಂದೂ ಈ ಮಹಿಮೆಯನ್ನು ತಿಳಿದವರಿಗೆ ಗೃಹಕೋಶಾದಿ ಸಂಪತ್ತೂ ಸ್ವರ್ಣಾಭರಣಾದಿ ಐಶ್ವರ್ಯವೂ ಪ್ರಾಪ್ತವಾಗುವುದೆಂದು ಹೇಳಿದೆ. ಇದರಿಂದಲೇ ಶ್ರೀಮದಾಚಾರ್ಯರು 'ಸಂಪತ್ತುಳ್ಳ'ವರೆಂಬುದರ ಅರ್ಥವಾಗುತ್ತದೆ. ಇದು ಲೌಕಿಕಸಂಪತ್ತಾಯಿತು. ಅಷ್ಟು ಮಾತ್ರವಲ್ಲ. ಜ್ಞಾನಭಕ್ತಿವೈರಾಗ್ಯಗಳು ಶಮದಮಾದಿ ಪಾರಮಾರ್ಥಿಕಸಂಪತ್ತೂ ಉಳ್ಳವರೆಂದೂ ತಿಳಿಯಬೇಕು. ಇದನ್ನೇ ಛಲಾರೀಯರು 'ಜ್ಞಾನಭಕ್ತ್ಯಾದಿಗುಣೈಃ ಶೋಭಮಾನಾ ಇತ್ಯರ್ಥಃ' ಎಂದು ತೋರಿಸಿದ್ದಾರೆ.

ಇನ್ನು ಎಲ್ಲರ ಹೆಸರುಗಳ ಹಿಂದೆಯೂ ಶ್ರೀ, ಶ್ರೀಮಾನ್ ಅಥವಾ ಶ್ರೀಯುತ (ಹೆಂಗಸಿಗಾದರೆ ಶ್ರೀ ಅಥವಾ ಶ್ರೀಮತಿ) ಎಂದು ಸೇರಿಸುವುದೂ ಶಿಷ್ಟರ ಪದ್ಧತಿ. ಇಲ್ಲಿ ಶ್ರೀ ಶಬ್ದವು ಗೌರವ–ಆದರಗಳ ಸೂಚಕ. ಇದಕ್ಕೆ ಕೆಳಗಿನ ಶ್ಲೋಕವೇ ಪ್ರಮಾಣ (ಹಲಾಯುಧಕೋಶದ ಟಿಪ್ಪಣಿಯಿಂದ)—

ದೇವಂ ಗುರುಂ ಗುರುಸ್ಥಾನಂ ಕ್ಷೇತ್ರಂ ಕ್ಷೇತ್ರಾಧಿದೇವತಾಮ್ ।
ಸಿದ್ಧಂ ಸಿದ್ಧಾಧಿಕಾರಾಂಶ್ಚ ಶ್ರೀಪೂರ್ವಂ ಸಮುದೀರಯೇತ್ ॥

**15. ವಿಷ್ಣುಶಬ್ದಾರ್ಥ**–ಅಮರಕೋಶದ ವ್ಯಾಖ್ಯಾ ಸುಧಾಟೀಕಾದಿ ಗ್ರಂಥಗಳಲ್ಲಿ ವಿಷ್ಣುಶಬ್ದಾರ್ಥವನ್ನು 'ವೇವೇಷ್ಟಿ–ವ್ಯಾಪ್ನೋತಿ ವಿಶ್ವಂ ಯಃ ವಿಷ್ಣುಃ' ಎಂದರೆ ಇಡೀ ವಿಶ್ವ (ಬ್ರಹ್ಮಾಂಡ)ವನ್ನು ಒಳಗೆ ಹೊರಗೆಲ್ಲಾ ವ್ಯಾಪಿಸಿಕೊಂಡಿರುವುದರಿಂದ ವಿಷ್ಣು ಎಂದು ವ್ಯುತ್ಪತ್ತಿ ತೋರಿಸಿದ್ದಾರೆ. ವಿಷಲೃ ವ್ಯಾಪ್ತೌ–ವ್ಯಾಪಿಸು ಎಂಬ ಜುಹೋತ್ಯಾದಿ (3ನೇ ಗಣ) ಉಭಯಪದಿ ಧಾತುವಿನ ಮೇಲೆ 'ಸ್ಥೋಣುಃ' (ಉಣಾದಿ ೩/೩೭) ಎಂಬ ಸೂತ್ರದಿಂದ ಣು ಪ್ರತ್ಯಯ ಬರಲು 'ವಿಷೇಃ ಕಿಚ್ಚ' (ಉ. ೩/೩೯) ಎಂಬ ಸೂತ್ರದಂತೆ ವಿಷ್ ಧಾತುವಿಗೆ ಕಿತ್ ಸಂಜ್ಞಾ ಹೇಳಿರುವುದರಿಂದ ಗುಣಬರುವುದಿಲ್ಲ. ಆದಕಾರಣ ವಿಷ್+ಣು ಸೇರಿ ವಿಷ್ಣುಃ ಎಂದಾಗುತ್ತದೆ.

**16. 2ನೇ ಅರ್ಥ**—(ಹಲಾಯುಧಕೋಶದಿಂದ) ವೇಷತಿ-ಸಿಂಚತಿ; ಆಪ್ಯಾಯತೇ ವಿಶ್ವಮಿತಿ ವಾ। 'ಜಿಷು ವಿಷು ಮಿಷು ಸೇಚನೇ' ಎಂದು ಧಾತು-

ಪಾಠವಿರುವುದರಿಂದ ವಿಷ್ (ಪರಸ್ಮೈ) ಧಾತುವಿಗೆ ನೆನೆಸು, ತೋಯಿಸು ಎಂದು ಅರ್ಥವಿದೆ. ಅದರಂತೆ ಜಗತ್ತಿಗೆ ಮಳೆಯನ್ನು ಸುರಿಸಿ ತಣಿಸುವುದರಿಂದಲೂ ವಿಷ್ಣು. ಹಿಂದಿನಂತೆಯೇ ವ್ಯಾಕರಣಾಂಶ.

**17. 3ನೇ ಅರ್ಥ**—(ಹಲಾ.) ವಿಷ್ಣಾತಿ ವಿಯುನಕ್ತಿ ಭಕ್ತಾನ್ ಸಂಸಾರಾದಿತಿ ವಾ । ವಿಷ ವಿಪ್ರಯೋಗೇ ಎಂದು (ಕ್ರ್ಯಾದಿ 9ಗ. ಪರ.) ಧಾತುಪಾಠವಿರುವುದರಿಂದ ವಿಷ್ ಎಂದರೆ ಬೇರ್ಪಡಿಸು, ದೂರಮಾಡು ಎಂದರ್ಥ. ಈ ಧಾತುವಿನ ಮೇಲೆ ಹಿಂದಿನಂತೆಯೇ ಣು ಪ್ರತ್ಯಯ ಬಂದು, ಭಕ್ತರನ್ನು ಸಂಸಾರದಿಂದ ಬೇರ್ಪಡಿಸುವವನಾದ್ದರಿಂದಲೂ ವಿಷ್ಣು ಎಂದರ್ಥ.

**18. 4ನೇ–5ನೇ ಅರ್ಥಗಳು**—(ಅಲ್ಲೇ) ವಿಶತಿ ಸರ್ವಭೂತಾನೀತಿ ವಾ, ವಿಶಂತಿ ಸರ್ವಭೂತಾನಿ ಅತ್ರೇತಿ ವಾ ವಿಷ್ಣುಃ । ವಿಶ್ (ತುದಾದಿ 6ಗ. ಪರಸ್ಮೈ) ಧಾತುವಿಗೆ ಪ್ರವೇಶಿಸು ಎಂದು ಅರ್ಥವಿರುವುದರಿಂದ ಸರ್ವಭೂತ-ಗಳಲ್ಲೂ ಪ್ರವಿಷ್ಟನಾಗಿರುವುದರಿಂದಲೂ ಸರ್ವಭೂತಗಳೂ ಇವನಲ್ಲಿ ಆಶ್ರಿತ-ವಾಗಿರುವುದರಿಂದಲೂ ವಿಷ್ಣು ಎಂದರ್ಥ. ಇದಕ್ಕೆ ಪ್ರಮಾಣವಾಕ್ಯಗಳು—'ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ' (ಮಹಾನಾರಾಯ-ಣೋಪನಿಷತ್ ೧/೧೩)–ಸಕಲ ಜಗತ್ತನ್ನೂ ಒಳಗೆ ಹೊರಗೆ ಎಲ್ಲ ಕಡೆಯೂ ನಾರಾಯಣನು ವ್ಯಾಪಿಸಿಕೊಂಡಿದ್ದಾನೆ. ವಿಷ್ಣುಪುರಾಣದಲ್ಲಿ (೩/೧/೪೫)

ಯಸ್ಮಾದ್ ವಿಷ್ಟಮಿದಂ ಸರ್ವಂ ತಸ್ಯ ಶಕ್ತ್ಯಾ ಮಹಾತ್ಮನಃ ।
ತಸ್ಮಾದ್ ವಿಷ್ಣುರಿತಿ ಖ್ಯಾತೋ ವಿಶೇರ್ಧಾತೋಃ ಪ್ರವೇಶನಾತ್ ॥

ಎಂದು ಹೇಳಿದೆ. ಆ ಭಗವಂತನು ತನ್ನ ಅದ್ಭುತಶಕ್ತಿಯ ಮಹಿಮೆಯಿಂದ ಈ ಸಕಲ ಜಗತ್ತನ್ನು ಒಳಗೆ–ಹೊರಗೆಲ್ಲಾ ಪ್ರವೇಶಿಸಿ ವ್ಯಾಪಿಸಿಕೊಂಡಿರುವುದರಿಂದ ಅವನಿಗೆ ವಿಷ್ಣುವೆಂದು ಹೆಸರು. ವಿಶ್ ಧಾತುವಿಗೆ ಪ್ರವೇಶಿಸು ಎಂದು ಅರ್ಥವಿರುವುದರಿಂದ ಈ ಅರ್ಥ ಸಮಂಜಸವಾಗುತ್ತದೆ. ಇಲ್ಲಿಯ ವ್ಯಾಕರಣಾಂಶವನ್ನು ಶ್ರೀ ಸತ್ಯಧರ್ಮತೀರ್ಥರು 'ತತ್ವಸಂಖ್ಯಾನಟೀಕೆ'ಯ ಟಿಪ್ಪಣಿಯಲ್ಲಿ ಹೀಗೆ ತೋರಿಸಿದ್ದಾರೆ—"ವಿಶಪ್ರವೇಶನ ಇತ್ಯಸ್ಮಾತ್ 'ಉಣಾ-ದಯೋ ಬಹುಲಮ್' (ಪಾ. ೩/೩/೧) ಇತಿ ಕ್ನು ಪ್ರತ್ಯಯೇ ಪೃಶೋದರಾ-ದಿತ್ವಾತ್ ಶಸ್ಯ ಷತ್ವೇ ಣತ್ವೇ ಚ ರೂಪಮ್" ವಿಶ್ ಧಾತುವಿನ ಮೇಲೆ

ಉಣಾದಿ ಪ್ರತ್ಯಯಗಳು ಬಹುವಿಧವಾಗಿವೆಯೆಂದು ಪಾಣಿನಿಮುನಿ ಹೇಳಿರುವುದರಿಂದ ಕ್ಸ್ನು ಪ್ರತ್ಯಯ ಬರಲು ವಿಶ್+ಕ್ಸ್ನು ಎಂದಿರಲು ಈ ಪದ ಪೃಶೋದರಾದಿಗಣಕ್ಕೆ ಸೇರಿದ್ದಾದ್ದರಿಂದ ಶಕಾರಕ್ಕೆ ಷಕಾರಾದೇಶ ಬಂದು ವಿಷ್+ಕ್ಸ್ನು ಎಂದಿರಲು ಪಾಣಿನಿಯ ೮–೪–೧ರ ಪ್ರಕಾರ ನಕಾರಕ್ಕೆ ಣತ್ವ ಬರಲು ವಿಷ್+ಸ್ನು–ವಿಷ್ಣು ಎಂದಾಗಿದೆ. ಶ್ರೀ ಸತ್ಯಧರ್ಮರು ಆ ಸಂದರ್ಭದಲ್ಲೇ ವಿಷ್ಣುಶಬ್ದಕ್ಕೆ ಇನ್ನೂ ಕೆಲವು ಅರ್ಥಗಳನ್ನೂ ತೋರಿಸಿಕೊಟ್ಟಿದ್ದಾರೆ (ತತ್ವಸಂಖ್ಯಾನ ಟಿಪ್ಪಣೀ).

**19. ಆರನೇ ಅರ್ಥ**—ವಿಯಂತ್ಯನೇನ ಮೋಕ್ಷಂ ಪ್ರತಿ ಜನಾ ಇತಿ ವಾ ವಿಷ್ಣುಃ । ಗತ್ಯರ್ಥಾದ್ ವೀಧಾತೋಃ ಕರಣೇ ಕ್ಸ್ನು ಪ್ರತ್ಯಯೇ ಪೃಷೋದರಾದಿತ್ವಾತ್ ವೀಕಾರಸ್ಯ ಹ್ರಸ್ವತ್ವೇ ಕಿತ್ವಾದ್ಗುಣಾಭಾವೇ 'ಆದೇಶ-ಪ್ರತ್ಯಯಯೋಃ' (ಪಾ. ೮/೩/೫೯) ಇತಿ ಸಸ್ಯ ಷತ್ವೇ 'ರಷಾಭ್ಯಾಂ ನೋಣಃ ಸಮಾನಪದೇ' (ಪಾ. ೮/೪/೧) ಇತಿ ನಸ್ಯ ಣತ್ವೇ ರೂಪಮ್ । 'ವೀ ಗತಿ-ವ್ಯಾಪ್ತಿಪ್ರಜನಕಾಂತ್ಯಸನಖಾದನೇಷು' ಎಂದು ಧಾತುಪಾಠವಿರುವುದರಿಂದ ಗತ್ಯರ್ಥವಾದ ವೀ-ಧಾತುವಿನ ಮೇಲೆ ಕರಣಾರ್ಥದಲ್ಲಿ (ತೃತೀಯಾರ್ಥದಲ್ಲಿ) ಕ್ಸ್ನು ಎಂಬ ಉಣಾದಿ ಪ್ರತ್ಯಯ ಬರಲು ವೀಯ ದೀರ್ಘಕ್ಕೆ ಹ್ರಸ್ವಾದೇಶ (ಪೃಷೋದರಾದಿಗಣಕ್ಕೆ ಸೇರಿದ್ದರಿಂದ) ಬರಲು, ಪಾಣಿನಿಯ ೮/೩/೫೯ ರಂತೆ ಪ್ರತ್ಯಯದ ಸಕಾರಕ್ಕೆ ಷಕಾರಾದೇಶ ಬರಲು, ಷ (ಕಾರಯೋಗವಿರುವುದರಿಂದ ನಕಾರಕ್ಕೆ ಪಾ. ೮/೪/೧ರಂತೆ ಣತ್ವವು) ಬರಲು ವಿಷ್ಣು ಎಂದಾಗುತ್ತದೆ ; ಆದ್ದರಿಂದ—ಇವನಿಂದ ಜನಗಳು ಮೋಕ್ಷಕ್ಕೆ ಹೋಗುವರಾದ್ದರಿಂದಲೂ ವಿಷ್ಣು. ಪ್ರಮಾಣಗಳು–ವಿಷ್ಣುರ್ಹಿ ದಾತಾ ಮೋಕ್ಷಸ್ಯ (ತಾತ್ಪರ್ಯನಿರ್ಣಯ-೧/೭೯), 'ಅಹಂ ಭೋಗಪ್ರದೋ ವತ್ಸ ಮೋಕ್ಷದಸ್ತು ಜನಾರ್ದನಃ', 'ಹೇ ಕುಮಾರ, ನಾನು ಭೋಗಗಳನ್ನು ಕೊಡುವವನು ಮಾತ್ರ. ವಿಷ್ಣು ಒಬ್ಬನೇ ಮೋಕ್ಷವನ್ನು ಕೊಡುವವನು' ಎಂದು ಶಿವನು ತನ್ನ ಮಗನಾದ ಸ್ಕಂದನಿಗೆ ಹೇಳಿದ ಮಾತು (ಸ್ಕಾಂದಪುರಾಣ). ಕ್ಸ್ನು ಪ್ರತ್ಯಯ ಬರುವುದೆಂದು ಟೀಕಾರಾಯರು 'ಪ್ರಮೇಯದೀಪಿಕೆ'ಯಲ್ಲಿ ಹೇಳಿದ್ದಾರೆ. ಈ ಪ್ರತ್ಯಯ ಪ್ರಸಿದ್ಧವಾದ ಸಿದ್ಧಾಂತಕೌಮುದ್ಯಾದಿ ಗ್ರಂಥಗಳಲ್ಲಿ ಇಲ್ಲ. ಆದ-

ಕಾರಣವೇ ಸತ್ಯಧರ್ಮರು ಉಣಾದಿಗಳು ಬಹುಪ್ರಕಾರವಾಗಿವೆ (ಪಾ.೩/೩/೧) ಎಂಬ ಸೂತ್ರದಿಂದ ಕ್ಸ್ನುಪ್ರತ್ಯಯ ಗ್ರಹಣ ಮಾಡಿದರು.

**20. ಏಳನೇ ಅರ್ಥ**—ವೇತಿ–ಅತಿಶಯೇನ ಪ್ರಕಾಶತ ಇತಿ ವಾ ವಿಷ್ಣುಃ । ವೀ ಧಾತುವಿಗೆ ಮೇಲೆ ತೋರಿಸಿದಂತೆ ಪ್ರಕಾಶಿಸು ಎಂಬ ಅರ್ಥ-ವಿರುವುದರಿಂದ ವೇತಿ–ಅತಿಶಯವಾಗಿ ಪ್ರಕಾಶಿಸುವುದರಿಂದಲೂ ವಿಷ್ಣು ಎಂದರ್ಥ. ಇಲ್ಲಿ ಕರ್ತ್ರರ್ಥದಲ್ಲಿ ಕ್ಸ್ನು ಪ್ರತ್ಯಯ ಬಂದಿದೆ. ಮಿಕ್ಕ ವ್ಯಾಕರಣ ವಿಷಯಗಳೆಲ್ಲಾ ಹಿಂದಿನಂತೆಯೇ. ವಶಕಾಂತಾವಿತಿ ಧಾತೋರ್ವಾ ಕ್ಸ್ನು-ಪ್ರತ್ಯಯಃ ।

**21. ಎಂಟನೇ ಅರ್ಥ**—ವೇತಿ–ಆಕ್ರಾಮತೀತಿ ವಾ, ವಿಶೇಷೇಣ ಕ್ರಾಮತೀತಿ ವಾ ವಿಷ್ಣುಃ । ತ್ರಿವಿಕ್ರಮರೂಪೇಣ ಚರಣಕ್ರಮಣಾದ್ವಾ ವಿಷ್ಣುಃ । ತ್ರಿವಿಕ್ರಮಾವತಾರದಲ್ಲಿ ಮೂರು ಹೆಜ್ಜೆಗಳಿಂದಲೇ ಸಮಸ್ತ ಲೋಕಗಳನ್ನೂ ಆಕ್ರಮಿಸಿದ್ದರಿಂದಲೂ ವಿಷ್ಣು. ವ್ಯಾಕರಣಾಂಶ—ಗತ್ಯರ್ಥಾತ್ ವಯತೇಃ ಕರ್ತರಿ ಕ್ಸ್ನುಃ । ಪೂರ್ವಪದುರ್ವರಿತಮ್ । ವೀ ಧಾತುವಿಗೆ ಆಕ್ರಮಿಸು ಎಂಬ ಅರ್ಥದಲ್ಲಿ ಕ್ಸ್ನು ಪ್ರತ್ಯಯ ಬಂದಿದೆ. ಮಿಕ್ಕದ್ದೆಲ್ಲಾ ಮೇಲೆ ಹೇಳಿದಂತೆಯೇ. ಅಥವಾ ವಿ–ಪೂರ್ವಾತ್ ಕ್ರಮೇಃ (ಭ್ವಾದಿ-ಪರಸ್ಮೈ) ಷ್ಣುಪ್ರತ್ಯಯೋ ಧಾತುಲೋಪಶ್ಚ ಪೃಷೋದರಾದಿತ್ವಾತ್ । ವಿ ಉಪಸರ್ಗಸಹಿತ ಕ್ರಮು ಧಾತುವಿನ ಮೇಲೆ ಷ್ಣು ಪ್ರತ್ಯಯ ಬಂದು, ಪೃಷೋ-ದರಾದಿಗಣವಾದ್ದರಿಂದ ಧಾತುವಿಗೇ ಲೋಪ ಬಂದು ಈ ರೂಪ ಸಿದ್ಧವಾಗುತ್ತದೆ.

**22. ಒಂಬತ್ತನೇ ಅರ್ಥ**—ವೇತಿ–ಗಚ್ಛತಿ ಅನೇನ ಸರ್ವಭೂತ-ಜಾತಂ, ಬ್ರಹ್ಮಾದಿ ಪ್ರಜಾಗಣಶ್ಚೇತಿ ವಾ ವಿಷ್ಣುಃ । ಇವನಿಂದ ಪೃಥಿವ್ಯಾದಿ ಪಂಚಭೂತಗಳೂ ಬ್ರಹ್ಮಾದಿ ಸಕಲಚೇತನವೂ ತಮ್ಮ ಸಮಸ್ತ ಓಡಾಟವನ್ನೂ (ಚಲನ-ವಲನಗಳನ್ನೂ) ಹೊಂದುವುದರಿಂದಲೂ ವಿಷ್ಣು. ಸಕಲರಿಗೂ ಪ್ರೇರಕನೆಂದು ಅರ್ಥ. ವ್ಯಾಕರಣ—ಗತ್ಯರ್ಥಾದ್ ವಯತೇಃ ಕ್ಸ್ನು ಪ್ರತ್ಯಯಃ । ಶಿಷ್ಯಂ ಪೂರ್ವವತ್ । ವೀ ಧಾತುವಿಗೆ ಹಿಂದಿನಂತೆ ಕ್ಸ್ನುಪ್ರತ್ಯಯ. ಮಿಕ್ಕದ್ದು ಹಿಂದಿನಂತೆಯೇ.

**23. ಹತ್ತನೇ ಅರ್ಥ**—ಅಧಿಭೂತಾದಿಸಂಬಂಧಿ ಜನ್ಮಾದಿವಿಷಯೇಚ್ಛಾವತ್ವಾದ್ವಾ । ಸಕಲಭೂತಗಳಿಗೂ ಬ್ರಹ್ಮಾದಿಗಳಿಗೂ ಜನ್ಮಮರಣಾದಿಗಳನ್ನು ಕೊಡಬೇಕೆಂದು ಅಪೇಕ್ಷಿಸುವುದರಿಂದಲೂ ವಿಷ್ಣು—ವ್ಯಾಕರಣ ವಶಕಾಂತೌ, ಕಾಂತಿರಿಚ್ಛಾ ಇತ್ಯುಕ್ತೇಃ ಇಚ್ಛಾರ್ಥಾತ್ ವಶಧಾತೋಃ ಬಾಹುಲಕೇ **ನು**ಪ್ರತ್ಯಯೇ, ನಿರ್ವಚನತ್ವಾತ್ ಉಪಧಾ-ಅಕಾರಸ್ಯ ಇಕಾರೇ, ಶಸ್ಯ **ಷತ್ವೇ** ರೂಪಮ್ । ಇಚ್ಛಾರ್ಥಕ ವಶ ಧಾತುವಿಗೆ **ನು** ಪ್ರತ್ಯಯು ಬರಲು ವಶಧಾತುವಿನ ಅಕಾರಕ್ಕೆ ಇಕಾರಾದೇಶವೂ ಶಕಾರಕ್ಕೆ **ಷ**ಕಾರವೂ ಆದೇಶವಾಗಿ ಬರಲು ಈ ರೂಪ ಸಿದ್ಧಿಯಾಗುತ್ತದೆ.

**24. ಈ ಅರ್ಥಗಳಿಗೆ ಪ್ರಮಾಣ**—ಮೇಲಿನ ಅರ್ಥಗಳನ್ನು ಶ್ರೀ ಸತ್ಯಧರ್ಮರು ಗೀತಾಭಾಷ್ಯದಲ್ಲಿ (೧೦/೨೧) ಉದಹರಿಸಿರುವ ಮೋಕ್ಷಧರ್ಮದ (ಮಹಾಭಾರತದ ಶಾಂತಿಪರ್ವದಲ್ಲಿ ೩೫೦ನೇ ಅಧ್ಯಾ. ೪೩–೪೪ ಶ್ಲೋ.) ಈ ಪ್ರಮಾಣವನ್ನು ಆಧರಿಸಿ ಹೇಳಿದ್ದಾರೆ.—

ಗತಿಶ್ಚ ಸರ್ವಭೂತಾನಾಂ ಪ್ರಜಾನಾಂ ಚಾಪಿ ಭಾರತ ।
ವ್ಯಾಪ್ತಾ ಮೇ ರೋದಸೀ ಪಾರ್ಥ ಕಾಂತಿಶ್ಚಾಭ್ಯಧಿಕಾ ಮಮ ॥
ಅಧಿಭೂತನಿವಿಷ್ಟಶ್ಚ ತದಿಚ್ಛುಶ್ಚಾಸ್ಮಿ ಭಾರತ ।
ಕ್ರಮಣಾಚ್ಚಾಪ್ಯಹಂ ಪಾರ್ಥ ವಿಷ್ಣುರಿತ್ಯಭಿಸಂಜ್ಞಿತಃ ॥

(ಭಾವಾರ್ಥ)—ಹೇ ಅರ್ಜುನ ! ಪೃಥಿವ್ಯಾದಿ ಪಂಚಭೂತಗಳಿಗೂ ಬ್ರಹ್ಮಾದಿ ಸಕಲ ಚೇತನಪ್ರಜೆಗಳಿಗೂ ನಾನು ಚಲನಪ್ರದನಾಗಿ (ಪ್ರೇರಕನಾಗಿ) ಇದ್ದೇನೆ. ನನ್ನ ಶಕ್ತಿಯು ದ್ಯಾವಾಪೃಥಿವಿಗಳನ್ನು (ರೋದಸೀ) ವ್ಯಾಪಿಸಿಕೊಂಡಿದೆ. ನನ್ನ ಕಾಂತಿಯೂ ಅಪರಿಮಿತವಾಗಿದೆ. ಪೃಥಿವ್ಯಾದಿ ಭೂತಗಳಲ್ಲಿ ಮತ್ತು ಸಕಲ ಪ್ರಾಣಿಜಾತದಲ್ಲಿ ಅಂತರ್ಯಾಮಿಯಾಗಿರುವೆನಲ್ಲದೆ ಅವುಗಳ ಸೃಷ್ಟಿಸ್ಥಿತಿಲಯಾದಿಗಳನ್ನು ನಡೆಸಬೇಕೆಂದು ಇಚ್ಛೆಯುಳ್ಳವನಾದ್ದರಿಂದಲೂ ತ್ರಿವಿಕ್ರಮರೂಪದಿಂದ ಸಕಲ ಲೋಕಗಳನ್ನೂ ಪಾದದಿಂದಲೇ ಆಕ್ರಮಿಸಿದೆನಾದ್ದರಿಂದಲೂ ನನಗೆ ವಿಷ್ಣು ಎಂಬ ಹೆಸರು ಅನ್ವರ್ಥವಾಗಿದೆ.

**25. ಹನ್ನೊಂದನೇ ಅರ್ಥ**—ಐತರೇಯ ಭಾಷ್ಯದಲ್ಲಿಯೂ (೨/೪/೩) ವಿಷ್ಣು ಶಬ್ದಕ್ಕೆ ಈ ರೀತಿ ಬೇರೆ ವ್ಯುತ್ಪತ್ತಿ ತೋರಿಸಿದೆಯೆಂದು ಸತ್ಯಧರ್ಮರೇ ತೋರಿಸಿದ್ದಾರೆ—

ಸರ್ವವೇಷ್ಟಯಿತೃತ್ವಾಚ್ಚ ವಿಶಿಷ್ಟಬಲತಸ್ತಥಾ ।
ವಿಷ್ಣುರಿತ್ಯಭಿಧಾ ಮಹ್ಯಂ ನ ಸಾ ಯುಕ್ತಾ ದಿವೌಕಸಾಮ್ ॥

ವಿಷ್ಣು ಶಬ್ದದಲ್ಲಿ ವಿ ಎಂಬುದು ಉಪಸರ್ಗರೂಪ ಉಪಪದ ; ಇದಕ್ಕೆ 'ವಿಶೇಷವಾಗಿ' 'ವಿಶಿಷ್ಟವಾಗಿ' ಎಂದರ್ಥ. ಷಕಾರವು ಷದಲೃ ವಿಶರಣಗತ್ಯ-ವಸಾದನೇಷು ಎಂದು ಧಾತುಪಾಠವಿರುವುದರಿಂದ ಗತ್ಯರ್ಥಕ ಸದ್ ಧಾತುವಿನ ರೂಪವಾದ್ದರಿಂದ ಚೇಷ್ಟಾಪ್ರದ ಅಥವಾ ಪ್ರೇರಕನೆಂಬ ಅರ್ಥವನ್ನು ಕೊಡುತ್ತದೆ. ಐತರೇಯ ಉಪನಿಷತ್ತಿನಲ್ಲಿ (೩/೨/೬) 'ಣಕಾರೋ ಬಲಂ' ಎಂದು ಸ್ಪಷ್ಟವಾಗಿ ಹೇಳಿರುವುದರಿಂದ ಣಕಾರವು ಬಲವಾಚೀ. ಕಡೆಯಲ್ಲಿರುವ ಉಕಾರವು ಪ್ರತ್ಯಯ, ಇದು ತಾಚ್ಛೀಲ್ಯವನ್ನು ತೋರಿಸುತ್ತದೆ. ವಿ ಎಂಬುದೂ ಉಕಾರವೂ ಷಕಾರ–ಣಕಾರಗಳೆರಡಕ್ಕೂ ಅನ್ವಯಿಸುತ್ತದೆ. ಆದ್ದರಿಂದ ವಿ–ವಿಶೇಷವಾಗಿ, ಷ–ಉ–ಪ್ರೇರಕನು ಎಂದರೆ ರಮಾಬ್ರಹ್ಮಾದಿ ಸಕಲರಿಗೂ ಪ್ರೇರಕನು ಎಂದರ್ಥ. ವಿ–ಣ–ಉ ಎಂದರೆ ಅಪರಿಮಿತಾನಂತವಾದ ಸ್ವತಂತ್ರ ಬಲವುಳ್ಳವನೆಂದರ್ಥ. ಈ ಗುಣಗಳು ಶ್ರೀಮನ್ನಾರಾಯಣನಿಗಲ್ಲದೆ ಬೇರೆ ಯಾರಿಗೂ ಇಲ್ಲವೆಂದು ಭಾಷ್ಯೋದಾಹೃತ ಪ್ರಮಾಣವಾಕ್ಯ ಹೇಳುತ್ತದೆ.

**26. ಹನ್ನೆರಡನೇ ಅರ್ಥ**—ವಿಷ್ಣು ಶಬ್ದಕ್ಕೆ ಐತರೆಯೋಪನಿಷತ್ತಿ-ನಲ್ಲಿ (೩/೨/೬) ಹೇಳಿದ ಅರ್ಥವನ್ನು ನಖಸ್ತುತಿಯಲ್ಲಿ ವಿಷ್ಣು ಶಬ್ದಾರ್ಥ. ನಿರೂಪಣೆ ಮಾಡುವಾಗ ಪುಟ ೩೩೩ರಲ್ಲಿ ವಿಸ್ತರಿಸಿರುವುದರಿಂದ ಅಲ್ಲೇ ನೋಡಿಕೊಳ್ಳಬೇಕು.

**27. ವಿಷ್ಣ್ವಂಘ್ರಿ**—ವಿಷ್ಣು+ಅಂಘ್ರಿ (ಉಕಾರಕ್ಕೆ ವಕಾರಾದೇಶ ಬಂದಿದೆ, ಯಣ್ ಸಂಧಿ). ಇದನ್ನು ಓದುವುದು ಸ್ವಲ್ಪ ಕಷ್ಟ, ಆದರೆ ವಿಷ್+ಣ್ವಂಘ್ರಿ ಎಂದು ಬಿಡಿಸಿ ಹೇಳಿಕೊಂಡರೆ ಸುಲಭವಾಗುತ್ತದೆ.

**ಅಂಘ್ರಿ**—'ಪಾದಃ ಪದಂಘ್ರಿಶ್ಚರಣೋಽಸ್ತ್ರಿಯಾಮ್' ಎಂದು ಅಮರ. (ನಿರ್ಣಯಸಾಗರ ಪ್ರಕಾಶನದ ಸುಧಾಟೀಕೆಯಲ್ಲಿ 'ಪದಂಹ್ರಿಶ್ಚ-ರಣೋಽಸ್ತ್ರಿಯಾಮ್' ಎಂದು ಪಾಠವಿದೆ.) ಅಂಘ್ರಿ ಎಂದರೆ ಕಾಲು, ಪಾದ ಎಂದರ್ಥ. ಇದು ಪುಲ್ಲಿಂಗಶಬ್ದ. ಅಂಘತಿ–ಗಚ್ಛತ್ಯನೇನ ಅಂಘ್ರಿಃ। ಅಘಿ ಗತೌ (ಭ್ವಾ. ಉಭ.) ಇತ್ಯತಃ 'ವಂಕ್ರ್ಯಾದಯಶ್ಚ' (ಉ. ೪/೬೭)

ಇತಿ ಕ್ರಿಃ । ಅಘ್ ಎಂದರೆ ಹೋಗು ಎಂದರ್ಥ. ಯಾವುದರಿಂದ ಹೋಗುವೆವೋ ಅದು ಅಂಘ್ರಿ. ಅಘ್ ಧಾತುವಿನ ಮೇಲೆ ರಿ ಎಂಬ ಉಣಾದಿ ಪ್ರತ್ಯಯ ಬಂದಿದೆ. ವಿಷ್ಣುವಿನ ಎರಡು ಕಾಲುಗಳಿಗೆ ಕ್ರಮವಾಗಿ ಸು ಮತ್ತು ವರ್ ಎಂದು ಹೆಸರೆಂಬುದು ಬೃಹದ್ಭಾಷ್ಯದಿಂದ (೭/೫/೩-೪) ಗೊತ್ತಾಗುತ್ತದೆ—

> ಸ್ವಿತ್ಯಾನಂದಃ ಸಮುದ್ದಿಷ್ಟೋ ವರಿತಿ ಜ್ಞಾನಮುಚ್ಯತೇ ।....
> ದಕ್ಷಿಣಶ್ಚೈವ ಸವ್ಯಶ್ಚ ಕ್ರಮಾದ್ ವರ್ಣದ್ವಯೋದಿತೌ ।
> ಪಾದಾವಸ್ಯ ಹಿ ತತ್ಪ್ರಾಪ್ತಿರ್ ಮುಕ್ತಿರಿತ್ಯಭಿಧೀಯತೇ ॥....

ಇತಿ ಪ್ರವೃತ್ತೇ ॥ ವಿಷ್ಣುವಿನ ಬಲಗಾಲಿಗೆ ಸು ಎಂದು ಹೆಸರು ; ಅದಕ್ಕೆ ಆನಂದ ಎಂದರ್ಥ. ವಿಷ್ಣುವಿನ ಬಲಗಾಲನ್ನು ಧ್ಯಾನಿಸುವುದರಿಂದ ಮೋಕ್ಷದಲ್ಲಿ ಆನಂದಪ್ರಾಪ್ತಿಯಾಗುತ್ತದೆ. ಇದೇ ರೀತಿ ವಿಷ್ಣುವಿನ ಎಡಗಾಲಿಗೆ ವರ್ ಎಂದು ಹೆಸರು ; ಇದಕ್ಕೆ ಜ್ಞಾನ ಎಂದರ್ಥ. ವಿಷ್ಣುವಿನ ಎಡಗಾಲನ್ನು ಧ್ಯಾನಮಾಡುವುದರಿಂದ ಜ್ಞಾನಪ್ರಾಪ್ತಿಯಾಗುತ್ತದೆ. ಹೀಗೆ ಶ್ರೀಹರಿಯ ಪಾದದ್ವಯಗಳು ಸುವರ್ ಅಥವಾ ಸುವಃ (ಅಥವಾ ಸ್ವಃ) ಎಂಬ ವ್ಯಾಹೃತಿಯಿಂದ ವಾಚ್ಯವಾಗಿವೆಯಲ್ಲದೆ ಮೋಕ್ಷಾಪೇಕ್ಷಿ ಆ ಎರಡು ಪಾದಗಳನ್ನೂ ಧ್ಯಾನಮಾಡಬೇಕೆಂದು ಹೇಳಿದಂತಾಯಿತು.

28. **ನಿಷ್ಠಾ** ಎಂಬಲ್ಲಿ ನಿ+ಷ್ಠಾ ಎಂದು ಎರಡು ಅವಯವಗಳಿವೆ. ನಿ ಎಂಬುದು 'ನಿತರಾಂ' ಅತ್ಯಂತ ಎಂದು ಅರ್ಥವುಳ್ಳ ಉಪಸರ್ಗ. ಷ್ಠಾ ಎಂಬುದು 'ಸ್ಥಾ' ನಿಲ್ಲು, ನಿಂತುಕೋ (ಭ್ವಾ.ಪರ.) ಎಂಬ ಧಾತುವಿನ ರೂಪ; ಆದ್ದರಿಂದ ನಿತರಾಂ ಸ್ಥಿತಿಃ ನಿಷ್ಠಾ ಎಂಬ ವ್ಯುತ್ಪತ್ತಿಯಿಂದ ಯಾವುದರಲ್ಲಾದರೂ ಅತ್ಯಾಸಕ್ತಿ, ಅಥವಾ ಏಕನಿಷ್ಠತೆ ತೋರುವುದಕ್ಕೆ ನಿಷ್ಠಾ ಎಂದು ಹೆಸರು. ಇದನ್ನೇ ಒಬ್ಬ ವ್ಯಾಖ್ಯಾಕಾರರು 'ಧರ್ಮಾದೌ ಶ್ರದ್ಧಾ' ಎಂದಿದ್ದಾರೆ. ಕವಿಕರ್ಣಾಮೃತದಲ್ಲಿ 'ನಿತರಾಮವಸ್ಥಿತಿಃ'–ಅನನ್ಯಧ್ಯಾನ ಎಂದಿದ್ದಾರೆ. ವಿಶ್ವಪತಿತೀರ್ಥರು 'ಸುಸ್ಥಿರಾ ಭಕ್ತಿಃ' ಎಂದರೆ, ಛಲಾರೀಯ ಟೀಕೆಯಲ್ಲಿ 'ಭಕ್ತ್ಯುತ್ಕರ್ಷ' ಎಂದು ಹೇಳಿದೆ. ಷ್ಠಾ ಗತಿನಿವೃತ್ತೌ (ಭ್ವಾ. ಪರ.) ಇತ್ಯತಃ 'ಆತಶ್ಚೋಪಸರ್ಗೇ' (ಪಾ. ೩/೩/೧೦೬) ಇತ್ಯಙ್ ।

'ಉಪಸರ್ಗಾತ್—' (ಪಾ. ೮/೩/೬೫) ಇತಿ ಷಃ, ತತಷ್ಟಾಪ್। ವಿಷ್ಣು-ಪರವಾಗಿ ಅರ್ಥಮಾಡುವಾಗ ನಿ ಉಪಸರ್ಗಕ್ಕೆ 'ನಿತ್ಯದಲ್ಲೂ' ಎಂದು ಅರ್ಥ ಹೇಳಿ 'ನಿಷ್ಠಾ' ಎಂದರೆ ಅನಾದಿನಿತ್ಯವಾಗಿ ಇರುವಂಥಾ ಎಂದು ಅರ್ಥಮಾಡ-ಬೇಕು.

**29.** **ಅತಿ** ಶಬ್ದವು ಬಹಳ ಸರಳವಾಗಿ ಕಂಡರೂ ಅದರ ಅರ್ಥ ಬಹಳ ವ್ಯಾಪ್ತಿಯುಳ್ಳದ್ದು. ಅಮರಕೋಶದಲ್ಲಿ ನಾನಾರ್ಥ ವರ್ಗದಲ್ಲಿ 'ಪ್ರಕರ್ಷೇ ಲಂಘನೇಽಪ್ಯತಿ' ಎಂದೂ ಅವ್ಯಯ ವರ್ಗದಲ್ಲಿ 'ಪೂಜನೇ ಸ್ವತೀ' ಎಂದೂ ಹೇಳಿದೆ. ವೈಜಯಂತೀಕೋಶದಲ್ಲಿ 'ಅತಿ ಸ್ಯಾದಧಿಕಾರ್ಥೇಽಕ್ರಾಂತ್ರಶಂಸಾಯಾಮತಿಕ್ರಮೇ' ಎಂದು ಸ್ಪಷ್ಟವಾಗಿ ಹೇಳಿದೆ. ಇದರಂತೆ ಅಧಿಕ ವನ್ನು ತೋರಿಸುವುದಕ್ಕೂ, ಪ್ರಶಂಸೆಯಲ್ಲೂ ಮೀರಿದ್ದು ಎಂಬ ಅರ್ಥದಲ್ಲೂ 'ಅತಿ' ಬರುತ್ತದೆ. ಅತ ಸಾತತ್ಯಗಮನೇ (ಭ್ವಾದಿ. ಪರ.) ಎಂಬ ಧಾತುವಿನ ಮೇಲೆ ಅತತೀತ್ಯತಿ—ಮೀರಿಹೋಗು ಎಂಬ ಅರ್ಥದಲ್ಲಿ ಉಣಾದಿ ಇನ್-ಪ್ರತ್ಯಯ (೪/೧೧೯) ಬಂದಿದೆ.

**30.** **ಗುಣ** ಶಬ್ದಕ್ಕೆ ಸಂಸ್ಕೃತದಲ್ಲಿ ನಾನಾರ್ಥಗಳಿವೆ. ಮೇದಿನೀ-ಕೋಶದಲ್ಲಿ 'ಗುಣೋ ಮೌರ್ವ್ಯಾಮಪ್ರಧಾನೇ ರೂಪಾದೌ ಸೂದ ಇಂದ್ರಿಯೇ। ತ್ಯಾಗಶೌರ್ಯಾದಿ-ಸತ್ತ್ವಾದಿ-ಸಂಧ್ಯಾದ್ಯಾವೃತ್ತಿರಜ್ಜುಷು ॥ ಶುಕ್ಲಾದಾವಪಿ ಬುದ್ಧ್ಯಾಂ ಚ' ಎಂದು ಹೇಳಿದೆ. ಪ್ರಕೃತ ನಮಗೆ ಇಲ್ಲಿ ಧೈರ್ಯಾದಿ ಧರ್ಮಗಳು ಎಂಬ ಅರ್ಥವೇ ಪ್ರಸಕ್ತ'. ಸತ್ವರಜಸ್ತಮೋಗುಣಗಳೆಂಬ ಅರ್ಥ ವನ್ನೂ ಗ್ರಹಿಸಬಹುದು. ಆಗ **ಅತಿಗುಣ** ಎಂದರೆ 'ಅತಿಶಯಿತೋ ಗುಣಃ' (ಛಲಾರಿ), 'ಅಧಿಕಶ್ಚಾಸೌ ಗುಣಶ್ಚ' (ವಿಶ್ವ.) ದೊಡ್ಡಗುಣ ಅಥವಾ ಹೆಚ್ಚಿನ ಗುಣ ಎಂದರ್ಥ. ಬನ್ನಂಜೆ ಆಚಾರ್ಯರು 'ಅತಿಗುಣೋ ಗುಣಾಧಿಕಃ। ಗುಣತ್ರಯಮತಿಗತೋ ವಾ । ಭಗವತೋ ಗುಣಭೂತೇಷು ಜೀವೇಷ್ವಯ-ಮತಿರಿಚ್ಯತೇ ಚ, ಜೀವೋತ್ತಮ ಇತಿ ಯಾವತ್' ಎಂದು ಮೂರು ರೀತಿ ವಿಶೇಷಾರ್ಥ ತೋರಿಸಿದ್ದಾರೆ. ೧. ವಿಷ್ಣುಪಾದಗಳಲ್ಲಿ ದೃಢ ಭಕ್ತಿಯುಳ್ಳವ-ರೆಂಬ ಗುಣಾಧಿಕ್ಯವುಳ್ಳ. ೨. ಸತ್ವಾದಿ ಗುಣತ್ರಯಗಳ ವಿಕಾರವನ್ನು ಮೀರಿದ, ಅಥವಾ ೩. ಭಗವಂತನ ದೃಷ್ಟಿಯಿಂದ ಗುಣ(ಅಪ್ರಧಾನ)ರಾದ ಜೀವ-

ಕೋಟಿಯಲ್ಲಿ ಎಲ್ಲರಿಗೂ ಹೆಚ್ಚಿನ ಎಂದರೆ ಜೀವೋತ್ತಮರಾದ ಎಂದು ಮೂರು ರೀತಿ ಅರ್ಥ ಮಾಡಿ ತೋರಿಸಿದ್ದಾರೆ. ವಿಶ್ವಪತಿತೀರ್ಥರು. 'ತಯಾ-ಽತಿಗುಣ ಇತಿ ವಾ' ಎಂದರೆ ವಿಷ್ಣುಭಕ್ತಿಯಿಂದ ದೊಡ್ಡಗುಣವುಳ್ಳ ಎಂದೂ ಅರ್ಥ ಮಾಡಿದ್ದಾರೆ.

**31. ಗುರುತಮ** ಇದಕ್ಕೆ ವ್ಯಾಕರಣರೀತ್ಯಾ 'ಅಯಮೇಷಾಂ ಅತಿಶಯೇನ ಗುರುಃ'–ಇವನು ಇವರಲ್ಲೆಲ್ಲಾ ಅತ್ಯಂತ ಗುರುವಾದವನು'— ಅತ್ಯಂತ ಶ್ರೇಷ್ಠಗುರು ಎಂದು ಅರ್ಥ. 'ಅತಿಶಾಯನೇ ತಮಬಿಷ್ಠನೌ' (ಪಾ. ೫/೩/೫೫) ಎಂಬ ಸೂತ್ರದಂತೆ ಅತ್ಯಂತ ಹೆಚ್ಚಾದ ಎಂಬ ಅರ್ಥದಲ್ಲಿ ತಮಪ್(ತಮ) ಪ್ರತ್ಯಯ ಬಂದಿದೆ. ಇದಕ್ಕೆ 'ಶ್ರೇಷ್ಠತಮಃ' (ಛ.) ಎಂದರ್ಥ. ವಿಶ್ವಪತಿತೀರ್ಥರು 'ಅಯಮೇಷಾಂ–ರುದ್ರಾದೀನಾಂ ಅತಿಶಯೇನ ಗುರುರ್ಗುರುತ್ತಮಃ'–ಈ ಮಧ್ವಾಚಾರ್ಯರು ರುದ್ರಾದಿ ಸಕಲ ತಾತ್ವಿಕ-ಅತಾತ್ವಿಕ ದೇವತೆಗಳಿಗಿಂತಲೂ ತಾರತಮ್ಯದಲ್ಲಿ ಶ್ರೇಷ್ಠರು ಎಂದು ಅರ್ಥ ಮಾಡಿದ್ದಾರೆ.

**32. ಗುರು** ಶಬ್ದಕ್ಕೆ ಇಲ್ಲಿ ಮುಖ್ಯವಾಗಿ ವಿದ್ಯೋಪದೇಶಕರು ಮತ್ತು ಪೂಜ್ಯತಮರು ಎಂದು ಎರಡರ್ಥವಾಗುತ್ತದೆ. ಗೃಣಾತಿ–ಉಪದಿಶತಿ ವೇದಾದಿಶಾಸ್ತ್ರಾಣೀತಿ ಗುರುಃ । ಯಾರು ವೇದಾದಿ ಶಾಸ್ತ್ರಗಳನ್ನು ಉಪದೇಶಿಸುವರೋ ಅವರಿಗೆ ಗುರುವೆಂದು ಹೆಸರು. ಗೄ ಶಬ್ದೇ (ಕ್ರ್ಯಾದಿ. ಪರ) ಎಂಬ ಧಾತುವಿನ ಮೇಲೆ 'ಕೃಗ್ರೋರುಚ್ಚ' (ಉ. ೧/೨೪) ಎಂಬ ಸೂತ್ರದಿಂದ ಉ ಪ್ರತ್ಯಯ ಬಂದಿದೆ. ಗಿರತ್ಯಜ್ಞಾನಮಿತಿ ವಾ ಗುರುಃ–ಅಜ್ಞಾನವನ್ನು ಕಳೆಯುವವನಾದ್ದರಿಂದಲೂ ಗುರುಃ ಗೄ ನಿಗರಣೇ (ತುದಾದಿ ಪರ.) ಇತಿ ಧಾತೋರ್ವಾ ಉಃ । ಈ ಅರ್ಥವನ್ನು ಪ್ರಸಿದ್ಧವಾದ ಈ ಶ್ಲೋಕ ಸ್ಪಷ್ಟಪಡಿಸುತ್ತದೆ —

ಗುಕಾರಸ್ತ್ವಂಧಕಾರಃ ಸ್ಯಾದ್ ರುಕಾರಸ್ತನ್ನಿರೋಧಕಃ ।
ಅಂಧಕಾರವಿರೋಧಿತ್ವಾತ್ ಗುರುರಿತ್ಯಭಿಧೀಯತೇ ॥

ಗು ಎಂಬುದು ಅಂಧಕಾರಸೂಚಕ ; ಅದನ್ನು ರು ಎಂದರೆ ತಡೆಯುವವನು, ನಿವಾರಿಸುವವನು (ರುಧ್ ಧಾತುವಿಗೆ ತಡೆಗಟ್ಟು ಎಂದರ್ಥ.),

ಆದಕಾರಣ ಇವನಿಗೆ ಗುರು ಎಂದು ಹೆಸರು ಎಂಬುದು ಈ ಶ್ಲೋಕದ ಸಾಮಾನ್ಯಾರ್ಥ.

**32.** ಇನ್ನೊಬ್ಬರ ಅಂಧಕಾರವನ್ನು ತಡೆಗಟ್ಟಲು ಮೊದಲು ತನ್ನ ಅಂಧಕಾರವನ್ನು ದೂರಮಾಡಿಕೊಂಡಿರಬೇಕು. ಆದ್ದರಿಂದ ಗುರುವೆನ್ನಿಸಿ ಕೊಳ್ಳಲು ಮೊದಲು ತಾನು ಅಜ್ಞಾನ-ಸಂಶಯ-ವಿಪರ್ಯಯಾದಿ ದೋಷ ರಹಿತನಾಗಿರಬೇಕು, ಅನಂತರ ಶಿಷ್ಯರ ಅಜ್ಞಾನಾದಿ ದೋಷಗಳನ್ನು ದೂರ ಮಾಡಲು ಸಮರ್ಥನಾಗುವನು. ಹೀಗೆ ಗುರು ಶಬ್ದಕ್ಕೆ ಎರಡು ಅರ್ಥ ಗಳಿರುವುದನ್ನು ಶ್ರೀಮದಾಚಾರ್ಯರು ತಾತ್ಪರ್ಯನಿರ್ಣಯದಲ್ಲಿ (೧/೧೨೪)

ಅಸಂಶಯಃ ಸಂಶಯಚ್ಛಿತ್ ಗುರುರುಕ್ತೋ ಮನೀಷಿಭಿಃ

ಎಂದು ಗುರುಲಕ್ಷಣ ಹೇಳುತ್ತಾ ಸ್ಪಷ್ಟಪಡಿಸಿದ್ದಾರೆ. ಗುಕಾರವಾಚ್ಯವಾದ ಸಂಶಯವಿಪರ್ಯಯಾದಿ ಅಜ್ಞಾನದ ದೋಷಗಳು (ರು) ಯಾರಿಗಿಲ್ಲವೋ ಮತ್ತು ಶಿಷ್ಯರ (ಗು) ಅಜ್ಞಾನಾದಿ ದೋಷಗಳನ್ನು ಯಾರು (ರು) ನಿವಾರಿಸ-ಬಲ್ಲರೋ ಅವರನ್ನೇ ಗುರುಗಳೆಂದು ಜ್ಞಾನಿಗಳು ಕರೆಯುವರು.

**33. ಗುರುತಮ** ಅಷ್ಟೇ ಅಲ್ಲದೆ ಮಹಾಪುರುಷರಿಗೆ ಇರಬೇಕಾದ ಎಷ್ಟೆಷ್ಟು ಹೆಚ್ಚು ಹೆಚ್ಚು* ಲಕ್ಷಣಗಳು ಆ ಗುರುಗಳಲ್ಲಿ ಇರುವುವೋ ಅಷ್ಟರ ಮಟ್ಟಿಗೆ ಅವರು ಉತ್ತಮೋತ್ತಮ ಗುರುಗಳಾಗುತ್ತಾರೆಂದು ತಂತ್ರಸಾರದಲ್ಲಿ (೪/೧೪೦) ಹೇಳಿದೆ. ಹೀಗೆ ಶ್ರೀಮದಾಚಾರ್ಯರಲ್ಲಿ ಗುರುಗಳಲ್ಲಿರಬೇಕಾದ ಮೂವತ್ತೆರಡು ಲಕ್ಷಣಗಳೂ ಇರುವುವಲ್ಲದೆ ತಂತ್ರಸಾರದಲ್ಲಿ ತೃತೀಯಾ-ಧ್ಯಾಯದಲ್ಲಿ (ಶ್ಲೋ. ೨ ರಿಂದ ೩೮ವರೆಗೆ) ಹೇಳಿದ ಸಕಲಾಂಗಗಳ ಸಕಲ ಲಕ್ಷಣಗಳೂ ಪ್ರಮಾಣಕ್ಕೆ ತಕ್ಕಂತೆಯೇ ಇವೆ. ಹೀಗೆ ಶ್ರೀಮದಾಚಾರ್ಯರಲ್ಲಿ ಗುರುಗಳಲ್ಲಿರಬೇಕಾದ ಸಕಲ ಸಲ್ಲಕ್ಷಣಗಳೂ ತುಂಬಿತುಳುಕಾಡುತ್ತಿರುವುದ ರಿಂದ ಪಂಡಿತಾಚಾರ್ಯರು ಅವರಿಗೆ (ಶ್ರೀಮದಾಚಾರ್ಯರಿಗೆ) **ಗುರುತಮ** ಎಂಬ ವಿಶೇಷಣ ಕೊಟ್ಟಿದ್ದಾರೆ. ಮಂತ್ರಾಲಯದ ರಾಯರು ಪ್ರಾತಃಸಂಕಲ್ಪ-ಗದ್ಯದಲ್ಲಿ ಆಚಾರ್ಯರ ಈ ಗುಣಗಳನ್ನೇ 'ದ್ವಾತ್ರಿಂಶಲ್ಲಕ್ಷಣೋಪೇತಾನಾಂ, ತಥಾ ಸಮಗ್ರಗುರುಲಕ್ಷಣೋಪೇತಾನಾಂ, ಅಸಂಶಯಾನಾಂ, ಪ್ರಸಾದ-

---

*(ಪಾದಟಿಪ್ಪಣಿ) ಪ್ರತಿಮೋಕ್ತಲಕ್ಷಣೈರ್ಯಾವದ್-ಯುಕ್ತ ಆಚಾರ್ಯ ಉತ್ತಮಃ

ಕೋಟಿಯಲ್ಲಿ ಎಲ್ಲರಿಗೂ ಹೆಚ್ಚಿನ ಎಂದರೆ ಜೀವೋತ್ತಮರಾದ ಎಂದು ಮೂರು ರೀತಿ ಅರ್ಥ ಮಾಡಿ ತೋರಿಸಿದ್ದಾರೆ. ವಿಶ್ವಪತಿತೀರ್ಥರು. 'ತಯಾ-ಽತಿಗುಣ ಇತಿ ವಾ' ಎಂದರೆ ವಿಷ್ಣುಭಕ್ತಿಯಿಂದ ದೊಡ್ಡಗುಣವುಳ್ಳ ಎಂದೂ ಅರ್ಥ ಮಾಡಿದ್ದಾರೆ.

**31. ಗುರುತಮ** ಇದಕ್ಕೆ ವ್ಯಾಕರಣರೀತ್ಯಾ 'ಅಯಮೇಷಾಂ ಅತಿಶಯೇನ ಗುರುಃ'–ಇವನು ಇವರಲ್ಲೆಲ್ಲಾ ಅತ್ಯಂತ ಗುರುವಾದವನು'— ಅತ್ಯಂತ ಶ್ರೇಷ್ಠಗುರು ಎಂದು ಅರ್ಥ. 'ಅತಿಶಾಯನೇ ತಮಬಿಷ್ಠನೌ' (ಪಾ. ೫ ೩/೫೫) ಎಂಬ ಸೂತ್ರದಂತೆ ಅತ್ಯಂತ ಹೆಚ್ಚಾದ ಎಂಬ ಅರ್ಥದಲ್ಲಿ ತಮಪ್(ತಮ) ಪ್ರತ್ಯಯ ಬಂದಿದೆ. ಇದಕ್ಕೆ 'ಶ್ರೇಷ್ಠತಮಃ' (ಭ.) ಎಂದರ್ಥ. ವಿಶ್ವಪತಿತೀರ್ಥರು 'ಅಯಮೇಷಾಂ–ರುದ್ರಾದೀನಾಂ ಅತಿಶಯೇನ ಗುರುರ್ಗುರುತ್ತಮಃ'–ಈ ಮಧ್ವಾಚಾರ್ಯರು ರುದ್ರಾದಿ ಸಕಲ ತಾತ್ವಿಕ-ಅತಾತ್ವಿಕ ದೇವತೆಗಳಿಗಿಂತಲೂ ತಾರತಮ್ಯದಲ್ಲಿ ಶ್ರೇಷ್ಠರು ಎಂದು ಅರ್ಥ ಮಾಡಿದ್ದಾರೆ.

**32. ಗುರು** ಶಬ್ದಕ್ಕೆ ಇಲ್ಲಿ ಮುಖ್ಯವಾಗಿ ವಿದ್ಯೋಪದೇಶಕರು ಮತ್ತು ಪೂಜ್ಯತಮರು ಎಂದು ಎರಡರ್ಥವಾಗುತ್ತದೆ. ಗೃಣಾತಿ–ಉಪದಿಶತಿ ವೇದಾದಿಶಾಸ್ತ್ರಾಣೀತಿ ಗುರುಃ । ಯಾರು ವೇದಾದಿ ಶಾಸ್ತ್ರಗಳನ್ನು ಉಪದೇಶಿಸುವರೋ ಅವರಿಗೆ ಗುರುವೆಂದು ಹೆಸರು. ಗೄ ಶಬ್ದೇ (ಕ್ರ್ಯಾದಿ. ಪದ) ಎಂಬ ಧಾತುವಿನ ಮೇಲೆ 'ಕೃಗ್ರೋರುಚ್ಚ' (ಉ. ೧/೨೪) ಎಂಬ ಸೂತ್ರದಿಂದ ಉ ಪ್ರತ್ಯಯ ಬಂದಿದೆ. ಗಿರತ್ಯಜ್ಞಾನಮಿತಿ ವಾ ಗುರುಃ–ಅಜ್ಞಾನವನ್ನು ಕಳೆಯುವವನಾದ್ದರಿಂದಲೂ ಗುರುಃ ಗೄ ನಿಗರಣೇ (ತುದಾದಿ ಪರ.) ಇತಿ ಧಾತೋರ್ವಾ ಉಃ । ಈ ಅರ್ಥವನ್ನು ಪ್ರಸಿದ್ಧವಾದ ಈ ಶ್ಲೋಕ ಸ್ಪಷ್ಟ ಪಡಿಸುತ್ತದೆ.—

ಗುಕಾರಸ್ತ್ವಂಧಕಾರಃ ಸ್ಯಾದ್ ರುಕಾರಸ್ತನ್ನಿರೋಧಕಃ ।
ಅಂಧಕಾರವಿರೋಧಿತ್ವಾತ್ ಗುರುರಿತ್ಯಭಿಧೀಯತೇ ॥

ಗು ಎಂಬುದು ಅಂಧಕಾರಸೂಚಕ ; ಅದನ್ನು ರು ಎಂದರೆ ತಡೆಯು-ವವನು, ನಿವಾರಿಸುವವನು (ರುಧ್ ಧಾತುವಿಗೆ ತಡೆಗಟ್ಟು ಎಂದರ್ಥ.),

ಆದಕಾರಣ ಇವನಿಗೆ ಗುರು ಎಂದು ಹೆಸರು ಎಂಬುದು ಈ ಶ್ಲೋಕದ ಸಾಮಾನ್ಯಾರ್ಥ.

**32.** ಇನ್ನೊಬ್ಬರ ಅಂಧಕಾರವನ್ನು ತಡೆಗಟ್ಟಲು ಮೊದಲು ತನ್ನ ಅಂಧಕಾರವನ್ನು ದೂರಮಾಡಿಕೊಂಡಿರಬೇಕು. ಆದ್ದರಿಂದ ಗುರುವೆನ್ನಿಸಿ ಕೊಳ್ಳಲು ಮೊದಲು ತಾನು ಅಜ್ಞಾನ-ಸಂಶಯ-ವಿಪರ್ಯಯಾದಿ ದೋಷ ರಹಿತನಾಗಿರಬೇಕು, ಅನಂತರ ಶಿಷ್ಯರ ಅಜ್ಞಾನಾದಿ ದೋಷಗಳನ್ನು ದೂರ ಮಾಡಲು ಸಮರ್ಥನಾಗುವನು. ಹೀಗೆ ಗುರು ಶಬ್ದಕ್ಕೆ ಎರಡು ಅರ್ಥ ಗಳಿರುವುದನ್ನು ಶ್ರೀಮದಾಚಾರ್ಯರು ತಾತ್ಪರ್ಯನಿರ್ಣಯದಲ್ಲಿ (೧/೧೨೪)

ಅಸಂಶಯಃ ಸಂಶಯಚ್ಛಿತ್ ಗುರುರುಕ್ತೋ ಮನೀಷಿಭಿಃ

ಎಂದು ಗುರುಲಕ್ಷಣ ಹೇಳುತ್ತಾ ಸ್ಪಷ್ಟಪಡಿಸಿದ್ದಾರೆ. ಗುಕಾರವಾಚ್ಯವಾದ ಸಂಶಯವಿಪರ್ಯಯಾದಿ ಅಜ್ಞಾನದ ದೋಷಗಳು (ರು) ಯಾರಿಗಿಲ್ಲವೋ ಮತ್ತು ಶಿಷ್ಯರ (ಗು) ಅಜ್ಞಾನಾದಿ ದೋಷಗಳನ್ನು ಯಾರು (ರು) ನಿವಾರಿಸ-ಬಲ್ಲರೋ ಅವರನ್ನೇ ಗುರುಗಳೆಂದು ಜ್ಞಾನಿಗಳು ಕರೆಯುವರು.

**33. ಗುರುತಮ** ಅಷ್ಟೇ ಅಲ್ಲದೆ ಮಹಾಪುರುಷರಿಗೆ ಇರಬೇಕಾದ ಎಷ್ಟೆಷ್ಟು ಹೆಚ್ಚು ಹೆಚ್ಚು* ಲಕ್ಷಣಗಳು ಆ ಗುರುಗಳಲ್ಲಿ ಇರುವುವೋ ಅಷ್ಟರ ಮಟ್ಟಿಗೆ ಅವರು ಉತ್ತಮೋತ್ತಮ ಗುರುಗಳಾಗುತ್ತಾರೆಂದು ತಂತ್ರಸಾರದಲ್ಲಿ (೪/೧೪೦) ಹೇಳಿದೆ. ಹೀಗೆ ಶ್ರೀಮದಾಚಾರ್ಯರಲ್ಲಿ ಗುರುಗಳಲ್ಲಿರಬೇಕಾದ ಮೂವತ್ತೆರಡು ಲಕ್ಷಣಗಳೂ ಇರುವುವಲ್ಲದೆ ತಂತ್ರಸಾರದಲ್ಲಿ ತೃತೀಯಾ-ಧ್ಯಾಯದಲ್ಲಿ (ಶ್ಲೋ. ೨ ರಿಂದ ೩೮ವರೆಗೆ) ಹೇಳಿದ ಸಕಲಾಂಗಗಳ ಸಕಲ ಲಕ್ಷಣಗಳೂ ಪ್ರಮಾಣಕ್ಕೆ ತಕ್ಕಂತೆಯೇ ಇವೆ. ಹೀಗೆ ಶ್ರೀಮದಾಚಾರ್ಯರಲ್ಲಿ ಗುರುಗಳಲ್ಲಿರಬೇಕಾದ ಸಕಲ ಸಲ್ಲಕ್ಷಣಗಳೂ ತುಂಬಿತುಳುಕಾಡುತ್ತಿರುವುದ ರಿಂದ ಪಂಡಿತಾಚಾರ್ಯರು ಅವರಿಗೆ (ಶ್ರೀಮದಾಚಾರ್ಯರಿಗೆ) **ಗುರುತಮ** ಎಂಬ ವಿಶೇಷಣ ಕೊಟ್ಟಿದ್ದಾರೆ. ಮಂತ್ರಾಲಯದ ರಾಯರು ಪ್ರಾತಃಸಂಕಲ್ಪ-ಗದ್ಯದಲ್ಲಿ ಆಚಾರ್ಯರ ಈ ಗುಣಗಳನ್ನೇ 'ದ್ವಾತ್ರಿಂಶಲ್ಲಕ್ಷಣೋಪೇತಾನಾಂ, ತಥಾ ಸಮಗ್ರಗುರುಲಕ್ಷಣೋಪೇತಾನಾಂ, ಅಸಂಶಯಾನಾಂ, ಪ್ರಸಾದ-

---

*(ಪಾದಟಿಪ್ಪಣಿ) ಪ್ರತಿಮೋಕ್ತಲಕ್ಷಣೈರ್ಯಾವದ್-ಯುಕ್ತ ಆಚಾರ್ಯ ಉತ್ತಮಃ

ಇತಿ ಕ್ರಿಃ । ಅಘ್ ಎಂದರೆ ಹೋಗು ಎಂದರ್ಥ. ಯಾವುದರಿಂದ ಹೋಗುವೆವೋ ಅದು ಅಂಘ್ರಿ. ಅಘ್ ಧಾತುವಿನ ಮೇಲೆ ರಿ ಎಂಬ ಉಣಾದಿ ಪ್ರತ್ಯಯ ಬಂದಿದೆ. ವಿಷ್ಣುವಿನ ಎರಡು ಕಾಲುಗಳಿಗೆ ಕ್ರಮವಾಗಿ ಸು ಮತ್ತು ವರ್ ಎಂದು ಹೆಸರೆಂಬುದು ಬೃಹದ್ಭಾಷ್ಯದಿಂದ (೭/೫/೩-೪) ಗೊತ್ತಾಗುತ್ತದೆ—

ಸ್ವಿತ್ಯಾನಂದಃ ಸಮುದ್ದಿಷ್ಟೋ ವರಿತಿ ಜ್ಞಾನಮುಚ್ಯತೇ ।....
ದಕ್ಷಿಣಶ್ಚೈವ ಸವ್ಯಶ್ಚ ಕ್ರಮಾದ್ ವರ್ಣದ್ವಯೋದಿತೌ ।
ಪಾದಾವಸ್ಯ ಹಿ ತತ್ಪ್ರಾಪ್ತಿರ್ ಮುಕ್ತಿರಿತ್ಯಭಿಧೀಯತೇ ॥....

ಇತಿ ಪ್ರವೃತ್ತೇ ॥ ವಿಷ್ಣುವಿನ ಬಲಗಾಲಿಗೆ ಸು ಎಂದು ಹೆಸರು ; ಅದಕ್ಕೆ ಆನಂದ ಎಂದರ್ಥ. ವಿಷ್ಣುವಿನ ಬಲಗಾಲನ್ನು ಧ್ಯಾನಿಸುವುದರಿಂದ ಮೋಕ್ಷದಲ್ಲಿ ಆನಂದಪ್ರಾಪ್ತಿಯಾಗುತ್ತದೆ: ಇದೇ ರೀತಿ ವಿಷ್ಣುವಿನ ಎಡಗಾಲಿಗೆ ವರ್ ಎಂದು ಹೆಸರು ; ಇದಕ್ಕೆ ಜ್ಞಾನ ಎಂದರ್ಥ. ವಿಷ್ಣುವಿನ ಎಡಗಾಲನ್ನು ಧ್ಯಾನಮಾಡುವುದರಿಂದ ಜ್ಞಾನಪ್ರಾಪ್ತಿಯಾಗುತ್ತದೆ. ಹೀಗೆ ಶ್ರೀಹರಿಯ ಪಾದದ್ವಯಗಳು ಸುವರ್ ಅಥವಾ ಸುವಃ (ಅಥವಾ ಸ್ವಃ) ಎಂಬ ವ್ಯಾಹೃತಿಯಿಂದ ವಾಚ್ಯವಾಗಿವೆಯಲ್ಲದೆ ಮೋಕ್ಷಾಪೇಕ್ಷಿ ಆ ಎರಡು ಪಾದಗಳನ್ನೂ ಧ್ಯಾನಮಾಡಬೇಕೆಂದು ಹೇಳಿದಂತಾಯಿತು.

**28.** **ನಿಷ್ಠಾ** ಎಂಬಲ್ಲಿ ನಿ+ಷ್ಠಾ ಎಂದು ಎರಡು ಅವಯವಗಳಿವೆ. ನಿ ಎಂಬುದು 'ನಿತರಾಂ' ಅತ್ಯಂತ ಎಂದು ಅರ್ಥವುಳ್ಳ ಉಪಸರ್ಗ. ಷ್ಠಾ ಎಂಬುದು 'ಸ್ಥಾ' ನಿಲ್ಲು, ನಿಂತುಕೋ (ಭ್ವಾ.ಪರ.) ಎಂಬ ಧಾತುವಿನ ರೂಪ; ಆದ್ದರಿಂದ ನಿತರಾಂ ಸ್ಥಿತಿಃ ನಿಷ್ಠಾ ಎಂಬ ವ್ಯುತ್ಪತ್ತಿಯಿಂದ ಯಾವು-ದರಲ್ಲಾದರೂ ಅತ್ಯಾಸಕ್ತಿ, ಅಥವಾ ಏಕನಿಷ್ಠತೆ ತೋರುವುದಕ್ಕೆ ನಿಷ್ಠಾ ಎಂದು ಹೆಸರು. ಇದನ್ನೇ ಒಬ್ಬ ವ್ಯಾಖ್ಯಾಕಾರರು 'ಧರ್ಮಾದೌ ಶ್ರದ್ಧಾ' ಎಂದಿದ್ದಾರೆ. ಕವಿಕರ್ಣಾಮೃತದಲ್ಲಿ 'ನಿತರಾಮವಸ್ಥಿತಿಃ'–ಅನನ್ಯಧ್ಯಾನ ಎಂದಿದ್ದಾರೆ. ವಿಶ್ವಪತಿತೀರ್ಥರು 'ಸುಸ್ಥಿರಾ ಭಕ್ತಿಃ' ಎಂದರೆ, ಛಲಾರೀಯ ಟೀಕೆಯಲ್ಲಿ 'ಭಕ್ತ್ಯುತ್ಕರ್ಷ' ಎಂದು ಹೇಳಿದೆ. ಷ್ಠಾ ಗತಿನಿವೃತ್ತೌ (ಭ್ವಾ. ಪರ.) ಇತ್ಯತಃ 'ಆತಶ್ಚೋಪಸರ್ಗೇ' (ಪಾ. ೩/೩/೧೦೬) ಇತ್ಯಙ್ ।

'ಉಪಸರ್ಗಾತ್—' (ಪಾ. ೮/೩/೬೫) ಇತಿ ಷಃ, ತತಷ್ಟಾಪ್। ವಿಷ್ಣು-ಪರವಾಗಿ ಅರ್ಥಮಾಡುವಾಗ ನಿ ಉಪಸರ್ಗಕ್ಕೆ 'ನಿತ್ಯದಲ್ಲೂ' ಎಂದು ಅರ್ಥ ಹೇಳಿ 'ನಿಷ್ಠಾ' ಎಂದರೆ ಅನಾದಿನಿತ್ಯವಾಗಿ ಇರುವಂಥಾ ಎಂದು ಅರ್ಥಮಾಡ-ಬೇಕು.

**29.** **ಅತಿ** ಶಬ್ದವು ಬಹಳ ಸರಳವಾಗಿ ಕಂಡರೂ ಆದರ ಅರ್ಥ ಬಹಳ ವ್ಯಾಪ್ತಿಯುಳ್ಳದ್ದು. ಅಮರಕೋಶದಲ್ಲಿ ನಾನಾರ್ಥ ವರ್ಗದಲ್ಲಿ 'ಪ್ರಕರ್ಷೇ ಲಂಘನೇಽಪ್ಯತಿ' ಎಂದೂ ಅವ್ಯಯ ವರ್ಗದಲ್ಲಿ 'ಪೂಜನೇ ಸ್ವತೀ' ಎಂದೂ ಹೇಳಿದೆ. ವೈಜಯಂತೀಕೋಶದಲ್ಲಿ 'ಅತಿ ಸ್ಯಾದಧಿಕಾರ್ಥೋಽಕ್ತೌ ಪ್ರಶಂಸಾಯಾಮತಿಕ್ರಮೇ' ಎಂದು ಸ್ಪಷ್ಟವಾಗಿ ಹೇಳಿದೆ. ಇದರಂತೆ ಅಧಿಕ ವನ್ನು ತೋರಿಸುವುದಕ್ಕೂ, ಪ್ರಶಂಸೆಯಲ್ಲೂ ಮೀರಿದ್ದು ಎಂಬ ಅರ್ಥದಲ್ಲೂ 'ಅತಿ' ಬರುತ್ತದೆ. ಅತ ಸಾತತ್ಯಗಮನೇ'(ಭ್ವಾದಿ. ಪರ.) ಎಂಬ ಧಾತುವಿನ ಮೇಲೆ ಅತತೀತ್ಯತಿ—ಮೀರಿಹೋಗು ಎಂಬ ಅರ್ಥದಲ್ಲಿ ಉಣಾದಿ ಇನ್-ಪ್ರತ್ಯಯ (೪/೧೧೯) ಬಂದಿದೆ.

**30.** **ಗುಣ** ಶಬ್ದಕ್ಕೆ ಸಂಸ್ಕೃತದಲ್ಲಿ ನಾನಾರ್ಥಗಳಿವೆ. ಮೇದಿನೀ-ಕೋಶದಲ್ಲಿ 'ಗುಣೋ ಮೌರ್ವ್ಯಾಮಪ್ರಧಾನೇ ರೂಪಾದೌ ಸೂದ ಇಂದ್ರಿಯೇ। ತ್ಯಾಗಶೌರ್ಯಾದಿ-ಸತ್ತ್ವಾದಿ-ಸಂಧ್ಯಾದ್ಯಾವೃತ್ತಿರಜ್ಜುಷು ॥ ಶುಕ್ಲಾದಾವಪಿ ಬುದ್ಧ್ಯಾಂ ಚ' ಎಂದು ಹೇಳಿದೆ. ಪ್ರಕೃತ ನಮಗೆ ಇಲ್ಲಿ ಧೈರ್ಯಾದಿ ಧರ್ಮಗಳು ಎಂಬ ಅರ್ಥವೇ ಪ್ರಸಕ್ತ'. ಸತ್ತ್ವರಜಸ್ತಮೋಗುಣಗಳೆಂಬ ಅರ್ಥ ವನ್ನೂ ಗ್ರಹಿಸಬಹುದು. ಆಗ **ಅತಿಗುಣ** ಎಂದರೆ 'ಅತಿಶಯಿತೋ ಗುಣಃ' (ಛಲಾರಿ), 'ಅಧಿಕಶ್ಚಾಸೌ ಗುಣಶ್ಚ' (ವಿಶ್ವ.) ದೊಡ್ಡಗುಣ ಅಥವಾ ಹೆಚ್ಚಿನ ಗುಣ ಎಂದರ್ಥ. ಬನ್ನಂಜೆ ಆಚಾರ್ಯರು 'ಅತಿಗುಣೋ ಗುಣಾಧಿಕಃ। ಗುಣತ್ರಯಮತಿಗತೋ ವಾ। ಭಗವತೋ ಗುಣಭೂತೇಷು ಜೀವೇಷ್ವಯ-ಮತಿರಿಚ್ಯತೇ ಚ, ಜೀವೋತ್ತಮ ಇತಿ ಯಾವತ್' ಎಂದು ಮೂರು ರೀತಿ ವಿಶೇಷಾರ್ಥ ತೋರಿಸಿದ್ದಾರೆ. ೧. ವಿಷ್ಣುಪಾದಗಳಲ್ಲಿ ದೃಢ ಭಕ್ತಿಯುಳ್ಳವ-ರೆಂಬ ಗುಣಾಧಿಕ್ಯವುಳ್ಳ. ೨. ಸತ್ತ್ವಾದಿ ಗುಣತ್ರಯಗಳ ವಿಕಾರವನ್ನು ಮೀರಿದ, ಅಥವಾ ೩. ಭಗವಂತನ ದೃಷ್ಟಿಯಿಂದ ಗುಣ(ಅಪ್ರಧಾನ)ರಾದ ಜೀವ-

**47. ಉತ್ತರಾರ್ಧದಲ್ಲಿ ಅನ್ವಯ**—ಹಿಂದೆ ನಿರೂಪಣೆ ಮಾಡಿದ ಮಹಿಮೆಯುಳ್ಳ **ಶಾರದಾ**—1. ಹರಿಯ ಪರವಾದಾಗ ಲಕ್ಷ್ಮೀದೇವಿಯು 2. ಮಧ್ವಾಚಾರ್ಯರ ಪರವಾದಾಗ ಭಾರತೀದೇವಿಯು, **ಯತ್ರ**–ಯಾವ ಪಾದಧೂಳುಗಳಲ್ಲಿ, **ಪ್ರೇಮಭಾರಂ–1.** ಭಕ್ತ್ಯತಿಶಯಂ (ಛಲಾ.) 'ಭಾರೋತಿಶಯ ಭಾರಯೋಃ' ಇತ್ಯಭಿಧಾನಮ್ । ಭಾರ ಎಂದರೆ ಅತಿಶಯ ಎಂದೂ ಅರ್ಥವಾಗುವುದರಿಂದ ಪ್ರೇಮದ ಎಂದರೆ ಭಕ್ತಿಯ ಅತಿಶಯ ವನ್ನು (ಅತಿಶಯವಾದ ಭಕ್ತಿಯನ್ನು) ; 2. ಪ್ರೇಮೋಽನುರಾಗಸ್ಯ, ಭಾರಃ ಸಮೃದ್ಧಿಸ್ತಂ, ಭಕ್ತ್ಯತಿಶಯಮಿತ್ಯರ್ಥಃ (ವಿಶ್ವ.) ಅನುರಾಗಸಮೃದ್ಧಿಂ (ಕವಿಕ.) ಭಕ್ತ್ಯತಿಶಯವನ್ನು, ಪ್ರೇಮಾಧಿಕ್ಯವನ್ನು. **ಬಭಾರ**–ದಧಾರ (ಛಲಾ.) ಧೃತವತೀ (ವಿಶ್ವ.) ಭೃತವತೀ (ಕವಿಕ.)–ಧರಿಸಿದಳೋ. ಯಾವ ಪಾದಧೂಳಿನ ಬಗ್ಗೆ ರಮಾದೇವಿಯೂ ಭಾರತಿಯೂ ಅತ್ಯಂತ ಭಕ್ತಿಯುಳ್ಳವ ರಾಗಿದ್ದಾರೋ ಅಂಥಾ ವಿಷ್ಣುವಿನ ಮತ್ತು ಮಧ್ವಾಚಾರ್ಯರ ಪಾದಧೂಳು ನಮ್ಮನ್ನು ಪರಿಶುದ್ಧ ಮಾಡಿ ಪವಿತ್ರರನ್ನಾಗಿ ಮಾಡಲಿ ಎಂದು ತಾತ್ಪರ್ಯ.

**48. ಬಭಾರ**–ಧರಿಸಿದಳು ಎಂಬುದು 'ಭೃಞ್ ಭರಣೇ'–ಧರಿಸು, ಹೊತ್ತುಕೊ ಎಂದು ಅರ್ಥವುಳ್ಳ ಭೃ (ಭ್ವಾದಿ.ಉಭ.) ಧಾತುವಿನ ಪರಸ್ಮೈ-ಪದಿ ಲಿಟ್ ಪ್ರಥಮಪುರುಷ ಏಕವಚನರೂಪ. ಬಭಾರ । ಬಭ್ರತುಃ । ಬಭ್ರುಃ ॥ ಎಂದು ಮುಂತಾದುವು ಲಿಟ್ ರೂಪಗಳು ಸಾಮಾನ್ಯವಾಗಿ ಲಿಟ್ ಲಕಾರವು ಪರೋಕ್ಷಭೂತವನ್ನು (ಕಣ್ಣಿಗೆ ಕಾಣಿಸದ ಹಿಂದಿನ ವಿಚಾರ-ಗಳನ್ನು) ತಿಳಿಸುತ್ತದೆ. ಆದರೆ 'ಆತ್ಮಾನಮೇವಾವೇತ್ ಸರ್ವಮಭವತ್' ಇತ್ಯಾದಿಗಳಂತೆ ಅನಾದ್ಯನಂತಕಾಲದಲ್ಲೂ ಧರಿಸುತ್ತಾಳೆ ಎಂಬ ಅರ್ಥದಲ್ಲಿ ಬಂದಿದೆ.

**49. ಶ್ಲೋಕಕ್ಕೆ ಹರಿಪರವಾಗಿ ಅನ್ವಯಾರ್ಥ**—ಶ್ರೀಮದ್ ವಿಷ್ಣ್ವಂಘ್ರಿ....ಪಾಂಸವಃ—ಶ್ರೀಮತ್–ಲಕ್ಷ್ಮೀಸಮೇತನಾದ, ವಿಷ್ಣು–ಶ್ರೀ-ಹರಿಯ, ಅಂಘ್ರಿ–ಪಾದಗಳಲ್ಲಿ, ನಿಷ್ಠಾ–ನಿರಂತರವಾಗಿ ಇರುವಿಕೆಯೆಂಬುದೇ, ಅತಿಗುಣ–ಅತ್ಯಪೂರ್ವವಾದ ಮತ್ತು ಅತಿ ದೊಡ್ಡದಾದ ಗುಣದಿಂದ, ಗುರು-ತಮ–ಅತ್ಯಂತ ಶ್ರೇಷ್ಠವಾದ ; ಅಲ್ಲದೆ, ಶ್ರೀಮತ್–ಕಾಂತಿಯುಳ್ಳಂಥಾ ;

ಹಾಗೂ ಆನಂದ–(ರಮಾಬ್ರಹ್ಮಾದಿ ಸಮಸ್ತ ಚೇತನವರ್ಗದ) ಸುಖಕ್ಕೆ, ತೀರ್ಥ–ಕಾರಣೀಭೂತವಾದ ; ಮತ್ತು ತ್ರೈಲೋಕ್ಯ-ಆಚಾರ್ಯ–ಮೂರು ಲೋಕಕ್ಕೂ ಆದಿಗುರುಗಳಾದ ಬ್ರಹ್ಮಾದಿಗಳ, ಪಾದ–ಜ್ಞಾನಾಖ್ಯರಶ್ಮಿಗಳಿಂದ, ಉಜ್ವಲ–ಪ್ರಕಾಶಿತವಾದ (ಅಥವಾ ವಿಕಸಿತವಾದ), ಜಲಜ–ಹೃದಯಕಮಲ ದಲ್ಲಿ, ಲಸತ್–ಪ್ರಕಾಶಿಸುತ್ತಿರುವಂಥಾ (ಎಂದರೆ ಧ್ಯಾನಕ್ಕೆ ವಿಷಯವಾಗಿ ದೇದೀಪ್ಯಮಾನವಾಗಿರುವಂಥಾ), ಪಾಂಸವಃ–(ಪಾದ) ಧೂಳಿಗಳು ; ಅಸ್ಮಾನ್–ನಮ್ಮನ್ನು, ಪುನಂತು-ಪರಿಶುದ್ಧಮಾಡಲಿ. (ಭಗವಂತನ ಧ್ಯಾನ-ದಂತೆ ಸಕಲ ವಾಙ್ಮನೋನಿಯಾಮಕಳೂ ಭಾಗ್ಯದೇವತೆಯೂ ಆದ ರಮಾ-ದೇವಿಯ ಧ್ಯಾನವೂ ಅವಶ್ಯಕರ್ತವ್ಯವಾದ್ದರಿಂದ, ವಿಷ್ಣುವಿನೊಡನೆ ಸೇರಿ-ಸಿಯೇ—ಭಗವದುಪಸರ್ಜನತೆಯಿಂದಲೇ—ಉತ್ತರಾರ್ಧದಲ್ಲಿ ಸ್ಮರಣೆ ಮಾಡು ತ್ತಾರೆ)—ಯತ್ರ–ಯಾವ ಶ್ರೀಹರಿಯ ಪಾದಧೂಳುಗಳಲ್ಲಿ, 1. ವಾಚಾಂ— ಸಕಲ ವೇದವಾಕ್ಯಗಳಿಗೂ, ಪ್ರಣೇತ್ರೀ-ಮುಖ್ಯನಿಯಾಮಕಳಾದ; 2. ತ್ರಿಭು-ವನ-ಮಹಿತಾ–ಮೂರು ಲೋಕಗಳಲ್ಲೂ ಪೂಜಿತಳಾದ ಅಥವಾ ತ್ರಿಭುವನ–ಸ್ವರ್ಗದಲ್ಲಿ, ಮಹಿತಾ–ಸಕಲದೇವತೆಗಳಿಂದ ಪೂಜಿತಳಾದ ; 3. ಶಾರದೇಂದು ....ಕಕುಭಾ—ಶಾರದ–ಶರತ್ಕಾಲದ ಹುಣ್ಣಿಮೆಯ, ಇಂದು–ಚಂದ್ರನ, ಜ್ಯೋತ್ಸ್ನಾ–ಬೆಳದಿಂಗಳಂತೆ, ಭದ್ರ–ಮಂಗಳಕರವಾದ, ಸ್ಮಿತ–ಮಂದಹಾಸದ (ಮುಗುಳುನಗೆಯ), ಶ್ರೀ–ಕಾಂತಿಯಿಂದ, ಧವಳಿತ–ಬೆಳ್ಳಗೆ ಮಾಡಲ್ಪಟ್ಟ (ಮಿಂಚು ಹೊಳೆದರೆ ಹೇಗೆ ಸಕಲ ದಿಕ್ಕುಗಳೂ ಝಗಝಗಿಸುವುವೋ ಅದೇ ರೀತಿ ಬೆಳ್ಳಗೆ ಥಳಥಳಿಸುವಂತೆ ಮಾಡಲ್ಪಟ್ಟ ಎಂದು ಭಾವ), ಕಕುಭಾ–ದಶದಿಕ್ಕುಗಳೂ ಉಳ್ಳಂಥಾ ; ಶಾರದಾ–ಅನಾದಿನಿತ್ಯಳಾದ್ದ ರಿಂದಲೂ, ಸಂಸಾರದುಃಖವನ್ನು ಕಳೆಯಿಸಿ ಮೋಕ್ಷಸುಖವನ್ನು ಶ್ರೀಹರಿಯ ಅನುಗ್ರಹದಿಂದ ಕೊಡಿಸುವವಳಾದ್ದರಿಂದಲೂ ಶಾರದಾ ನಾಮಕ-ಳಾದ ರಮಾದೇವಿಯು ; ಪ್ರೇಮಭಾರಂ–ಭಕ್ತಿಯ ಹೊರೆಯನ್ನು (ಅಗಾಧ ಭಕ್ತಿಯನ್ನು ಎಂದು ಭಾವ) ; ಬಭಾರ–ಧರಿಸಿದಳೋ, ಅಂಥಾ, ಪಾಂಸವಃ ಅಸ್ಮಾನ್ ಪುನಂತು–ಶ್ರೀಹರಿಯ ಪಾದಧೂಳು ನಮ್ಮನ್ನು ಪವಿತ್ರ ಮಾಡಲಿ ಎಂದು ಅನ್ವಯ.

ನಿಯಾಮಕಳಾದ, ಎಂದರೆ ಸಕಲ ವಾಙ್ಮನೋಭಿಮಾನಿಯಾದ ಎಂದರ್ಥ ಟೀಕಾರಾಯರು ಸುಧಾ ಮಂಗಳಶ್ಲೋಕದಲ್ಲಿ ಭಾರತೀಗೆ ವಂದಿಸುತ್ತಾ 'ಸಕಲವಚನಚೇತೋ ದೇವತಾ ಭಾರತೀ ಸಾ' ಎಂದು ಸ್ತುತಿಸಿದ್ದಾರೆ. ಆದರಿಂದ ಈ ಅರ್ಥ ಸ್ಪಷ್ಟವಾಗುತ್ತದೆ (ಛಲಾರಿ). 2. ಪ್ರಣೇತ್ರೀ–ಮಾತಿಗೇ ಅಭಿಮಾನಿಯಾದ್ದರಿಂದ ವಾಕ್ಸ್ಫೂರ್ತಿಭೆಯಿಲ್ಲದ ದಡ್ಡನಿಗೂ ವಾಕ್‌ಪ್ರೌಢಿಮೆ ಯನ್ನು ಅನುಗ್ರಹಿಸಬಲ್ಲಳು ಎಂದು ಭಾವ (ವಿಶ್ವಪತಿ). ಈ ವಿಚಾರವೂ ಸುಧಾ ದಲ್ಲಿ ಮಾಡಿದ ಭಾರತೀಸ್ತುತಿಯ ಶ್ಲೋಕದಿಂದ ಸ್ಪಷ್ಟವಾಗುತ್ತದೆ— "ಭವತಿ ಯದನುಭಾವಾದೇಡಮೂಕೋಽಪಿ ವಾಗ್ಮೀ, ಜಡಮತಿರಪಿ ಜಂತು- ರ್ಜಾಯತೇ ಪ್ರಾಜ್ಞಮೌಲಿಃ"–ಯಾರ ಅನುಗ್ರಹದಿಂದ ಮಾತೇ ಬರದ ಮೂಕನೂ ಉತ್ತಮಶ್ರೇಣಿಯ ವಕ್ತೃವಾಗುವನೋ, ಮತ್ತು ಜಡಮತಿ- ಯಾದ ಪಶುವಿನಂತಿರುವ ದಡ್ಡಶಿಖಾಮಣಿಯೂ ಪಂಡಿತ ಶಿರೋಮಣಿ ಯಾಗುವನೋ. ಅಥವಾ 3. ವಾಚಾಂ–ಸಕಲ ಶ್ರುತಿಸ್ಮೃತೀತಿಹಾಸಾದಿ ಗ್ರಂಥಸಮೂಹವನ್ನು; ಪ್ರಣೇತ್ರೀ–ಗರುಡಶೇಷರುದ್ರಾದಿ ಸಕಲ ದೇವತೆಗಳಿಗೆ ಉಪಕ್ರಮೋಪಸಂಹಾರಾದಿ ತಾತ್ಪರ್ಯಲಿಂಗಗಳನ್ನು ತೋರಿಸಿ ವಿಷ್ಣು- ಪರವಾಗಿ ಬೋಧಿಸುವಂಥಾ (ಕವಿಕರ್ಣ ಮತ್ತು ವಿಶ್ವಪತಿ.)

**45.** ii) **ತ್ರಿಭುವನಮಹಿತಾ**—"ಮಹ ಪೂಜಾಯಾಂ (ಭ್ವಾದಿ. ಚುರಾದಿ. ಪರ.)–ಪೂಜಿಸು ಎಂಬ ಧಾತುವಿನ ಭೂತಕೃದಂತರೂಪವೇ ಮಹಿತಾ ; ಆದ್ದರಿಂದ ಇದಕ್ಕೆ ಪೂಜಿತಳಾದ ಎಂದು ಅರ್ಥ. ತ್ರಿಭುವನೇನ ತ್ರಿಭುವನೇಷು ವಾ ಪೂಜಿತಾ (ವಿಶ್ವಪತಿ.) ಮೂರು ಲೋಕದ ಜನ ಗಳಿಂದಲೂ ಅಥವಾ ಮೂರು ಲೋಕಗಳಲ್ಲೂ–ಪೂಜಿತಳಾದ ಅಥವಾ ತ್ರಿಭುವನ–ಸ್ವರ್ಗದಲ್ಲಿ ಇಂದ್ರಾದಿ ದೇವತೆಗಳಿಂದ, ಮಹಿತಾ–ಪೂಜಿತಳಾದ (ಬನ್ನಂಜೆ ಗೋ.) (ಎರಡು ಪರವಾಗಿಯೂ ಒಂದೇ ಅರ್ಥ.)

**46.** iii) **ಶಾರದೇಂದು.... ಕಕುಭಾ** । ಶರದಿ ಭವಃ ಶಾರದಃ । "ಸಂಧಿವೇಲಾದ್ಯೃತುನಕ್ಷತ್ರೇಭ್ಯೋಽಣ್" (ಪಾ. ೪/೩/೧೬) ಎಂಬ ಸೂತ್ರ ದಿಂದ ಅಣ್‌ಪ್ರತ್ಯಯು ಬಂದಿದೆ. ಶರತ್ಕಾಲದ ಎಂದರ್ಥ. ಇಂದು ಎಂದರೆ ಚಂದ್ರ ಉನತ್ತೀತಿ ಇಂದುಃ । ಜಗತ್ತನ್ನು ತಂಪಾದ ಕಿರಣಗಳಿಂದ ತಣಿಸು-

ವುದರಿಂದ ಚಂದ್ರನಿಗೆ ಈ ಹೆಸರು ಬಂದಿದೆ. ಉಂದ್ (ರುಧಾದಿ. ಪರ.)– ತಣಿಸು ಎಂಬ ಧಾತುವಿನ ಮೇಲೆ ಉಣಾದಿ ಉ ಪ್ರತ್ಯಯ ಬರಲು 'ಉನ್ದೇರಿ-ಚ್ಚಾದೇಃ' (ಉ. ೧/೧೨) ಎಂಬ ಸೂತ್ರದಂತೆ ಮೊದಲನೆಯ ಉಕಾರಕ್ಕೆ ಇಕಾರಾದೇಶ ಬಂದು ಇಂದು ಎಂದಾಗಿದೆ. ಶಾರದಶ್ಚಾಸೌ ಇಂದುಶ್ಚ ಶಾರ-ದೇಂದುಃ, ತಸ್ಯ ಜ್ಯೋತ್ಸ್ನಾ–ಚಂದ್ರಿಕಾ, ಶರತ್ಕಾಲದ (ಹುಣ್ಣಿಮೆಯ) ಚಂದ್ರನ ಬೆಳದಿಂಗಳಂತೆ. ಜ್ಯೋತಿರಸ್ಯಾಸ್ತೀತಿ ಜ್ಯೋತ್ಸ್ನಾ । (ಪಾ. ೫/೨/೧೧೪ರಂತೆ ನ ಪ್ರತ್ಯಯ ಸೇರಿದ ನಿಪಾತರೂಪ.) ತದ್ವತ್ (ಅದರಂತೆ) ಭದ್ರಾ–ರುಚಿರಾ (ಛಲಾ.) ಕಲ್ಯಾಣಾ (ವಿಶ್ವ.) ಮನೋಹರಾ (ಪುಂಗ.)– ಸುಂದರವಾದ ಅಥವಾ ಮಂಗಳಕರವಾದ ; ಸ್ಮಿತಶ್ರೀಃ–ಮಂದಹಾಸಶೋಭಾ (ಛಲಾ.) ಮುಗುಳುನಗೆಯ ಕಾಂತಿಯಿಂದ ಅಥವಾ ಸೊಬಗಿನಿಂದ. 'ಶೋಭಾರ್ಥೇಽಪಿ ಪ್ರಯುಜ್ಯಂತೇ ಲಕ್ಷ್ಮೀಶ್ರೀಕಾಂತಿವಿಭ್ರಮಾಃ' ಇತ್ಯಭಿ-ಧಾನಮ್ (ಬನ್ನ. ಗೋ.)–ಲಕ್ಷ್ಮೀ, ಶ್ರೀ ಮೊದಲಾದ ಶಬ್ದಗಳು 'ಶೋಭಾ ಅಥವಾ ಕಾಂತಿ' ಎಂಬ ಅರ್ಥದಲ್ಲೂ ಪ್ರಯೋಗಿಸಲ್ಪಡುತ್ತವೆ ಎಂದು ಕೋಶದಲ್ಲಿ ಹೇಳಿದೆ. ಧವಳಿತ–ಧವಳೀಕೃತ (ಛಲಾ.) ಶುಭ್ರೀಕೃತ (ವಿಶ್ವ. ಪುಂಗ.)–ಬೆಳ್ಳಗೆ ಮಾಡಲ್ಪಟ್ಟ ಅಥವಾ ಶುಭ್ರಮಾಡಲ್ಪಟ್ಟ ; ಕಕುಭಾಃ– ದಿಶಃ–ದಿಕ್ಕುಗಳುಳ್ಳ. 'ದಿಶಸ್ತು ಕಕುಭಃ ಕಾಷ್ಠಾಃ' ಎಂದು ಅಮರ. ಕಕುಭ್ ಎಂಬುದು ಭಕಾರಾಂತ ಸ್ತ್ರೀಲಿಂಗ ಶಬ್ದ. ಭಾಗುರಿ ಎಂಬ ಪ್ರಾಚೀನ ವ್ಯಾಕರಣಕಾರನು ಹಲಂತ (ವ್ಯಂಜನಾಂತ) ಸ್ತ್ರೀಲಿಂಗ ಶಬ್ದಗಳ ಮೇಲೆ ಟಾಪ್ (ಆ) ಪ್ರತ್ಯಯ ಬರುವುದರಿಂದ ಅವಕ್ಕೆಲ್ಲ ಆಕಾರಾಂತ ರೂಪಗಳೂ ಇವೆ ಎನ್ನುತ್ತಾನೆ. ಅದರಂತೆ ದಿಶ್ (ಶಕಾರಾಂತ), ದಿಶಾ, ಕಕುಪ್– ಕಕುಭಾ ವಾಕ್(ಚಕಾರಾಂತ)–ವಾಚಾ ಎಂಬ ಎರಡೆರಡು ರೂಪಗಳೂ ಸಾಧು. ಪ್ರಕೃತ ಇಲ್ಲಿ ಕಕುಭಾ ಎಂದೇ ವಿಗ್ರಹ ಹೇಳಬೇಕು. ಛಲಾರೀಟೀಕೆಯಂತೆ ಸ್ಮಿತಶ್ರಿಯಾ ಧವಳಿತಾಃ ಕಕುಭಾಃ ಯಸ್ಯಾಃ ಸಾ ಎಂದು ಷಷ್ಠೀ ಬಹುವ್ರೀಹಿ. ವಿಶ್ವಪತಿಟೀಕೆಯಂತೆ ಸ್ಮಿತಶ್ರಿಯಾ ಧವಳಿತಾಃ ಕಕುಭಾಃ ಯಯಾ ಸಾ ಎಂದು ತೃತೀಯಾ ಬಹುವ್ರೀಹಿ. ಯಾರ ಮಂದ-ಹಾಸದಿಂದ ದಶದಿಕ್ಕುಗಳೂ (ಮಿಂಚು ಹೊಳೆದಾಗ ಆಗುವಂತೆ) ಬೆಳ್ಳಗೆ ಥಳಥಳಿಸುವವೋ ಎಂದರ್ಥ.

ನಿಯಾಮಕಳಾದ, ಎಂದರೆ ಸಕಲ ವಾಙ್ಮನೋಭಿಮಾನಿಯಾದ ಎಂದರ್ಥ. ಟೀಕಾರಾಯರು ಸುಧಾ ಮಂಗಳಶ್ಲೋಕದಲ್ಲಿ ಭಾರತೀಗೆ ವಂದಿಸುತ್ತಾ 'ಸಕಲವಚನಚೇತೋ ದೇವತಾ ಭಾರತೀ ಸಾ' ಎಂದು ಸ್ತುತಿಸಿದ್ದಾರೆ. ಅದರಿಂದ ಈ ಅರ್ಥ ಸ್ಪಷ್ಟವಾಗುತ್ತದೆ (ಛಲಾರಿ). 2. ಪ್ರಣೇತ್ರೀ–ಮಾತಿಗೇ ಅಭಿಮಾನಿಯಾದ್ದರಿಂದ ವಾಕ್ಸ್ಫೂರ್ತಿಭೆಯಿಲ್ಲದ ದಡ್ಡನಿಗೂ ವಾಕ್‌ಪ್ರೌಢಿಮೆ ಯನ್ನು ಅನುಗ್ರಹಿಸಬಲ್ಲಳು ಎಂದು ಭಾವ (ವಿಶ್ವಪತಿ). ಈ ವಿಚಾರವೂ ಸುಧಾ ದಲ್ಲಿ ಮಾಡಿದ ಭಾರತೀಸ್ತುತಿಯ ಶ್ಲೋಕದಿಂದ ಸ್ಪಷ್ಟವಾಗುತ್ತದೆ— "ಭವತಿ ಯದನುಭಾವಾದೇಡಮೂಕೋಽಪಿ ವಾಗ್ಮೀ, ಜಡಮತಿರಪಿ ಜಂತು- ರ್ಜಾಯತೇ ಪ್ರಾಜ್ಞಮೌಲಿಃ"–ಯಾರ ಅನುಗ್ರಹದಿಂದ ಮಾತೇ ಬರದ ಮೂಕನೂ ಉತ್ತಮಶ್ರೇಣಿಯ ವಕ್ತೃವಾಗುವನೋ, ಮತ್ತು ಜಡಮತಿ- ಯಾದ ಪಶುವಿನಂತಿರುವ ದಡ್ಡಶಿಖಾಮಣಿಯೂ ಪಂಡಿತ ಶಿರೋಮಣಿ ಯಾಗುವನೋ. ಅಥವಾ 3. ವಾಚಾಂ–ಸಕಲ ಶ್ರುತಿಸ್ಮೃತೀತಿಹಾಸಾದಿ ಗ್ರಂಥಸಮೂಹವನ್ನು; ಪ್ರಣೇತ್ರೀ–ಗರುಡಶೇಷರುದ್ರಾದಿ ಸಕಲ ದೇವತೆಗಳಿಗೆ ಉಪಕ್ರಮೋಪಸಂಹಾರಾದಿ ತಾತ್ಪರ್ಯಲಿಂಗಗಳನ್ನು ತೋರಿಸಿ ವಿಷ್ಣು- ಪರವಾಗಿ ಬೋಧಿಸುವಂಥಾ (ಕವಿಕರ್ಣಾ ಮತ್ತು ವಿಶ್ವಪತಿ.)

**45.** ii) **ತ್ರಿಭುವನಮಹಿತಾ**—"ಮಹ ಪೂಜಾಯಾಂ (ಭ್ವಾದಿ. ಚುರಾದಿ. ಪರ.)–ಪೂಜಿಸು ಎಂಬ ಧಾತುವಿನ ಭೂತಕೃದಂತರೂಪವೇ ಮಹಿತಾ ; ಆದ್ದರಿಂದ ಇದಕ್ಕೆ ಪೂಜಿತಳಾದ ಎಂದು ಅರ್ಥ. ತ್ರಿಭುವನೇನ ತ್ರಿಭುವನೇಷು ವಾ ಪೂಜಿತಾ (ವಿಶ್ವಪತಿ.) ಮೂರು ಲೋಕದ ಜನ ಗಳಿಂದಲೂ ಅಥವಾ ಮೂರು ಲೋಕಗಳಲ್ಲೂ–ಪೂಜಿತಳಾದ ಅಥವಾ ತ್ರಿಭುವನ–ಸ್ವರ್ಗದಲ್ಲಿ ಇಂದ್ರಾದಿ ದೇವತೆಗಳಿಂದ, ಮಹಿತಾ–ಪೂಜಿತಳಾದ (ಬನ್ನಂಜೆ ಗೋ.) (ಎರಡು ಪರವಾಗಿಯೂ ಒಂದೇ ಅರ್ಥ.)

**46.** iii) **ಶಾರದೇಂದು....ಕಕುಭಾ** । ಶರದಿ ಭವಃ ಶಾರದಃ । "ಸಂಧಿವೇಲಾದ್ಯೃತುನಕ್ಷತ್ರೇಭ್ಯೋಽಣ್" (ಪಾ. ೪/೩/೧೬) ಎಂಬ ಸೂತ್ರ ದಿಂದ ಅಣ್‌ಪ್ರತ್ಯಯ ಬಂದಿದೆ. ಶರತ್ಕಾಲದ ಎಂದರ್ಥ. ಇಂದು ಎಂದರೆ ಚಂದ್ರ ಉನತ್ತೀತಿ ಇಂದುಃ । ಜಗತ್ತನ್ನು ತಂಪಾದ ಕಿರಣಗಳಿಂದ ತಣಿಸು-

ವುದರಿಂದ ಚಂದ್ರನಿಗೆ ಈ ಹೆಸರು ಬಂದಿದೆ. ಉಂದ್ (ರುಧಾದಿ. ಪರ.)– ತಣಿಸು ಎಂಬ ಧಾತುವಿನ ಮೇಲೆ ಉಣಾದಿ ಉ ಪ್ರತ್ಯಯ ಬರಲು 'ಉನ್ದೇರಿ-ಚ್ಚಾದೇಃ' (ಉ. ೧/೧೨) ಎಂಬ ಸೂತ್ರದಂತೆ ಮೊದಲನೆಯ ಉಕಾರಕ್ಕೆ ಇಕಾರಾದೇಶ ಬಂದು ಇಂದು ಎಂದಾಗಿದೆ. ಶಾರದಶ್ಚಾಸೌ ಇಂದುಶ್ಚ ಶಾರ-ದೇಂದುಃ, ತಸ್ಯ ಜ್ಯೋತ್ಸ್ನಾ–ಚಂದ್ರಿಕಾ, ಶರತ್ಕಾಲದ (ಹುಣ್ಣಿಮೆಯ) ಚಂದ್ರನ ಬೆಳದಿಂಗಳಂತೆ. ಜ್ಯೋತಿರಸ್ಯಾಸ್ತೀತಿ ಜ್ಯೋತ್ಸ್ನಾ । (ಪಾ. ೫/೨/೧೧೪ರಂತೆ ನ ಪ್ರತ್ಯಯ ಸೇರಿದ ನಿಪಾತರೂಪ.) ತದ್ವತ್ (ಅದರಂತೆ) ಭದ್ರಾ–ರುಚಿರಾ (ಭಲಾ.) ಕಲ್ಯಾಣಾ (ವಿಶ್ವ.) ಮನೋಹರಾ (ಪುಂಗ.)– ಸುಂದರವಾದ ಅಥವಾ ಮಂಗಳಕರವಾದ ; ಸ್ಮಿತಶ್ರೀಃ–ಮಂದಹಾಸಶೋಭಾ (ಭಲಾ.) ಮುಗುಳುನಗೆಯ ಕಾಂತಿಯಿಂದ ಅಥವಾ ಸೊಬಗಿನಿಂದ. 'ಶೋಭಾರ್ಥೇಽಪಿ ಪ್ರಯುಜ್ಯಂತೇ ಲಕ್ಷ್ಮೀಶ್ರೀಕಾಂತಿವಿಭ್ರಮಾಃ' ಇತ್ಯಭಿ-ಧಾನಮ್ (ಬನ್ನ. ಗೋ.)–ಲಕ್ಷ್ಮೀ, ಶ್ರೀ ಮೊದಲಾದ ಶಬ್ದಗಳು 'ಶೋಭಾ ಅಥವಾ ಕಾಂತಿ' ಎಂಬ ಅರ್ಥದಲ್ಲೂ ಪ್ರಯೋಗಿಸಲ್ಪಡುತ್ತವೆ ಎಂದು ಕೋಶದಲ್ಲಿ ಹೇಳಿದೆ. ಧವಳಿತ–ಧವಳೀಕೃತ (ಭಲಾ.) ಶುಭ್ರೀಕೃತ (ವಿಶ್ವ. ಪುಂಗ.)–ಬೆಳ್ಳಗೆ ಮಾಡಲ್ಪಟ್ಟ ಅಥವಾ ಶುಭ್ರಮಾಡಲ್ಪಟ್ಟ ; ಕಕುಭಾಃ– ದಿಶಃ–ದಿಕ್ಕುಗಳುಳ್ಳ. 'ದಿಶಸ್ತು ಕಕುಭಃ ಕಾಷ್ಠಾಃ' ಎಂದು ಅಮರ. ಕಕುಭ್ ಎಂಬುದು ಭಕಾರಾಂತ ಸ್ತ್ರೀಲಿಂಗ ಶಬ್ದ. ಭಾಗುರಿ ಎಂಬ ಪ್ರಾಚೀನ ವ್ಯಾಕರಣಕಾರನು ಹಲಂತ (ವ್ಯಂಜನಾಂತ) ಸ್ತ್ರೀಲಿಂಗ ಶಬ್ದಗಳ ಮೇಲೆ ಟಾಪ್ (ಆ) ಪ್ರತ್ಯಯ ಬರುವುದರಿಂದ ಅವಕ್ಕೆಲ್ಲ ಆಕಾರಾಂತ ರೂಪಗಳೂ ಇವೆ ಎನ್ನುತ್ತಾನೆ. ಅದರಂತೆ ದಿಕ್ (ಶಕಾರಾಂತ), ದಿಶಾ, ಕಕುಪ್– ಕಕುಭಾ ವಾಕ್(ಚಕಾರಾಂತ)–ವಾಚಾ ಎಂಬ ಎರಡೆರಡು ರೂಪಗಳೂ ಸಾಧು. ಪ್ರಕೃತ ಇಲ್ಲಿ ಕಕುಭಾ ಎಂದೇ ವಿಗ್ರಹ ಹೇಳಬೇಕು. ಭಲಾರೀಟೀಕೆಯಂತೆ ಸ್ಮಿತಶ್ರಿಯಾ ಧವಳಿತಾಃ ಕಕುಭಾಃ ಯಸ್ಯಾಃ ಸಾ ಎಂದು ಷಷ್ಠೀ ಬಹುವ್ರೀಹಿ. ವಿಶ್ವಪತಿಟೀಕೆಯಂತೆ ಸ್ಮಿತಶ್ರಿಯಾ ಧವಳಿತಾಃ ಕಕುಭಾಃ ಯಯಾ ಸಾ ಎಂದು ತೃತೀಯಾ ಬಹುವ್ರೀಹಿ. ಯಾರ ಮಂದ-ಹಾಸದಿಂದ ದಶದಿಕ್ಕುಗಳೂ (ಮಿಂಚು ಹೊಳೆದಾಗ ಆಗುವಂತೆ) ಬೆಳ್ಳಗೆ ಥಳಥಳಿಸುವವೋ ಎಂದರ್ಥ.

**47. ಉತ್ತರಾರ್ಧದಲ್ಲಿ ಅನ್ವಯ**—ಹಿಂದೆ ನಿರೂಪಣೆ ಮಾಡಿದ ಮಹಿಮೆಯುಳ್ಳ **ಶಾರದಾ**—1. ಹರಿಯ ಪರವಾದಾಗ ಲಕ್ಷ್ಮೀದೇವಿಯು 2. ಮಧ್ವಾಚಾರ್ಯರ ಪರವಾದಾಗ ಭಾರತೀದೇವಿಯು, **ಯತ್ರ**–ಯಾವ ಪಾದಧೂಳುಗಳಲ್ಲಿ, **ಪ್ರೇಮಭಾರಂ**–1. ಭಕ್ತ್ಯತಿಶಯಂ (ಭಲಾ.) 'ಭಾರೋತಿಶಯ ಭಾರಯೋಃ' ಇತ್ಯಭಿಧಾನಮ್ । ಭಾರ ಎಂದರೆ ಅತಿಶಯಃ ಎಂದೂ ಅರ್ಥವಾಗುವುದರಿಂದ ಪ್ರೇಮದ ಎಂದರೆ ಭಕ್ತಿಯ ಅತಿಶಯ ವನ್ನು (ಅತಿಶಯವಾದ ಭಕ್ತಿಯನ್ನು) ; 2. ಪ್ರೇಮೋಽನುರಾಗಸ್ಯ, ಭಾರಃ ಸಮೃದ್ಧಿಸ್ತಂ, ಭಕ್ತ್ಯತಿಶಯಮಿತ್ಯರ್ಥಃ (ವಿಶ್ವ.) ಅನುರಾಗಸಮೃದ್ಧಿಂ (ಕವಿಕ.) ಭಕ್ತ್ಯತಿಶಯವನ್ನು, ಪ್ರೇಮಾಧಿಕ್ಯವನ್ನು. **ಬಭಾರ**–ದಧಾರ (ಭಲಾ.) ಧೃತವತೀ (ವಿಶ್ವ.) ಭೃತವತೀ (ಕವಿಕ.)–ಧರಿಸಿದಳೋ. ಯಾವ ಪಾದಧೂಳಿನ ಬಗ್ಗೆ ರಮಾದೇವಿಯೂ ಭಾರತಿಯೂ ಅತ್ಯಂತ ಭಕ್ತಿಯುಳ್ಳವ ರಾಗಿದ್ದಾರೋ ಅಂಥಾ ವಿಷ್ಣುವಿನ ಮತ್ತು ಮಧ್ವಾಚಾರ್ಯರ ಪಾದಧೂಳು ನಮ್ಮನ್ನು ಪರಿಶುದ್ಧ ಮಾಡಿ ಪವಿತ್ರರನ್ನಾಗಿ ಮಾಡಲಿ ಎಂದು ತಾತ್ಪರ್ಯ.

**48. ಬಭಾರ**–ಧರಿಸಿದಳು ಎಂಬುದು 'ಭೃಞ್ ಭರಣೇ'–ಧರಿಸು, ಹೊತ್ತುಕೊ ಎಂದು ಅರ್ಥವುಳ್ಳ ಭೃ (ಭ್ವಾದಿ.ಉಭ.) ಧಾತುವಿನ ಪರಸ್ಮೈ-ಪದಿ ಲಿಟ್ ಪ್ರಥಮಪುರುಷ ಏಕವಚನರೂಪ. ಬಭಾರ । ಬಭ್ರತುಃ । ಬಭ್ರುಃ ॥ ಎಂದು ಮುಂತಾದುವು ಲಿಟ್ ರೂಪಗಳು ಸಾಮಾನ್ಯವಾಗಿ ಲಿಟ್ ಲಕಾರವು ಪರೋಕ್ಷಭೂತವನ್ನು (ಕಣ್ಣಿಗೆ ಕಾಣಿಸದ ಹಿಂದಿನ ವಿಚಾರ-ಗಳನ್ನು) ತಿಳಿಸುತ್ತದೆ. ಆದರೆ 'ಆತ್ಮಾನಮೇವಾವೇತ್ ಸರ್ವಮಭವತ್' ಇತ್ಯಾದಿಗಳಂತೆ ಅನಾದ್ಯನಂತಕಾಲದಲ್ಲೂ ಧರಿಸುತ್ತಾಳೆ ಎಂಬ ಅರ್ಥದಲ್ಲಿ ಬಂದಿದೆ.

**49. ಶ್ಲೋಕಕ್ಕೆ ಹರಿಪರವಾಗಿ ಅನ್ವಯಾರ್ಥ**—ಶ್ರೀಮದ್ ವಿಷ್ಣ್ವಂಘ್ರಿ....ಪಾಂಸವಃ—ಶ್ರೀಮತ್–ಲಕ್ಷ್ಮೀಸಮೇತನಾದ, ವಿಷ್ಣು–ಶ್ರೀ-ಹರಿಯ, ಅಂಘ್ರಿ–ಪಾದಗಳಲ್ಲಿ, ನಿಷ್ಠಾ–ನಿರಂತರವಾಗಿ ಇರುವಿಕೆಯೆಂಬುದೇ, ಅತಿಗುಣ–ಅತ್ಯಪೂರ್ವವಾದ ಮತ್ತು ಅತಿ ದೊಡ್ಡದಾದ ಗುಣದಿಂದ, ಗುರು-ತಮ–ಅತ್ಯಂತ ಶ್ರೇಷ್ಠವಾದ ; ಅಲ್ಲದೆ, ಶ್ರೀಮತ್–ಕಾಂತಿಯುಳ್ಳಂಥಾ :

ಹಾಗೂ ಆನಂದ–(ರಮಾಬ್ರಹ್ಮಾದಿ ಸಮಸ್ತ ಚೇತನವರ್ಗದ) ಸುಖಕ್ಕೆ, ತೀರ್ಥ–ಕಾರಣೀಭೂತವಾದ ; ಮತ್ತು ತ್ರೈಲೋಕ್ಯ-ಆಚಾರ್ಯ–ಮೂರು ಲೋಕಕ್ಕೂ ಆದಿಗುರುಗಳಾದ ಬ್ರಹ್ಮಾದಿಗಳ, ಪಾದ–ಜ್ಞಾನಾಖ್ಯರಶ್ಮಿಗಳಿಂದ, ಉಜ್ವಲ–ಪ್ರಕಾಶಿತವಾದ (ಅಥವಾ ವಿಕಸಿತವಾದ), ಜಲಜ–ಹೃದಯಕಮಲ ದಲ್ಲಿ, ಲಸತ್–ಪ್ರಕಾಶಿಸುತ್ತಿರುವಂಥಾ (ಎಂದರೆ ಧ್ಯಾನಕ್ಕೆ ವಿಷಯವಾಗಿ ದೇದೀಪ್ಯಮಾನವಾಗಿರುವಂಥಾ), ಪಾಂಸವಃ–(ಪಾದ) ಧೂಳಿಗಳು ; ಅಸ್ಮಾನ್–ನಮ್ಮನ್ನು, ಪುನಂತು-ಪರಿಶುದ್ಧಮಾಡಲಿ. (ಭಗವಂತನ ಧ್ಯಾನ-ದಂತೆ ಸಕಲ ವಾಙ್ಮನೋನಿಯಾಮಕಳೂ ಭಾಗ್ಯದೇವತೆಯೂ ಆದ ರಮಾ-ದೇವಿಯ ಧ್ಯಾನವೂ ಅವಶ್ಯಕರ್ತವ್ಯವಾದ್ದರಿಂದ, ವಿಷ್ಣುವಿನೊಡನೆ ಸೇರಿ-ಸಿಯೇ—ಭಗವದುಪಸರ್ಜನತೆಯಿಂದಲೇ—ಉತ್ತರಾರ್ಧದಲ್ಲಿ ಸ್ಮರಣೆ ಮಾಡು ತ್ತಾರೆ)—ಯತ್ರ–ಯಾವ ಶ್ರೀಹರಿಯ ಪಾದಧೂಳುಗಳಲ್ಲಿ, 1. ವಾಚಾಂ—ಸಕಲ ವೇದವಾಕ್ಯಗಳಿಗೂ, ಪ್ರಣೇತ್ರೀ-ಮುಖ್ಯನಿಯಾಮಕಳಾದ; 2. ತ್ರಿಭು-ವನ-ಮಹಿತಾ–ಮೂರು ಲೋಕಗಳಲ್ಲೂ ಪೂಜಿತಳಾದ ಅಥವಾ ತ್ರಿಭುವನ–ಸ್ವರ್ಗದಲ್ಲಿ, ಮಹಿತಾ–ಸಕಲದೇವತೆಗಳಿಂದ ಪೂಜಿತಳಾದ ; 3. ಶಾರದೇಂದು ....ಕಕುಭಾ—ಶಾರದ–ಶರತ್ಕಾಲದ ಹುಣ್ಣಿಮೆಯ, ಇಂದು–ಚಂದ್ರನ, ಜ್ಯೋತ್ಸ್ನಾ–ಬೆಳದಿಂಗಳಂತೆ, ಭದ್ರ–ಮಂಗಳಕರವಾದ, ಸ್ಮಿತ–ಮಂದಹಾಸದ (ಮುಗುಳುನಗೆಯ), ಶ್ರೀ–ಕಾಂತಿಯಿಂದ, ಧವಳಿತ–ಬೆಳ್ಳಗೆ ಮಾಡಲ್ಪಟ್ಟ (ಮಿಂಚು ಹೊಳೆದರೆ ಹೇಗೆ ಸಕಲ ದಿಕ್ಕುಗಳೂ ಝಗಝಗಿಸುವುವೋ ಅದೇ ರೀತಿ ಬೆಳ್ಳಗೆ ಥಳಥಳಿಸುವಂತೆ ಮಾಡಲ್ಪಟ್ಟ ಎಂದು ಭಾವ), ಕಕುಭಾ–ದಶದಿಕ್ಕುಗಳೂ ಉಳ್ಳಂಥಾ ; ಶಾರದಾ–ಅನಾದಿನಿತ್ಯಳಾದ್ದ ರಿಂದಲೂ, ಸಂಸಾರದುಃಖವನ್ನು ಕಳೆಯಿಸಿ ಮೋಕ್ಷಸುಖವನ್ನು ಶ್ರೀಹರಿಯ ಅನುಗ್ರಹದಿಂದ ಕೊಡಿಸುವವಳಾದ್ದರಿಂದಲೂ ಶಾರದಾ ನಾಮಕ-ಳಾದ ರಮಾದೇವಿಯು ; ಪ್ರೇಮಭಾರಂ–ಭಕ್ತಿಯ ಹೊರೆಯನ್ನು (ಅಗಾಧ ಭಕ್ತಿಯನ್ನು ಎಂದು ಭಾವ) ; ಬಭಾರ–ಧರಿಸಿದಳೋ, ಅಂಥಾ, ಪಾಂಸವಃ ಅಸ್ಮಾನ್ ಪುನಂತು–ಶ್ರೀಹರಿಯ ಪಾದಧೂಳು ನಮ್ಮನ್ನು ಪವಿತ್ರ ಮಾಡಲಿ ಎಂದು ಅನ್ವಯ.

**50. ಶ್ರೀಹರಿಪರವಾಗಿ ಭಾವಾರ್ಥ**—ಶ್ರೀಹರಿಯ ಪಾದಗಳ ಧೂಳು ನಮ್ಮನ್ನು ಪರಿಶುದ್ಧ ಮಾಡಲಿ ಎಂದು ಪ್ರಾರ್ಥಿಸುವುದೇ ಈ ಶ್ಲೋಕದ ಮುಖ್ಯಧ್ಯೇಯ. ಅಲ್ಲದೆ ಶ್ರೀಮಹಾಲಕ್ಷ್ಮೀದೇವಿಯು ಐಹಿಕ-ಆಮುಷ್ಮಿಕ ಎರಡು ವಿಧದಲ್ಲೂ ಭಾಗ್ಯದೇವತೆಯೂ ಸಕಲವಾಞ್ಛಿತಪ್ರದೆಯೂ ಸಕಲವಾಞ್ಮನೋಸಿಯಾ-ಮಕಳೂ ಆಗಿರುವುದರಿಂದ ಅವಳನ್ನು ಪ್ರಾರ್ಥಿಸುವುದೂ ಅಷ್ಟೇ ಮುಖ್ಯ. ಆದರೆ ಭಗವದ್ಗೀತೆಯಲ್ಲಿ ಹನ್ನೆರಡನೇ ಅಧ್ಯಾಯ (ಶ್ಲೋ. 5) ದಲ್ಲಿ ತೋರಿಸಿದಂತೆ (ನಖಸ್ತುತಿ ಪುಟ ೨೧ನೋಡಿ) ಕೇವಲ ರಮಾದೇವಿಯನ್ನೇ ಆರಾಧಿಸುವುದು ಅಧಿಕ ಕ್ಲೇಶಕರವಾಗಿ ನಿಷೇಧಿಸಲ್ಪಟ್ಟಿರುವುದರಿಂದ ಅವಳ ಪ್ರಾರ್ಥನೆಯನ್ನು ಭಗವಂತನ ಜೊತೆಯಲ್ಲೇ ಸೇರಿಸಿ ಮಾಡಿದ್ದಾರೆ.

ಇಲ್ಲಿ ಆ ಪಾದಧೂಳಿನ ಮಹಿಮೆಯನ್ನು 1. ಶ್ರೀಮದ್ವಿಷ್ಣ್ವಂಘ್ರಿನಿಷ್ಠಾತಿಗುಣಗುರುತಮ ಎಂದೂ, 2. ಶ್ರೀಮತ್ ಎಂದೂ, 3. ಆನಂದ-ತೀರ್ಥ ಎಂದೂ, 4. ತ್ರೈಲೋಕ್ಯಾಚಾರ್ಯ ಪಾದೋಜ್ಜ್ವಲ-ಜಲಜ-ಲಸತ್ ಎಂದೂ, 5. ಯತ್ರ ಶಾರದಾ ಪ್ರೇಮಭಾರಂ ಬಭಾರ ಎಂದೂ ಐದು ವಿಶೇಷಣಗಳಿಂದ ವಿವರಿಸಿದ್ದಾರೆ. ಈ ಪದಗಳ ಅರ್ಥವನ್ನೂ ವಿವರಣೆಯನ್ನೂ ಹಿಂದೆಯೇ ವಿಸ್ತಾರವಾಗಿ ಕೊಟ್ಟಿರುವುದರಿಂದ ಈಗ ಈ ವಿಶೇಷಣಗಳ ಮುಖ್ಯಾಭಿಪ್ರಾಯವು ಮನಸ್ಸಿಗೆ ನಾಟುವುದಕ್ಕಾಗಿ ಅವುಗಳ ಭಾವವನ್ನು ಅದೇ ಕ್ರಮದಲ್ಲಿ ವಿವರಿಸಿ ಹೇಳುತ್ತೇನೆ.

**51. ಶ್ರೀಹರಿಯ ಪಾದಧೂಳಿನ ಮಹಿಮೆ—(1) ಗುರುತಮತ್ವ**—ನಖಸ್ತುತಿಯಲ್ಲಿ ವಿವರಿಸುವಂತೆ ಶ್ರೀಹರಿಯ ಅಂಗಾಂಗಗಳೆಲ್ಲವೂ ಜ್ಞಾನಾನಂದಮಯವೂ ಪರಿಪೂರ್ಣವೂ ಅನಂತವೂ ಆಗಿರುವುವಲ್ಲದೆ ಅವುಗಳಲ್ಲಿ ಅಂಗಾಂಗಭೇದವಾಗಲಿ ಪರಸ್ಪರಭೇದವಾಗಲಿ ಉಚ್ಚನೀಚಗಳೆಂಬ ಭೇದವಾಗಲಿ ಯಾವುದೂ ಇಲ್ಲ. ಹೀಗೆ ಶ್ರೀಹರಿಯೇನು, ಅವನ ಪಾದ-ಧೂಳೇನು ಎರಡೂ ಅಭಿನ್ನ. ಆದಕಾರಣ ಆ ಧೂಳು ಅವನ ಪಾದಗಳನ್ನು ಆಶ್ರಯಿಸಿವೆಯೆಂಬುದೇ ಅತಿಮಹತ್ತರವಾದ ಗುಣ. ಈ ಗುಣದಿಂದಲೇ ಆ ಧೂಳುಗಳಿಗೆ ಅತ್ಯಂತ ಹೆಚ್ಚಿನ—ಬೇರೆ ಯಾರಿಂದಲೂ ಹೊಂದಲು ಅಸಾಧ್ಯ-ವಾದ ಮಹತ್ವವುಂಟಾಗಿದೆ.

**52. (2) ಪ್ರಕಾಶ (ಶ್ರೀಮತ್)**–ಶ್ರೀವಿಷ್ಣು ಹೇಗೆ 'ತಿಗ್ಮಾಂಶು ಕೋಟ್ಯಧಿಕತೇಜಸ್ಸಿ'ನಿಂದ (ನಖಸ್ತುತಿ ಪುಟ ೧೪೮/೯) ಪ್ರಜ್ವಲಿಸುತ್ತಾನೋ ಹಾಗೆ ಪಾದಧೂಳುಗಳೂ ಪ್ರಜ್ವಲಿಸುತ್ತಿರುತ್ತವೆ. (ಈ ಸಂದರ್ಭದಲ್ಲಿ ದಕ್ಷನೇತ್ರದ ಖದ್ಯೋತೋಪಮವಿಷ್ಫುಲಿಂಗ ಬಗ್ಗೆ ನ.ಸ್ತು. ಪುಟ ೧೧೩ ರಲ್ಲಿ ಹೇಳಿದ ವಿಚಾರವನ್ನು ಸ್ಮರಿಸಿಕೊಳ್ಳಬಹುದು.)

**53. (3) ಆನಂದಕ್ಕೆ ಕಾರಣತ್ವ**—ಮುಕ್ತರ ಆನಂದತಾರತಮ್ಯವನ್ನು ತೈತ್ತಿರೀಯೋಪನಿಷತ್ತಿನ ಆನಂದದಲ್ಲಿ ಹೇಳಿದೆ. ಅಲ್ಲಿ ಹೇಳಿದ್ದಷ್ಟೂ ಒಂದೊಂದು ಕಲ್ಪದ ಆನಂದವಾಯಿತು. ಅಂಥಾ ಅನಂತ ಕೋಟಿಕಲ್ಪಗಳಲ್ಲಿ ಬಂದ ಸಕಲ ಜೀವರಾಶಿಗಳ ಆನಂದವೂ ಶ್ರೀಹರಿಯ ಅನುಗ್ರಹದಿಂದಲೇ ದೊರಕಿದೆ. ಇದೆಲ್ಲ ಜೀವಕೋಟಿಗೆ ಸೇರಿದ ಮುಕ್ತರ ಆನಂದವಾಯಿತು. ಬ್ರಹ್ಮರಿಗಿಂತಲೂ ಕೋಟಿಗುಣ ಅಧಿಕವಾದ ಆನಂದವು ಶ್ರೀಲಕ್ಷ್ಮೀದೇವಿಗೆ ಅನಾದ್ಯನಂತಕಾಲದಲ್ಲಿ ಲಭಿಸುತ್ತಾ ಬಂದಿರುವುದೂ ಶ್ರೀಹರಿಯ ಅನಂತವಾದ ಅಪಾರವಾದ ಆನಂದದ ಮಹಿಮೆಯಿಂದಲೇ ಎಂಬುದು ನಖಸ್ತುತಿಯ ಪುಟ ೧೬೬ರಲ್ಲಿ ಉದಹರಿಸಿರುವ 'ಏತಸ್ಯೈವಾನಂದಸ್ಯಾನ್ಯಾನಿ ಮಾತ್ರಾಮುಪಜೀವಂತಿ' ಎಂಬ ಬೃಹದಾರಣ್ಯಕ ಶ್ರುತಿಯಿಂದ ತಿಳಿಯುತ್ತದೆ. ಇವರಿಷ್ಟು ಮಂದಿಯ ಎಲ್ಲಾ ಆನಂದ ಸೇರಿದರೂ ಆ ಪರಮಾತ್ಮನ ಆನಂದಸಮುದ್ರದಲ್ಲಿ ಒಂದು ಹನಿಯಷ್ಟೂ ಆಗಲಾರದೆಂದು ಹೇಳಿರುವುದರಿಂದ ಸಕಲ ಚೇತನರ ಆನಂದಾವಿರ್ಭಾವಕ್ಕೆ ಈ ಪಾದಧೂಳಿಯೇ ಕಾರಣವೆಂದು ಹೇಳಿದ್ದಾರೆ.

**54. (4) ಹೃದಯದಲ್ಲಿ ಉಜ್ವಲತ್ವ**—ಹಿರಣ್ಯಕಶಿಪು ರಾವಣ ಕುಂಭಕರ್ಣಾದಿ ದೈತ್ಯರೇ ಬ್ರಹ್ಮನನ್ನೂ ರುದ್ರನನ್ನೂ ಮಾತ್ರವೇ ವರ ಯಾಚನೆ ಮಾಡಿದರೆಂದು ಪ್ರಸಿದ್ಧಿಯಿರುವುದರಿಂದ ಅವರು (ಬ್ರಹ್ಮರುದ್ರಾದಿಗಳು) ಮೂರು ಲೋಕಗಳಿಗೂ ಗುರುಗಳು (ಹಿರಿಯರು) ಎಂಬುದು ಸ್ಪಷ್ಟವಾಗುತ್ತದೆ. ಇಂಥಾ ಮಹಾನುಭಾವರೇ ತಮ್ಮ ಹೃದಯಕಮಲಗಳಲ್ಲಿ ಜ್ಞಾನಚಕ್ಷುಸ್ಸಿನಿಂದ ಸೂರ್ಯನಂತೆ ಝಗಝಗಿಸುತ್ತಿರುವ ಈ ಪಾದಧೂಳನ್ನು ಸದಾ ಧ್ಯಾನಿಸುತ್ತಿರುತ್ತಾರೆ. ಸೂರ್ಯನ ಬೆಳಕು ಬಿದ್ದಾಗ ಹೇಗೆ ಸಕಲ ಪದಾರ್ಥಗಳೂ ಥಳಥಳಿಸುವುವೋ ಅದರಂತೆಯೇ ಧ್ಯಾನ-

ಮಾಡಲ್ಪಡುತ್ತಿರುವ ಧೂಳಿನ ಪ್ರಕಾಶದಿಂದ ಬ್ರಹ್ಮಾದಿಗಳ ಹೃದಯ-ಕಮಲವು ಪ್ರಜ್ವಲಿಸುತ್ತಿರುತ್ತವೆಯೆಂದು ತಿಳಿಯಬೇಕು.

**55. (5) ಲಕ್ಷ್ಮೀಯಿಂದ ಧಾರ್ಯಮಾಣತ್ವ**—ಈ ಪಾದ-ಧೂಳನ್ನು ಧ್ಯಾನಿಸುವವರು ಬ್ರಹ್ಮಾದಿ ದೇವತೆಗಳು ಮಾತ್ರವಲ್ಲ, ಜಗನ್ಮಾತೆಯೂ ಭಾಗ್ಯದೇವತೆಯೂ ಆದ ಸಾಕ್ಷಾಲ್ಲಕ್ಷ್ಮೀದೇವಿಯೇ ಈ ಪಾದಧೂಳನ್ನು ಅಪಾರವಾದ ಶ್ರದ್ಧಾಭಕ್ತಿಗಳಿಂದ ಆರಾಧಿಸುತ್ತಾಳೆ. (ಲಕ್ಷ್ಮೀದೇವಿಗೆ ಕೊಟ್ಟಿರುವ ವಿಶೇಷಣಗಳ ಭಾವಾರ್ಥವನ್ನು ಭಾರತೀದೇವಿಯ ಮಹಿಮೆ ವರ್ಣಿಸುವಾಗ ಮುಂದೆ ಖಂಡ 58ರಲ್ಲಿ ವಿವರಿಸುವೆವು.)

ಇಂಥಾ ಶ್ರೀಹರಿಯ ಪಾದಧೂಳುಗಳು ನಮ್ಮನ್ನು ಪವಿತ್ರಗೊಳಿಸಲಿ ಎಂಬುದೇ ಹರಿಪರವಾದ ಭಾವಾರ್ಥ.

**56. ವಾಯುಪರವಾಗಿ ಅನ್ವಯಾರ್ಥ**—ಶ್ರೀಮದ್ ವಿಷ್ಣ್ವಂಘ್ರಿ ....ಜಲಜಪಾಂಸವಃ—ಶ್ರೀಮತ್–ಮಂಗಳಕರನಾದ, ಸಕಲೈಶ್ವರ್ಯೋಪೇತನಾದ, ಸಕಲವೇದಪ್ರತಿಪಾದ್ಯನೆಂದು ಪ್ರಖ್ಯಾತನಾದ ಮತ್ತು ಲಕ್ಷ್ಮೀ-ಸಮೇತನಾದ ವಿಷ್ಣು–ಬ್ರಹ್ಮಾಂಡದ ಒಳಗೆ ಹೊರಗೆಲ್ಲ ವ್ಯಾಪ್ತನಾಗಿರುವ ಶ್ರೀಹರಿಯ, ಅಂಘ್ರಿ–ಪಾದದ್ವಯದಲ್ಲಿ, ನಿಷ್ಠಾ–ನಿರಂತರವಾಗಿ ನೆಲೆಸಿದ ಅನನ್ಯಭಕ್ತಿಯೆಂಬ, ಅತಿ–ಮಹತ್ತರವಾದ, ಗುಣ–ಗುಣದಿಂದ, ಗುರುತಮ–ಎಲ್ಲರಿಗೂ ಅತ್ಯಂತ ಹಿರಿಯರಾದ (ಜೀವೋತ್ತಮರೆನಿಸಿದ), ಶ್ರೀಮತ್–ಜ್ಞಾನಭಕ್ತಿವೈರಾಗ್ಯಾದಿಸಂಪದ್ಭರಿತರಾದ, ಆನಂದತೀರ್ಥ-ಸ್ವರೂಪಾನಂದವನ್ನು ಕೊಡುವ ಸಚ್ಛಾಸ್ತ್ರರಚನೆ ಮಾಡಿದವರೂ, ಆನಂದಸ್ವರೂಪಿಯಾದ ಶ್ರೀಹರಿಯ ವಿಶೇಷ ಸನ್ನಿಧಾನವುಳ್ಳವರೂ ಆದ ಶ್ರೀಮನ್ಮಧ್ವಾಚಾರ್ಯರೆಂಬ, ತ್ರೈಲೋಕ್ಯಾಚಾರ್ಯ–ಮೂರು ಲೋಕಗಳಿಗೂ ಆದಿಗುರುಗಳಾಗಿರುವ ಶ್ರೀಮದಾಚಾರ್ಯರ, ಪಾದ-ಉಜ್ವಲ-ಜಲಜ–ನಿಷ್ಕಲ್ಮಷವಾಗಿರುವುದರಿಂದ ನಿರ್ಮಲವಾಗಿ ಸ್ವಚ್ಛನಾಗಿರುವ ಪಾದಕಮಲಗಳ, ಲಸತ್-ಪ್ರಜ್ವಲಿಸುತ್ತಿರುವ, ಪಾಂಸವಃ–ಧೂಳಿನ ಕಣಗಳು, ಅಸ್ಮಾನ್–ನಮ್ಮನ್ನು, ಪುನಂತು–ಪವಿತ್ರಗೊಳಿಸಲಿ (ದುಶ್ಶಾಸ್ತ್ರಗಳನ್ನು ಓದಿ ವಿಷ್ಣುವೈಷ್ಣವ ದ್ವೇಷ ಮಾಡಿ ದುರಾಚಾರ ಮಾಡಿದ ಮಹಾಪರಾಧವನ್ನು ತೊಡೆದುಹಾಕಿ ಪರಿಶುದ್ಧ ಮಾಡಲಿ ಎಂದು ಭಾವ). (ಇದು ಪೂರ್ವಾರ್ಧ)

ಯತ್ರ–ಯಾವ ಆ ಶ್ರೀಮದಾಚಾರ್ಯರ ಪಾದಧೂಳಿನಲ್ಲಿ, 1. ವಾಚಾಂ–ವೇದವಾಕ್ಯಗಳಿಗೆ, ಪ್ರಣೇತ್ರೀ–ಗರುಡಶೇಷಾದಿಗಳಿಗೆ ಉಪಕ್ರಮಾದಿ ಲಿಂಗಗಳಿಂದ ವಿಷ್ಣುಪರತ್ವವನ್ನು ತಿಳಿಸಿಕೊಡುವವಳಾಗಿದ್ದಾಳೋ, ಅಥವಾ ವಾಚಾಂ–ವಾಗಿಂದ್ರಿಯಕ್ಕೂ ಮನಸ್ಸಿಗೂ, ಪ್ರಣೇತ್ರೀ–ಅಭಿಮಾನಿದೇವತೆ-ಯಾಗಿರುವಳೋ, ಅಥವಾ ವಾಚಾಂ–ಮಂದಮತಿಗೂ ಸಹ ಮಾತನ್ನು (ವಾಕ್‌ಪ್ರೌಢಿಮೆಯನ್ನು), ಪ್ರಣೇತ್ರೀ–ಜಾಗ್ರತಗೊಳಿಸುವವಳಾಗಿದ್ದಾಳೋ (ಗಂಗಾಪ್ರವಾಹದಂತೆ ಪ್ರವೃತ್ತಿ ಮಾಡಬಲ್ಲಳೋ); 2. ತ್ರಿಭುವನಮಹಿತಾ–ತ್ರಿ–ಮೂರು, ಭುವನ–ಲೋಕಗಳಲ್ಲೂ ಅಥವಾ ಮೂರು ಲೋಕದ ಜನ-ಗಳಿಂದಲೂ, ಮಹಿತಾ–ಪೂಜಿತಳಾದ ಅಥವಾ ತ್ರಿಭುವನ–ಸ್ವರ್ಗದಲ್ಲಿ, ಮಹಿತಾ–ಇಂದ್ರಾದಿ ದೇವತೆಗಳಿಂದ ಪೂಜಿತಳಾದ ; 3. ಶಾರದೇಂದು.... ಕಕುಭಾ—ಶಾರದಾ-ಇಂದು–ಶರತ್ಕಾಲದ ಹುಣ್ಣಿಮೆಯ ಚಂದ್ರನ, ಜ್ಯೋತ್ಸ್ನಾ-ಬೆಳದಿಂಗಳಿನಂತೆ, ಭದ್ರ-ಮಂಗಳಕರವಾದ, ಸ್ಮಿತ–ಮಂದಹಾಸದ ಶ್ರೀ–ಸೊಬಗಿನಿಂದ, (ಸ್ಮಿತಶ್ರೀಃ–ಎಂದೇ ಕ್ವಚಿತ್ ಪಾಠವಿದೆಯೆಂದು ಬನ್ನಂಜೆ ಗೋವಿಂದಾಚಾರ್ಯರು ಹೇಳುತ್ತಾರೆ. ಆ ಪಾಠರೀತ್ಯಾ—ಸ್ಮಿತಶ್ರೀಃ–ಮಂದಹಾಸದ ಬೆಡಗುಳ್ಳ ಅಥವಾ ಶೋಭೆಯುಳ್ಳಂಥಾ ಎಂದು ಇಲ್ಲಿಗೇ ಈ ವಿಶೇಷಣದ ಅರ್ಥ ಮುಗಿದುಹೋಗುತ್ತದೆ. ಧವಳಿತಕಕುಭಾ ಎಂಬುದು ಬೇರೆ ವಿಶೇಷಣವಾಗುತ್ತದೆ.) ಧವಳಿತ–ಬೆಳ್ಳಗೆ ಮಾಡಲ್ಪಟ್ಟ, ಕಕುಭಾ–ಹತ್ತುದಿಕ್ಕುಗಳುಳ್ಳ ; ಶಾರದಾ–ಭಾರತೀದೇವಿಯು, ಪ್ರೇಮಭಾರಂ–ಭಕ್ತಿ ಶ್ರದ್ಧೆಗಳ ಹೊರೆಯನ್ನೇ ; ಬಭಾರ–ಧರಿಸಿದ್ದಾಳೆಯೋ, ಅಂಥಾ ಶ್ರೀಮದಾ-ಚಾರ್ಯರ ಪಾದಧೂಳು ನಮ್ಮನ್ನು ಶುದ್ಧಿಮಾಡಿ ಪವಿತ್ರಮಾಡಲಿ ಎಂದು ಹಿಂದಿನ ಪಾದದೊಡನೆ ಅನ್ವಯ.

**57. ಮಧ್ವಾಚಾರ್ಯರ. ವಿಷ್ಣುಭಕ್ತಿ. ವಾಯುಪರವಾಗಿ ಭಾವಾರ್ಥ** (ಪೂರ್ವಾರ್ಧ)—ಶ್ರೀಮನ್ಮಧ್ವಾಚಾರ್ಯರು ಭಗವಂತನಾದ ಶ್ರೀಮಹಾವಿಷ್ಣುವಿನ ಅವಿಚ್ಛಿನ್ನಭಕ್ತರೂ ಅವನ ಅತ್ಯಂತ ಪ್ರೇಮಕ್ಕೆ ಪಾತ್ರರೂ ಆಗಿದ್ದಾರೆ. ಜೀವಕೋಟಿಯಲ್ಲೇ (ಬ್ರಹ್ಮದೇವರನ್ನು ಬಿಟ್ಟರೆ) ಬೇರೆ ಯಾರೂ ವಿಷ್ಣುವಿನಲ್ಲಿ ಇವರಂತೆ ಭಕ್ತಿಯನ್ನೂ ಮಾಡಲಾರರು.

ಇವರಷ್ಟು ವಿಷ್ಣುಪ್ರೀತಿಗೆ ಪಾತ್ರರೂ ಮತ್ತೆ ಯಾರೂ ಇಲ್ಲ. ಇದಕ್ಕೆ ಆ ಶ್ರೀಮದಾಚಾರ್ಯರ ಮಾತುಗಳೇ ಸಾಕ್ಷಿಯಾಗಿವೆ. ತೈತ್ತಿರೀಯೋಪನಿಷದ್ಭಾಷ್ಯದಲ್ಲಿ 'ಪ್ರೇಯಾಂಸಂ ಪ್ರೇಯಸಶ್ಚ ಮೇ ವಿಷ್ಣುಂ' ನನಗೆ ಅತ್ಯಂತ ಪ್ರಿಯನಾದ ವಸ್ತುಗಳೆಲ್ಲಾ ಪರವು ಅತ್ಯಂತ ಪ್ರಿಯನಾದ ವಿಷ್ಣುವನ್ನು' ಎಂದೂ, ಅಥರ್ವಣಭಾಷ್ಯದಲ್ಲಿ 'ಪ್ರೇಷ್ಠಃ ಪ್ರೇಷ್ಠತಮಃ ಸದಾ'–ಆ ವಿಷ್ಣು ನನಗೆ ಸರ್ವದಾ ಬಹುಪ್ರಿಯವಾದವರಲ್ಲೆಲ್ಲಾ ಅತ್ಯಂತ ಪ್ರಿಯತಮನು ಎಂದೂ, ಬೃಹದ್ಭಾಷ್ಯದಲ್ಲಿ 'ಸುಪ್ರೇಷ್ಠಂ, ಮೇ ಸತತಂ ಪ್ರಿಯಾತ್ ಪ್ರಿಯತಮಂ' (ಅರ್ಥ ಸ್ಪಷ್ಟವಾಗಿದೆ) ಎಂದೂ, ಛಾಂದೋಗ್ಯಭಾಷ್ಯದಲ್ಲಿ 'ಮಮ ಪ್ರಿಯತಮ–ಸ್ತ್ವಿಷ್ಟಾದಪೀಷ್ಟೋತ್ತಮಃ' ಎಂದೂ, ಕಾಠಕಭಾಷ್ಯದಲ್ಲಿ 'ಯಸ್ಯಾಹಮಾಪ್ತ ಆಪ್ತೇಭ್ಯೋ ಯೋ ಮ ಆಪ್ತತಮಃ ಸದಾ'– 'ಯಾರಿಗೆ ನಾನು ಬಹಳ ಆಪ್ತರಿಗಿಂತಲೂ ಅತ್ಯಂತ ಆಪ್ತನಾಗಿದ್ದೇನೆಯೋ ಮತ್ತು ಯಾರು (ವಿಷ್ಣುವು) ನನಗೆ ಸದಾಕಾಲದಲ್ಲೂ ಅತ್ಯಂತ ಆಪ್ತನಾಗಿದ್ದಾನೋ' ಎಂದೂ ಅನೇಕ ಕಡೆಗಳಲ್ಲಿ ಹೇಳಿಕೊಂಡಿದ್ದಾರೆ.

ಅಂತೂ ಒಟ್ಟಿನಲ್ಲಿ ಶ್ರೀಮಹಾವಿಷ್ಣುವಿನಲ್ಲಿ ಅವ್ಯಭಿಚರಿತವಾಗಿ (ಎಂದರೆ ಒಂದು ಕ್ಷಣವೂ ಸಹ ಬಿಡದಂತೆ), ನಿರ್ವ್ಯಾಜವಾಗಿ, ಅನಂತಗುಣೋಪಾಸನಾಪೂರ್ವಕವಾಗಿ ಅತ್ಯಧಿಕವಾದ ಪರಮಭಕ್ತಿಯನ್ನು ಮಾಡುವುದೇ ಅವರಲ್ಲಿರುವ ಬಹುದೊಡ್ಡಗುಣ. ಈ ಕಾರಣದಿಂದಲೇ ಅವರು ಮೂರುಲೋಕಗಳಲ್ಲೂ ಮುಖ್ಯರಾದ ಹಿರಿಯ ಗುರುಗಳು—ಆದಿಗುರುಗಳು—ಎಂದು ಪೂಜ್ಯರಾಗಿದ್ದಾರೆ.

ಇಂಥಾ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರ ಪಾದಗಳು ನಿರ್ಮಲವಾದ ಸ್ವಚ್ಛ ಕಮಲಗಳಂತೆ ನಿಷ್ಕಲ್ಮಷವಾಗಿ ಪರಿಶುದ್ಧವಾಗಿ ಪರಮಪಾವನವಾಗಿರುವುವು. (ವಿಜಯದಾಸರಾಯರು ಇವರ ಪಾದಮಹಿಮೆಯನ್ನೇ ಇಡೀ ಒಂದು ಸುಳಾದಿಯಲ್ಲಿ ವರ್ಣಿಸಿದ್ದಾರೆ.) ಅವರ ಪಾದಗಳಿರಲಿ, ಅವರ ಪಾದಕಮಲಗಳ ರಜೋಧೂಳಿಯೇ ಅತ್ಯಂತ ಪಾವನವಾದುದು, ಆ ಧೂಳಿನ ಕಣಗಳೇ ಸ್ವಚ್ಛವಾಗಿ ಪ್ರಜ್ವಲಿಸುತ್ತಿರುತ್ತವೆ. ನಾವು ವಿಷ್ಣು–ವೈಷ್ಣವದ್ವೇಷ ಮಾಡಿ, ದುಶ್ಶಾಸ್ತ್ರಗಳನ್ನು ಓದಿ ಅಭ್ಯಾಸ-

ಮಾಡಿ ಮಿಥ್ಯಾಜ್ಞಾನಕ್ಕೆ ಗುರಿಯಾಗಿ ಅನಾದಿಪರಂಪರಾಪ್ರಾಪ್ತವಾದ ಸದ್ವೈಷ್ಣವಮಾರ್ಗವನ್ನು ಬಿಟ್ಟು ದುರ್ಮಾರ್ಗಾವಲಂಬಿಗಳಾಗಿ ಅಪವಿತ್ರರಾಗಿ ಹೋಗಿದ್ದೇವೆ. ಇಂಥಾ ನಮ್ಮನ್ನೂ (ನಮ್ಮ ಕುಲದಲ್ಲಿ ಹುಟ್ಟಿದ ಸಕಲರನ್ನೂ) ಶ್ರೀಮದಾನಂದತೀರ್ಥಭಗವಾತ್ಪಾದಾಚಾರ್ಯರ ಪಾದಕಮಲಗಳ ಪರಮಪಾವನವಾದ ಆ ಪಾದಧೂಳುಗಳು ಪರಿಶುದ್ಧರನ್ನಾಗಿ ಮಾಡಿ (ಎಂದರೆ ಸಕಲದೋಷಗಳನ್ನೂ ದೂರಮಾಡಿ) ಸ್ವಚ್ಛಗೊಳಿಸಿ ಪವಿತ್ರರನ್ನಾಗಿ ಮಾಡಲಿ.

**58. ಭಾರತೀದೇವಿಯ ಸ್ಮರಣೆ** (ಉತ್ತರಾರ್ಧದ ತಾತ್ಪರ್ಯ)—**ಭಾರತೀದೇವಿಯು** ಹುಣ್ಣಿಮೆಯ ಚಂದ್ರನಂತೆ ಬೆಳ್ಳಗಿರುವಳಲ್ಲದೆ ತಾಪತ್ರಯಪರಿಹಾರಕಳಾಗಿರುವುದರಿಂದಲೂ ವಿದ್ಯುದಭಿಮಾನಿಯಾಗಿರುವುದಲ್ಲದೆ ಮಿಂಚಿನಂತೆ ಹೊಳೆಯುತ್ತಿರುವುದರಿಂದಲೂ ಆಕೆಯನ್ನು **ಶಾರದೆ**-ಯೆಂದೂ ಕರೆಯುತ್ತಾರೆ. ಈಕೆಯೇ ಗರುಡಶೇಷಾದಿ ಸಕಲ ಚೇತನ ವರ್ಗಕ್ಕೂ ವಾಙ್ಮನಸ್ಸುಗಳಿಗೆ ಪ್ರೇರಕಳೂ ಸಮಸ್ತವೇದವಾಕ್ಯಗಳಿಗೂ ನಿಯಾಮಕಳೂ ಆಗಿದ್ದಾಳೆ. ವೇದವಾಕ್ಯಗಳಿಗೆ ಉಪಕ್ರಮಾದಿ ಲಿಂಗಗಳನ್ನು ಅನ್ವಯಿಸಿ ಶಕ್ತಿತಾತ್ಪರ್ಯಗಳಿಗೆ ವಿರೋಧ ಬರದಂತೆ ವಿಷ್ಣುಪರವಾಗಿ ಹೇಗೆ ಅರ್ಥ ಹೇಳಬೇಕೆಂಬುದನ್ನು ಗರುಡಶೇಷಾದಿಗಳಿಗೆ ತೋರಿಸಿಕೊಡುವ ಮಹಾನುಭಾವಳೇ ಇವಳು. ಆದ್ದರಿಂದಲೇ ಈಕೆ ಲೋಕತ್ರಯದಲ್ಲೂ ಮಾನ್ಯಳಾಗಿ ಪೂಜಿತಳಾಗಿದ್ದಾಳೆ. ಈ ದೇವಿಯ ಮಂದಹಾಸವು ಶರತ್ಕಾಲದ ಹುಣ್ಣಿಮೆಯ ಚಂದ್ರನ ಬೆಳದಿಂಗಳಂತೆ ಶುಭ್ರವಾಗಿ ಬೆಳ್ಳಗಿದ್ದು ಅತ್ಯಂತ ಆಪ್ಯಾಯಮಾನವಾಗಿದೆ.

ಬೆಳದಿಂಗಳು ಯಾವ ರೀತಿ ತಂಪಾಗಿದ್ದು ತಾಪವನ್ನು ಪರಿಹರಿಸಿ ಕತ್ತಲೆಯನ್ನು ಹೋಗಲಾಡಿಸಿ ಮನಸ್ಸಿಗೆ ಆಹ್ಲಾದವನ್ನುಂಟುಮಾಡುವುದೋ ಹಾಗೆಯೇ ಈ ಭಾರತೀದೇವಿಯ ಮಂದಹಾಸವು ಮಂಗಳಕರವಾಗಿದ್ದು ಭಕ್ತರ ಸಕಲ ತಾಪತ್ರಯವನ್ನೂ ಪರಿಹರಿಸಿ ಮನಸ್ಸಿಗೆ ಶಾಂತಿಯನ್ನುಂಟುಮಾಡುವುದಲ್ಲದೆ ಅವರ ಅಜ್ಞಾನವನ್ನು ನಾಶಮಾಡಿ ಜ್ಞಾನದ ಬೆಳಕನ್ನು ಎಂಟು ದಿಕ್ಕುಗಳಲ್ಲೂ ಬೆಳಗಿಸಿ ಸೂರೆಮಾಡುತ್ತದೆ. ಇಂಥಾ ಮಂದಹಾಸವನ್ನು ಬೀರುವ ತ್ರೈಲೋಕ್ಯಮಾತೆಯಾದ ಸಾಕ್ಷಾತ್ ಭಾರತೀದೇವಿಯೇ

ಶ್ರೀಮನ್ಮಧ್ವಾಚಾರ್ಯರ ಪಾದಧೂಳಿನಲ್ಲಿ ಅತ್ಯಂತ ಶ್ರದ್ಧಾದರಭಕ್ತಿ-ಯುಳ್ಳವಳಾಗಿದ್ದಾಳೆ. ಹೀಗಿರುವಾಗ ಗರುಡಶೇಷರುದ್ರೇಂದ್ರಾದಿಗಳೂ ಆ ಪಾದಧೂಳನ್ನು ಆದರಿಸುವರೆಂದು ಹೇಳುವುದೇನಿದೆ ! ಇಂಥಾ ಮಹಾಮಹಿ-ಮೋಪೇತವಾದ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರ ಪಾದಕಮಲ-ಗಳ ರಜೋಧೂಳಿಗಳು ನಮ್ಮ ಸಕಲ ಕಲ್ಮಶಗಳನ್ನೂ ದೂರಮಾಡಿ ನಮ್ಮನ್ನು ಪವಿತ್ರರನ್ನಾಗಿ ಮಾಡಲಿ ಎಂದು ಪಂಡಿತಾಚಾರ್ಯರು ಈ ಶ್ಲೋಕದಲ್ಲಿ ಪ್ರಾರ್ಥಿಸಿದ್ದಾರೆ.

**59. ವಿಶೇಷ ವಿಚಾರಗಳು**—೧. ಉತ್ತರಾರ್ಧದಲ್ಲಿ ಶಾರದಾಶಬ್ದ-ದಿಂದ ರಮಾದೇವಿಯ ಮತ್ತು ಭಾರತೀದೇವಿಯ ಸ್ಮರಣ ಮಾಡಿರುವುದ-ರಿಂದಲೂ 'ವಾಚಾಂ ಪ್ರಣೇತ್ರೀ' ಎಂದು ಕಂಠೋಕ್ತವಾಗಿ ಹೇಳಿರುವುದ-ರಿಂದಲೂ ಶ್ರೀಮನ್ನ್ಯಾಯಸುಧಾದಲ್ಲಿ 'ಸಕಲವಚನಚೇತೋದೇವತಾ' ಎಂದು ಹೇಳಿದಂತೆ ಸಕಲ ವೇದವಾಕ್ಕುಗಳಿಗೂ ವಾಗಿಂದ್ರಿಯಕ್ಕೂ ಮನಸ್ಸಿಗೂ ನಿಯಾಮಕರಾದ ಈ ಇಬ್ಬರನ್ನೂ ಗ್ರಂಥಾರಂಭದಲ್ಲಿ ಅವಶ್ಯವಾಗಿ ಸ್ತೋತ್ರ-ಮಾಡಬೇಕೆಂದು ಸೂಚಿತವಾಗುತ್ತದೆ. (ಪುಂಗ. ರಾಘ.) ೨. ಶ್ರೀಹರಿವಾಯು-ಸ್ತುತಿಯನ್ನು 'ಶ್ರೀಮತ್' ಎಂದು ಲಕ್ಷ್ಮೀಸ್ಮರಣರೂಪ ಶ್ರೀಕಾರದಿಂದ ಆರಂಭಿಸಿರುವುದರಿಂದಲೂ (ಪುಂಗ. ರಾಘ.) ಜೊತೆಗೆ ಲಕ್ಷ್ಮೀದೇವತಾಕವಾದ ಮಗಣದಿಂದಲೇ ಆರಂಭಿಸಿರುವುದರಿಂದಲೂ ಈ ಗ್ರಂಥಕ್ಕೆ ಮೋಕ್ಷರೂಪ ಪಾರತ್ರಿಕಫಲವು ಮಾತ್ರವಲ್ಲದೆ ಭೂಧನಕನಕಾದಿ ಸಕಲ ಐಹಿಕಸಂಪತ್ತೂ ಸಹ ಫಲರೂಪವಾಗಿ ದೊರಕುವುದೆಂದು ಸೂಚಿಸಿದ್ದಾರೆ. ಇದನ್ನು "ಲಕ್ಷ್ಮೀ-ರ್ಮಸ್ತಿಗುರುಃ ಕ್ಷಿತಿಂ ವಿತನುತೇ" ಎಂಬ ವಾಕ್ಯವು ತಿಳಿಸುತ್ತದೆ. ಮೂರು ಗುರುಗಳಿರುವ ಮಗಣವು ಲಕ್ಷ್ಮೀವಾಚಕ. ಅದನ್ನು ಮೊದಲಲ್ಲಿ ಉಪಯೋಗಿಸಿ-ದರೆ ಭೂಮ್ಯಾದಿಸಂಪತ್ಕಾರಕ ಎಂದರ್ಥ. ಪ್ರಾರಂಭದಲ್ಲಿರುವ 'ಶ್ರೀಮದ್ವಿ-ಷ್ಣ್ವಂ' ಎಂಬ ಮೊದಲ ನಾಲ್ಕು ಅಕ್ಷರಗಳೂ ಗುರುಗಳೇ; ಸಾಲಾಗಿ ಮೂರು ಗುರುಗಳು ಇರುವ ಗುಣಕ್ಕೆ 'ಮಗಣ' ಎಂಬುದು ಛಂದಶ್ಶಾಸ್ತ್ರದಲ್ಲಿ ಹೇಳಿದ ಲಕ್ಷಣ. (ಪುಂಗ. ರಾಘ., ಛ., ಕ.ಕ.)

**60. ಛಂದಸ್ಸಿನ ವಿಚಾರ**—ವಾಯುಸ್ತುತಿಯ ನಲವತ್ತೊಂದು ಶ್ಲೋಕಗಳೂ ಸ್ರಗ್ಧರಾವೃತ್ತದಲ್ಲೇ ರಚಿತವಾಗಿವೆ. ಇದರ ಒಂದೊಂದು ಪಾದದಲ್ಲೂ ಇಪ್ಪತ್ತೊಂದು ಅಕ್ಷರಗಳಿರುತ್ತವೆಯಾದರೂ ಪ್ರತಿ ಏಳೇಳು ಅಕ್ಷರಕ್ಕೂ ಯತಿ ಇದೆ (ಎಂದರೆ ನಿಲ್ಲಿಸಿ ಹೇಳುವಂತೆ ಪದಚ್ಛೇದವಿರಬೇಕು.) ಆದ್ದರಿಂದ ಈ ವಾಯುಸ್ತುತಿಯ ಪದಜೋಡಣೆ ಕೆಲವುಕಡೆ ಕ್ಲಿಷ್ಟವಾಗಿ ಕಂಡರೂ ಹೀಗೆ ಏಳೇಳು ಅಕ್ಷರಗಳಿಗೆ ನಿಲ್ಲಿಸಿ ಹೇಳಬೇಕಾಗಿರುವುದರಿಂದ ಒಂದು ರೀತಿ ಅನುಕೂಲವಾಗಿದೆಯೆಂಬ ವಿಚಾರ ಹಿಂದೆಯೇ (ಪುಟ ೩೯ರಲ್ಲಿ) ಅಭ್ಯಾಸಕ್ರಮವನ್ನು ವಿವರಿಸುವಾಗ ತಿಳಿಸಿದ್ದೇವೆ. ಸ್ರಗ್ಧರಾವೃತ್ತಕ್ಕೆ 'ಮ್ರಭ್ನೈರ್ಯಾನಾಂ ತ್ರಯೇಣ ತ್ರಿಮುನಿಯತಿಯುತಾ ಸ್ರಗ್ಧರಾ ಕೀರ್ತಿತೇಯಮ್' ಎಂಬುದೇ ಲಕ್ಷಣ. ಮರಭನಯಯಯ ಎಂಬುದೇ ಗಣಗಳ ಕ್ರಮ. ಇನ್ನು ಪ್ರಥಮಶ್ಲೋಕದಲ್ಲಿ ಗುಣಗುರುತಮ ಎಂಬಲ್ಲಿ ಗುಕಾರವೂ, ಉಜ್ವಲ–ಜಲಜ–ಲಸತ್ ಎಂಬಲ್ಲಿ ಜಲ–ಜಲ ಎಂದೂ, ಶಾರದಾ ಶಾರದೇಂದು ಎಂಬಲ್ಲಿ ಶಾರದ ಶಬ್ದವೂ, ಭಾರಂ ಬಭಾರ ಎಂಬಲ್ಲಿ ಭಾರ ಎಂಬುದೂ, ಎರಡೆರಡು ಸರಿ ಬಂದಿರುವುದರಿಂದ ವೃತ್ತ್ಯನುಪ್ರಾಸಾಲಂಕಾರ. ಆಚಾರ್ಯರ ಪಾದಗಳನ್ನು ಕಮಲವೆಂದು ಹೇಳಿರುವುದರಿಂದ ರೂಪಕಾ-ಲಂಕಾರ. ಪಾದಪಾಂಸುಗಳು ಸಾಮಾನ್ಯವಾಗಿ ಕೊಳೆ ಮಾಡುತ್ತವೆ. ಅದಕ್ಕೆ ವಿರುದ್ಧವಾಗಿ ಇಲ್ಲಿ ಅವನ್ನು ಪವಿತ್ರಮಾಡುವ ಸಾಮರ್ಥ್ಯವುಳ್ಳ-ವೆಂದು ವರ್ಣಿಸಿರುವುದರಿಂದ ವ್ಯತಿರೇಕಾಲಂಕಾರವೂ. ಆ ಸಾಮರ್ಥ್ಯವನ್ನು 'ಶಾರದೆಯು ಭಕ್ತಿ ಮಾಡುವಳೆ'ಂಬ ಲಿಂಗದಿಂದ(ಯುಕ್ತಿಯಿಂದ) ಸಮರ್ಥಿ-ಸಿರುವುದರಿಂದ ಕಾವ್ಯಲಿಂಗ ಅಲಂಕಾರವೂ ಸಂಕರವಾಗಿವೆ. (ಉಡುಪಿ ಪುಸ್ತಕದ ಪಾದಟಿಪ್ಪಣಿಯಿಂದ.)

**61. ಯುಗ್ಮಶ್ಲೋಕ**—'ಉತ್ಕಂಠಾ–' ಎಂಬ ಈ ಇಡೀ ಶ್ಲೋಕವು ಮೊದಲನೇ ಶ್ಲೋಕದಲ್ಲಿ ಬಂದಿರುವ 'ಲಸತ್ಪಾಂಸವಃ' ಎಂಬುದಕ್ಕೆ ವಿಶೇಷಣ ವಾಗಿರುವುದರಿಂದ ಈ ಶ್ಲೋಕಕ್ಕೆ ಬೇರೆ ಅನ್ವಯವಿಲ್ಲ, ಖಂಡ 1ರಲ್ಲಿ ಹೇಳಿದಂತೆ ಮೊದಲನೆಯ ಶ್ಲೋಕದ ಜೊತೆಯೇ ಸೇರಿದೆ. ಈ ರೀತಿ ಎರಡು ಶ್ಲೋಕಗಳಿಗೆ ಒಟ್ಟಿಗೆ ಸೇರಿ ಒಂದೇ ಅನ್ವಯವಾದರೆ ಆ ಜೋಡಿ-

ಶ್ಲೋಕವನ್ನು **ಯುಗ್ಮ**ವೆನ್ನುತ್ತಾರೆ. (ಹೀಗೆಯೇ ಮೂರು ಶ್ಲೋಕಗಳಿಗೆ ಒಂದು ಅನ್ವಯವಾದರೆ ವಿಶೇಷಕವೆಂದೂ, ನಾಲ್ಕಕ್ಕೆ ಆದರೆ ಕಲಾಪಕ-ವೆಂದೂ, ಅದಕ್ಕೂ ಹೆಚ್ಚಿದ್ದರೆ ಕುಳಕವೆಂದೂ ಕರೆಯುವರೆಂಬುದನ್ನು ಮಲ್ಲನಾಥ ಭಾರವಿಯ ಕಾವ್ಯದ ಟೀಕೆಯಲ್ಲಿ ಹೇಳಿರುವ ಈ ಶ್ಲೋಕ ತಿಳಿಸುತ್ತದೆ—

ದ್ವಾಭ್ಯಂ ಯುಗ್ಮಮಿತಿ ಪ್ರೋಕ್ತಂ ತ್ರಿಭಿಃ ಶ್ಲೋಕೈರ್ವಿಶೇಷಕಮ್ ।
ಕಲಾಪಕಂ ಚತುರ್ಭಿಃ ಸ್ಯಾತ್ ತದೂರ್ಧ್ವಂ ಕುಲಕಂ ಸ್ಮೃತಮ್ ॥

ಎರಡನೇ ಶ್ಲೋಕದಲ್ಲೂ ಶ್ರೀಹರಿವಾಯುಗಳ ಪಾದಧೂಳಿಗಳ ವರ್ಣ-ನೆಯೇ ಇದೆ. (ಕ.ಕ., ಛ., ವಿ.).

**ಉತ್ಕಂಠಾಕುಂಠಕೋಲಾ–ಹಲಜವವಿದಿತಾ–ಜಸ್ರಸೇವಾನುವೃದ್ಧ–**
**ಪ್ರಾಜ್ಞಾತ್ಮಜ್ಞಾನಧೂತಾಂ–ಧತಮಸಸುಮನೋ–**
**ಮೌಳಿರತ್ನಾವಳೀನಾಮ್ ।**
**ಭಕ್ತ್ಯುದ್ರೇಕಾವಗಾಢ–ಪ್ರಘಟನಸುಘಟಾತ್–**
**ಕಾರಸಂಘೃಷ್ಯಮಾಣ–ಪ್ರಾಂತಪ್ರಾಗ್ರ್ಯಾಂಘ್ರಿಪೀಠೋ–**
**ತ್ಥಿತಕನಕರಜಃ–ಪಿಂಜರಾರಂಜಿತಾಶಾಃ ॥ ೨ ॥**

**ಪದಚ್ಛೇದ**—'ಉತ್ಕಂಠಾ' ಎಂದಾರಂಭಿಸಿ 'ರತ್ನಾವಳೀನಾಂ' ಎಂಬ ವರೆಗೆ ಇಡೀ ಪೂರ್ವಾರ್ಧವೂ ಒಂದೇ ದೊಡ್ಡ ಸಮಾಸಪದ ; ಹಾಗೆಯೇ 'ಭಕ್ತಿ'ಯಿಂದ 'ರಂಜಿತಾಶಾಃ'ವರೆಗಿರುವ ಉತ್ತರಾರ್ಧ ಇನ್ನೊಂದು ದೊಡ್ಡ ಸಮಾಸಪದ (ಛ.,ರಾ.). ಹರಿಪರವಾಗಿಯೂ ವಾಯುಪರವಾಗಿಯೂ ಅರ್ಥ-ಭೇದವಿಲ್ಲ. (ರಾ.) ಆದರೂ ಕೆಲವು ಪದಗಳ ಅರ್ಥ ಕ್ಲಿಷ್ಟವಾಗಿರುವುದರಿಂದ ಅವುಗಳ ಅರ್ಥವನ್ನು ಮೊದಲು ವಿವರಿಸುವೆವು.

**62. ಉತ್ಕಂಠಾ**—ಉತ್–ಅಧಿಕಂ, ಕಂಠತೇ–ಆಧ್ಯಾಯತೇಽನ-ಯೇತ್ಯುತ್ಕಂಠಾ । ಉತ್ ಉಪಸರ್ಗ, ಕಠಿ ಶೋಕೇ (ಭ್ವಾದಿ.ಪ.)–ದುಃಖಿಸು ಎಂಬ ಧಾತುವಿನ ಮೇಲೆ 'ಗುರೋಶ್ಚ ಹಲಃ' (ಪಾ. ೩/೩/೧೦೩) ಎಂಬ ಸೂತ್ರದಿಂದ ಅ–ಪ್ರತ್ಯಯ ಬಂದು ಟಾಪ್ ಸ್ತ್ರೀಲಿಂಗ ಪ್ರತ್ಯಯ ಸೇರಿ

ಈ ರೂಪವಾಗಿದೆ. ಆದ್ದರಿಂದ—ಯಾವುದಾದರೂ ವೇದನೆಯಿಂದ ಅಧಿಕವಾಗಿ ತೊಳಲಾಡುವ ಹಂಬಲಕ್ಕೆ ಉತ್ಕಂಠಾ ಎಂದು ಹೆಸರು ; ಅರ್ಥಾತ್ ಉತ್ಸುಕತೆ, ಉದ್ವಿಗ್ನತೆ, ಔತ್ಸುಕ್ಯ ಅಥವಾ ತೊಳಲಾಟ ಎನ್ನಬಹುದು. ಇದನ್ನೇ ಶಬ್ದಕಲ್ಪದ್ರುಮದಲ್ಲಿ 'ಇಷ್ಟಲಾಭೇ ಕಾಲಕ್ಷೇಪ-ಅಸಹಿಷ್ಣುತಾ'– 'ಇಷ್ಟವಾದ ವಸ್ತು ದೊರಕುವ ವಿಷಯದಲ್ಲಿ ತಡವಾಗುವುದನ್ನು ಸಹಿಸ-ದಿರುವಿಕೆ' ಎಂದು ವಿವರಿಸಿದೆ. ಕ.ಕ. ಟೀಕೆಯಲ್ಲಿ 'ಅಲಬ್ಧವಿಷಯವೇದನಾ'– ದೊರಕದಿರುವ ವಸ್ತುವಿಗಾಗಿ ಆಗುವ ನೋವು ಎಂದು ಹೇಳಿ ಅದನ್ನು ವಿವರಿಸುವ ಕಾರಿಕೆಯನ್ನು ಉದಹರಿಸಿದ್ದಾರೆ—

ರಾಗೇ ತ್ವಲಬ್ಧವಿಷಯೇ ವೇದನಾ ಮಹತೀ ತು ಯಾ ।
ಸಂಶೋಷಣೀ ಚ ಗಾತ್ರಾಣಾಂ ತಾಮುತ್ಕಂಠಾಂ ವಿದುರ್ಬುಧಾಃ ॥

(ಅರ್ಥ) ಬೇಕಾಗಿದ್ದರೂ ದೊರಕದ ವಸ್ತುವಿನ ವಿಷಯದಲ್ಲಿ ವೇದನೆ (ನೋವು) ಉಂಟಾಗಿ ದೇಹವೂ ಕೃಶವಾಗುವುದೋ ಆ ನೋವಿಗೆ ಉತ್ಕಂಠಾ ಎಂದು ಹೆಸರೆಂದು ಪಂಡಿತರು ಹೇಳುತ್ತಾರೆ. (ಭ). 'ಹರಿಶುಶ್ರೂಷಾಯಾಂ ಪರಮೌತ್ಸುಕ್ಯಂ'–ಹರಿಸೇವೆಯಲ್ಲಿ ಅತಿಶಯವಾದ ಕಾತುರತೆ. (ವಿ.) ತೃಷ್ಣಾ–ಆಶೆ ಎಂದು ಹೇಳಿ 'ಆಯಲ್ಲಿಕಮುತ್ಕಂಠಾ ಸ್ಯಾತ್ ರತಿಶ್ಚ ರಣರಣಿಕಾ । ಔತ್ಕಂಠ್ಯಂ ಹೃಲ್ಲೇಖಃ' ಎಂಬ ಹಲಾಯುಧ ಕೋಶವನ್ನು ತೋರಿಸಿದೆ. ಪ್ರಕೃತ ಈ ಸಂದರ್ಭಕ್ಕೆ–'ತಮ್ಮ ಸೇವೆಯನ್ನು ಶ್ರೀಹರಿವಾಯು ಗಳಿಗೆ ಸಮರ್ಪಿಸುವ ಬಗ್ಗೆ ಇರುವ 'ಕಾತುರತೆ' ಅಥವಾ ಪರಮೋತ್ಸಾಹ' ಎಂಬ ಅರ್ಥವೇ ಎಲ್ಲಕ್ಕಿಂತ ಹೆಚ್ಚು ಹೊಂದಿಕೆಯಾಗಿದೆ.

**63. ಅಕುಂಠ**—ಸಂಸ್ಕೃತದಲ್ಲಿ 'ಕುಠಿ ಪ್ರತಿಘಾತೇ ಆಲಸ್ಯೇ ಚ' (ಭ್ವಾ.ಪ.) ಎಂಬ ಧಾತುವಿಗೆ ತಡಮಾಡು, ಸೋಮಾರಿಯಾಗಿರು ಎಂಬ ಅರ್ಥವಿದೆ. ಇದರಿಂದ ಕುಂಠತಿ–ಕ್ರಿಯಾಸು ಮಂದೀಭವತೀತಿ ಕುಂಠಃ ಎಂದಾಗಿದೆ ; ಎಂದರೆ ಕೆಲಸದಲ್ಲಿ ತಡಮಾಡುವಿಕೆ, ಆಲಸ್ಯ ಮಾಡುವವನು ಎಂಬ ಅರ್ಥದಲ್ಲಿ ಕುಂಠಃ ಎಂದು ಬಂದಿದೆ. ಇದಕ್ಕೆ ಅಮರಕಾರ 'ಕುಂಠೋ ಮಂದಃ ಕ್ರಿಯಾಸು ಯಃ'–ಕೆಲಸವನ್ನು ಚಕಚಕಮಾಡದೆ ಸಾವ-ಕಾಶವಾಗಿ ಮಾಡುವವನು ಎಂದು ಅರ್ಥ ಹೇಳಿದ್ದಾನೆ. (ಕುಠ ಧಾತುವಿನ

ಮೇಲೆ ಪಾ. ೩/೧/೧ಳಳರಿಂದ ಪಚಾದ್ಯಚ್ ಪ್ರತ್ಯಯ ಬಂದು ಕುಂಠಃ–ಎಂದಾಗಿದೆ.) ಕುಂಠವಲ್ಲದ್ದು ಅಥವಾ ಕುಂಠಕ್ಕೆ ಭಿನ್ನವಾದದ್ದು ಅಕುಂಠ–(ನಞ್‌ಸಮಾಸ) ಎಂದರೆ ತರಾತುರಿಯ, ಲವಲವಿಕೆಯಿಂದ ಕೂಡಿದ ಎಂದರ್ಥ. ಅದಕ್ಕೆ ಲಕ್ಷಣಯಾ 'ಅಭಿವೃದ್ಧವಾದ, ಹೆಚ್ಚಾಗಿರುವ, (ಛ.) ಪ್ರವೃದ್ಧವಾದ (ಕ ಕ. ವಿ.) 'ಉಕ್ಕುತ್ತಿರುವ' ಎಂದು ಅರ್ಥ ಹೇಳಬಹುದು.

**64. ಕೋಲಾಹಲ—ಜವ**—'ಕುಲ ಸಂಸ್ತ್ಯಾಗೇ' (ಭ್ವಾ.ಪ.) ಇತ್ಯತಃ ಕೋಲತಿ–ಬಾಧಾಂ ನ ಮತ್ವೈವ ಧಾವತೀತಿ ಕೋಲಃ । ಪಚಾದ್ಯಚ್ ।–ಯಾವ ಅಡ್ಡಿ-ಆತಂಕವನ್ನೂ ಲೆಕ್ಕಿಸದೆ ನುಗ್ಗುವಂಥಾದ್ದು ಎಂಬ ವ್ಯುತ್ಪತ್ತಿಯಿಂದ 'ಗದ್ದಲ ಅಥವಾ ಗುಲ್ಲು' ಎಂಬುದಕ್ಕೆ 'ಕೋಲ' ಎಂದು ಹೆಸರು. ಇದನ್ನು ಒಬ್ಬರು 'ಏಕೀಭೂತಅವ್ಯಕ್ತಶಬ್ದವಿಶೇಷಃ'–ಗೊತ್ತು-ಗುರಿಯಿಲ್ಲದ ಅಸ್ಪಷ್ಟವಾದ ಅನೇಕ ಧ್ವನಿಗಳು ಒಟ್ಟಾಗಿ ಕೇಳಿಬರುವ ಸದ್ದು ಎಂದು ವಿವರಿಸಿದ್ದಾರೆ. ಕೋಲಂ–ಅವ್ಯಕ್ತಶಬ್ದಂ, ಆಹಲತಿ–ಆಲಿಖತೀತಿ ಕೋಲಾಹಲಃ । ಹಲ ವಿಲೇಖನೇ (ಭ್ವಾದಿ.ಪ.) ಪಚಾದ್ಯಚ್ । ಗದ್ದಲವನ್ನು ಪ್ರತಿಬಿಂಬಿಸುವ ಧ್ವನಿಗೆ 'ಕೋಲಾಹಲ'ವೆಂದು ಹೆಸರು. ಪ್ರಸಂಗಕ್ಕೆ ತಕ್ಕಂತೆ ಜೋಡಿಸಿ 'ಕಲಕಲಸಂಭ್ರಮ' (ಕ.ಕ.), 'ಕಲಕಲಧ್ವನಿ' (ವಿ.) ಅಥವಾ 'ಹರಿಸೇವಾಯಾಂ ಅಹಂ ಪೂರ್ವಮಹಂ ಪೂರ್ವಮಿತಿ ಸಂತೋಷೇಣ ಶಬ್ದಪ್ರಸರಃ (ಛ)–ನಾ ಮುಂದು ತಾ ಮುಂದು ಎಂದು ಮುನ್ನುಗ್ಗುವ ಕಲಕಲ ಧ್ವನಿ ಎಂದು ಅರ್ಥ ಹೇಳಬೇಕು. ಜವಶಬ್ದವು ಜು ಗತೌ (ಭ್ವಾ.ಪ.)–ಹೋಗು ಎಂಬ ಧಾತುವಿನಿಂದ "ಋದೋರಪ್" (ಪಾ. ೩/೩/೫೭) ಎಂಬಂತೆ ಅಪ್‌ಪ್ರತ್ಯಯ ಸೇರಿ ಆಗಿದೆ. ಜವತಿ–ಶೀಘ್ರಂ ಗಚ್ಛತಿ ಯಸ್ಮಾದಿತಿ ಜವಃ । ಯಾವುದರಿಂದ ಶೀಘ್ರವಾಗಿ ನಡೆಯಲು–ಚಲಿಸಲು ಸಾಧ್ಯವಾಗುತ್ತದೋ ಆ 'ವೇಗ'ವೇ ಜವ, 'ಜವೋ ವೇಗಃ ಸ್ಯದೋ ರಯಃ' ಎಂದು ವೈಜಯಂತೀ ಕೋಶ. 'ರಂಹ-ಸ್ತರಸೀ ತು ರಯಃ ಸ್ಯದಃ । ಜವಃ' ಎಂದು ಅಮರ. ಪ್ರಕೃತ ಸಂದರ್ಭದಲ್ಲಿ ಛ. ಹೇಳುವಂತೆ 'ಹರಿಪರಿಚರ್ಯಾಯಾಂ ಆಲಸ್ಯಮಂತರಾ ಅತ್ಯಂತವೇಗಃ' ಶ್ರೀಹರಿಸೇವೆ ಮಾಡುವುದರಲ್ಲಿ ಆಲಸ್ಯವಿಲ್ಲದೆ ನಾ ಮುಂದು ತಾ ಮುಂದು ಎಂಬ ವೇಗ.

**65. ಅಜಸ್ರಂ**—'ನಿತ್ಯಾನವರತಾಜಸ್ರಂ' ಎಂದು ಅಮರ. ನ ಜಸ್ಯತಿ–ಜಹಾತೀತ್ಯಜಸ್ರಮ್ । 'ಜಸು ಮೋಕ್ಷಣೆ' ಇತ್ಯತಃ 'ನಮಿಕಂಪಿ—' ಇತಿ (ಪಾ. ೩/೨/೧೬೭) ರಪ್ರತ್ಯಯ । ತತೋ ನಞ್‌ಸಮಾಸಃ । ಎಡೆಬಿಡದೆ ಸದಾ ಇರುವ ಎಂದರ್ಥ ; ಅರ್ಥಾತ್ ನಿರಂತರವಾದ (ಅಂತರ–ಬಿಡುವು, ನಿರ್–ಇಲ್ಲದೆ), ಸಂತತವಾದ, ಅವಿಚ್ಛಿನ್ನವಾಗಿ ನಡೆಯುವ.

**66. ಸೇವಾ**—ಅಮರದಲ್ಲಿ 'ಸೇವಾ ಶ್ವವೃತ್ತಿಃ' ಎಂದು ಹೇಳಿರುವುದರಿಂದ ನಾಯಿಯಂತೆ ಬಾಗಿಲು ಕಾಯುವುದು ಎಂದು ಕೀಳುಭಾವನೆಯ ಅರ್ಥ ತೋರುತ್ತದೆ ; ಆದರೆ ಇದನ್ನು 'ನೀಚರ ಸೇವೆ'ಗೆ ಮಾತ್ರ ಅನ್ವಯಿಸುತ್ತದೆ. ಆದರೆ ಹಲಾಯುಧಕೋಶದಲ್ಲಿ "ವರಿವಸ್ಯಾ ಪರಿಚರ್ಯಾ ಶುಶ್ರೂಷೋಪಾಸನಾ (ಸನಂ)....। ಸೇವಾ ಭಕ್ತಿರುಪಾಸ್ತಿಶ್ಚ' ಎಂಬುವೆಲ್ಲ ಪರ್ಯಾಯಗಳೆಂದು ತೋರಿಸುವುದರಿಂದ ಸೇವಾ ಎಂದರೆ ಶುಶ್ರೂಷಾರೂಪವಾದ ಭಕ್ತಿ ಎಂದೇ ಗ್ರಹಣ ಮಾಡಬೇಕು ; ಇದು ನವವಿಧಭಕ್ತಿಯಲ್ಲಿ ಸೇರಿದ ದಾಸ್ಯವೇ ಆಗಿದೆ. ಸೇವಾ ಶಬ್ದಾರ್ಥವನ್ನು, (ವಿದ್ವದ್ರೂಢಿಯನ್ನು) ಸೂತ್ರಭಾಷ್ಯದಲ್ಲಿ (೩/೪/೫೦)

ಶ್ರವಣಂ ಮನನಂ ಚೈವ ನಿದಿಧ್ಯಾಸನಮೇವ ಚ ।
ಪರೇ ಗುರೌ ಚ ಯಾ ಭಕ್ತಿಃ ಪರಿಚರ್ಯಾದಿಕಂ ಹರೇಃ ॥

ಏಷಾ ಸೇವೇತಿ ಸಂಪ್ರೋಕ್ತಾ ಯಯಾ ತದ್ದರ್ಶನಂ ಭವೇತ್ ಇತಿ ಬೃಹತ್ಸಂಹಿತಾಯಾಮ್—ಎಂದು ತೋರಿಸಿಕೊಟ್ಟಿದ್ದಾರೆ.

ಅದರಂತೆ—ಶ್ರವಣ, ಮನನ, ಧ್ಯಾನ, ಹರಿಭಕ್ತಿ (ಪರೇಭಕ್ತಿಃ) ಗುರು-ಭಕ್ತಿ, ಪೂಜೆ-ಭಜನೆ-ಪ್ರದಕ್ಷಿಣೆ-ನಮಸ್ಕಾರಾದಿರೂಪ ಪರಿಚರ್ಯೆ ಇವೆಲ್ಲವೂ ಸೇರಿ **ಸೇವೆ** ಎನ್ನಿಸಿಕೊಳ್ಳುತ್ತದೆ. ಇಂಥಾ ಸೇವೆಯಿಂದಲೇ ಭಗವದಪರೋಕ್ಷವಾಗುತ್ತದೆ. ಪ್ರಸ್ತುತ ಈ ಶ್ಲೋಕದಲ್ಲಿ ಈ ಅರ್ಥವನ್ನೇ ಗ್ರಹಣ ಮಾಡಬೇಕು. ಸೇವನಂ ಸೇವಾ । ಷೇವೃ ಸೇವನೇ (ಭ್ವಾ. ಆ.)–ಸೇವಿಸು ಎಂಬ ಧಾತುವಿಗೆ 'ಗುರೋಶ್ಚ ಹಲಃ' (ಪಾ. ೩/೩, ೧೦೩) ಎಂಬ ಸೂತ್ರದಂತೆ ಅ ಪ್ರತ್ಯಯವೂ ಸ್ತ್ರೀಲಿಂಗದಲ್ಲಿ ಟಾಪ್‌ಪ್ರತ್ಯಯವೂ ಬಂದಿವೆ.

**67. ಪ್ರಾಜ್ಞಾತ್ಮಜ್ಞಾನ**—ಪ್ರಕರ್ಷೇಣ ಜಾನಾತೀತಿ ಪ್ರಜ್ಞಃ (ಕ.ಕ., ಛ., ವಿ.) । 'ಆತಶ್ಚೋಪಸರ್ಗೇ' (ಪಾ. ೩/೧/೧೩೬) ಇತಿ ಕಃ ।

ಪ್ರ–ಚೆನ್ನಾಗಿ, ಜ್ಞ–ತಿಳಿದವನು, ಪ್ರಜ್ಞ–ಪಂಡಿತ. ಪ್ರಜ್ಞ ಏವ ಪ್ರಾಜ್ಞಃ। 'ಪ್ರಜ್ಞಾದಿಭ್ಯಶ್ಚೇ' ತಿ (ಪಾ.೫/೪/೩೮) ಸ್ವಾರ್ಥೇಽಣ್‌ಪ್ರತ್ಯಯಃ (ವಿ., ಕಕ. ಛ.)। ಯದ್ವಾ ಪ್ರಕರ್ಷೇಣ ಆ–ಸಮಂತಾತ್ ಜಾನಾತೀತಿ ವಾ ಪ್ರಾಜ್ಞಃ (ಛ.)। ಪ್ರ–ಚೆನ್ನಾಗಿ, ಆ–ಸಕಲವಿಷಯಗಳನ್ನೂ, ಜ್ಞ–ಬಲ್ಲವನು. 'ಧೀರೋ ಮನೀಷೀ ಜ್ಞಃ ಪ್ರಾಜ್ಞಃ ಸಂಖ್ಯಾವಾನ್ ಪಂಡಿತಃ ಕವಿಃ' (ಅಮರ) 'ಸೂರಿಃ ಪ್ರಾಜ್ಞಃ ಪಂಡಿತಃ ಸನ್' (ಹಲಾಯುಧ), ಇವೆಲ್ಲ ಪಂಡಿತರ ಹೆಸರುಗಳು. ಆದರೆ ಇಲ್ಲಿ ಮುಂದಿರುವ 'ಆತ್ಮ' ಶಬ್ದದ ಜೊತೆಯಿರುವುದರಿಂದ ಈ ವಿಶೇಷಣ ಪರಮಾತ್ಮನನ್ನೇ ಹೇಳುತ್ತದೆ. ಅತತಿ–ವ್ಯಾಪ್ನೋತೀತ್ಯಾತ್ಮಾ (ಕ.ಕ., ವಿ.)। ಅತ ಸಾತತ್ಯಗಮನೇ (ಭ್ವಾ.ಪ.) ಇತಿ ಧಾತೋಃ 'ಸಾತಿಭ್ಯಾಂ ಮನಿನ್-ಮನಿಣೌ' (ಉ. ೪/೧೫೩) ಇತ್ಯತಃ ಮನಿಣ್‌ಪ್ರತ್ಯಯಃ (ಕ.ಕ.) ಅತ ಧಾತುವಿಗೆ ವ್ಯಾಪಿಸು ಎಂದರ್ಥ. ಅದಕ್ಕೆ ಉಣಾದಿ ಮನಿಣ್ ಪ್ರತ್ಯಯ ಸೇರಿ ಅತ + ಮನ್–ಣಿತ್ ಆದ್ದರಿಂದ ಪಾ. ೭/೨/೧೧೫ರಿಂದ ಆದಿವೃದ್ಧಿ ಬಂದು **ಆತ್ಮನ್** ಎಂದಾಗಿದೆ. ಆತ್ಮ ಎಂದರೆ ಪರಮಾತ್ಮ, ನಾರಾಯಣ ಎಂದೇ ಅರ್ಥ ; ಇದನ್ನು ಆಚಾರ್ಯರು ಸೂತ್ರಭಾಷ್ಯಾದಿ ಗ್ರಂಥಗಳಲ್ಲಿ ಅನೇಕ ಕಡೆ ವಿಸ್ತರಿಸಿದ್ದಾರೆ. 'ಅಯಮಾತ್ಮಾ ಬ್ರಹ್ಮ' (ಮಂಡೂಕ್ಯ ಉಪನಿಷತ್ ೧/೨, ಬೃಹದಾರಣ್ಯಕ ೪/೧೫/೧೯) 'ಆತ್ಮೈಕಸ್ತು ಜನಾರ್ದನಃ'–'ಜನಾರ್ದನ ಒಬ್ಬನೇ ಆತ್ಮಾ; (ಸೂತ್ರಭಾಷ್ಯ ೧/೧/೭) 'ಆತ್ಮ–ಬ್ರಹ್ಮಾದಯಃ ಶಬ್ದಾಸ್ತಮೃತೇ ವಿಷ್ಣುಮವ್ಯಯಮ್। ನ ಸಂಭವಂತಿ....' (ಸೂ.ಭಾ. ೧/೩/೧) –ಆತ್ಮ ಬ್ರಹ್ಮ ಮೊದಲಾದ ಶಬ್ದಗಳು ಗುಣಪೂರ್ತಿಯನ್ನು ಹೇಳುವುದರಿಂದ ವಿಷ್ಣುವಲ್ಲದೆ ಬೇರೆ ಯಾರನ್ನೂ ಹೇಳುವುದಿಲ್ಲ (ಬ್ರಹ್ಮವೈವರ್ತಪುರಾಣದ ವಾಕ್ಯ.)

ಆತ್ಮಾ ಪುಂಸಿ ಸ್ವಭಾವೇಪಿ ಪ್ರಯತ್ನ–ಮನಸೋರಪಿ। ಧೃತಾವಪಿ ಮನೀಷಾಯಾಂ ಶರೀರ–ಬ್ರಹ್ಮಣೋರಪಿ ಎಂಬ ಮೇದಿನ್ಯಾದಿ ಕೋಶಗಳಂತೆ **ಆತ್ಮಾ** (ಪುಲ್ಲಿಂಗ) ಎಂದರೆ ಚತುರ್ಮುಖ, ಜೀವ (ಜೀವಾತ್ಮ), ದೇಹ ಮೊದಲಾದ ಅನೇಕ ಅರ್ಥಗಳಿದ್ದರೂ 'ಪ್ರಾಜ್ಞ' ಎಂಬ ವಿಶೇಷಣವನ್ನೂ ಸೇರಿಸುವುದರಿಂದ ಇಲ್ಲಿ ಪರಮಾತ್ಮ ಶ್ರೀಹರಿಯೆಂದೇ ಅರ್ಥ. **ಪ್ರಾಜ್ಞಃ**—

(ಭ.) ಸ್ವಾತಂತ್ರ್ಯೇಣ ಸ್ವಪರಗತ-ಅಖಿಲವಿಶೇಷ ಜ್ಞಾನವಾನಿತ್ಯರ್ಥಃ 'ಹೆರವರ ನೆರವಿಲ್ಲದೆ ತನ್ನಲ್ಲಿಯೂ ಅನ್ಯರಲ್ಲಿಯೂ ಇರುವ ಎಲ್ಲ ವಿಶಿಷ್ಟ ಸಂಗತಿಗಳನ್ನೂ' ಅನಾದಿನಿತ್ಯಕಾಲದಲ್ಲೂ ಅತ್ಯಂತ ಸ್ಪಷ್ಟವಾಗಿ ಬಲ್ಲ ಎಂದರ್ಥ, (ವಿ.) ಚಾಸಾ-**ವಾತ್ಮಾ** ಚೇತಿ ಪ್ರಜ್ಞಾತ್ಮಾ–ಸರ್ವಜ್ಞವಿಷ್ಣುಃ–ಅಂಥಾ ಪರಮಾತ್ಮ ಎಂದರೆ ಸರ್ವಜ್ಞನಾದ ವಿಷ್ಣುಎಂದರ್ಥ. ತಸ್ಯ ಜ್ಞಾನಂ (ಭ.,ವಿ.) ಅಥವಾ ತಸ್ಮಿನ್-ಜ್ಞಾನಂ (ಕ.ಕ.)–ಪ್ರಾಜ್ಞಾತ್ಮಜ್ಞಾನಮ್ । ಅಂಥಾ ಪರಮಾತ್ಮ ಶ್ರೀಹರಿಯ ವಿಷಯಕ ಜ್ಞಾನ, ಎಂದರೆ (ಕ.ಕ.) ಅಧ್ಯಾತ್ಮಜ್ಞಾನ ಎಂದರ್ಥ.

**68. ಧೂತ**—ಧೂಞ್ ಕಂಪನೇ (ಸ್ವಾದಿ, ಕ್ರ್ಯಾದಿ, ಚುರಾದಿ, ಉಭ.) ಎಂಬ ಧಾತುವಿಗೆ ಝಾಡಿಸು, ಕೊಡವು ಅಥವಾ ಕೊಡವಿ ಹೋಗಲಾಡಿಸು—ಓಡಿಸು ಎಂಬ ಅರ್ಥವಿದೆ. ಇದರ ಮೇಲೆ ಭೂತಕೃದಂತ ಕ್ತ–ಪ್ರತ್ಯಯ ಈ ರೂಪವಾಗಿದೆ. ಇದಕ್ಕೆ 'ನಿರಸ್ತಂ' (ಕಕ.,ವಿ.,ಭ.) ಧೂರೀಕೃತಂ, ಪ್ರತಿಹತಂ ಎಂದರೆ ಹೋಗಲಾಡಿಸಿದ, ಹೊರದೂಡಿದ, ಓಡಿಸಲ್ಪಟ್ಟ ಅಥವಾ ತಿರಸ್ಕೃತವಾದ ಎಂದರ್ಥ.

**69. ಸುಮನೋಮೌಳಿ (ಸುಮನಸ್–ಮೌಳಿ)**—ಸುಮನಸ್ ಶಬ್ದವು ಸಕಾರಾಂತಶಬ್ದ. ಪುಲ್ಲಿಂಗದಲ್ಲೂ ಸ್ತ್ರೀಲಿಂಗದಲ್ಲೂ ರೂಪವುಂಟು. ಸ್ತ್ರೀಲಿಂಗದಲ್ಲಿ ನಿತ್ಯಬಹುವಚನವಾದರೆ 'ಹೂವು' ಎಂದರ್ಥ; ಇದನ್ನು ಸಿದ್ಧಾಂತಕೌಮುದಿಯಲ್ಲಿ 'ಸ್ತ್ರಿಯಃ ಸುಮನಸಃ ಪುಷ್ಪಮ್' ಎಂದು ತೋರಿ-ಸಿದೆ. ಪುಲ್ಲಿಂಗವಾದರೆ ದೇವತೆಗಳು ಎಂದರ್ಥ. ಅಮರದಲ್ಲಿ 'ಅಮರಾ ನಿರ್ಜರಾ ದೇವಾಃ' ಎಂದಾರಂಭಿಸಿ 'ಸುಪರ್ವಾಣಃ ಸುಮನಸಃ' ಎಂದು ದೇವತೆಗಳ ಹೆಸರು ಹೇಳಿದೆ. ಸು–ಶೋಭನಂ, ಮನಃ–ಚಿತ್ತಂಯೇಷಾಂ ತೇ ಸುಮನಸೋ ದೇವಾಃ. ಕ.ಕ. ವ್ಯಾಖ್ಯಾನದಲ್ಲಿ 'ಮಾಲತ್ಯಾಂ ಪಂಡಿತೇ ಪುಷ್ಪೇ ದೇವೇ ಚ ಸುಮನೋಽಭಿಧಾ' ಇತಿ ವಿಶ್ವಪ್ರಕಾಶಃ ಎಂದು ಕೋಶವನ್ನು ಉದಹರಿಸಿ-ದ್ದಾರೆ. ಅದನ್ನೇ ವಿ.,ಭ. ಎರಡು ಟೀಕೆಗಳಲ್ಲೂ ಹೇಳಿದೆ. **ಮೌಳಿ** ಶಬ್ದವೂ ಪುಲ್ಲಿಂಗ ಸ್ತ್ರೀಲಿಂಗ ಎರಡರಲ್ಲೂ ನಡೆಯುತ್ತದೆ. ಸಾಮಾನ್ಯವಾಗಿ ಮೌಲಿ ಎಂದರೆ ತಲೆ ಎಂದೇ ಅರ್ಥ; ಅದರಿಂದ ಲಕ್ಷಣಯಾ ತಲೆಯಲ್ಲಿರುವ ಜುಟ್ಟಿಗೂ (ಶಿಖೆಗೂ), ಕಿರೀಟಕ್ಕೂ ಪೇಟಾಕ್ಕೂ(ರುಮಾಲಿಗೂ) ಜಡೆಗೂ

ಅನ್ವಯಿಸುತ್ತದೆ. ಇದನ್ನೇ ವೈಜಯಂತೀಕೋಶದಲ್ಲಿ 'ಮೌಲಿಃ ಸಂಯುತ-ಕೇಶೀಷು ಚೂಡಾಯಾಂ ಮುಕುಟೇಽಸ್ತ್ಯಷಣ್' (ಅಷಣ್–ನಪುಂಸಕ-ಲಿಂಗದಲ್ಲಿ ಮಾತ್ರ ಇಲ್ಲ; ಪುಂ.ಸ್ತ್ರೀ.) ಎಂದು ಹೇಳಿದರೆ ಅನೇಕಾರ್ಥ ಸಂಗ್ರಹದಲ್ಲಿ 'ಮೌಲಿಃ ಕಿರೀಟೇ ಧಮ್ಮಿಲ್ಲೇ-ಚೂಡಾ-ಕಂಕೇಲಿ–ಮೂರ್ಧಸು (ಧಮ್ಮಿಲ್ಲೆ–ಜಡೆಯಲ್ಲಿ, ಹೆರಳಿನಲ್ಲಿ; ಕಂಕೇಲಿ....ಎಂದು ಹೇಮಚಂದ್ರನೂ ಹೇಳಿದ್ದಾನೆ. ಪ್ರಕೃತ ಸಂದರ್ಭದಲ್ಲಿ ಮೌಲಿ ಎಂದರೆ 'ಕಿರೀಟ' ಎಂದೇ ಅರ್ಥ. ವೈಜಯಂತಿಕೋಶದಲ್ಲಿ 'ಮೌಲಿಃ ಕೋಟೀರ ಉಷ್ಣೀಷಂ ಕಿರೀಟಂ ಮುಕುಟೋಽಸ್ತ್ರಿಯಾಮ್' ಎಂದು ಕಿರೀಟದ ಪರ್ಯಾಯದಲ್ಲಿಯೂ ಮೌಲಿ ಶಬ್ದ ತೋರಿಸಿದೆ.

**70. ರತ್ನಾವಳೀನಾಮ್**—ರಮಯತಿ–ಹರ್ಷಯತೀತಿ ರತ್ನಮ್ ಅಥವಾ ರಮಂತೇಽಸ್ಮಿನ್ನಿತಿ ವಾ ರತ್ನಮ್। ಯಾವುದನ್ನು ನೋಡಿದ ಮಾತ್ರ-ದಿಂದ ಸಂತೋಷವಾಗುತ್ತದೋ ಅಥವಾ ಯಾವುದರಲ್ಲಿ ಜನಗಳು ಸಂತೋಷ-ಪಡುತ್ತಾರೋ ಅಂಥಾ ವಜ್ರ ವೈಢೂರ್ಯಾದಿಗಳಿಗೆ ರತ್ನ ಅಥವಾ ಮಣಿ ಎಂದು ಹೆಸರು. ಇದನ್ನೇ ಅಮರಕಾರ 'ರತ್ನಂ ಮಣಿರ್ದ್ವಯೋರಶ್ಮ-ಜಾತೌ ಮುಕ್ತಾದಿಕೇಽಪಿ ಚ' ಎಂದು ಹೇಳಿದ್ದಾನೆ. ಎಂದರೆ ವಜ್ರ-ವೈಢೂರ್ಯಾದಿ ಹರಳು (ಕಲ್ಲು, ಅಶ್ಮ)ಗಳಿಗೂ ಮುತ್ತು ಹವಳ ಮೊದ-ಲಾದುವಕ್ಕೂ ರತ್ನ ಅಥವಾ ಮಣಿ ಎಂದು ಹೆಸರು. ರತ್ನ ಶಬ್ದವ್ಯುತ್ಪತ್ತಿ-ಯನ್ನು ಋಗ್ಭಾಷ್ಯಟೀಕಾನುಸಾರ ರಾಯರು ಮಂತ್ರಾರ್ಥಮಂಜರಿಯಲ್ಲಿ ಹೀಗೆ ತೋರಿಸಿದ್ದಾರೆ: ರಮೇಃ ಔಣಾದಿಕೇ ಕ್ತ್ನ ಪ್ರತ್ಯಯೇ 'ಅನು-ದಾತ್ತೋಪದೇಶ—' (ಪಾ. ೬/೪/೩೭) ಇತಿ ಧಾತೋರ್ಮಕಾರಲೋಪೇ ರತ್ನಮಿತಿ ರೂಪಮ್ । ರಮು ಧಾತುವಿಗೆ ಬಾಹುಲಕ ಕ್ತ್ನಪ್ರತ್ಯಯ ಸೇರಿ ಮಕಾರ ಲೋಪವಾಗಿ ರಮ್ + ತ್ನ–ರತ್ನಂ ಎಂದಾಗಿದೆ. ಸಿದ್ಧಾಂತಕೌಮುದಿ-ಯಂತೆ 'ರಮೇಸ್ತ ಚ' (ಉ. ೩/೧೪) ಎಂಬ ಸೂತ್ರದಂತೆ ರಮ್ ಧಾತು-ವಿಗೆ (ಉ. ೩/೧೦ರಂತೆ) ನ ಪ್ರತ್ಯಯ ಬರಲು ಮಕಾರಾದೇಶ ಬಂದು ರಮ್ + ನ–ರತ್ + ನ–ರತ್ನಂ ಎಂದಾಗಿದೆ.

'ವೀಥ್ಯಾಲಿರಾವಲಿಃ ಪಂಕ್ತಿಃ ಶ್ರೇಣೀ'ಎಂಬ ಅಮರದಂತೆ **ಆವಲಿಃ** (ಸ್ತ್ರೀಲಿಂಗ) ಎಂದರೆ ಪಂಕ್ತಿ ಅಥವಾ ಸಾಲು. ಆ–ಸಮಂತಾತ್ ವಲತಿ–ಸಹೈವ ಗಚ್ಛತೀತ್ಯಾವಲಿಃ–ಉದ್ದಕ್ಕೆ ಜೊತೆಜೊತೆಯಾಗಿ ಸೇರಿಕೊಂಡು ಹೋಗುವುದರಿಂದ ಪಂಕ್ತಿಗೆ 'ಆವಲಿಃ' ಎಂಬ ಹೆಸರಾಯಿತು, ವಲ ಸಂಚರಣೇ (ಭ್ವಾ.ಪ.) ಎಂಬ ಧಾತುವಿನ ಮೇಲೆ 'ಸರ್ವಧಾತುಭ್ಯ ಇನ್' (ಉ. ४/೧೧೮) ಎಂಬ ಸೂತ್ರದಂತೆ ಇನ್‌ಪ್ರತ್ಯಯು ಬಂದಿದೆ.

**71. ಅವಗಾಢವಮ್**—ಅವ ಉಪಸರ್ಗದ ಜೊತೆ ಗಾಢಶಬ್ದ ಸೇರಿ ಅವಗಾಢಂ ಎಂದಾಗಿದೆ. 'ಗಾಢ–ಬಾಢ–ದೃಢಾನಿ ಚ' ಎಂದು ಅಮರ ಮತ್ತು 'ದೃಢಂ ಗಾಢಂ ಪ್ರಚಕ್ಷತೆ' ಎಂದು ಹಲಾಯುಧದಂತೆ ಅವಗಾಢ ಎಂದರೆ 'ದೃಢಂ' (ಕಕ.,ವಿ.,ಥ.) ದೃಢವಾಗಿ, ಬಲವಾಗಿ, ಗಟ್ಟಿಯಾಗಿ ಎಂದು ಕ್ರಿಯಾವಿಶೇಷಣವಾಗಿದೆ. ಗಾಹೂ ವಿಲೋಡನೇ (ಭ್ವಾ.ಆ.)–ನೀರಿನಲ್ಲಿ ಮುಳುಗು, ನೀರಲ್ಲಿ ಇಳಿ, ಸ್ನಾನಮಾಡು–ಎಂಬ ಧಾತುವಿಗೆ ಭೂತಕೃದಂತ ಕ್ತ ಪ್ರತ್ಯಯು ಬರಲು 'ಹೋಢಃ' (ಪಾ. ೮/೨/೩೧) ಎಂಬ ಸೂತ್ರದಂತೆ ಹಕಾರಕ್ಕೆ ಢಾದೇಶ ಬಂದು ಗಾಢ ಎಂದಾಯಿತು.

**72. ಪ್ರಾಗ್ರ್ಯ**—ಪ್ರಕರ್ಷೇಣ ಅಗ್ರೇ ಭವ ಇತಿ ಪ್ರಾಗ್ರ್ಯಮ್–ಉತ್ತಮಂ (ವಿ.) । 'ತತ್ರ ಸಾಧುಃ' (ಪಾ. ४/४/೯೮) ಇತಿ ಯತ್-ಪ್ರತ್ಯಯಃ। 'ಪ್ರಾಗ್ರ್ಯಾಗ್ರ್ಯಗ್ರೀಯಮಗ್ರಿಯಮ್' ಇತ್ಯಮರಃ । ಪ್ರಾಗ್ರ್ಯ ಅಗ್ರ್ಯ, ಅಗ್ರೀಯ, ಅಗ್ರಿಯ ಇವೆಲ್ಲ ಶ್ರೇಷ್ಠ ಅಥವಾ ಮುಖ್ಯದ ಪರ್ಯಾಯಗಳು ಪ್ರಾಗ್ರ್ಯಂ–ಶ್ರೇಷ್ಠಂ (ಕ.ಕ.,ಥ.)

**73. ಪಿಂಜರಾರಂಜಿತಾಶಾಃ**—ಪಿಜಿ ದೀಪ್ತೌ (ಅದಾ. ಆತ್ಮ.)–ಬೆಳಗು, ಶೋಭಿಸು ಎಂಬ ಧಾತುವಿನಿಂದ ಪಿಂಕ್ತೇ–ಶೋಭತೇ ಇತಿ ಪಿಂಜರಃ। ಬಾಹುಲಕಾತ್ (ಉ. ३/೧೩೧) ಅರಃ । ಲಕ್ಷಣಯಾ ಮಿಶ್ರಿತವಾದ ಅಥವಾ ಬೆರಕೆಯಾದ ಬಣ್ಣ—ಹೊಂಗೆಂಪು ಬಣ್ಣ ಎಂದರ್ಥ. ಪಿಂಜರಾಃ ಮಿಶ್ರಾಃ (ಥ.)–ಪೀತರಕ್ತಾಃ, 'ಪಿಂಜರಃ ಪೀತರಕ್ತಃ ಸ್ಯಾತ್' ಇತಿ ಹಲಃ (ವಿ.)। ಆ–ಸಮಂತಾತ್ ರಂಜಿತಾಃ–ಅಲಂಕೃತಾಃ ಆಶಾಃ–ದಿಶೋ ಯೈಸ್ತೇ (ವಿ.)–ಹೊಂಗೆಂಪುಬಣ್ಣದಿಂದ ಎಲ್ಲ ದಿಕ್ಕುಗಳನ್ನೂ ಶೋಭಿಸುವಂತೆ ಮಾಡುವ

(ಆಚಾರ್ಯರ ಪಾದಧೂಳಿಗಳು.) (ಭ.) ಆ ಸಮಂತಾತ್ ರಂಜಿತಾಃ– ಅರುಣೀಕೃತಾಃ, ಆಶಾಃ–ದಿಶಃ ಯೈಸ್ತೇ । ರಂಜ ರಾಗ ಇತಿ ಧಾತುಃ– ಬಂಗಾರದ ಧೂಳಿನಿಂದ ದಿಕ್ಕುಗಳನ್ನೆಲ್ಲ ಕೆಂಪಗೆ ಮಾಡುವ ಪಾದಧೂಳಿಗಳು. 'ದಿಶಸ್ತು ಕಕುಭಃ ಕಾಷ್ಠಾ ಆಶಾಶ್ಚ ಹರಿತಶ್ಚ ತಾಃ' ಎಂಬ ಅಮರದಂತೆ ಆಶಾಃ ಎಂದರೆ ಇಲ್ಲಿ ದಿಕ್ಕುಗಳು ಎಂದರ್ಥ. 'ಆಶಾ ತೃಷ್ಣಾದಿಶೋಃ ಸ್ತ್ರಿಯಾಮ್' ಎಂಬ ಮೇದಿನೀಕೋಶದಂತೆ ಆಶಾ (ಏಕವಚನ) ಎಂದರೆ ಅತ್ಯಾಶೆ ಎಂದೂ ದಿಕ್ಕು ಎಂದೂ ಎರಡರ್ಥ.

**74. ಪದಶಃ ಅನ್ವಯಾರ್ಥ (ಹರಿ-ವಾಯು ಉಭಯಪರ)—**

ಉತ್ಕಂಠಾ....ರತ್ನಾವಳೀನಾಂ—ಉತ್ಕಂಠಾ–(ಶ್ರೀಹರಿವಾಯುಗಳ ಸೇವಾ-ವಿಷಯದಲ್ಲಿರುವ) ಕಾತುರತೆಯಿಂದ, ಅಕುಂಠ–ಹೆಚ್ಚಾಗಿರುವ, ಕೋಲಾಹಲ–ನಾನು ಮುಂದು ತಾ ಮುಂದು ಎಂಬ ನುಗ್ಗಾಟದಿಂದಲೂ, ಜವ–ಮುನ್ನುಗ್ಗುವ ರಭಸದಿಂದಲೂ, ವಿದಿತ–ಗೊತ್ತಾಗುವ, ತಿಳಿದುಬರುವ (ಅಥವಾ ರಾ. ಪ್ರಕಾರ, ನಾವೂ ಇದೇ ಪ್ರಕಾರ ಸೇವೆ ಮಾಡಬೇಕೆಂದು ಬರುವ), ಅಜಸ್ರ–ನಿರಂತರವಾದ (ಅವಿಶ್ರಾಂತವಾದ), ಸೇವಾ–ಸೇವೆಯಿಂದ, ಅನುವೃದ್ಧ–ವೃದ್ಧಿಹೊಂದಿದ (ಬೆಳೆದ), ಪ್ರಾಜ್ಞ–ಸ್ವತಂತ್ರವಾಗಿ ಅನಾದಿನಿತ್ಯಕಾಲದಲ್ಲೂ ಸ್ವಪರಗತಸಮಸ್ತವನ್ನೂ ಅತ್ಯಂತ ಸ್ಪಷ್ಟವಾಗಿ ಬಲ್ಲ ಸರ್ವಜ್ಞನಾದ, ಆತ್ಮ–ಪರಮಾತ್ಮನ, ಜ್ಞಾನ–ಜ್ಞಾನದಿಂದ (ಅಪರೋಕ್ಷಜ್ಞಾನದಿಂದ), ಧೂತ–ನಾಶಮಾಡಲ್ಪಟ್ಟ, ಅಂಧತಮಸ–ಅಜ್ಞಾನವೆಂಬ ಕಗ್ಗತ್ತಲುಳ್ಳ, ಸುಮನಃ–(ಹರಿಪರವಾದರೆ ಬ್ರಹ್ಮಾದಿದೇವತೆಗಳ, ವಾಯುಪರವಾದರೆ) ರುದ್ರಾದಿದೇವತೆ-ಗಳ, ಮೌಳಿ–ಕಿರೀಟಗಳಲ್ಲಿರುವ, ರತ್ನ–ನವರತ್ನ ಮತ್ತು ಮುತ್ತುಮಾಣಿಕ್ಯ-ಗಳ, ಆವಳೀ(ಲೀ)ನಾಂ–ಸಾಲುಗಳ; ಭಕ್ತ್ಯುದ್ರೇಕಾ....ರಂಜಿತಾಶಾಃ–ಭಕ್ತಿ–ಭಕ್ತಿಯ, ಉದ್ರೇಕ–ಉತ್ಕರ್ಷದಿಂದ ಅಥವಾ ಉಕ್ಕುವಿಕೆಯಿಂದ, ಅವಗಾಢ–ಬಲವಾಗಿ (ದೃಢವಾಗಿ), ಪ್ರಘಟನ–ಬಡಿಯುವುದರಿಂದ (ತಗುಲುವುದರಿಂದ, ತಾಕುವುದರಿಂದ) ಉಂಟಾಗುವ, ಸಘಟಾತ್ಕಾರ–ಟಕ್ ಟಕ್ ಎಂಬ (ಅಥವಾ ಕಟ್-ಕಟ್ ಎಂಬ) ಸದ್ದು ಬರುವಂತೆ, ಸಂಘೃಷ್ಯಮಾಣ–ತಿಕ್ಕಲ್ಪಡು-ತ್ತಿರುವ (ಘರ್ಷಣೆಯಾಗುತ್ತಿರುವ), ಪ್ರಾಂತ–ತುದಿಯ ಭಾಗವುಳ್ಳ,

ಪ್ರಾಗ್ರ್ಯ–ಶ್ರೇಷ್ಠವಾದ, ಅಂಘ್ರಿಪೀಠ–(ಘ.) ಪಾದಗಳನ್ನು ಇಡುವಂಥಾ ಪೀಠಗಳ ಎಂದರೆ ಪಾದುಕೆಗಳ ದೆಸೆಯಿಂದ (ವಿ.,ಕ.ಕ.) ಪಾದಪೀಠಗಳ ದೆಸೆಯಿಂದ, ಉತ್ಥಿತ–ಎದ್ದ (ಮೇಲಕ್ಕೆ ಎದ್ದ, ಹೊರಟ), ಕನಕ–ಬಂಗಾರದ, ರಜಃ–ಧೂಳುಗಳಿಂದ, ಪಿಂಜರ–(ವಿ.) ಹೊಂಗೆಂಪುಬಣ್ಣದಿಂದ, (ಘ.) ಕೂಡಿಕೊಂಡ, ಮಿಶ್ರಿತವಾದ, ಆರಂಜಿತ–ಕೆಂಪಾಗಿ ಕಾಣುವ, ಆಶಾಃ–ದಿಕ್ಕುಗಳುಳ್ಳ ; (ಜಲಜಲಸತ್-ಪಾಂಸವಃ–ಪಾದಧೂಳುಗಳು, ಅಸ್ಮಾನ್ ಪುನಂತು-ನಮ್ಮನ್ನು ಪಾವನಮಾಡಲಿ.)

**75. ಶ್ಲೋಕದ ವಿಶ್ಲೇಷಣೆ**—ಈ ಶ್ಲೋಕದಲ್ಲಿ ಎರಡೇ ಪದ-ಗಳಿದ್ದರೂ ಎರಡೂ ದೊಡ್ಡದೊಡ್ಡ ಸಮಾಸಪದಗಳೇ ಆಗಿವೆ. ಇದರಿಂದ ಶ್ಲೋಕದಲ್ಲಿ ಹೇಳಿರುವ ಭಾವಗಳು ಬಿಡಿಬಿಡಿಯಾಗಿ ಒಂದಕ್ಕೊಂದು ಸೇರಿ-ಕೊಂಡು ಸುಲಭವಾಗಿ ಅರ್ಥವಾಗುವುದಕ್ಕೆ ಪ್ರತಿಯಾಗಿ ಜಟಿಲವಾಗಿ ಹೆಣೆದು-ಕೊಂಡುಬಿಟ್ಟವೆ. ಹೀಗಾಗಿ ಮುಖ್ಯ ವಿಚಾರ ಯಾವುದು, ಅಮುಖ್ಯ ಯಾವುದು, ಯಾವುದಕ್ಕೆ ಯಾವುದು ವಿಶೇಷಣ, ಅರ್ಥದ ಹೊಂದಾಣಿಕೆ (ಅನ್ವಯ) ಹೇಗೆಂಬುದು ಅನೇಕ ಸಲ ಓದಿ ವಿಶ್ಲೇಷಣೆ ಮಾಡಿಕೊಳ್ಳುವ-ವರೆಗೆ ಭಾಸವಾಗುವುದೇ ಇಲ್ಲ. ಆದಕಾರಣ ಮೊದಲು ಪದಗಳ ಹೊಂದಾಣಿಕೆ ಹೇಗೆಂಬುದನ್ನು ವಿವರಿಸಿ ಆಮೇಲೆ ಭಾವಾರ್ಥವನ್ನು ತಿಳಿಸುವೆನು.

ಈ ಶ್ಲೋಕದಲ್ಲಿ (**ಕ**) ಸುಮನೋಮೌಳಿರತ್ನಾವಳೀನಾಂ (ಪೂರ್ವಾರ್ಧ) (**ಖ**) ಪ್ರಘಟನ (**ಗ**) ಅಂಘ್ರಿಪೀಠೋತ್ಥಿತ—(**ಘ**) ಕನಕರಜಃ (**ಙ**) ಪಿಂಜರಾರಂಜಿತಾಶಾಃ ಎಂಬುದೇ ಮುಖ್ಯವಾದ ಸಾರಭಾಗ. (ಮೇಲೆ ಖಂಡ 73ರಲ್ಲಿ ಇಷ್ಟು ಪದಗಳಿಗೇ ಏನರ್ಥವೆಂಬುದನ್ನು ಬೇರೆಯಾಗಿ ಓದಿಕೊಳ್ಳಿ.) ಇದರ ಭಾವ ಹೀಗಿದೆ—(**ಕ**) ದೇವತೆಗಳ ಕಿರೀಟಗಳಲ್ಲಿ ಜಟಿತವಾಗಿರುವ ನವರತ್ನಾದಿ ಮಣಿಗಳ ಸಾಲುಗಳು (**ಖ**) (ಶ್ರೀಹರಿಗೂ ವಾಯುದೇವರಿಗೂ ನಮಸ್ಕಾರ ಮಾಡುವಾಗ ಅವರ ಪಾದಪೀಠಕ್ಕೆ) ಕಟ್‌ಕಟ್ (ಟಕ್‌ಟಕ್) ಎಂದು ಬಡಿಯು(ತಗಲು)ತ್ತಿರುವುದರಿಂದ (**ಗ**) (ಶ್ರೀಹರಿಯ ಅಥವಾ ವಾಯುದೇವರ) ಪಾದಗಳನ್ನು ಇಟ್ಟಿರುವ ಪೀಠದಿಂದ (ವಿ. ಪ್ರಕಾರ) (ಅಥವಾ ಘ. ಪ್ರಕಾರ ಪಾದುಕಾಗಳಿಂದ) ಹೊರಹೊರಟ (ಅಥವಾ ಮೇಲೆದ್ದ)

(ಘ) ಬಂಗಾರದ ಧೂಳಿನ ಕಣಗಳ (ಜ) (ವಿ.ಕ.ಕ. ಪ್ರಕಾರ) ಹೊಂಗೆಂಪು ಬಣ್ಣದಿಂದ ದಿಕ್ಕುಗಳನ್ನೆಲ್ಲಾ ಕೆಂಪಗೆ ಮಾಡುವಂಥಾ ಪಾದಧೂಳಿಗಳೆಂದು ಪ್ರಥಮ ಶ್ಲೋಕದೊಡನೆ ಅನ್ವಯ. ಅಥವಾ (ಭ. ಪ್ರಕಾರ) ಬಂಗಾರದ ಧೂಳಿನಿಂದ ಮಿಶ್ರಿತವಾಗುವುದರಿಂದ ಎಲ್ಲ ದಿಕ್ಕುಗಳೂ ಕೆಂಪಾದಂತೆ ಕಾಣುತ್ತವೆ ; ಅಂಥಾ ಪಾದಧೂಳಿಗಳೆಂದು ಹಿಂದಿನಂತೆಯೇ ಅನ್ವಯ.

**ವಿಶೇಷ್ಯ–ವಿಶೇಷಣಗಳು**—ಇನ್ನು **ಕ**–ದಲ್ಲಿರುವ ಸುಮನಃ ಶಬ್ದಕ್ಕೆ i) ಪ್ರಾಜ್ಞಾತ್ಮಜ್ಞಾನಧೂತಾಂಧತಮಸಃ ಎಂಬುದು ವಿಶೇಷಣ. ಇದರಲ್ಲಿರುವ ಪ್ರಾಜ್ಞಾತ್ಮಜ್ಞಾನಕ್ಕೆ ii) ಅಜಸ್ರಸೇವಾನುವೃದ್ಧ ಎಂದು ವಿಶೇಷಣ. ಈ 'ಸೇವಾ'ಕ್ಕೆ iii) ಕೋಲಾಹಲ–ಜವ–ವಿದಿತ ಎಂದು ವಿಶೇಷಣ. ಈ ಕೋಲಾಹಲ–ಜವಗಳಿಗೆ (iv) ಉತ್ಕಂಠಾಕುಂಠ ಎಂದು ವಿಶೇಷಣ. ಇಲ್ಲಿಗೆ ಪೂರ್ವಾರ್ಧ ಮುಗಿಯಿತು. ಉತ್ತರಾರ್ಧದಲ್ಲಿ (v) ಭಕ್ತ್ಯುದ್ರೇಕಾವಗಾಢ ಎಂಬುದು **ಖ**–ದ ಪ್ರಘಟನಕ್ಕೂ, (vi) ಪ್ರಘಟನ-ಸಘಟಾತ್ಕಾರ ಸಂಘೃಷ್ಯಮಾಣಪ್ರಾಂತ-ಪ್ರಾಗ್ರ್ಯ ಎಂಬ ಇಷ್ಟು ಭಾಗವೂ ಗ–ಭಾಗದ ಪಾದಪೀಠಕ್ಕೆ ವಿಶೇಷಣಗಳು. ಈಗ ವಿಶೇಷಣಗಳನ್ನು ಆಯಾ ವಿಶೇಷ್ಯಗಳಿಗೆ ಹೊಂದಿಸಿಕೊಂಡು ಅನ್ವಯಿಸುತ್ತಾ 73ನೇ ಖಂಡವನ್ನು ಇನ್ನೊಂದು ಸಾರಿ ಓದಿದರೆ ಶ್ಲೋಕದ ಒಟ್ಟುಭಾವ ಅರ್ಥವಾಗಬಹುದು. ಅದನ್ನೇ ಮುಂದೆ ವಿವರಿಸಿ ಹೇಳಿದ್ದೇವೆ.

**76.** (ಶ್ಲೋಕದ ಭಾವಾರ್ಥ)—**ಸೇವಾದರ**—ಶ್ರೀಹರಿವಾಯುಗಳ ಸೇವೆ ಮಾಡುವುದೆಂದರೆ ಸಕಲ ದೇವತೆಗಳಿಗೂ ಪರಮೋತ್ಸಾಹ, ಅತ್ಯಂತ ಶ್ರದ್ಧೆ. ಅವರ ಸೇವೆಗೆ ಹೋಗಬೇಕೆಂದರೆ ಸಾಕು. ಅವರೆಲ್ಲ ನಾನು ಮುಂದು ತಾನು ಮುಂದು ಎಂದು ಕೋಲಾಹಲ ಮಾಡುತ್ತಾ ಬೇಗ ಬೇಗ ಉತ್ಸಾಹದಿಂದ ಮುನ್ನುಗ್ಗುತ್ತಾರೆ. ಅವರ ಆ ಉತ್ಸಾಹ, ಆ ಆತುರತೆಯನ್ನು ಕಂಡರೆ ಯಾರಿಗಾದರೂ 'ನಾವೂ ಸಹ ಹೀಗೆಯೇ ಉತ್ಸಾಹದಿಂದ ಸೇವೆ ಸಲ್ಲಿಸೋಣ' ಎಂಬ ಭಾವನೆ ತಪ್ಪದೆ ಒಡಮೂಡುತ್ತದೆ ; ದೇವತೆಗಳ ಉತ್ಸಾಹ ಅಷ್ಟು ತೀವ್ರವಾಗಿರುತ್ತದೆ. ಈ ಉತ್ಸಾಹ, ಈ ಶ್ರದ್ಧೆ, ಈ ಆತುರ —ಆಗ ಈಗ ಮಾತ್ರವಲ್ಲ ; (ಟೀಕಾರಾಯರು 'ಆದರನೈರಂತರ್ಯಾಭ್ಯಾಂ'

ಎಂದು ಹೇಳಿರುವಂತೆ) ಅದು ಅವಿಚ್ಛಿನ್ನವಾಗಿ ನಿರಂತರವಾಗಿ ಇದ್ದೇ ಇರುತ್ತದೆ ಅವರು ಶ್ರೀಹರಿವಾಯುಗಳಿಗೆ ನಿರಂತರವಾಗಿ ಸೇವೆ ಸಲ್ಲಿಸುತ್ತಲೇ ಇರುತ್ತಾರೆ. ಅಂಥಾ ಸೇವೆ ಭಗವದಪರೋಕ್ಷಜ್ಞಾನದಲ್ಲಿ ಫಲಿಸಿ ಅದರಿಂದ ಅವರ ಸಕಲ ಅಜ್ಞಾನವೂ ಪಾಪಗಳೂ ಸುಟ್ಟು ಭಸ್ಮವಾಗಿ ಹೋಗಿರುವುದ ರಿಂದ ಅವರು ಶುದ್ಧಾಂತಃಕರಣರಾಗಿರುತ್ತಾರೆ.

**ವಂದನಾರ್ಪಣೆಯಲ್ಲಿ ಕೋಲಾಹಲ**—(ಮುಂದೆ ಮೂವತ್ತೈದ-ನೆಯ ಶ್ಲೋಕದಲ್ಲಿ ಶ್ರೀಹರಿವಾಯುಗಳು* ರತ್ನಸಿಂಹಾಸನದ ಮೇಲೆ ಕುಳಿತು ಓಲಗಕೊಳ್ಳುವರೆಂದು ವರ್ಣಿಸುವರು. ಅದರಂತೆ) ಶ್ರೀಹರಿವಾಯುಗಳು ರತ್ನ ಸಿಂಹಾಸನದಲ್ಲಿ ಕುಳಿತದ್ದನ್ನು ಕಂಡರೆ ಅವರ ಪಾದಗಳಿಗೆರಗಿ ವಂದನಾರ್ಪಣೆ ಮಾಡಲು ದೇವತೆಗಳು ನಾ ಮುಂದು ತಾ ಮುಂದೆಂದುಕೊಂಡು ಕೋಲಾಹಲ ಮಾಡುತ್ತಾ ಸರಸರ ಮುಂದೆ ಬಂದು ಆ ಹರಿವಾಯುಗಳು ಕುಳಿತ ಪೀಠಕ್ಕೆ ತಲೆಬಾಗಿ ನಮಸ್ಕರಿಸುತ್ತಾರೆ. ಹಾಗೆ ವಂದಿಸುವಾಗ ಅವರು (ದೇವತೆಗಳು) ತಲೆಯಲ್ಲಿ ಧರಿಸಿರುವ ಕಿರೀಟಗಳಲ್ಲಿ ಖಚಿತವಾಗಿರುವ ನವರತ್ನಗಳ ಸಾಲುಗಳು ಹರಿವಾಯುಗಳು ಕುಳಿತ ಪೀಠದ (ಅಥವಾ ಛಲಾರೀ ಟೀಕೆಯಂತೆ–ಹರಿ-ವಾಯುಗಳು ಧರಿಸಿದ ಪಾದುಕೆಗಳ) ಅಂಚಿಗೆ ತಗಲುವುದರಿಂದ ಕಟ್ ಕಟ್ (ಅಥವಾ ಟಕ್ ಟಕ್) ಎಂದು ಸದ್ದಾಗುತ್ತದೆ. ಹೀಗೆ ಕೋಟಿಗಟ್ಟಲೆ ದೇವತೆಗಳು ವಂದಿಸುವುದರಿಂದ ಪಾದಪೀಠದ (ಅಥವಾ ಪಾದುಕೆಗಳ) ಅಂಚೇ ಸವೆದು ಹೋಗುತ್ತದೆ. ಅದರಿಂದ ಮೇಲೆದ್ದ ಬಂಗಾರದ ಧೂಳಿನಂತಹ ಕಣಗಳು ಸುತ್ತಮುತ್ತ ಹರಡಿಕೊಳ್ಳುವುದರಿಂದ ಎಲ್ಲೆಲ್ಲಿ ನೋಡಿದರೂ ಹೊನ್ನುಗೆಂಪು (ಸವರನ್) ಬಣ್ಣ ಬಳಿದಂತೆ ಕಂಗೊಳಿಸುತ್ತದೆಯೆಂದು ಅತಿಶಯೋಕ್ತಿ ಮಾಡಿ ಹೇಳಿದ್ದಾರೆ. ಹೀಗೆ ಹೊಂಗೆಂಪುಬಣ್ಣವನ್ನು ಎಲ್ಲ ದಿಕ್ಕುಗಳಲ್ಲೂ ಹರಡುವಂಥಾ ಆಚಾರ್ಯರ (ಮತ್ತು ಶ್ರೀವಿಷ್ಣುವಿನ) ಪಾದ-ಧೂಳು ನಮ್ಮನ್ನು ಪಾವನಮಾಡಲಿ ಎಂದು ಮೊದಲನೆಯ ಶ್ಲೋಕದೊಡನೆ ಅನ್ವಯಿಸಬೇಕು.

---

*ಹರಿಪರವಾಗಿ ಹೇಳುವಾಗ ಕೇವಲ ಹರಿಯೆಂದೂ, ವಾಯುಪರ ಹೇಳುವಾಗ ಕೇವಲ ವಾಯುವೆಂದೂ ಗ್ರಹಣ ಮಾಡಬೇಕು. ಇಬ್ಬರೂ ಒಟ್ಟಿಗೆ ಕುಳಿತುಕೊಳ್ಳು ತ್ತಾರೆ ಎಂದು ಅರ್ಥಮಾಡಬಾರದು.

**77. ಮಧ್ವಾಚಾರ್ಯರ ಸ್ಮರಣೆಯೇ ಪಾವನ**—ಪಂಡಿತಾಚಾರ್ಯರು ಮಧ್ವಾಚಾರ್ಯರ ಸಮಕಾಲೀನರಾದ್ದರಿಂದ ಅವರಿಗೆ ಆಚಾರ್ಯರ ಪಾದಧೂಳು ನೇರವಾಗಿ ದೊರಕಿತು; ನಮಗೆಲ್ಲ ಆ ಧೂಳು ದೊರಕುವುದು ಅಸಾಧ್ಯವಾದ್ದರಿಂದ ಇದು ಕೇವಲ ಪ್ರಶಂಸೆ ಎಂದು ತಿಳಿಯಬಾರದು. ಮಧ್ವರಾಯರ ಕೇವಲ ಸ್ಮರಣೆಯೇ ಪರಮಪಾವನ ಎಂಬುದನ್ನು ಪುರಂದರದಾಸರೂ ವಿಜಯದಾಸರೂ ಕಂಠೋಕ್ತವಾಗಿ ಹೇಳಿದ್ದಾರೆ. ಖಂಡ 10, 11ರಲ್ಲಿ ಹೇಳಿದ ವ್ಯಾಸರಾಯರು ಮತ್ತು ರಾಘವೇಂದ್ರಸ್ವಾಮಿಗಳು ಮಾಡಿದ ಶ್ಲೋಕಗಳನ್ನೂ ಇವುಗಳೊಂದಿಗೆ ಸೇರಿಸಿಕೊಳ್ಳಬಹುದು.

### ಪುರಂದರದಾಸರ ಪದ

ಭೂಪಾಳಿರಾಗ ಆದಿತಾಳ

ಮಧ್ವರಾಯರ ನೆನೆದು ಪರಿಶುದ್ಧರಾಗಿರೋ ॥ ಪ ॥
ಪೊದ್ದಿ ವೈಷ್ಣವ ಮತವ ಭವಾಬ್ಧಿಯನು ದಾಟಿರೋ ॥ ಅ.ಪ. ॥
ಉದಯದಲಿ ಏಳುವಾಗ ಮುದದಿ ಸ್ನಾನ ಮಾಡುವಾಗ
ಒದಗಿ ನಿತ್ಯಕರ್ಮಗಳ ನಡೆಸುವಾಗ
ಹೃದಯದಲಿ ಬೀಜಾಕ್ಷರ ಮಂತ್ರ ಜಪಿಸುವಾಗ
ಸದಮಲಾನಂದ ಹನುಮನ್ನ ನೆನೆಯಿರೋ ॥ ೧ ॥
ಕಾಮವಿಲ್ಲದ ಹರಿಪೂಜೆ ವೈಶ್ವದೇವವಿಡುವಾಗ
ಪ್ರೇಮದಿ ವೈಷ್ಣವೋತ್ತಮರ ಅರ್ಚಿಸುವಾಗ
ಆ ಮಹಾ ಭಕ್ಷ್ಯಭೋಜ್ಯಗಳ ಆರೋಗಣೆ ಮಾಡುವಾಗ ನಿ-
ಸ್ಸೀಮ ಕೌರವಾಂತಕ ಭೀಮರಾಯನ ನೆನೆಯಿರೋ ॥ ೨ ॥
ಕರಗಳನ್ನೇ ತೊಳೆದು ತೀರ್ಥ ತುಳಸಿದಳವೀಯುವಾಗ
ಪರಿಪರಿ ಫಲಪುಷ್ಪಗಳ ಅರ್ಪಿಸುವಾಗ
ಸರುವರಂತರ್ಯಾಮಿ ನಮ್ಮ ಪರಮಗುರು ಮಧ್ವಾಂತರಾತ್ಮಕ
ಸಿರಿಪುರಂದರವಿಠಲನಿಗೆ ಸರ್ವ ಸಮರ್ಪಣೆ ಮಾಡಿರೋ ॥ ೩ ॥

[ಕಠಿನ ಶಬ್ದಾರ್ಥ—ಪ್ರೊದ್ದಿ–ಹೊಂದಿ, ಸೇರಿ, ಭವಾಬ್ಧಿ–ಸಂಸಾರ-ಸಾಗರ, ಕಾಮವಿಲ್ಲದ–ನಿಷ್ಕಾಮವಾದ, ಆರೋಗಣೆ–ನೈವೇದ್ಯ, ನಿಸ್ಸೀಮ–ಎದುರಿಲ್ಲದ, ಈಯುವಾಗ–ಕೊಡುವಾಗ.]

## ವಿಜಯದಾಸರ ಪದ

ಕಾಂಬೋದಿರಾಗ ಆದಿತಾಳ

ಮಧ್ವರಾಯರ ಕರುಣೆ ಪಡೆಯದವ ಧರೆಯೊಳಗೆ
ಇದ್ದರೇನು ಇಲ್ಲದಿದ್ದರೇನು ॥ ಪ ॥

ಮಧ್ವಮತವೇ ಮತವು ಸಕಲ ಶ್ರುತಿಸಮ್ಮತವು
ಮಧ್ವರಾಯರ ಧ್ಯಾನ ಅಮೃತಪಾನ
ಮಧ್ವರಾಯರ ಲೀಲೆ ನವರತುನದ ಮಾಲೆ
ಮಧ್ವರಾಯರ ಸ್ಮರಣೆ ಕುಲಕೋಟಿ ಉದ್ಧರಣೆ ॥ ೧ ॥

ಮಧ್ವರಾಯರ ಕಥಾ ಕೇಳಲು ದುರಿತಹತ
ಮಧ್ವರಾಯರ ಭಕುತಿ ಮಾಡೆ ಮುಕುತಿ
ಮಧ್ವರಾಯರ ಸ್ತೋತ್ರ ಮಾಡಿದವ ಸತ್ಪಾತ್ರ
ಮಧ್ವರಾಯರ ಭಜನೆ ದುಷ್ಕರ್ಮತ್ಯಜನೆ ॥ ೨ ॥

ಮಧ್ವರಾಯರ ದಾಸನಾದವನೆ ನಿರ್ದೋಷ
ಮಧ್ವರಾಯರ ಬಂಟ ಜಗಕೆ ನೆಂಟ
ಮಧ್ವರಮಣ ವಿಜಯವಿಠಲ ಕಿಂಕರರಾದ
ಮಧ್ವರಾ ಕಾರುಣ್ಯ ಪಡೆದವನೆ ಶರಣ್ಯ ॥ ೩ ॥

## ಮೂರನೇ ಶ್ಲೋಕ

**78. ಅವತಾರಿಕೆ**—ಪಂಡಿತಾಚಾರ್ಯರು ಹರಿವಾಯುಗಳ ಪಾದ-ಪಾಂಸುಗಳನ್ನು ಎರಡು ಶ್ಲೋಕಗಳಲ್ಲಿ ವರ್ಣಿಸಿದ್ದರೂ ತೃಪ್ತರಾಗದೆ ಪುನಃ ಈ ಶ್ಲೋಕದಲ್ಲೂ ಅವುಗಳ ಮಹಿಮೆಯನ್ನು ಮತ್ತಷ್ಟು ವರ್ಣಿಸಿ ಸಮಾಪ್ತಿ-ರೂಪವಾಗಿ 'ಅವುಗಳನ್ನು ನಾನು ವರ್ಣಿಸಲಾರೆ' ಎಂದು ಹೇಳಿಕೊಂಡು ಸ್ವಾಹಂಕಾರಖಂಡನೆ ಮಾಡಿಕೊಂಡಿದ್ದಾರೆ. (ಕ.ಕ.,ವಿ.,ಛ.) ಕವಿಗಳು ಸ್ವಾಹಂಕಾರಖಂಡನೆ ಮಾಡಿಕೊಳ್ಳುತ್ತಾರೆ—

**ಜನ್ಮಾಧಿವ್ಯಾಧ್ಯುಪಾಧಿ–ಪ್ರತಿಹತಿವಿರಹ–ಪ್ರಾಪಕಾಣಾಂ ಗುಣಾನಾ-**
**ಮಗ್ರ್ಯಾಣಾಮರ್ಪಕಾಣಾಂ ಚಿರಮುದಿತಚಿದಾ–**
**ನಂದ-ಸಂದೋಹದಾನಾಮ್ ।**
**ಏತೇಷಾಮೇಷ ದೋಷ ಪ್ರಮುಷಿತಮನಸಾಂ ದ್ವೇಷಿಣಾಂ**
**ದೂಷಕಾಣಾಂ-ದೈತ್ಯಾನಾಮಾರ್ತಿಮಂಧೇ ತಮಸಿ ವಿದಧತಾಂ**
**ಸಂಸ್ತವೇ ನಾಸ್ಮಿ ಶಕ್ತಃ ॥ ೩ ॥**

**ಪದವಿಭಾಗ**—ಜನ್ಮಾಧಿ....ಪ್ರಾಪಕಾಣಾಂ (ಜನ್ಮ–ಆಧಿ–ವ್ಯಾಧಿ–ಉಪಾಧಿ–ಪ್ರತಿಹತಿ–ವಿರಹ–ಪ್ರಾಪಕಾಣಾಂ), ಗುಣಾನಾಂ, ಅಗ್ರ್ಯಾಣಾಂ, ಅರ್ಪಕಾಣಾಂ, ಚಿರಂ, ಉದಿತ....ದಾನಾಂ (ಉದಿತ–ಚಿತ್–ಆನಂದ–ಸಂದೋಹದಾನಾಂ), ಏತೇಷಾಂ, ಏಷಃ, ದೋಷ....ಮನಸಾಂ, ದ್ವೇಷಿಣಾಂ, ದೂಷಕಾಣಾಂ, ದೈತ್ಯಾನಾಂ, ಆರ್ತಿಂ, ಅಂಧೇ, ತಮಸಿ, ವಿದಧತಾಂ, ನ, ಅಸ್ಮಿ, ಶಕ್ತಃ॥

**79. ಶ್ಲೋಕದ ವಿಶ್ಲೇಷಣೆ**—ಅಸ್ಮಿ–ಆಗಿದ್ದೇನೆ ಎಂಬ ಉತ್ತಮ ಪುರುಷೈಕವಚನ ಕ್ರಿಯೆಯನ್ನು ಬಳಸಿರುವುದರಿಂದ ಅದರ ಬಲದ ಮೇಲೆ 'ಅಹಂ'–ನಾನು ಎಂಬ ಕರ್ತೃಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು (ಛ.). ಈ ಅಹಂ ಶಬ್ದವನ್ನು ತೃತೀಯ ಪಾದದಲ್ಲಿರುವ ಏಷಃ ಎಂಬುದ ರೊಡನೆ ಜೋಡಿಸಿಕೊಳ್ಳಬೇಕು. ಏಷಃ ಅಹಂ ಎಂದರೆ ಈ ನಾನು ಎಂದರ್ಥ. ಇಲ್ಲಿ ಏಷಃ–ಈ ಎಂದರೆ (ಛ.,ವಿ.,ಕಕ.) ವಾಯುಸ್ತುತಿ ಮಾಡಲು ಹೊರಟಿರುವ ನಾನು ಎಂದರ್ಥ. ಏತೇಷಾಂ–ಈ (ಛ.ಕಕ.ವಿ.) ಎಂದರೆ ಹಿಂದೆ ವರ್ಣನೆ ಮಾಡಿದ ಪಾದಪಾಂಸುಗಳ, ಸಂಸ್ತವೇ—ಸಂ–ಚೆನ್ನಾಗಿ ಸ್ತವೇ–ಸ್ತೋತ್ರಮಾಡುವುದರಲ್ಲಿ, ಶಕ್ತಃ ನಾಸ್ಮಿ–ಸಮರ್ಥನಲ್ಲ ಎಂದರ್ಥ. ಹೀಗೆ ಏಷಃ (ಅಹಂ) ಏತೇಷಾಂ ಸಂಸ್ತವೇ ಶಕ್ತಃ ನಾಸ್ಮಿ ಎಂಬುದೇ ಪ್ರಧಾನ-ವಾಕ್ಯ. ಈಗ ಏತೇಷಾಂ (ಪಾದಪಾಂಸೂನಾಂ) ಎಂಬುದಕ್ಕೆ ನಾಲ್ಕು ವಿಶೇಷಣ-ಗಳನ್ನು ಕೊಟ್ಟಿದ್ದಾರೆ—೧. ಜನ್ಮಾಧಿ....ಪ್ರಾಪಕಾಣಾಂ, ೨. ಅಗ್ರ್ಯಾಣಾಂ ಗುಣಾನಾಂ ಅರ್ಪಕಾಣಾಂ, ೩. ಉದಿತ....ಸಂದೋಹದಾನಾಂ, ೪. ದೈತ್ಯಾ-ನಾಂ ಅಂಧೇ ತಮಸಿ ಆರ್ತಿಂ ಚಿರಂ ವಿದಧತಾಂ. ನಾಲ್ಕನೇ ವಿಶೇಷಣ

ದಲ್ಲಿರುವ ದೈತ್ಯಾನಾಂ ಎಂಬುದಕ್ಕೆ (ಕ) ದೋಷಪ್ರಮುಷಿತಮನಸಾಂ, (ಖ) ದ್ವೇಷಿಣಾಂ, (ಗ) ದೂಷಕಾಣಾಂ ಎಂದು ಮೂರು ವಿಶೇಷಣ ಕೊಟ್ಟಿದ್ದಾರೆ. ಈಗ ಕಠಿನ ಶಬ್ದಗಳ ಅರ್ಥವನ್ನು ಮೊದಲು ವಿವರಿಸಿ ಅನಂತರ ಅನ್ವಯಾರ್ಥ ಭಾವಾರ್ಥಗಳನ್ನು ಕೊಡಲಾಗುವುದು. ಈ ಶ್ಲೋಕಕ್ಕೂ ಹರಿವಾಯು ಉಭಯಪರವಾಗಿ ಒಂದೇ ಅರ್ಥ.

**80. ಜನ್ಮಾಧಿ....ಪ್ರಾಪಕಾಣಾಂ**—'ಜನುರ್ಜನನಜನ್ಮಾನಿ ಜನಿರುತ್ಪತ್ತಿರುದ್ಭವಃ' ಎಂಬ ಅಮರದಂತೆ ಜನ್ಮನ್ ಶಬ್ದ ನಕಾರಾಂತ ನಪುಂಸಕ ಲಿಂಗ. ಜಾಯತೇ ಯತ್ರ ಇತಿ ಜನನಂ, ಜನ್ಮ ವಾ। 'ಜನೀ ಪ್ರಾದುರ್ಭಾವೇ'–ಹುಟ್ಟು, ಜನಿಸು ಎಂಬ (ದಿವಾದಿ. ಆ) ಧಾತುವಿನ ಮೇಲೆ ಲ್ಯುಟ್ (ಅನ) ಪ್ರತ್ಯಯ ಬಂದರೆ ಜನನ ಎಂದೂ 'ಸರ್ವಧಾತುಭ್ಯೋ ಮನಿನ್' (ಉ. ೪/೧೪೬) ಎಂಬ ಸೂತ್ರದಂತೆ ಮನಿನ್ ಪ್ರತ್ಯಯ ಬಂದರೆ ಜನ್ಮ ಎಂದೂ ಆಗುತ್ತದೆ. (ಕ.ಕ.) 'ಪುಂಸ್ಯಾಧಿರ್ಮಾನಸೀ ವ್ಯಥಾ' ಎಂದು ಅಮರ ಹೇಳುವಂತೆ ಆಧಿ ಎಂದರೆ ಮನೋವ್ಯಥೆ, ಮನೋರೋಗ ಅಥವಾ ಮಾನಸಿಕ ಚಿಂತೆ. 'ಚಿಂತಾ ದಹತಿ ಜೀವಿನಂ' ಎಂದು ಹೇಳಿದಂತೆ, ಅತ್ತ ನಿವಾರಿಸುವುದಕ್ಕೂ ಆಗುವುದಿಲ್ಲ, ಇತ್ತ ಸಹಿಸುವುದಕ್ಕೂ ಆಗದೆ ದೇಹವನ್ನೇ ಮಾನಸಿಕ ಚಿಂತೆ ಸುಟ್ಟುಬಿಡುತ್ತದೆ; ಅದಕ್ಕೆ ಆಧಿಯೆಂದು ಹೆಸರು. ಡುಧಾಞ್ ಧಾರಣಪೋಷಣಯೋಃ–ಧರಿಸು, ಸಹಿಸು (ಜುಹೋ. ಉಭ.) ಎಂಬ ಧಾತುವಿಗೆ ಆಧೀಯತೇ ದುಃಖಮನೇನೇತ್ಯಾಧಿಃ–ದುಃಖವು ಇದರಿಂದ ಧರಿಸಲ್ಪಡುತ್ತದೆ ಎಂಬ ವ್ಯುತ್ಪತ್ತಿಯಿಂದ 'ಉಪಸರ್ಗೇ ಘೋಃ ಕಿಃ' (ಪಾ. ೩/೩/೯೨) ಎಂಬ ಸೂತ್ರದಿಂದ ಕಿ(ಇ) ಪ್ರತ್ಯಯ ಬಂದಿದೆ. 'ರೋಗ-ವ್ಯಾಧಿ-ಗದಾಮಯಾಃ' ಎಂಬ ಅಮರದಂತೆ ವ್ಯಾಧಿ ಎಂದರೆ ವಿವಿಧರೋಗಗಳು—ವಿವಿಧಾ ಆಧಯೋ ಅಸ್ಮಾದಿತಿ ವ್ಯಾಧಿಃ ಇದರಿಂದ ಲಕ್ಷಣಯಾ ಮರಣ ಮುಪ್ಪು ಮೊದಲಾದ ಪೀಡೆಗಳನ್ನೂ ಗ್ರಹಣ ಮಾಡಬಹುದು (ಛ.) **ಉಪಾಧಿ** ಎಂದರೆ ಕಾರಣವೆಂದೂ ದೇಹವೆಂದೂ ಎರಡು ಅರ್ಥ (ಕ.ಕ.,ವಿ.,ಛ.). ಜನ್ಮ–ಆಧಿ–ವ್ಯಾಧಿಗಳಿಗೆ, ಉಪಾಧಿ–ಕಾರಣೀಭೂತವಾದ ಅವಿದ್ಯಾಕಾಮ್ಯಕರ್ಮಗಳು. **ಪ್ರತಿಹತಿ** ಎಂಬುದಕ್ಕೂ–ಪುನಃ

ಪುನರ್ಗತಿಃ (ಥ.) ಪ್ರತ್ಯಾವೃತ್ತಿಃ (ಕಕ., ವಿ.)–ಮತ್ತೆಮತ್ತೆ ಬರುವಿಕೆ ಎಂದೂ, ನಾಶ (ಕಕ.ವಿ.) ಎಂದೂ ಎರಡರ್ಥ. ಪ್ರತಿ ಉಪಸರ್ಗ, ಹನ ಹಿಂಸಾ-ಗತ್ಯೋಃ–ಕೊಲ್ಲು, ಬರುವುದು ಎಂಬ ಧಾತುವಿನ ಮೇಲೆ 'ಸ್ತ್ರಿಯಾಂ ಕ್ತಿನ್' (ಪಾ. ೩/೩/೯೪) ಎಂಬ ಸೂತ್ರದಂತೆ ಕ್ತಿನ್ (ತಿ) ಪ್ರತ್ಯಯ ಬಂದಿದೆ. ಹೋಗು ಅರ್ಥದಲ್ಲಿ ಬಂದರೆ ಮತ್ತೆ ಮತ್ತೆ ಬರುವಿಕೆ ಎಂದರ್ಥ; ಕೊಲ್ಲು, ನಾಶಮಾಡು ಎಂಬ ಅರ್ಥದಲ್ಲಿ ಬಂದರೆ ನಾಶ ಎಂದರ್ಥ. ಆದ್ದರಿಂದ ಜನ್ಮಾಧಿ–ಎಂಬ ಪದಕ್ಕೆ ಎರಡು ರೀತಿ ಅರ್ಥವಾಗುತ್ತದೆ.

ಕ) ಜನ್ಮ–ಜನನ, ಆಧಿ–ಮನೋರೋಗಗಳು, ವ್ಯಾಧಿ–ನಾನಾರೋಗಗಳು, ಮುಪ್ಪು-ಮರಣಾದಿಗಳು, ಇವುಗಳಿಗೆ—ಉಪಾಧಿ–ಕಾರಣೀಭೂತವಾದ ಅವಿದ್ಯಾ–ಕಾಮ್ಯಕರ್ಮಾದಿಗಳು, ಪ್ರತಿಹತಿ–ಮತ್ತೆ ಮತ್ತೆ ಬರದಂತೆ, ವಿರಹ-ಪ್ರಾಪಕಾಣಾಂ–ತಪ್ಪಿಸುವಂಥಾ (ಪಾದಧೂಳು); (ಖ) ಜನ್ಮ–ಜನನ, ಆಧಿ-ಮನೋರೋಗ, ವ್ಯಾಧಿ–ರೋಗರುಜಿನಗಳು, ಉಪಾಧಿ–ಶರೀರವು, ಪ್ರತಿಹತಿ–ನಾಶವಾಗುವುದು (ಎಂದರೆ ಮರಣ)—ಇವೆಲ್ಲ ಅನಿಷ್ಟಗಳ, ವಿರಹ-ಪ್ರಾಪಕಾಣಾಂ–ನಿವೃತ್ತಿ ಮಾಡುವಂಥಾ (ಪಾದಧೂಳು).

**ಪ್ರಾಪಕಾಣಾಂ**—ಎಂಬಲ್ಲಿ ಪ್ರ ಉಪಸರ್ಗ, ಆಪಲ್ಹ ವ್ಯಾಪ್ತೌ (ಸ್ವಾದಿ. ಪ.)–ಹೊಂದು ಎಂಬ ಧಾತುವಿನ ಮೇಲೆ ಣಿಚಿ ಕರ್ತರಿ "ಣ್ವುಲ್-ತೃಚೌ" (ಪಾ. ೩/೧/೧೩೩) ಎಂಬಂತೆ ಣ್ವುಲ್ ಪ್ರತ್ಯಯ ಬರಲು 'ಯುವೋರನಾಕೌ' (ಪಾ. ೭/೧/೧) ಎಂಬ ಸೂತ್ರದಂತೆ ವುಕಾರಕ್ಕೆ ಅಕಾರಾದೇಶ ಬಂದು ಪ್ರಾಪಕಾಣಾಂ ಎಂದಾಗಿದೆ. ಇದೇ ರೀತಿ ಋ ಗತಿಪ್ರಾಪಣಯೋಃ–ಹೊಂದಿಸು, ಹೊಂದು, ಪಡಿ ಎಂಬ ಧಾತುವಿನ (ಭ್ವಾ.ಪ.) ಮೇಲೆ ಪ್ರೇರಣಾರ್ಥದಲ್ಲಿ 'ಅರ್ತಿಹ್ರೀ—'(ಪಾ.೭/೩/೩೬) ಎಂಬ ಸೂತ್ರದಂತೆ ಪಕಾರಾದೇಶವೂ 'ಪುಗಂತಲಘೂಪದಸ್ಯ ಚ' (ಪಾ. ೭/೩/೮೬) ಎಂಬುದರಿಂದ ಗುಣವೂ ಬಂದು ಅರ್ಪ್ ಎಂದಾಗಲು ಅದರ ಮೇಲೆಯೂ ಣ್ವುಲ್ ಪ್ರತ್ಯಯ ಬರಲು **ಅರ್ಪಕಾಣಾಂ** ಎಂಬ ರೂಪವೂ ಸಿದ್ಧಿಸುತ್ತದೆ. **ದೂಷಕಾಣಾಂ** ಎಂಬುದೂ ಇದರಂತೆ. ದುಷ ವೈಕೃತ್ಯೇ (ದಿವಾದಿ. ಪ.) ಹಾಳಾಗು, ಅಶುದ್ಧವಾಗು ಎಂಬ ಧಾತುವಿನ ಮೇಲೆ ಪ್ರೇರಣಾರ್ಥದಲ್ಲಿ ಣಿ ಪ್ರತ್ಯಯ ಬರಲು 'ದೋಷೋ

ಣೌ' (ಪಾ.೬/೪/೯೦) ಎಂಬಂತೆ ಊಕಾರಾದೇಶ ಬರಲು ದೂಷ್ ಆಗುತ್ತದೆ. ಇದಕ್ಕೆ ಣ್ವುಲ್ ಪ್ರತ್ಯಯ ಬರಲು ದೂಷಕಾಣಾಂ ಎಂದಾಗಿದೆ. ಈ ಮೂರೂ ಪದಗಳಿಗೂ ಕ್ರಮವಾಗಿ ಪ್ರಾಪಕಾಣಾಂ–ಹೊಂದಿಸುವವರು ಅಥವಾ ಕೊಡಿಸುವ, ಅರ್ಪಕಾಣಾಂ–ದಾನಮಾಡುವ, ಕೊಡಿಸುವ, ದೂಷಕಾಣಾಂ–ನಿಂದಿಸುವ, ಬೈಯುವ ಎಂದರ್ಥ.

**81. ಅಗ್ರ್ಯಾಣಾಂ ಗುಣಾನಾಂ ಅರ್ಪಕಾಣಾಂ**—ಅಗ್ರ್ಯ ಶಬ್ದಾರ್ಥಕ್ಕೆ ಖಂಡ 72 ನೋಡಿ. **ಗುಣಾನಾಂ** ಎಂಬುದು ಷಷ್ಠೀ ಬಹುವಚನ. 'ಕರ್ತೃಕರ್ಮಣೋಃ ಕೃತಿ' (ಪಾ. ೨/೩/೬೫) ಎಂಬ ಸೂತ್ರದಂತೆ ಅರ್ಪಕಾಣಾಂ ಎಂಬ ಕೃದ್ಯೋಗವಿರುವುದರಿಂದ ಕರ್ಮಣಿ ಷಷ್ಠೀ ಬಂದಿದೆ. ಗುಣ ಶಬ್ದಕ್ಕೆ ನಾನಾರ್ಥವಿರುವುದರಿಂದ ಇಲ್ಲಿ ಯಾವ ಅರ್ಥವೆಂದು ತಿಳಿಸಲು ವಿಶ್ವಪತಿವ್ಯಾಖ್ಯಾನದಲ್ಲಿ "ಗುಣೋ ಜ್ಯಾಸೂತ್ರತಂತುಷು । ರಜ್ಜೌಸತ್ತ್ವಾದೌ ಸಂಧ್ಯಾದೌ ಶೌರ್ಯಾದೌ ಭೀಮ ಇಂದ್ರಿಯೇ । ರೂಪಾದಾವಪ್ರಧಾನೇ ಚ ದೋಷಾನ್ಯಸ್ಮಿನ್ ವಿಶೇಷಣೇ ॥" ಇತಿ ಹೇಮಚಂದ್ರಃ ಎಂಬ ಕೋಶವನ್ನು ಉದಹರಿಸಿದ್ದಾರೆ. ಗುಣ ಎಂದರೆ ಬಿಲ್ಲಿಗೆ ಕಟ್ಟುವ ಹೆದೆ, ಹಗ್ಗ, ಸತ್ವರಜಸ್ತಮೋಗುಣಗಳು ಇತ್ಯಾದಿ ಅನೇಕ ಅರ್ಥಗಳಿದ್ದರೂ ಪ್ರಕೃತ ಸಂದರ್ಭದಲ್ಲಿ ದೋಷವಿರುದ್ಧವಾದ ಗುಣವನ್ನೇ ಗ್ರಹಿಸಬೇಕು. ಆ ಗುಣಗಳು ಯಾವುವೆಂದರೆ—ಭಕ್ತಿಜ್ಞಾನವೈರಾಗ್ಯಾದಿ ಗುಣಗಳು. ಅವುಗಳನ್ನು ಕೊಡುವಂಥಾ ಎಂದರ್ಥ.

**82. ಚಿರಂ**—ಎಂಬುದು ಸ್ವರಾದಿ ಗಣಕ್ಕೆ ಸೇರಿದ್ದರಿಂದ 'ಸ್ವರಾದಿ ನಿಪಾತಮವ್ಯಯಮ್' (ಪಾ. ೧/೧/೩೭) ಎಂಬ ಸೂತ್ರದಂತೆ ಅವ್ಯಯ. 'ಚಿರಾಯ ಚಿರರಾತ್ರಾಯ ದೀರ್ಘಕಾಲೇ ಪ್ರಯುಜ್ಯತೇ । ಚಿರಂ ಚಿರಾತ್ ಚಿರೇಣೇತಿ' ಎಂದು ಭಟ್ಟ ಹಲಾಯುಧನೂ 'ಚಿರೇಣ ಚಿರರಾತ್ರಾಯ ದೀರ್ಘಕಾಲೇ ಚಿರಾಚ್ಚಿರಮ್' ಎಂದು ವೈಜಯಂತೀಕೋಶದಲ್ಲೂ ಹೇಳಿರುವುದರಿಂದ ದೀರ್ಘಕಾಲ ಅಥವಾ ಶಾಶ್ವತವಾಗಿ ಎಂದೂ ಅರ್ಥ. ಈ ಶ್ಲೋಕದಲ್ಲಿ ಈ ಪದವನ್ನು ಉದಿತ ಚಿದಾನಂದ ಎಂಬುದರ ಜೊತೆಯೂ, ಆರ್ತಿಂ ವಿದಧತಾಂ ಎಂಬುದರ ಜೊತೆಯೂ ಸೇರಿಸಿಕೊಳ್ಳಬಹುದು.

**83. ಉದಿತ....ದಾನಾಂ—ಉದಿತ** ಶಬ್ದವು ಉತ್ (ಉಪಸರ್ಗ) ಸಹಿತವಾದ ಇಣ್ ಗತೌ–ಹೋಗು, ಸೇರು (ಅದಾ.ಪ.) ಧಾತುವಿಗೆ ಭೂತ-ಕೃದಂತ ಕ್ತಪ್ರತ್ಯಯ ಸೇರಿ (ಉತ್ + ಇ + ತ–ಉದಿತ) ಆಗಿದೆ. ಸಾಮಾನ್ಯ-ವಾಗಿ ಕ್ತಪ್ರತ್ಯಯ ಕರ್ಮಣಿ ಪ್ರಯೋಗವಾದ್ದರಿಂದ ಉದಯಿಸಲ್ಪಟ್ಟ ಎಂಬ ಅರ್ಥ ಬರುತ್ತದೆ. ಆದರೆ ಇಲ್ಲಿ 'ಆದಿಕರ್ಮಣಿ ಕ್ತಃ ಕರ್ತರಿ ಚ' (ಪಾ. ೩/೪/೭೧) ಎಂಬ ಸೂತ್ರದಂತೆ ಕೆಲಸದ ಆರಂಭದಲ್ಲಿ ಕ್ತ ಬಂದಿರುವುದರಿಂದ 'ಉದಯಮಾರಭಮಾಣಃ' (ಕಕ.,ವಿ.) ಎಂದರೆ ಆಗತಾನೇ ಉದಯಿಸಿದ ಅಥವಾ ಪ್ರಕಟವಾದ ಎಂದು ಅರ್ಥ. ಇದಕ್ಕೆ ಅವರವರ ಯೋಗ್ಯತಾನುಸಾರ ಆವಿರ್ಭೂತವಾದ ಎಂದು ತಾತ್ಪರ್ಯ. ಮಾಧ್ವಸಿದ್ಧಾಂತದ ಪ್ರಕಾರ ಮುಕ್ತಿಯಲ್ಲೂ ಆನಂದತಾರತಮ್ಯವಿದೆ. ಈ ತಾರತಮ್ಯವನ್ನು ತೈತ್ತಿರೀಯೋ-ಪನಿಷತ್ತಿನಲ್ಲಿ ಆನಂದವಲ್ಲಿಯಲ್ಲಿ ತೋರಿಸಿದೆ. ಅದರಂತೆ ಮುಕ್ತಿ ದೊರಕಿದ ಮೇಲೆ ಜೀವರ ಸ್ವರೂಪಾನುಸಾರ ಪ್ರಕಟವಾದ ಎಂಬುದು ಉದಿತದ ಅರ್ಥ.

**ಚಿತ್** ಎಂದರೆ ಜ್ಞಾನ (ಕಕ.,ವಿ.,ಥ.) 'ಚಿತೀ ಸಂಜ್ಞಾನೇ'–ತಿಳಿ (ಭ್ವಾ.ಪ.) ಎಂಬ ಧಾತುವಿನ ಮೇಲೆ ಸಂಪದಾದಿಗಣಕ್ಕೆ ಸೇರಿದ್ದರಿಂದ 'ಸಂಪದಾದಿಭ್ಯಃ ಕ್ವಿಪ್' ಎಂಬ ವಾರ್ತಿಕದಂತೆ ಕ್ವಿಪ್ ಪ್ರತ್ಯಯ ಬಂದು ಚಿತ್ ಎಂದಾಗಿದೆ. ಇದು ಸ್ತ್ರೀಲಿಂಗಶಬ್ದ.

**ಸಂದೋಹಃ** ಎಂದರೆ ಸಮೂಹ. 'ಸಮೂಹ-ನಿವಹ–ವ್ಯೂಹ-ಸಂದೋಹ-ವಿಸರ-ವ್ರಜಾಃ' ಎಂದು ಅಮರ. ವಿಶ್ವಪತಿತೀರ್ಥರ ಟೀಕೆಯಲ್ಲಿ 'ಚಯ–ಸಮವಾಯ–ವೃಂದ–ಸಂದೋಹ–ವಿಸರ–ವ್ರಜ–ಪುಂಜ–ಸಮೂಹ–ಸಂಚಯಾಃ' ಎಂಬ ಹಲಾಯುಧಕೋಶವನ್ನು ಉದಹರಿಸಿದೆ.

ಉದಿತ–ಅಭಿವ್ಯಕ್ತವಾದ, ಚಿತ್–ಜ್ಞಾನ, ಆನಂದ–ಸುಖ ಇವುಗಳ, ಸಂದೋಹ–ಸಮೂಹವನ್ನು, ದದಾತೀತಿ ದಾಃ, ತೇಷಾಂ–ಕೊಡುವಂಥಾ, 'ಆತೋಽನುಪಸರ್ಗೇ ಕಃ' (ಪಾ. ೩/೨/೩) ಎಂಬ ಸೂತ್ರದಂತೆ ಕಪ್ರತ್ಯಯ ಬಂದಿದೆ. ಶ್ರೀಹರಿವಾಯುಗಳನ್ನು ಭಜಿಸುವವರಿಗೆ ಮೋಕ್ಷವನ್ನು ಕೊಟ್ಟು ಅವರವರ ಯೋಗ್ಯತಾನುಸಾರ ಜ್ಞಾನಾನಂದಗಳು ಸಂಪೂರ್ಣವಾಗಿ ದೊರಕು ವಂತೆ ಮಾಡುವ ಶ್ರೀಹರಿವಾಯುಗಳ ಪಾದಧೂಳು ಎಂದರ್ಥ. (ಇದರ

ಹೆಚ್ಚಿನ ವಿವರಣೆ ಪುನಃ ಒಂಬತ್ತು-ಹತ್ತನೇ ಶ್ಲೋಕಗಳಲ್ಲೂ ಹದಿನಾರನೇ ಶ್ಲೋಕದಲ್ಲೂ ಬರುವುದು.)

**84. ದೋಷ....ವಿದಧತಾಂ**—1. ದೋಷ–ಅನ್ಯಥಾಜ್ಞಾನಾದಿಗಳಿಂದ ಪ್ರಮುಷಿತ–ಕಲುಷಿತವಾದ, ಮನಸಾಂ–ಮನಸ್ಸುಳ್ಳ. 2. ದ್ವಿಷಂತಿ ತಾಚ್ಛೀಲ್ಯೇನೇತಿ ದ್ವೇಷಿಣಃ । ದ್ವೇಷಮಾಡುವುದೇ ಸ್ವಭಾವವಾಗಿರುವ. 'ಸಂಪೃಚಾನುರುಧ—' (ಪಾ. ೩/೨/೧೪೨) ಎಂಬ ಸೂತ್ರದಂತೆ ಶೀಲಾರ್ಥದಲ್ಲಿ ಘಿನುಣ್(ಇನ್) ಪ್ರತ್ಯಯ ಬಂದಿದೆ. 3. ದೂಷಯಂತೀತಿ ದೂಷಕಾಃ, ತೇಷಾಂ, ದೂಷಕಾಣಾಂ–ದೂಷಣೆ ಮಾಡುವ, ನಿಂದೆಮಾಡುವ. ದೂಷಕಾಣಾಂ ಎಂಬುದಕ್ಕೆ ದ್ವೇಷಿಣಾಂ ಎಂಬುದು ಹೇತುಗರ್ಭವಿಶೇಷಣ. ದ್ವೇಷಮಾಡುವುದೇ ಅವರ ಹುಟ್ಟುಗುಣವಾದ ಕಾರಣ ನಿಂದೆಯನ್ನೂ ಮಾಡುತ್ತಾರೆ ಎಂದು ತಿಳಿಯಬೇಕು. ಅಂಥಾ ದೈತ್ಯರಿಗೆ ಅಂಧೇ ತಮಸಿ–ಅಂಧಂತಮಸ್ಸೆಂಬ ನಿತ್ಯನರಕದಲ್ಲಿ, ಆರ್ತಿಂ–ದುಃಖವನ್ನು, ವಿದಧತಾಂ–ವಿಧಿಸುವಂಥಾ. **ಆರ್ತಿಃ** (ಸ್ತ್ರೀಲಿಂಗ) ಎಂದರೆ 'ಆಬಾಧಾ ವೇದನಾ ದುಃಖ–ಮಾರ್ತಿಃ ಪೀಡಾ ವ್ಯಥಾ ತಥಾ' ಎಂಬ ಹಲಾಯುಧಕೋಶದಂತೆ ದುಃಖ, ಪೀಡೆ.

ಮುಕ್ತಿಯೋಗ್ಯರು, ತಮೋಯೋಗ್ಯರು, ನಿತ್ಯಸಂಸಾರಿಗಳೆಂದು ಜೀವರು ಮೂರು ವಿಧ. ಮುಕ್ತಿಯೋಗ್ಯರು ವಿಷ್ಣು-ವೈಷ್ಣವರಲ್ಲಿ ಭಕ್ತಿಮಾಡಿ ಜ್ಞಾನ ಸಂಪಾದಿಸಿ ಮುಕ್ತಿ ಹೊಂದುತ್ತಾರೆ. ಅವರಿಗೆ ಶ್ರೀಹರಿವಾಯುಗಳ ಅನುಗ್ರಹದಿಂದ ಅವರವರ ಯೋಗ್ಯತೆಗೆ ತಕ್ಕ ಪರಿಪೂರ್ಣ ಜ್ಞಾನಾನಂದಗಳು ಲಭಿಸುತ್ತವೆ. ಇದಕ್ಕೆ ವಿರುದ್ಧವಾಗಿ ದೋಷ ಎಣಿಸುವುದೇ ಸಹಜಗುಣವಾಗಿರುವ ದೈತ್ಯರು ವಿಷ್ಣು-ವೈಷ್ಣವರಲ್ಲಿ ದ್ವೇಷಮಾಡಿ ಅವರನ್ನು ನಿಂದೆ ಮಾಡುವರು. ಆದರಿಂದ ಅವರು ಅಂಧಂತಮಸ್ಸೆಂಬ ನಿತ್ಯನರಕಕ್ಕೆ ಹೋಗಿ ಬಿದ್ದು ಅಲ್ಲಿ ಶಾಶ್ವತವಾಗಿ ದುಃಖವನ್ನು ಅನುಭವಿಸುತ್ತಾರೆ. (ಆ ನಿತ್ಯನರಕದ ಯಾತನೆಯ ವರ್ಣನೆ ಮುಂದೆ ಹನ್ನೊಂದನೇ ಮತ್ತು ಹದಿಮೂರನೇ ಶ್ಲೋಕಗಳಲ್ಲಿ ಬರುವುದು.) ಹೀಗೆ ಆಯಾ ಚೇತನರ ಸಾಧನೆಗಳಿಗೆ ಅನುಗುಣವಾಗಿ ಅವರಿಗೆ ಸುಖದುಃಖಗಳನ್ನು ಕೊಡಲು

ಸಮರ್ಥವಾದ ಆ ಹರಿವಾಯುಗಳ ಪಾದರೇಣುಗಳ ಮಹಿಮೆಯನ್ನು ವರ್ಣಿಸಲು ನಾನೆಷ್ಟರವನು ? ಸರ್ವಥಾ ಅಸಮರ್ಥ ಎಂದು ಹೇಳಿಕೊಳ್ಳು-ತ್ತಾರೆ. ಈಗ ಅನ್ವಯಾರ್ಥಕ್ಕೆ ಹೋಗೋಣ.

**85. ಹರಿ-ವಾಯು ಉಭಯ-ಪರ ಅನ್ವಯಾರ್ಥ**—ಏಷಃ (ಅಹಂ)—ವಾಯುಸ್ತುತಿಯನ್ನು ರಚಿಸಲು (ಅಥವಾ ಪಾದಧೂಳಿನ ಮಹಿಮೆ-ಯನ್ನು ವರ್ಣಿಸಲು) ಉದ್ಯುಕ್ತನಾದ ಈ ನಾನು; ೧. ಜನ್ಮಾಧಿ.... ಪ್ರಾಪಕಾಣಾಂ—ಜನ್ಮ—ಜನನ, ಆಧಿ—ಮನೋರೋಗಗಳು (ಚಿಂತೆಗಳು), ವ್ಯಾಧಿ—ರೋಗರುಜಿನಗಳು ಇವುಗಳಿಗೆ (ಕ) ಉಪಾಧಿ—ಕಾರಣೀಭೂತವಾದ ಅವಿದ್ಯಾ—ಕಾಮ್ಯಕರ್ಮಗಳು, ಪ್ರತಿಹತಿ—ಮತ್ತೆಮತ್ತೆ ಬರದಂತೆ, ವಿರಹ-ಪ್ರಾಪಕಾಣಾಂ—ನಿವೃತ್ತಿಮಾಡುವಂಥಾ (ತೊಡೆದುಹಾಕುವಂಥಾ); (ಖ) ಅಥವಾ ಜನ್ಮ—ಆಧಿ-ವ್ಯಾಧಿ—ಹುಟ್ಟುವುದು, ಮನೋರೋಗ, ರೋಗರುಜಿನ-ಗಳು ಮತ್ತು, ಉಪಾಧಿ—ಶರೀರದ, ಪ್ರತಿಹತಿ—ನಾಶ (ಎಂದರೆ ದೇಹ ಬಿದ್ದು-ಹೋಗುವುದು ಅರ್ಥಾತ್ ಮರಣ), ಈ ಎಲ್ಲ ದುಃಖಗಳನ್ನೂ, ವಿರಹ-ಪ್ರಾಪಕಾಣಾಂ—(ಪುನಃ ಬರದಂತೆ) ಕೊನೆಗಾಣಿಸುವಂಥಾ ; ೨. ಅಗ್ರ್ಯಾ-ಣಾಂ—ಶ್ರೇಷ್ಠವಾದ, ಗುಣಾನಾಂ—ಜ್ಞಾನಭಕ್ತಿವೈರಾಗ್ಯಶಮದಮಾದಿ ಗುಣ-ಗಳನ್ನು, ಅರ್ಪಕಾಣಾಂ—(ಭಕ್ತರಿಗೆ) ಕೊಡುವಂಥಾ ; ೩. ಚಿರಂ—ಶಾಶ್ವತ-ವಾಗಿ ; ಉದಿತ....ದಾನಾಂ—ಉದಿತ—ಅಭಿವ್ಯಕ್ತವಾದ (ಯೋಗ್ಯತಾನುಸಾರ ಪ್ರಕಟವಾದ), ಚಿತ್—ಜ್ಞಾನ, ಆನಂದ—ಸುಖದ, ಸಂದೋಹ-ದಾನಾಂ—ಸಮೂಹವನ್ನು ಕೊಡಬಲ್ಲಂಥಾ ; ೪. ದೋಷ....ಮನಸಾಂ—ದೋಷ—ಅನ್ಯಥಾಜ್ಞಾನರಾಗದ್ವೇಷಾದಿ ದೋಷಗಳಿಂದ, ಪ್ರಮುಷಿತ—ಕಲುಷಿತವಾದ, ಮನಸಾಂ—ಮನಸ್ಸುಳ್ಳ, ದ್ವೇಷಿಣಾಂ—ದ್ವೇಷಮಾಡುವುದೇ ಹುಟ್ಟುಗುಣ-ವಾಗಿರುವ (ಆದ್ದರಿಂದಲೇ), ದೂಷಕಾಣಾಂ—ಹರಿವಾಯುಗಳನ್ನೂ ಮತ್ತು ತದ್ಭಕ್ತರನ್ನೂ ನಿಂದಿಸುತ್ತಿರುವ, ದೈತ್ಯಾನಾಂ—ದೈತ್ಯರಿಗೆ ; ಆರ್ತಿಂ—ದುಃಖ ವನ್ನು ; ಚಿರಂ—ಶಾಶ್ವತವಾಗಿ ; ಅಂಧೇ ತಮಸಿ ಅಂಧಂತಮಸ್ಸೆಂಬ ನಿತ್ಯ-ನರಕದಲ್ಲಿ, ವಿದಧತಾಂ—ಕೊಡುವಂಥಾ ; ಏತೇಷಾಂ—ಈ ಪಾದಧೂಳಿಗಳನ್ನು ; ಸಂಸ್ತವೇ— ಸ್ತೋತ್ರಮಾಡುವುದರಲ್ಲಿ, ನಾಸ್ಮಿ ಶಕ್ತಃ—ಸಮರ್ಥನಾಗಿಲ್ಲ.

**೪೯. ಭಾವಾರ್ಥ**—ಮೊದಲನೇ ಶ್ಲೋಕದಲ್ಲಿ ಶ್ರೀಹರಿಯ ಪಾದ-ಧೂಳಿಯನ್ನು ಲಕ್ಷ್ಮೀದೇವಿಯೂ ಶ್ರೀಮದಾಚಾರ್ಯರ ಪಾದಧೂಳನ್ನು ಭಾರತೀದೇವಿಯೂ ಭಕ್ತಿಯ ಭರದಿಂದ ಆದರಿಸುತ್ತಾರೆಂದು ಹೇಳಿದರು. ಎರಡನೇ ಶ್ಲೋಕದಲ್ಲಿ ಕೇವಲ ಶ್ರೀದೇವಿಯಾಗಲಿ, ಭಾರತಿಯೇ ಆಗಲಿ ಮಾತ್ರವಲ್ಲ, ಪರಂತು ಸಕಲ ದೇವತಾವೃಂದಗಳೂ ನಾನು ಮುಂದು ತಾನು ಮುಂದು ಎಂದು ಹಾತೊರೆಯುತ್ತ ಧಾವಿಸಿ ಮುಂದೆ ಬಂದು ಆ ಹರಿವಾಯುಗಳ ಪಾದಗಳಿಗೆರಗಿ ಮಣಿಸಿ ಆ ಪಾದಧೂಳನ್ನು ಧರಿಸುತ್ತಾರೆಂಮೂ ಹೇಳಿದರು. ಅವುಗಳಲ್ಲೇನು ಅಂಥಾ ಶಕ್ತಿಯಿದೆ ? ಅವರೆಲ್ಲ ಅಷ್ಟರಮಟ್ಟಿಗೆ ಗೌರವಿಸಲು ಕಾರಣವೇನು ? ಎಂದರೆ ಪಂಡಿತಾಚಾರ್ಯರು ಹೇಳುತ್ತಾರೆ—ಹೌದು, ಆ ಪಾದಧೂಳುಗಳಿಗೆ ಅಂಥಾ ವಿಶೇಷ ಮಹಿಮೆಯೇ ಇದೆ—ಎನ್ನುತ್ತಾರೆ.

(ಐತರೇಯೋಪನಿಷತ್ತಿನ ಪ್ರಾರಂಭದಲ್ಲಿ ಭಗವಂತನ ಅನಿರುದ್ಧ ಪ್ರದ್ಯುಮ್ನ ಸಂಕರ್ಷಣ ವಾಸುದೇವನೆಂಬ ನಾಲ್ಕು ರೂಪಗಳನ್ನೂ ಬ್ರಹ್ಮಾದಿ-ದೇವತೆಗಳೂ ಋಷಿಗಳೂ ಮನುಷ್ಯೋತ್ತಮರೂ ಧ್ಯಾನ ಮಾಡಿ ಉಪಾಸನೆ ಮಾಡಿದ್ದರಿಂದ ದುಃಖವನ್ನು ದಾಟಿ ಪರಮಾನಂದಾನುಭವರೂಪವಾದ ಮೋಕ್ಷವನ್ನು ಪಡೆದರೆಂದೂ ಆ ರೂಪಗಳನ್ನು ಧ್ಯಾನಿಸದೆ ಅವುಗಳಲ್ಲಿ ದ್ವೇಷಮಾಡಿದ ದೈತ್ಯದಾನವಾದಿಗಳು ನಿತ್ಯದುಃಖಮಯವಾದ ಅಂಧಂ-ತಮಸ್ಸಿನಲ್ಲಿ ಬಿದ್ದರೆಂದೂ ಹೇಳಿದೆ. ಅದರಂತೆ ಇಲ್ಲೂ ಸಹ ಆ ಪಾದಪಾಂಸು-ಗಳನ್ನು ಆರಾಧಿಸುವವರಿಗೆ ನಿತ್ಯಸುಖವಾಗುವುದೆಂದೂ ಅವುಗಳನ್ನು ದ್ವೇಷಿಸಿ ದೂಷಿಸುವವರಿಗೆ ನಿತ್ಯನರಕಾದ್ಯನರ್ಥಗಳಾಗುವುವೆಂದೂ ಆದ್ದರಿಂದಲೇ ಸಕಲ ದೇವತೆಗಳೂ ಆ ಹರಿವಾಯುಗಳ ಪಾದಪಾಂಸುಗಳನ್ನು ಅಷ್ಟು ಆದರಿಸು-ತ್ತಾರೆಂಬುದನ್ನು ಪರ್ಯಾಯದಿಂದ ತಿಳಿಸಿಕೊಡುತ್ತಾರೆ.)

ಹರಿವಾಯುಗಳ ಪಾದಧೂಳನ್ನು ಯಾವ ಸಜ್ಜನರು ಆದರಿಸಿ ಭಕ್ತಿ-ಪೂರ್ವಕವಾಗಿ ಸೇವಿಸುವರೋ ಅಂಥಾ ಭಕ್ತರಿಗೆ ಅನಾದಿಜನ್ಮಸಂಬದ್ಧವಾಗಿ ಬಂದಿರುವ ಜನನ-ಮರಣಾದಿಗಳು, ತಾಪತ್ರಯಗಳ ಮನೋವ್ಯಥೆಯ ಜೊತೆಗೆ ರೋಗರುಜಿನಗಳ ಬಾಧೆ, ಮುಪ್ಪು, ಶಕ್ತಿಹ್ರಾಸ ಇವೇ ಮೊದಲಾದ ಸಮಸ್ತಸಾಂಸಾರಿಕದುಃಖಗಳನ್ನೂ ಕೃಪಾದೃಷ್ಟಿಮಾತ್ರದಿಂದ ದೂರಮಾಡಿ

ಹಿಂದಿರುಗಿ ಬರದಂತೆ ಓಡಿಸಿಬಿಡುತ್ತಾರೆ. ಅಷ್ಟೇ ಅಲ್ಲ. ಜ್ಞಾನಭಕ್ತಿ-ವೈರಾಗ್ಯಶಮದಮಾದಿ ಸಕಲ ಸಾಧನಸಂಪತ್ತುಗಳನ್ನೂ ಅವರಿಗೆ ದೊರಕಿಸಿ ಕೊಟ್ಟು ಅವರಿಂದ ಮೋಕ್ಷಪ್ರಾಪ್ತಿಗೆ ಬೇಕಾದ ಸಕಲ ಸಾಧನಗಳನ್ನೂ ಅವರವರ ಯೋಗ್ಯತೆಗೆ ತಕ್ಕಂತೆ ಮಾಡಿಸುತ್ತಾರೆ. ಹೀಗೆ ಸಾಧನ ಸಂಪೂರ್ತಿ-ಯಾದ ಬಳಿಕ ಅವರಿಗೆ ಮೋಕ್ಷವನ್ನು ಕೊಟ್ಟು ಅವರವರ ಸ್ವರೂಪಾ-ನಂದಾವಿರ್ಭಾವವು ಪ್ರಕಟವಾಗುವಂತೆ ಅನುಗ್ರಹ ಮಾಡುತ್ತಾರೆ. ಹೀಗೆ ಮುಕ್ತರಾದ ಜೀವರು ತಾರತಮ್ಯಾನುಸಾರ ತಮ್ಮ ತಮ್ಮ ಯೋಗ್ಯತೆಗೆ ತಕ್ಕಂತೆ ದುಃಖಸ್ಪರ್ಶವೂ ಇಲ್ಲದ ಪೂರ್ಣಸುಖವನ್ನು ಶಾಶ್ವತವಾಗಿ ಅನುಭವಿಸುತ್ತಿರುತ್ತಾರೆ. ಹೀಗೆ ಆ ಪಾದಧೂಳಿನ ಸೇವೆಯಿಂದ ಶಾಶ್ವತ-ಸುಖ ಲಭಿಸುವುದರಿಂದ ದೇವತೆಗಳು ಆ ಪಾದಧೂಳಿಗಾಗಿ ಅಷ್ಟು ಹಾತೊರೆ-ಯುತ್ತಾರೆ ಎಂದು ಹೇಳಿದಂತಾಯಿತು.

ಇನ್ನು ಸ್ವಭಾವತಃ ದೋಷಗಳನ್ನೇ ಹುಡುಕುವಂಥಾವರೂ ಪರನಿಂದಾ-ಸಕ್ತರೂ ಆದ ದೈತ್ಯರು ಶ್ರೀಹರಿವಾಯುಗಳಲ್ಲಿ ದ್ವೇಷ ಮಾಡುತ್ತಾ ಅವರಲ್ಲಿ ಇಲ್ಲದ ದೋಷಗಳನ್ನೇ ಆರೋಪಣೆ ಮಾಡಿ ನಿಂದಿಸುತ್ತಾ ಸದಾ ಅವರಿಗೆ ಅಪಚಾರ ಮಾಡುತ್ತಲೇ ಇರುವರು. ಇದರಿಂದ ಅವರು ನಿತ್ಯ-ದುಃಖಮಯವಾದ ಅಂಧಂತಮಸ್ಸಿನಲ್ಲಿ ಬಿದ್ದು ನಾನಾವಿಧ ಕ್ಲೇಶಗಳನ್ನು ಅನುಭವಿಸಿ ನಿರಂತರವಾಗಿ ದುಃಖಭಾಗಿಗಳಾಗುತ್ತಾರೆ.

ಹೀಗೆ ಆ ಶ್ರೀಹರಿವಾಯುಗಳ ಪಾದಗಳು ಸ್ಮರಣ ಮಾತ್ರದಿಂದಲೇ ಸದ್ಗತಿಯನ್ನೂ ದ್ವೇಷಾಸೂಯೆಗಳಿಂದ ದುರ್ಗತಿಯನ್ನೂ ಕೊಡಲು ಸಮರ್ಥ-ವಾಗಿವೆ. ಅಂಥಾ ಪಾದಧೂಳಿಯ ಮಹಿಮೆಯನ್ನು ಯಃಕಶ್ಚಿನ್ಮಾತ್ರನಾದ ನಾನು (ತ್ರಿವಿಕ್ರಮಪಂಡಿತಾಚಾರ್ಯರು) ಸಮಗ್ರವಾಗಿ ವರ್ಣಿಸಲು ಸಮರ್ಥನಲ್ಲ ಎಂದು ಹೇಳಿಕೊಂಡು ಸ್ವಾಹಂಕಾರಖಂಡನೆ ಮಾಡಿಕೊಂಡಿ-ದ್ದಾರೆ.

**87. ವಿಶೇಷಾರ್ಥ—1) 'ಏತೇಷಾಂ ಏಷಃ'** ಎಂಬಲ್ಲಿ ಏಷಃ ಎಂಬುದು ಸರ್ವನಾಮವೆಂದು ಭಾವಿಸಿ ಅದನ್ನು ಅಧ್ಯಾಹೃತವಾದ ಅಹಂ ಶಬ್ದ-ದೊಡನೆ ಕೂಡಿ ಸಂಸ್ತವೇ ನಾಸ್ಮಿ ಶಕ್ತಃ ಎಂದರೆ ಈ ನಾನು ಸ್ತುತಿಸಲು

ಅರ್ಹನಲ್ಲ ಎಂದು ಈ ಮೊದಲು ಅರ್ಥ ಹೇಳಿದ್ದೆವು. ಈಗ ರಾ. ವ್ಯಾಖ್ಯಾನ ತೋರಿಸುವಂತೆ **ಏಷ** ಎಂಬುದನ್ನು ಸರ್ವನಾಮವೆಂದು ಭಾವಿಸದೆ 'ಇಷು ಇಚ್ಛಾಯಾಂ' (ತು.ಪ.) ಎಂಬ ಧಾತುವಿನಿಂದ ನಿಷ್ಪನ್ನವಾದ ರೂಪವೆಂದು ಭಾವಿಸಿ ಏಷ ಎಂದೇ ಪದಚ್ಛೇದ ಮಾಡಿದರೆ ಆಗ ಹೇ ಏಷ ! ಎಂದು ಸಂಬೋಧನಾರೂಪವಾಗುತ್ತದೆ. ಇದಕ್ಕೆ ಹೇ ಇಚ್ಛಾರೂಪಿಯಾದವರೇ ಎಂದು ಶ್ರೀಹರಿಗೆ ಮುಖ್ಯವಾಗಿಯೂ ವಾಯುವಿಗೆ ಅಮುಖ್ಯವಾಗಿಯೂ ಅನ್ವಯಿಸುತ್ತದೆ. ಇಚ್ಛತೀತಿ ಏಷಃ–ಇಚ್ಛಾರೂಪಃ । ತಸ್ಯ ಸಂಬುದ್ಧಿಃ ಹೇ ಏಷ । 'ಇಗುಪಧಜ್ಞಾಪ್ರೀಕಿರಃ ಕಃ' (ಪಾ. ೩/೧/೧೩೫) ಎಂಬಂತೆ ಕ ಪ್ರತ್ಯಯ ಬಂದಿದೆ. ಸ್ವೇಚ್ಛಾರೂಪಿಯಾದ ವಿಷ್ಣುವೇ ಅಥವಾ ಶ್ರೀಹರೀ-ಚ್ಛಾನುಸಾರವಾಗಿ ವರ್ತಿಸುವ ಹೇ ವಾಯುದೇವರೇ ಎಂದರ್ಥ. ಇದಕ್ಕೆ 'ತೇ ಅಥವಾ ತವ–ನಿನ್ನ, ನಿಮ್ಮ' ಎಂಬ ಯೋಗ್ಯಪದವನ್ನು ಅಧ್ಯಾಹಾ ಮಾಡಿಕೊಂಡು—ತವ (ತೇ) ಸಂಸ್ತವೇ ನಾಸ್ಮಿ ಶಕ್ತಃ ಎಂದು ಅನ್ವಯಿಸಿ-ಕೊಳ್ಳಬೇಕಾಗುತ್ತದೆ. (ಪು.ರಾ.)

2) **ಚಿರಮುದಿತ....ದಾನಾಂ** ಎಂಬುದಕ್ಕೆ ಮೇಲೆ ಅರ್ಥ ಹೇಳುವಾಗ ಜ್ಞಾನಾನಂದವನ್ನು ಕೊಡುವಂಥಾ ಎಂದು ನೇರವಾಗಿ ಪಾದಪಾಂಸುಗಳಿಗೇ ವಿಶೇಷಣ ಮಾಡಿ ಅರ್ಥ ಹೇಳಲಾಗಿತ್ತು. ಆದರೆ ಹೀಗೆ ಪಾದಪಾಂಸುಗಳಿಗೇ ನೇರವಾಗಿ ಅನ್ವಯಿಸದೆ ಹರಿಗೇ ವಿಶೇಷಣವಾಗುವಂತೆ ಅರ್ಥ ಹೇಳುವುದಕ್ಕೂ ಬರುತ್ತದೆ ಎಂಬುದನ್ನು ರಾ. ದಲ್ಲಿ ಎರಡು ಪ್ರಕಾರ ತೋರಿಸಿಕೊಟ್ಟಿದ್ದಾರೆ. (ಕ) ಚಿರಂ–ಅನಾದಿನಿತ್ಯಕಾಲದಲ್ಲಿ (ಶಾಶ್ವತವಾಗಿ), ಉದಿತ–ಅಭಿವ್ಯಕ್ತವಾದ (ಅನುಭೂತವಾದ) ಚಿತ್-ಆನಂದ–ಜ್ಞಾನಾನಂದಗಳ, ಸಂದೋಹ–ಸಮೂ-ಹವೇ ಸ್ವರೂಪವಾಗಿರುವ ಶ್ರೀಹರಿಯನ್ನು, ದಾನಾಂ–ಕೊಡುವಂಥಾ ಪಾದ-ಪಾಂಸುಗಳು. ಈ ಅರ್ಥದಂತೆ ಜ್ಞಾನಾನಂದವನ್ನು ಕೊಡುವವನು ಶ್ರೀಹರಿ ; ಅವನಿಗೇ ಅವು ಇಲ್ಲದಿದ್ದರೆ ಇತರರಿಗೆ ಕೊಡುವುದು ಹೇಗೆ ? ಎಂಬ ಶಂಕಾ-ಪರಿಹಾರಕ್ಕಾಗಿ, ಅವನು (ಆ ಹರಿಯು) ಶಾಶ್ವತವಾಗಿ ಜ್ಞಾನಾನಂದಮಯ-ಸ್ವರೂಪನು ; ಅಂಥಾ ಹರಿಯನ್ನು ಈ ಪಾದಪಾಂಸುಗಳು ಕೊಡುತ್ತವೆ ಎಂಬುದು ಒಂದು ಅರ್ಥ.

(ಖ) ಎರಡನೇ ಅರ್ಥದಲ್ಲಿ ಸಂ-ದೋಹ ಎಂಬುದಕ್ಕೆ ಬೇರೆ ರೀತಿ ಅರ್ಥ ಹೇಳಿದ್ದಾರೆ. ಸಂ(ಉಪಸರ್ಗ-)ಸಮ್ಯಕ್–ಚೆನ್ನಾಗಿ, ದುಹ ಪ್ರಪೂರಣೇ(ಅದಾದಿ. ಉಭ.)–ಹಾಲುಕರೆಯುವುದು ಸುರಿಸುವುದು ಎಂಬ ಧಾತುವಿನಿಂದ ದೋಹ–ದೋಹನ ಮಾಡುವಂಥಾ, ಸುರಿಸುವಂಥಾ ಎಂದರ್ಥ ಮಾಡಬೇಕು. ಅವರಂತೆ—ಚಿರಂ–ಬಹುಕಾಲಪರ್ಯಂತ (ಶಾಶ್ವತವಾದ), ಉದಿತ–ಅಭಿವ್ಯಕ್ತವಾದಂಥಾ, ಚಿತ್-ಆನಂದ–ಜ್ಞಾನಾನಂದಗಳನ್ನು, ಸಂ–ಚೆನ್ನಾಗಿ, ದೋಹ–ದೋಹನಮಾಡುವಂಥಾ (ಕೊಡುವಂಥಾ, ಸುರಿಸುವಂಥಾ) ಶ್ರೀಹರಿಯನ್ನು, ದಾನಾಂ–ಕೊಡುವಂಥಾ ಪಾದಪಾಂಸುಗಳು.

ಹೀಗೆ ಅರ್ಥ ಹೇಳುವುದರಿಂದ ಏನು ಲಾಭವೆಂದರೆ—ಬ್ರಹ್ಮವಾಯುಗಳು ಹಾಗೂ ಸನಕಾದಿಗಳೇ ಮೊದಲಾದ ಏಕಾಂತಭಕ್ತರು ಶ್ರೀಹರಿಯನ್ನಾಗಲಿ ವಾಯುವನ್ನಾಗಲಿ ಎಲ್ಲರಂತೆ ಜ್ಞಾನಾನಂದಗಳ ಲಾಭಕ್ಕಾಗಿ ಸ್ತುತಿಸುವುದಿಲ್ಲ. ಅವರು ಕೇವಲ ವಿಷ್ಣುಪ್ರೀತ್ಯರ್ಥವಾಗಿಯೇ ಸ್ತುತಿಸುತ್ತಾರೆ. ಇದನ್ನು 'ಏಕಾಂತಾನಾಂ ನ ಕಸ್ಯಚಿತ್ । ಅರ್ಥೇ ನಾರಾಯಣೋ ದೇವಃ ಸರ್ವಮನ್ಯತ್ ತದರ್ಥಕಮ್ ॥'–ಏಕಾಂತಭಕ್ತರಾದ ಸನಕಾದಿಗಳಿಗೆ ಧ್ಯಾನಾದಿಸಾಧನಗಳಿಗೆ ಬೇರೆ ಯಾವ ಉದ್ದೇಶವೂ ಇರುವುದಿಲ್ಲ. ನಾರಾಯಣನ ಪ್ರೀತಿಯೊಂದೇ ಅವರ ಉದ್ದೇಶ. ಮಿಕ್ಕ ಎಲ್ಲ ಉಪಾಸನೆಗಳೂ ಆ ಭಗವತ್ಪ್ರೀತ್ಯರ್ಥವಾಗಿಯೇ ಮಾಡಲ್ಪಡುತ್ತವೆ—ಎಂಬ ಪ್ರಮಾಣ ಹೇಳುತ್ತದೆ. ಅದರಂತೆ ಅಂಥಾ ಏಕಾಂತಭಕ್ತರಿಗೆ ಈ ಪಾಂಸುಗಳು ಆ ಶ್ರೀಹರಿಯನ್ನೇ ಎಂದರೆ ಅವನ ಪರಮಾನುಗ್ರಹವನ್ನೇ ಕೊಡಿಸುತ್ತವೆ ಎಂದು ತಿಳಿಯಬೇಕು.

3) **ಪ್ರತಿಹತಿ–ವಿರಹಪ್ರಾಪಕಾಣಾಂ॥** ಜನ್ಮಾಧಿವ್ಯಾಧಿ—ಎಂಬಲ್ಲಿ ನೇರವಾಗಿ ಜನನಾದ್ಯನಿಷ್ಟಗಳನ್ನು ದೂರಮಾಡುವಂಥವು ಎಂದು ಹೇಳುವುದಕ್ಕಿಂತಲೂ ಜನ್ಮಾಧಿವ್ಯಾಧಿಗಳಿಗೆ ಕಾರಣೀಭೂತವಾದ ಪಾಪಗಳನ್ನು ಎಂದು ಲಕ್ಷಣಾವೃತ್ತಿಯಿಂದ ಗ್ರಹಣಮಾಡಬೇಕು. ಈ ಪಾಪಗಳಲ್ಲಿ 'ಓಂ ತದಧಿಗಮ—' ಎಂಬ ಬ್ರಹ್ಮಸೂತ್ರದಲ್ಲಿ (೪ ಅ., ೧ ಪಾ., ೧೩ಸೂ.) ಹೇಳಿದಂತೆ ಹಿಂದಿನ ಪಾಪಗಳೆಲ್ಲ ಸುಟ್ಟುಹೋಗುವುವೆಂದೂ, ಮುಂದಿನ

ಪಾಪಗಳು, ಕಮಲದ ಎಲೆಗೆ ನೀರು ಅಂಟಿಕೊಳ್ಳದಂತೆ, ಲೇಪವೇ ಆಗು-ವುದಿಲ್ಲವೆಂದೂ ಅರ್ಥಮಾಡಬೇಕು. ಆ ಪ್ರಕಾರ ಹಿಂದಿನ ಪಾಪಗಳಿಗೆ **ಪ್ರತಿಹತಿ**–ನಾಶ (ಸುಟ್ಟು ಹೋಗುವಿಕೆ) ವನ್ನೂ, ಮುಂದಿನ ಪಾಪಗಳಿಗೆ **ವಿರಹ**–ಲೇಪಾಭಾವ (ಅಶ್ಲೇಷ)ವನ್ನೂ, ಪ್ರಾಪಕಾಣಾಂ–ಕೊಡುವಂಥಾ, ಎಂದು ಅರ್ಥ ಹೇಳಬೇಕು. (ರಾ.)

4) ಪಾದಪಾಂಸುಗಳಿಗೆ ಸ್ತುತ್ಯರ್ಹತ್ವವೇ ಇಲ್ಲವೆಂಬ ಶಂಕಾಪರಿಹಾರ ಕ್ಕಾಗಿ 1. ಜನ್ಮಾಧಿ....ಪ್ರಾಪಕಾಣಾಂ 2. ಗುಣಾನಾಂ ಅರ್ಪಕಾಣಾಂ, 3. ಚಿದಾನಂದಸಂದೋಹದಾನಾಂ 4. ದೈತ್ಯಾನಾಂ ಅಂಧೇ ತಮಸಿ ವಿದಧತಾಂ ಎಂದು ನಾಲ್ಕು ವಿಶೇಷಣಗಳನ್ನು ಕೊಟ್ಟಿದ್ದಾರೆಂದು ತಿಳಿಯ-ಬೇಕು. (ರಾ.)

**5) ಶಕ್ತಃ ನಾಸ್ಮಿ**—ಶಕ್ತಃ ಎಂಬುದು ಕರ್ಮಣಿ ಭೂತಕೃದಂತರೂಪ. ಅಸ್ಮಿ ಎಂಬುದು ವರ್ತಮಾನಕಾಲ. ಹೀಗೆ ಬೇರೆ ಬೇರೆ ಕಾಲದ ಧಾತು ಗಳಿಗೆ ಹೇಗೆ ಸಂಬಂಧ ಎಂದರೆ 'ಧಾತುಸಂಬಂಧೇ ಪ್ರತ್ಯಯಾಃ' (ಪಾ. ೩/೪/೧) ಎಂಬ ಸೂತ್ರದಂತೆ ಧಾತುಗಳ ಅರ್ಥದಿಂದ ವಿಶೇಷಣ-ವಿಶೇಷ್ಯ ಭಾವವಿದ್ದರೆ ಭಿನ್ನಕಾಲಗಳ ಸಂಬಂಧವು ಹೊಂದುತ್ತದೆ ಎಂದು ಹೇಳಿರುವುದ-ರಿಂದ ಪ್ರಕೃತ ಶಕ್ತಃ ಎಂಬುದು ಭೂತಕಾಲವಾಗಿದ್ದರೂ ವಿಶೇಷಣವಾದ್ದ-ರಿಂದ ಅಹಂ ಎಂಬ ಅಧ್ಯಾಹೃತ ವಿಶೇಷ್ಯ ವರ್ತಮಾನದಲ್ಲಿದ್ದರೂ ತಪ್ಪಿಲ್ಲ ಎಂದು ತಿಳಿಯಬೇಕು. (ಕಕ., ವಿ.)

**88. (ಶ್ಲೋಕದ ಭಾವಾರ್ಥ) ಪಾದಪಾಂಸುಗಳ ಮಹಿಮೆ—** ಶ್ರೀಹರಿವಾಯುಗಳ ಪಾದಧೂಳಿಗಳು ಅಸಾಧಾರಣವಾದ ಮಹಿಮೆಯುಳ್ಳವು-ಗಳು. ಕೊಟ್ಟರೆ ವರ, ಇಟ್ಟರೆ ಶಾಪ ಎಂಬಂತೆ ಅವುಗಳನ್ನು ಸೇವಿಸುವವರಿಗೆ ಸಕಲೇಷ್ಟಾರ್ಥಪ್ರದವಾಗಿದ್ದರೆ ಅವುಗಳನ್ನು ದ್ವೇಷಿಸಿ ತಿರಸ್ಕರಿಸುವ ಮಂದ-ಭಾಗ್ಯರಿಗೆ ಅನಿಷ್ಟಕಾರಕವೂ ಆಗಿವೆ. ಹೇಗೆಂದರೆ—ಶ್ರೀಹರಿವಾಯುಗಳನ್ನು ಭಜಿಸುವ ಭಕ್ತಜನರಿಗೆ ಕಾಲಕಾಲಕ್ಕೆ ಬಂದೊದಗುವ ಜನನ–ಮರಣ ರೋಗ-ರುಜಿನ ಕಷ್ಟಪಾರ್ಪಣ್ಯಗಳೇ ಮೊದಲಾದ ಸಕಲ ಅನಿಷ್ಟಗಳನ್ನೂ ನಿವಾರಣೆ ಮಾಡಿ ಅವರಿಗೆ ತಾತ್ಕಾಲಿಕ ಸುಖವನ್ನು ಕೊಡುವುದರ ಜೊತೆಗೆ

ವಿವಿಧ ಸಾಂಸಾರಿಕ ತಾಪತ್ರಯಗಳಿಗೆ ಮೂಲಕಾರಣವಾದ ಅವಿದ್ಯಾಕಾಮ್ಯ ಕರ್ಮಗಳನ್ನೇ ತೊಡೆದುಹಾಕಿ ಜ್ಞಾನ ಭಕ್ತಿ ವೈರಾಗ್ಯಗಳನ್ನು ಕರುಣಿಸಿ ಅದರ ಮೂಲಕ ಸ್ವರೂಪಾನಂದಾವಿರ್ಭಾವಕ್ಕೆ ನೆಲೆಮನೆಯಾದ ಮೋಕ್ಷ-ಪದವಿಯನ್ನೇ ಕೊಡಿಸಿಬಿಡುತ್ತವೆ. ಇನ್ನು ಮೋಕ್ಷಸುಖಕ್ಕಾಗಿಯೂ ಆಸೆ-ಪಡದಂಥಾ ಏಕಾಂತಭಕ್ತರಿಗೆ ಜ್ಞಾನಾನಂದಾದ್ಯನಂತಗುಣನಿಧಿಯಾದ ಶ್ರೀಹರಿಯ ಪರಮಪ್ರಸಾದವನ್ನೇ ಕೊಡುವಂಥವೂ ಆಗಿವೆ.

ಇದಕ್ಕೆ ಪ್ರತಿಯಾಗಿ ಯಾವ ದೈತ್ಯದಾನವಾದಿ ತಾಮಸಜೀವಿಗಳು ಆ ಪಾದಪಾಂಸುಗಳನ್ನು ದ್ವೇಷಿಸುತ್ತಾ ಅವುಗಳನ್ನು ನಿಂದಿಸುತ್ತಾ ತಮ್ಮ ದುಷ್ಟಸ್ವಭಾವವನ್ನು ಪ್ರಕಟಿಸುವರೋ ಅಂಥವರನ್ನು ಅಂಧಂತಮಸ್ಸೆಂಬ ನಿತ್ಯನರಕಕ್ಕೆ ತಳ್ಳುವುದರಿಂದ ಅವರನ್ನು ನಿತ್ಯದುಃಖಕ್ಕೆ ಗುರಿಮಾಡುತ್ತವೆ. (ನಿತ್ಯನರಕದಲ್ಲಿ ಆ ತಾಮಸಜೀವಿಗಳು ಅನುಭವಿಸುವ ಘೋರಯಾತನೆಗಳ ವರ್ಣನೆಯು ಮುಂದೆ ೧೧ ಮತ್ತು ೧೩ನೇ ಶ್ಲೋಕಗಳಲ್ಲಿ ಬಂದರೆ ಮೋಕ್ಷದಲ್ಲಿ ಮುಕ್ತರು ಅನುಭವಿಸುವ ಸ್ವರೂಪಾನಂದದ ವರ್ಣನೆಯು ೯ ಮತ್ತು ೧೦ನೇ ಶ್ಲೋಕಗಳಲ್ಲಿ ಬರುವುದು.)

ಈ ಪ್ರಕಾರ ಬೇಡಿದ ಇಷ್ಟಾರ್ಥಗಳನ್ನು ಕೊಡಬಲ್ಲವುಗಳೂ ನಿಂದಿಸಿ ದ್ವೇಷಿಸಿದರೆ ಅನಿಷ್ಟಪ್ರದಗಳೂ ಆದ ಆ ಶ್ರೀಹರಿವಾಯುಗಳ ಮಹಿಮೆಯು ಅಗಾಧವಾದುದರಿಂದ ಅಲ್ಪಮತಿಯಾದ ನಾನು ಅವುಗಳನ್ನು ಸಾಕಲ್ಯೇನ ವರ್ಣಿಸಲು ಅಸಮರ್ಥನಾದರೂ ಭಕ್ತಿಪರವಶತೆಯಿಂದ ಕಿಂಚಿನ್ಮಾತ್ರ ವರ್ಣಿ-ಸಿದ್ದೇನೆಂದು ಭಾವ.

**89. ನಾಲ್ಕನೇ ಶ್ಲೋಕಕ್ಕೆ ಅವತಾರಿಕೆ**—ಶ್ರೀಹರಿವಾಯುಗಳ ಪಾದಕಮಲಗಳ ಧೂಳಿಯ ಮಹಿಮೆಯನ್ನೇ ವರ್ಣಿಸಲು ಅಸಮರ್ಥನಾದ ನಾನು ಆ ಶ್ರೀಹರಿವಾಯುಗಳ ಸ್ವರೂಪವನ್ನು ವರ್ಣಿಸುವುದಂತೂ ದೂರ-ತೋಪಾಸ್ತವೆಂದು ಹೇಳುತ್ತಾ ಪಂಡಿತಾಚಾರ್ಯರು ತಮ್ಮ ಅಹಂಕಾರವನ್ನು ಈ ಶ್ಲೋಕದಿಂದಲೂ ಖಂಡಿಸಿಕೊಳ್ಳುತ್ತಾರೆ (ಕಕ., ವಿಶ್ವ.)

**ಅಸ್ಯಾವಿಷ್ಕರ್ತುಕಾಮಂ, ಕಲಿಮಲಕಲುಷೇ-**
**ಽಸ್ಮಿನ್ ಜನೇಜ್ಞಾನಮಾರ್ಗಂ।**
**ವಂದ್ಯಂ ಚಂದ್ರೇಂದ್ರ-ರುದ್ರ—ದ್ಯುಮಣಿ-ಫಣಿವಯೋ—**
**ನಾಯಕಾದ್ಯೈರಿಹಾದ್ಯ ॥**
**ಮಧ್ವಾಖ್ಯಂ ಮಂತ್ರಸಿದ್ಧಂ, ಕಿಮುತಕೃತವತೋ,**
**ಮಾರುತಸ್ಯಾವತಾರಂ ।**
**ಪಾತಾರಂ ಪಾರಮೇಷ್ಠ್ಯಂ, ಪದಮಪವಿಪದಃ,**
**ಪ್ರಾಪ್ತುರಾಪನ್ನಪುಂಸಾಮ್ ॥ ೪ ॥**

**ಪದಚ್ಛೇದ**—ಅಸ್ಯ, ಆವಿಷ್ಕರ್ತುಕಾಮಂ, ಕಲಿಮಲಕಲುಷೇ, ಅಸ್ಮಿನ್, ಜನೇ, ಜ್ಞಾನಮಾರ್ಗಂ, ವಂದ್ಯಂ, ಚಂದ್ರೇಂದ್ರ....ನಾಯಕಾದ್ಯೈಃ, ಇಹ, ಅದ್ಯ, ಮಧ್ವಾಖ್ಯಂ, ಮಂತ್ರಸಿದ್ಧಂ, ಕಿಮುತ(ಕಿಂ+ಉತ), ಕೃತ-ವತಃ, ಮಾರುತಸ್ಯ, ಅವತಾರಂ, ಪಾತಾರಂ, ಪಾರಮೇಷ್ಠ್ಯಂ, ಪದಂ, ಅಪವಿಪದಃ, ಪ್ರಾಪ್ತುಃ, ಆಪನ್ನಪುಂಸಾಮ್ ॥

**90. ವಿಶ್ಲೇಷಣೆ**—ಹಿಂದಿನ ಶ್ಲೋಕದಿಂದ 'ಏಷಃ (ಅಹಂ) ಸಂಸ್ತವೇ ಶಕ್ತಃ ನಾಸ್ಮಿ' ಎಂಬ ಪದಗಳನ್ನು ಆವೃತ್ತಿಮಾಡಿಕೊಂಡು ಸೇರಿಸಿ-ಕೊಳ್ಳಬೇಕು. ಪ್ರಾರಂಭದಲ್ಲಿರುವ ಅಸ್ಯ ಎಂಬ ಸರ್ವನಾಮವನ್ನು ಮೂರನೇ ಪಾದದ ಕೊನೆಯಲ್ಲಿರುವ ಮಾರುತಸ್ಯ ಎಂಬುದರೊಡನೆ ಸೇರಿಸಿ-ಕೊಳ್ಳಬೇಕು. ಆಗ—ಅಸ್ಯ ಮಾರುತಸ್ಯ ಸಂಸ್ತವೇ ಏಷಃ (ಅಹಂ) ಶಕ್ತಃ ನಾಸ್ಮಿ ಕಿಮುತ ಎಂಬುದೇ ಈ ಶ್ಲೋಕದ ಪ್ರಧಾನವಾಕ್ಯ. ಇದಕ್ಕೆ—ಈ ಶ್ರೀಹರಿಯನ್ನೂ ವಾಯುದೇವರನ್ನೂ ಸ್ತೋತ್ರ ಮಾಡುವುದರಲ್ಲಿ ನಾನು ಸಮರ್ಥನಲ್ಲವೆಂದು ಹೇಳುವುದೇನಿದೆ ? ಎಂದು ಅರ್ಥ. ಈಗ ಮಾರುತಸ್ಯ ಎಂಬುದಕ್ಕೆ 1. ಅಪವಿಪದಃ, 2. ಪಾರಮೇಷ್ಠ್ಯಂ ಪದಂ ಪ್ರಾಪ್ತುಃ, 3. ಮಧ್ವಾಖ್ಯಂ ಅವತಾರಂ ಕೃತವತಃ ಎಂದು ಮೂರು ವಿಶೇಷಣಗಳನ್ನು ಕೊಟ್ಟಿದ್ದಾರೆ. ಮೂರನೇ ವಿಶೇಷಣದಲ್ಲಿರುವ ಮಧ್ವಾಖ್ಯಂ ಅವತಾರಂ ಎಂಬುದಕ್ಕೆ ಪುನಃ 1. ಕಲಿಮಲಕಲುಷೇ ಅಸ್ಮಿನ್ ಜನೇ ಜ್ಞಾನಮಾರ್ಗಂ ಆವಿಷ್ಕರ್ತುಕಾಮಂ, 2. ಚಂದ್ರೇಂದ್ರ....ನಾಯಕಾದ್ಯೈಃ ವಂದ್ಯಂ,

3. ಮಂತ್ರಸಿದ್ಧಂ, 4. ಆಪನ್ನಪುಂಸಾಂ ಪಾತಾರಂ ಎಂದು ನಾಲ್ಕು ವಿಶೇಷಣಗಳನ್ನು ಕೊಟ್ಟಿದ್ದಾರೆ. ಪೂರ್ವಾರ್ಧದ ಕಡೆಯಲ್ಲಿರುವ ಇಹ, ಅದ್ಯ ಎಂಬ ಪದಗಳನ್ನು ಯಥೋಚಿತವಾಗಿ 'ಕಲಿಮಲಕಲುಷೇ' ಎಂಬುದರ ಜೊತೆಯಾಗಲಿ, ಮಧ್ವಾಖ್ಯಂ ಅವತಾರಂ ಎಂಬುದರ ಜೊತೆಯಾಗಲಿ ಸೇರಿಸಿ-ಕೊಳ್ಳಬಹುದು.

ಶ್ರೀಹರಿಯ ಪರವಾಗಿ ಅರ್ಥಮಾಡಿದಾಗ ಮಧ್ವಾಖ್ಯಂ ಅವತಾರಂ ಎಂಬುದಕ್ಕೆ 'ವೇದವ್ಯಾಸರೆಂಬ ಅವತಾರವನ್ನು' ಎಂದೂ, ವಾಯುಪರವಾಗಿ ಹೇಳುವಾಗ ಮಧ್ವಾಚಾರ್ಯರೆಂಬ ಅವತಾರವನ್ನು ಎಂದೂ ಅರ್ಥಮಾಡ-ಬೇಕು. ಶ್ರೀಹರಿಯು ವ್ಯಾಸರೂಪದಿಂದ ಅವತಾರ ಮಾಡಿ ಸಜ್ಜನೋದ್ಧಾರ ಮಾಡಿದನು. ವಾಯುದೇವರು ಮಧ್ವಾಚಾರ್ಯರಾಗಿ ಅವತಾರವೆತ್ತಿ ಸಜ್ಜನ-ರನ್ನು ಸಲಹಿದರು. ಇಂಥಾ ಮಹಾನುಭಾವರನ್ನು ಸಂಪೂರ್ಣವಾಗಿ ವರ್ಣಿ-ಸಲು ನಾನು ಸರ್ವಥಾ ಅಸಮರ್ಥನೆಂದು ಹೇಳುವುದೇನಿದೆ ? ಎಂಬುದೇ ಶ್ಲೋಕಾಭಿಪ್ರಾಯ. ಈಗ ಕಠಿಣ ಶಬ್ದಗಳ ಅರ್ಥಕ್ಕೆ ಹೋಗೋಣ.

**91. ಅಸ್ಯ** ಎಂಬುದು ಇದಂ ಎಂಬ ಸರ್ವನಾಮದ ಪುಲ್ಲಿಂಗ ರೂಪದ ಷಷ್ಠೀ ಏಕವಚನರೂಪ. ಇದಕ್ಕೆ 'ಇವನ' ಎಂಬುದು ಸಾಮಾ-ನ್ಯಾರ್ಥ. ಸಂಸ್ಕೃತದಲ್ಲಿ ಇವನು ಎಂಬುದಕ್ಕೆ ಅಯಂ, ಏಷಃ, ಅಸೌ ಎಂದು ಮೂರು ಪದಗಳಿವೆ. ಅಯಂ ಎಂಬುದು ಇದಂ ಶಬ್ದದ ಪುಲ್ಲಿಂಗ ಪ್ರಥಮಾವಿಭಕ್ತಿ ಏಕವಚನರೂಪ ; ಏಷಃ ಎಂಬುದು ಏತದ್ ಶಬ್ದದ ರೂಪ ; ಅಸೌ ಎಂಬುದು ಅದಸ್ ಶಬ್ದದ ರೂಪ, ಮೂರಕ್ಕೂ ಇವನು ಎಂದೇ ಅರ್ಥವಾದರೂ ಪ್ರಯೋಗದಲ್ಲಿ ಸೂಕ್ಷ್ಮವಾದ ವ್ಯತ್ಯಾಸ-ವಿದೆ. ಅದನ್ನು ಈ ಕಾರಿಕೆ ತಿಳಿಸುತ್ತದೆ—

ಆರ್ಯಾವೃತ್ತ

ಇದಮಸ್ತು ಸನ್ನಿಕೃಷ್ಟೇ ಸಮೀಪತರವರ್ತಿ ಚೈತದೋ ರೂಪಮ್ ।
ಅದಸಸ್ತು ವಿಪ್ರಕೃಷ್ಟೇ ತದಿತಿ ಪರೋಕ್ಷೇ ವಿಜಾನೀಯಾತ್ ॥

(ಅರ್ಥ) ಇದಂ ಶಬ್ದವನ್ನು ಬುದ್ಧಿಸನ್ನಿಹಿತವಾದ (ಎಂದರೆ ವಿಚಾರ ಮಾಡುತ್ತಿರುವ) ವಸ್ತುವನ್ನು ನಿರ್ದೇಶಿಸುವುದಕ್ಕೆ ಉಪಯೋಗಿಸಬೇಕು.

ಇನ್ನೂ ಬಹಳ ಹತ್ತಿರ ಇರುವ ಎಂದರೆ ಕೈತೋರಿಸಿ ಹೇಳುವುದಕ್ಕೆ ಆಗುವಂಥಾ ವಸ್ತುವನ್ನು ನಿರ್ದೇಶಿಸಲು ಏತತ್ (ಏಷಃ, ಏಷಾ) ಶಬ್ದವನ್ನು ಬಳಸಬೇಕು. ಕಣ್ಣಿಗೆ ಕಾಣಿಸದ ಆದರೂ ಪ್ರಸಕ್ತವಾದ ವಸ್ತುವನ್ನು ಸೂಚಿಸಲು ಅದಸ್ (ಅಸೌ) ಶಬ್ದವನ್ನು ಉಪಯೋಗಿಸಬೇಕು. ಕಣ್ಣಿಗೆ ಕಾಣಿಸದೆ ಇರುವ ಅಥವಾ ಪ್ರಸಕ್ತಿಯಿಲ್ಲದ ವಸ್ತುವನ್ನು ಹೇಳುವಾಗ ತದ್ (ಸಃ, ಸಾ, ತತ್)– ಅವನು, ಅವಳು, ಅದು ಎಂಬ ಪದವನ್ನು ಪ್ರಯೋಗಿಸಬೇಕೆಂಬುದು ಶ್ಲೋಕದ ಅರ್ಥ.

ಪ್ರಕೃತಸಂದರ್ಭದಲ್ಲಿ ಮೂರನೇ ಶ್ಲೋಕದಲ್ಲಿ ಹರಿವಾಯುಗಳ ಸ್ತುತಿಯು ಪ್ರಸಕ್ತವಾದುದರಿಂದ ಈಗ ನಾಲ್ಕನೇ ಶ್ಲೋಕದಲ್ಲಿ **ಅಸ್ಯ** ಎಂದರೆ ಇವರ ಎಂದರೆ ಶ್ರೀಹರಿಯ ಅಥವಾ ವಾಯುವಿನ ಎಂದು ಅರ್ಥವಾಗುತ್ತದೆ. ಮೂರನೇ ಶ್ಲೋಕದಲ್ಲಿರುವ **ಏತೇಷಾಂ** ಎಂಬುದು ವರ್ಣನೆ ಮಾಡುತ್ತಿರುವುದರಿಂದ ಅತ್ಯಂತ ಸಮೀಪದಲ್ಲಿರುವ ಬುದ್ಧಿಸ್ಥವಾದ ಶ್ರೀಹರಿಯ ಅಥವಾ ಶ್ರೀಮದಾನಂದತೀರ್ಥರ 'ಪಾದಪಾಂಸು'ಗಳಿಗೆ ಅನ್ವಯಿಸುತ್ತದೆಯೆಂಬುದನ್ನೂ, ಅದೇ ರೀತಿ **ಏಷಃ (ಅಹಂ)** ಎಂಬುದು ತಮ್ಮನ್ನು ತಾವೇ ತೋರಿಸಿ-ಕೊಂಡು ಹೇಳುತ್ತಿರುವುದರಿಂದಲೂ ಹೊಂದಿಕೆಯಾಗಿ ಪ್ರಯೋಗಿಸಲ್ಪಟ್ಟಿವೆಯೆಂಬುದನ್ನು ಗಮನಿಸಬೇಕು.

**92. ಆವಿಷ್ಕರ್ತುಕಾಮಂ**—ಪ್ರಾಕಾಶ್ಯೇ ಪ್ರಾದುರಾವಿಃ ಸ್ಯಾತ್ ಎಂಬ ಅಮರದಂತೆ ಪ್ರಾದುರ್ ಮತ್ತು ಆವಿಸ್ ಎಂಬ ಎರಡೂ ಅವ್ಯಯಗಳೂ ಪ್ರಕಟವಾಗು, ಹೊರಬೀಳು ಎಂಬ ಅರ್ಥವುಳ್ಳವಾಗಿವೆ. ಡುಕೃಞ್ ಕರಣೇ– ಮಾಡು ಎಂಬ (ತನಾದಿ. ಉ.) ಧಾತುವಿನ ಮೇಲೆ 'ಸಮಾನಕರ್ತೃಕೇಷು ತುಮುನ್' (ಪಾ. ೩/೩/೧೫೮) ಎಂಬ ಸೂತ್ರದಂತೆ ಇಚ್ಛಾರ್ಥದಲ್ಲಿ ತುಮುನ್ ಪ್ರತ್ಯಯ ಬಂದು ಕರ್ತುಂ ಎಂದಾಗುತ್ತದೆ (ಕಕ.,ವಿ.). ಅದರ ಮೇಲೆ ಆವಿಷ್ಕರ್ತುಂ–ಪ್ರಕಟೀಕರ್ತುಂ ಕಾಮಃ–ಇಚ್ಛಾ ಯಸ್ಯ ಸಃ–ಆವಿಷ್ಕ-ರ್ತುಕಾಮಃ+ತಮ್ ಎಂದು ಸಮಾಸವಾಗಿದೆ; ಆದ್ದರಿಂದ ಇದಕ್ಕೆ 'ಪ್ರಕಟಿ-ಸಲು ಅಥವಾ ಹೊರಪಡಿಸಲು ಇಚ್ಛೆಯುಳ್ಳ' ಎಂದರ್ಥವಾಗುತ್ತದೆ. 'ತುಂ ಕಾಮಮನಸೋರಪಿ' ಎಂಬ ವ್ಯಾಕರಣನಿಯಮದಂತೆ ಕಾಮ (ಅಥವಾ

ಮನಸ್) ಶಬ್ದಗಳ ಯೋಗವಿದ್ದಲ್ಲಿ ತುಂ ಪ್ರತ್ಯಯದ ಮಕಾರಕ್ಕೆ ಲೋಪ ಬಂದಿದೆ. (ಕಕ.,ವಿ.)

**93. ಕಲಿ....ಮಾರ್ಗಂ**—ಅಸ್ಮಿನ್ ಎಂಬುದು ಇದಂ ಶಬ್ದದ ಪುಲ್ಲಿಂಗ ಸಪ್ತಮೀ ಏಕವಚನ ರೂಪ. ಮೇಲೆ (ಖಂ. 91) ತಿಳಿಸಿದಂತೆ 'ಬುದ್ಧಿಸ್ಥರಾದ, ಮನಸ್ಸಿನಲ್ಲಿರುವ ಈ' ಎಂದು ಇದಕ್ಕೆ ಅರ್ಥ. ಈ ಶಬ್ದ-ವನ್ನು ಕಕ. ಮತ್ತು ವಿ. ಗಳಲ್ಲಿ 'ಜನೇ'ಗೆ ವಿಶೇಷವಾಗಿ ಹೇಳಿದ್ದಾರೆ. ಅದಕ್ಕೆ 'ಜ್ಞಾನಯೋಗ್ಯರಾದ' ಜನಗಳಲ್ಲಿ ಎಂದು ಅರ್ಥಮಾಡಿದ್ದಾರೆ. ಭ.ದಲ್ಲಿ 'ಈ ಕಲಿಯುಗದಲ್ಲಿ ಇರುವ' ಎಂದು ಕಲಿಯುಗಕ್ಕೆ ವಿಶೇಷವಾಗಿ ಹೇಳಿದ್ದಾರೆ. **ಮಲ** ಎಂದರೆ ಪಾಪವೆಂದೂ (ವಿ.) ದೋಷವೆಂದೂ ಅರ್ಥ. ದೋಷ ಯಾವುದೆಂದರೆ ಮಿಥ್ಯಾಜ್ಞಾನ ಎನ್ನುತ್ತಾರೆ (ಕಕ., ಭ.). 'ಮಲಂ ಕಿಟ್ಟಾ-ಘಯೋಶ್ಚಾಸ್ತಿ' ಎಂದು ಯಾದವಕೋಶ (ವಿ.)–ಕಿವಿಯ ಕೊಳೆ ಅಥವಾ ಸಿಂಬಳ ಎಂದೂ, ಪಾಪ ಎಂದೂ ಅರ್ಥ. **ಕಲುಷಂ** ಎಂದರೆ ಪಾಪ, 'ಕಲುಷಂ ವೃಜಿನೇನೌಘ–ಮಂಹೋದುರಿತದುಷ್ಕೃತಂ' ಅಮರ (ಕಕ.) ಇಲ್ಲಿ ಕಲುಷಿತವಾದ, ದೂಷಿತವಾದ ಎಂಬ ಅರ್ಥದಲ್ಲಿ ಬಂದಿದೆ. ಇದರ ಅನ್ವಯ ಹೀಗೆ ಮಾಡಬೇಕು—ಅಸ್ಮಿನ್ ಕಲಿಮಲಕಲುಷೇ (ಅಸ್ಮಿನ್) ಜನೇ ಜ್ಞಾನ-ಮಾರ್ಗಂ ಆವಿಷ್ಕರ್ತುಕಾಮಂ–ಕಲಿಯುಗದಲ್ಲಿ ಹುಟ್ಟಿ ಕಲಿಯ ಪ್ರಭಾವ-ದಿಂದ ಮಿಥ್ಯಾಜ್ಞಾನಾದಿ ದೋಷಗಳಿಂದ ಕಲುಷಿತರಾದ (ಆದರೂ ಜ್ಞಾನ-ಯೋಗ್ಯರಾದ) ಈ (ಹರಿಯ ಪಕ್ಷದಲ್ಲಿ) ರುದ್ರಾದಿ ಜನಗಳಿಗೆ, (ವಾಯು-ಪಕ್ಷದಲ್ಲಿ) ಭೂಮಿಯಲ್ಲಿರುವ ಸಜ್ಜನರುಗಳಿಗೆ, ತತ್ವಜ್ಞಾನ ಮಾರ್ಗವನ್ನು ತೋರಿಸಿಕೊಡುವುದಕ್ಕಾಗಿ ಅಪೇಕ್ಷೆಯುಳ್ಳ (ವೇದವ್ಯಾಸರು ಅಥವಾ ಮಧ್ವಾಚಾರ್ಯರು). ಇದರಿಂದ ಅವರ ಅವತಾರದ ಪ್ರಯೋಜನವನ್ನು ತಿಳಿಸಿದಂತಾಯಿತು. (ಕಕ., ವಿ., ಭ.)

**94. ಚಂದ್ರೇಂದ್ರ........ನಾಯಕಾದ್ಯೈಃ ವಂದ್ಯಂ**—ಇದು 'ಅವತಾರಂ' ಎಂಬುದಕ್ಕೆ ಎರಡನೇ ವಿಶೇಷಣ. ಚಂದ್ರ, ಇಂದ್ರ, ರುದ್ರ, ದ್ಯುಮಣಿ, ಫಣಿನಾಯಕ, ವಯೋನಾಯಕ, ಆದ್ಯೈಃ—ಎಂದು ಪದಚ್ಛೇದ. ಮೊದಲ ಮೂರು ಪದಗಳ ಅರ್ಥ ಸ್ಪಷ್ಟವಾಗಿದೆ. 'ಸೂರ ಸೂರ್ಯಾರ್ಯ-

ಪಾದಿತ್ಯ–'ಎಂದು ಆರಂಭಿಸಿ 'ದ್ಯುಮಣಿಸ್ತರಣಿರ್ಮಿತ್ರಃ' ಎಂದು ಸೂರ್ಯನ ಹೆಸರುಗಳನ್ನು ಅಮರದಲ್ಲಿ ಹೇಳಿದೆ. ಆದ್ದರಿಂದ **ದ್ಯುಮಣಿ** ಎಂದರೆ ಸೂರ್ಯ ಎಂದರ್ಥ. ದ್ಯು–ಆಕಾಶಕ್ಕೆ, ಮಣಿ–ರತ್ನದಂತಿರುವವನು ಎಂದು ಅವಯವಾರ್ಥ. ಫಣ ಎಂದರೆ ಹೆಡೆ ; ಅದು ಉಳ್ಳದ್ದು ಫಣೀ ಎಂದರೆ ಹಾವು. 'ಅತ ಇನಿಠನೌ' (ಪಾ. ೫/೨/೧೧೫) ಎಂಬಂತೆ ಅದುಳ್ಳದ್ದು ಎಂಬ ಅರ್ಥದಲ್ಲಿ ಇನಿ ಪ್ರತ್ಯಯ ಬಂದಿದೆ. ಅಮರದಲ್ಲಿ 'ಸರ್ಪಃ ಪೃದಾಕು–ರ್ಭುಜಗಃ' ಎಂದಾರಂಭಿಸಿ 'ಚಕ್ಷುಶ್ರವಾಃ ಕಾಕೋದರಃ ಫಣೀ' ಎಂದು ಹಾವುಗಳ ಪರ್ಯಾಯ ಹೇಳಿದೆ. ನಯತೀತಿ **ನಾಯಕಃ**–ಮುಖ್ಯಸ್ಥ, ಮುಖಂಡ, ಒಡೆಯ. 'ಣ್ವುಲ್–ತೃಚೌ' (ಪಾ.೩ ೧/೧೩೩) ಎಂಬ ಸೂತ್ರದಂತೆ ಣ್ವುಲ್ ಪ್ರತ್ಯಯ ಬರಲು 'ಯುವೋರನಾಕೌ' (ಪಾ. ೭/೧/೧) ಎಂಬುದರಿಂದ ಅಕಾದೇಶ ಬಂದಿದೆ. (೩ನೇ ಶ್ಲೋ. ಪ್ರಾಪಕಾಣಾಂ, ಅರ್ಪಕಾಣಾಂ, ದೂಷಕಾಣಾಂ ಶಬ್ದಗಳಂತೆ.) 'ಅಧಿಭೂರ್ನಾಯಕೋ ನೇತಾ ಪ್ರಭುಃ ಪರಿವೃಢೋ ಧಿಪಃ' ಎಂದು ಅಮರ. ನಾಯಕ ಶಬ್ದವು ಫಣಿಗೂ, ವಯಃ-ಶಬ್ದಕ್ಕೂ ಅನ್ವಯಿಸುತ್ತದೆ. (ಛ.) ಫಣಿನಾಯಕ ಎಂದರೆ ಶೇಷದೇವರು.

**ವಯಸ್** ಶಬ್ದವು ಸಕಾರಾಂತ ನಪುಂಸಕಲಿಂಗ ಶಬ್ದ ; ಇದಕ್ಕೆ ವಯಸ್ಸು ಎಂದೂ, ಪಕ್ಷಿ ಎಂದೂ ಮುಖ್ಯವಾಗಿ ಎರಡರ್ಥವಿದೆ. 'ಖಗ–ಬಾಲ್ಯಾದಿನೋರ್ವಯಃ' ಎಂದು ಅಮರ (ಕಕ.,ವಿ). 'ವಯಃ ಪಕ್ಷಿಣಿ ಬಾಲ್ಯಾದೌ ಯೌವನೇ ಚ ನಪುಂಸಕಮ್' ಎಂದು ಮೇದಿನೀ. 'ವಯೋ ವಿಹಾಯೋ ವಿಹಗೋ ವಿಹಂಗಃ' ಎಂದು ಹಲಾಯುಧ. ವಯತೇ–ಡಯತೇ, ವೇತಿ–ಗಚ್ಛತೀತಿ ವಾ ವಯಃ । 'ವತ ಗತೌ' (ಭ್ವಾದಿ.ಆ.) 'ವೀ ಗತಿವ್ಯಾಪ್ತಿ....ಖಾದನೇಷು' (ಅದಾದಿ.ಪ.) ಇತಿ ಧಾತೋಃ 'ಸರ್ವಧಾತು-ಭ್ಯೋಽಸುನ್ (ಉ.೪/೧೮೯) ಇತ್ಯಸುನ್ । ಹಾರಾಡು, ಹೋಗು ಎಂಬ ಅರ್ಥವುಳ್ಳ ವತ ಅಥವಾ ವೀ ಧಾತುಗಳ ಮೇಲೆ ಅಸುನ್ ಪ್ರತ್ಯಯ ಬಂದು ವಯಸ್–ವಯಃ–ಪಕ್ಷಿ ಎಂದಾಗಿದೆ. (ಬಾಲ್ಯ ಕೌಮಾರ್ಯಾದಿ ವಯಸ್ಸು-ಗಳೂ ಕಳೆದುಹೋಗುವುದರಿಂದ ಅದಕ್ಕೂ ವಯಃ ಎಂದು ಹೆಸರು.) ವಯಸಾಂ–ಪಕ್ಷಿಣಾಂ ನಾಯಕಃ–ಪ್ರಭುಃ, ಗರುಡ ಇತ್ಯರ್ಥಃ । ವಯೋ-

ನಾಯಕ ಎಂದರೆ ಗರುಡ. (ಸಂಧಿನಿಯಮದಂತೆ ವಿಸರ್ಗದ ಹಿಂದೆ ಅಕಾರ. ವಿದ್ದು ಮುಂದೆ ಮೃದುವರ್ಣ ಬಂದರೆ ವಿಸರ್ಗಕ್ಕೆ ಉಕಾರಾದೇಶ ಬರುವುದು, ಅದು ಹಿಂದಿನ ಅಕಾರದೊಡನೆ ಸೇರಿ ಗುಣವಾಗಿ ವಯೋನಾಯಕ ಎಂದಾಗಿದೆ.)

ಆದೌ ಭವಾಃ ಆದ್ಯಾಃ। ತೈಃ **ಆದ್ಯೈಃ**–ಮೊದಲಾದವರಿಂದ. ದಿಗಾದಿ-ಗಣಕ್ಕೆ ಸೇರಿದ್ದರಿಂದ ಆದಿಶಬ್ದದ ಮೇಲೆ 'ದಿಗಾದಿಭ್ಯೋ ಯತ್' (ಪಾ. ೪/೩/೫೪) ಎಂಬ ಸೂತ್ರದಂತೆ ಭವಾರ್ಥದಲ್ಲಿ (೪/೩/೫೩) ಯತ್ ಪ್ರತ್ಯಯ ಬಂದಿದೆ. 'ಪುಂಸ್ಯಾದಿಃ ಪೂರ್ವ–ಪೌರಸ್ತ್ಯ—ಪ್ರಥಮಾ–ದ್ಯಾಃ' ಎಂದು ಅಮರ. ಚಂದ್ರ-ಸೂರ್ಯರು, ರುದ್ರ, ಮಹೇಂದ್ರ, ಗರುಡಶೇಷರೇ ಮೊದಲಾದ ದೇವತೆಗಳಿಂದ ಎಂದರ್ಥ.

**ವಂದ್ಯಂ**—ವದಿ ಅಭಿವಾದನ-ಸ್ತುತ್ಯೋಃ (ಭ್ವಾ. ಆ.) ಎಂಬ ನಮಸ್ಕರಿಸು, ಸ್ತುತಿಸು ಎಂದರ್ಥವುಳ್ಳ ಧಾತುವಿನ ಮೇಲೆ ಯೋಗ್ಯ ಎಂಬ ಅರ್ಥದಲ್ಲಿ ಯತ್ ಎಂಬ ಕೃತ್ಯ ಪ್ರತ್ಯಯ ಬಂದು ವಂದ್ಯಂ–ವಂದನಾರ್ಹಂ-ವಂದನಯೋಗ್ಯಂ,–'ಅಭಿವಂದನ–ಸ್ತುತಿಯೋಗ್ಯಂ' (ಶಕ.,ವಿ.) ವಂದಿಸುವು-ದಕ್ಕೂ ಸ್ತುತಿಸುವುದಕ್ಕೂ ಅರ್ಹರಾದವರು ಎಂದರ್ಥವಾಗುತ್ತದೆ.

**95. ಮಂತ್ರಸಿದ್ಧಂ**— ಇದು ಮಧ್ವಾಖ್ಯಂ ಅವತಾರಂ ಎಂಬುದಕ್ಕೆ ಮೂರನೆಯ ವಿಶೇಷಣ. **ಮಂತ್ರ** ಎಂದರೆ ಇಲ್ಲಿ ಋಗಾದಿ ವೇದವಾಕ್ಯ-ಗಳು ಅಥವಾ ಋಕ್ಕುಗಳು ಎಂದರ್ಥ. 'ವೇದಭೇದೇ ಗುಹ್ಯವಾದೇ ಮಂತ್ರಃ' ಎಂದು ಅಮರ ಹೇಳಿದರೆ 'ಮಂತ್ರೋ ವೇದವಿಶೇಷೋ ಸ್ಯಾತ್ ದೇವಾ-ದೀನಾಂ ಚ ಸಾಧನೇ । ಗುಹ್ಯವಾದೇಽಪಿ ಚ ಪುಮಾನ್' ಎಂದು ಮೇದಿನೀ-ಕೋಶವಿದೆ. ರಾಮಮಂತ್ರ, ಕೃಷ್ಣಮಂತ್ರ ಇತ್ಯಾದಿಗಳಿಗೂ ಗುಪ್ತಸಮಾ-ಲೋಚನೆಗೂ (ಮಂತ್ರಾಲೋಚನೆಗೂ) ಮಂತ್ರವೆಂದೇ ಹೆಸರು. ಋಗ್ವೇದ-ಸಂಹಿತೆಯ ಪ್ರಥಮ ಮಂಡಲದಲ್ಲಿ (೨ ಅಷ್ಟಕ, ೨ ಅಧ್ಯಾ, ೮ನೇ ವರ್ಗ) 'ಬಳಿತ್ಥಾ ತದ್ವಪುಷೇ' ಎಂಬುದು ೧೪೧ನೇ ಸೂಕ್ತ ಇದರ ಮೊದಲ ಐದು ಮಂತ್ರಗಳಲ್ಲಿ (ಋಕ್ಕುಗಳಲ್ಲಿ) ವಾಯುದೇವರ ಹನುಮ ಭೀಮ ಮಧ್ವ ಎಂಬ ಮೂರು ಅವತಾರಗಳ ವಿಚಾರವನ್ನು ಸ್ಪಷ್ಟವಾಗಿ ಹೇಳಿದೆ. ಎರಡನೇ

ಮಂತ್ರದಲ್ಲಿ 'ತೃತೀಯಮಸ್ಯ ವೃಷಭಸ್ಯ' ಎಂದು ಈ ವಾಯುದೇವರ **ಮೂರನೇ ಅವತಾರವು** ದಶಪ್ರಮತಿ–ಪೂರ್ಣಪ್ರಜ್ಞರೆಂದು ಹೇಳಿ ನಾಲ್ಕನೇ ಮಂತ್ರದಲ್ಲಿ ಅವರೇ 'ಮಧ್ವ ಆಧವೇ' ಎಂದು ವರ್ಣಿಸಿ ಮಧ್ವಾಚಾರ್ಯರೆಂದು ಹೇಳಿದೆ. ಇದೇ ರೀತಿ ಇನ್ನೂ ಅನೇಕ ಸೂಕ್ತಗಳೂ ಮಂತ್ರಗಳೂ ಈ ಅವತಾರತ್ರಯವನ್ನೇ ಪ್ರತಿಪಾದಿಸುತ್ತವೆಯೆಂಬುದನ್ನು 'ಮಧ್ವಮಂತ್ರಾರ್ಥಮಂಜರೀ' ಎಂಬ ಗ್ರಂಥದಲ್ಲಿ ತೋರಿಸಿದೆ. ಇದು ಋಗ್ವೇದ–ಸಂಹಿತೆಯ ವಿಚಾರವಾಯಿತು. ಇಷ್ಟೇ ಅಲ್ಲದೆ ಅನೇಕ ಉಪನಿಷತ್ತುಗಳಲ್ಲೂ ಭಾಗವತ–ಭಾರತಾದಿ ಸ್ಮೃತಿಗಳಲ್ಲೂ ಬ್ರಹ್ಮಸೂತ್ರಗಳಲ್ಲೂ ವಾಯುದೇವರ ಮಹಿಮೆ ಯಥೇಷ್ಟವಾಗಿ ಹೇಳಿದೆ. ಈ ವಿಷಯಗಳೆಲ್ಲವನ್ನೂ

> ಪ್ರಥಮೋ ಹನುಮಾನ್ ನಾಮ ದ್ವಿತೀಯೋ ಭೀಮ ಏವ ಚ ।
> ಪೂರ್ಣಪ್ರಜ್ಞಸ್ತೃತೀಯಸ್ತು ಭಗವತ್ಕಾರ್ಯಸಾಧಕಃ ॥

ಎಂಬ ಸುಪ್ರಸಿದ್ಧವಾದ ಶ್ಲೋಕವು ಸಂಗ್ರಹಿಸಿ ಹೇಳುತ್ತದೆ. ಈ ಶ್ಲೋಕವನ್ನು ಶ್ರೀಮದಾಚಾರ್ಯರೇ ಭಾಗವತತಾತ್ಪರ್ಯದಲ್ಲಿ ಪ್ರಮಾಣವಾಗಿ ಉದಹರಿಸಿದ್ದಾರೆ. ಆ ಪ್ರಕಾರ ವೇದಮಂತ್ರಗಳಲ್ಲಿ ಪ್ರಸಿದ್ಧವಾದ 'ಮಧ್ವಾಖ್ಯಂ ಅವತಾರಂ' ಎಂದು ಹೇಳಿದರು. 'ಮಂತ್ರೋ ವೇದೋ ಬಳಿತ್ಥಾದಿಃ, ತತ್ರಸಿದ್ಧಂ–ಪ್ರಸಿದ್ಧಂ' (ಕಕ., ವಿ.)

ಇನ್ನು ಹರಿಪರವಾಗಿ ವ್ಯಾಖ್ಯಾನ ಮಾಡುವಾಗ ಸಕಲವೇದಪ್ರತಿಪಾದ್ಯನಾದ ಎಂದರ್ಥ ಮಾಡಬೇಕು. ಇದಕ್ಕೆ 'ವೇದೈಶ್ಚ ಸರ್ವೈರಹಮೇವ ವೇದ್ಯಃ' ಎಂಬ ಗೀತೋಕ್ತಿಯೂ (೧೫ ಅ., ೧೫ ಶ್ಲೋ.), 'ಸರ್ವೇ ವೇದಾ ಯತ್ಪದಮಾಮನಂತಿ' (ಕಠೋಪನಿಷತ್) ಎಂಬ ಶ್ರುತಿಯೂ, 'ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ । ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ ॥' ಎಂಬ ಹರಿವಂಶಾದಿ ವಾಕ್ಯಗಳೂ ಪ್ರಮಾಣವಾಗಿವೆ. 'ಸಕಲ ವೇದಗಳಿಂದಲೂ ನಾನೇ ಪ್ರತಿಪಾದ್ಯನಾಗಿದ್ದೇನೆ ಎಂಬುದು ಗೀತಾವಾಕ್ಯದ ಅರ್ಥ. 'ಸಕಲವೇದಗಳೂ ಆ ಭಗವಂತನ ಸ್ಥಾನವನ್ನೇ ಹೊಂದುತ್ತವೆ, ಎಂದರೆ ಅವನ ಮಹಿಮೆಯನ್ನೇ ಹೇಳುತ್ತವೆ' ಎಂಬುದು ಕಠಶ್ರುತಿಯ ಅರ್ಥ. ವೇದಗಳಲ್ಲೂ ಮೂಲರಾಮಾಯಣದಲ್ಲೂ ಮಹಾಭಾರತದಲ್ಲೂ ಸಕಲ ಪುರಾಣಗಳಲ್ಲೂ ಆದಿಯಲ್ಲಿ ಮಧ್ಯದಲ್ಲಿ ಕೊನೆಯಲ್ಲಿ

ಎಲ್ಲಕಡೆಯಲ್ಲೂ ಶ್ರೀವಿಷ್ಣುವೇ ಹೇಳಲ್ಪಡುತ್ತಾನೆ ಎಂಬುದು ಹರಿವಂಶ ವಾಕ್ಯಾರ್ಥ.

**96. ಆಪನ್ನಪುಂಸಾಂ ಪಾತಾರಂ** ಎಂಬುದು 'ಮಧ್ವಾಖ್ಯಂ ಅವತಾರಂ' ಎಂಬುದಕ್ಕೆ ನಾಲ್ಕನೇ ವಿಶೇಷಣ. 'ಆಪನ್ನ ಆಪತ್ಪ್ರಾಪ್ತಃ ಸ್ಯಾತ್' ಎಂಬ ಅಮರದಂತೆ **ಆಪನ್ನ** ಎಂದರೆ ವಸ್ತುತಃ ಆಪತ್ತಿಗೆ ಗುರಿಯಾದವನು ಅಥವಾ ತೊಂದರೆಗೆ ಒಳಗಾದ ಮನುಷ್ಯ ಎಂದರ್ಥವಾಗುತ್ತದೆ. ಆದರೆ ಆ ಅರ್ಥ ಪ್ರಸ್ತುತಕ್ಕೆ ಸರಿಹೋಗುವುದಿಲ್ಲ. ಆದಕಾರಣ ಲಕ್ಷಣಯಾ ಆಪದ್ಗ್ರಸ್ತರು ಮಾಡುವಂತೆ 'ಶರಣಾಗತರಾದ, ಮೊರೆಹೊಕ್ಕ' ಎಂಬ ಅರ್ಥಗ್ರಹಣ ಮಾಡಬೇಕು. ಆಪನ್ನ–ಶರಣುಹೊಕ್ಕ, ಶರಣಾಗತರಾದ (ಕಕ., ವಿ., ಭ.). ಅಂಥಾ **ಪುಂಸಾಂ**–ಜನರನ್ನು, **ಪಾತಾರಂ**—ರಕ್ಷಿಸುವಂಥಾ, ರಕ್ಷಕರಾದ. ಪಾ ರಕ್ಷಣೇ (ಅದಾ. ಪ.)–ರಕ್ಷಿಸು, ಕಾಪಾಡು ಎಂಬ ಧಾತುವಿನ ಮೇಲೆ ಕರ್ತ್ರರ್ಥದಲ್ಲಿ 'ಣ್ವುಲ್‌ತೃಚೌ' (ಪಾ. ೩/೧/೧೩೩) ಎಂಬ ಸೂತ್ರದಂತೆ ತೃಚ್ ಪ್ರತ್ಯಯ ಬಂದು ಪಾತಾ ಎಂದಾಯಿತು; ಅದರ ದ್ವಿತೀಯೈಕವಚನರೂಪ ಪಾತಾರಮ್. 'ಕರ್ತೃಕರ್ಮಣೋಃ ಕೃತಿ' (ಪಾ. ೨/೩/೬೫) ಎಂಬ ಸೂತ್ರದಂತೆ ಪಾತಾರಂ ಎಂಬ ಕೃದಂತಶಬ್ದ ಬಂದಿರುವುದರಿಂದ 'ಪುಂಸಾಂ' ಎಂದು ಕರ್ಮಪದಕ್ಕೆ ಷಷ್ಠೀವಿಭಕ್ತಿ ಬಂದಿದೆ (ಕಕ., ವಿ.)

**97. ಮಧ್ವಾಖ್ಯಂ ಅವತಾರಂ.** ಇಲ್ಲಿ ಹರಿಪರವಾಗಿ ವ್ಯಾಖ್ಯಾನ ಮಾಡುವಾಗ ಮಧು+ಆಖ್ಯಂ ಎಂದೂ (ಯಣ್‌ಸಂಧಿ) ವಾಯುದೇವರ ಪರವಾಗಿ ಹೇಳುವಾಗ ಮಧ್ವ+ಆಖ್ಯಂ (ಸವರ್ಣದೀರ್ಘಸಂಧಿ) ಎಂದೂ ಪದಚ್ಛೇದ ಮಾಡಬೇಕು. ಹರಿಪರವಾಗಿ ಅರ್ಥ— 'ಮಧ್ವಿತ್ಯಾನಂದ ಉದ್ದಿಷ್ಟಃ' ಎಂಬ ಸ್ಮೃತಿಯಂತೆ ಮಧು ಎಂದರೆ ಆನಂದ ಎಂದರ್ಥ. ಆ ಉಪಸರ್ಗ, ಖ್ಯಾ ಪ್ರಕಥನೇ (ಅದಾ.ಪ.)–ಹೇಳು, ಸ್ಪಷ್ಟಪಡಿಸು ಎಂಬ ಧಾತುವಿನ ರೂಪವಾದ್ದರಿಂದ ಆಖ್ಯಾಯತ ಇತ್ಯಾಖ್ಯಂ ಎಂಬ ವ್ಯುತ್ಪತ್ತಿಯಿಂದ ಆಖ್ಯ ಎಂದರೆ ಜ್ಞಾನ ಎಂದರ್ಥವಾಗುತ್ತದೆ. (ಪು.ರಾ.) 'ಆತೋನುಪಸರ್ಗೇ ಕಃ' (ಪಾ. ೩/೨/೩) ಎಂಬ ಸೂತ್ರದಂತೆ ಸರ್ವತ್ರಗ್ರಹಣಾತ್ ಕ ಪ್ರತ್ಯಯ ಬಂದಿದೆ. ಆದಕಾರಣ ಮಧು+ಆಖ್ಯಂ ಎಂದರೆ ಜ್ಞಾನಾನಂದಸ್ವರೂಪರಾದ ಎಂದರ್ಥ. ಆಖ್ಯಂ ಎಂಬಲ್ಲಿ ಆ–ಸಮಂತಾತ್ ಸ್ವತಂತ್ರವಾದ

ಮತ್ತು ಸ್ವಪರಗತ ಸರ್ವವಿಷಯಿಕವಾದ ಹಾಗೂ ಅಜ್ಞಾನದ ಗಂಧವೂ ಇಲ್ಲದ ಎಂದರ್ಥವಾಗುತ್ತದೆ.

ಮಧ್ವಾಚಾರ್ಯರ ಪರವಾಗಿ ಅಂದರೆ ಮಧ್ವ ಎಂಬ ಹೆಸರುಳ್ಳ ಎಂದರ್ಥ. 'ಮಧ್ವಿತ್ಯಾನಂದ ಉದ್ದಿಷ್ಟೋ ವೇತಿ ತೀರ್ಥಮುದಾಹೃತಮ್। ಮಧ್ವ ಆನಂದತೀರ್ಥಃ ಸ್ಯಾತ್ ತೃತೀಯಾ ಮಾರುತೀತನುಃ ॥' ಎಂಬ (ಉಪನಿಷದ್ಭಾಷ್ಯಗಳ ಕೊನೆಯಲ್ಲಿ ಉದಾಹೃತ) ಪ್ರಮಾಣಾನುಸಾರ ಮಧು ಎಂದರೆ ಆನಂದ, ವ ಎಂದರೆ ತೀರ್ಥ ; ಆದಕಾರಣ ಮಧ್ವ ಎಂದರೆ ಆನಂದ-ತೀರ್ಥ ಎಂದೇ ಅರ್ಥ ; ಇದು ವಾಯುದೇವರ ಮೂರನೆಯ ಅವತಾರ.

**98. ಮಾರುತಸ್ಯ** ಸಂಸ್ತವೇ ಶಕ್ತಃ ನಾಸ್ಮಿ ಕಿಮುತ—ಎಂಬುದೇ ಮುಖ್ಯ ವಾಕ್ಯವಲ್ಲವೆ. ಈ ಮಾರುತಸ್ಯ ಎಂಬುದಕ್ಕೆ 1. ಮಧ್ವಾಖ್ಯಂ ಅವತಾರಂ ಕೃತವತಃ, 2. ಪಾರಮೇಷ್ಠ್ಯಂ ಪದಂ ಪ್ರಾಪ್ತುಃ, 3. ಅಪವಿ-ಪದಃ ಎಂದು ಮೂರು ವಿಶೇಷಣಗಳು. 'ಸಮೀರ-ಮಾರುತ-ಮರುತ್—ಜಗತ್ಪ್ರಾಣ-ಸಮೀರಣಾಃ' ಎಂಬ ಅಮರದಂತೆ ಮಾರುತ ಎಂಬುದು ವಾಯುದೇವರ ಹೆಸರು, ಮ್ರಿಯಂತೇಽನೇನ ವಿನೇತಿ ಮರುತ್ । ತತಃ ಪ್ರಜ್ಞಾದಿತ್ವಾತ್ (ಪಾ. ೫/೪/೩೮) ಅಣ್ ಎಂದು ಕೋಶವ್ಯಾಖ್ಯಾನಕಾರರು ವ್ಯುತ್ಪತ್ತಿ ಹೇಳುತ್ತಾರೆ. ಯಾರಿಲ್ಲದಿದ್ದರೆ ಜನರು ಸಾಯುವರೋ ಅವನೇ ಮರುತ್ ; ಅದರ ಮೇಲೆ ಪ್ರಜ್ಞಾದಿಗಣಕ್ಕೆ ಸೇರಿದ್ದರಿಂದ ಅಣ್ ಪ್ರತ್ಯಯ ಬಂದು ಮಾರುತ ಎಂದಾಗಿದೆ. 'ಮೃಗ್ರೋರುತಿಃ' (ಉ. ೧/೯೪) ಎಂಬ ಸೂತ್ರದಿಂದ ಉತ್ ಪ್ರತ್ಯಯ ಬಂದಿದೆ. ಇನ್ನು ನಮ್ಮ ಸಿದ್ಧಾಂತದಂತೆ ಅರ್ಥವನ್ನು ವಿ. ವ್ಯಾಖ್ಯಾನದಲ್ಲಿ ತೋರಿಸಿದೆ—ಮಾಃ-ಪ್ರಮಾಣರೂಪಾಃ ವೇದಾದಯೋ ರುತಂ–ಭಾಷಿತಂ ಯಸ್ಯ ಸಃ ಮಾರುತಸ್ತಸ್ಯ ಮುಖ್ಯಪ್ರಾಣಸ್ಯ! ಮಾ ಎಂದರೆ ನಾಲ್ಕು ವೇದಗಳು, ಇತಿಹಾಸ (ಮೂಲರಾಮಾಯಣ, ಮಹಾಭಾರತ), ಪುರಾಣಗಳು ಮತ್ತು ಪಾಂಚರಾತ್ರ ಈ ಏಳು ಪ್ರಮಾಣಗಳು, ರುತ–(ರು ಶಬ್ದೇ, ಅದಾ. ಪ+ಕ್ತಪ್ರತ್ಯಯ)–ಹೇಳುವವರು, ಅವುಗಳಲ್ಲಿ ಹೇಳಲ್ಪಟ್ಟವರು ಎಂದರ್ಥ. ಶ್ರೀಹರಿಯು ಈ ಸಪ್ತವಿಧ ಪ್ರಮಾಣ ಗ್ರಂಥ-ಗಳಲ್ಲಿ ಹೇಳಲ್ಪಟ್ಟಂತೆ ವಾಯುದೇವರೂ ಹೇಳಲ್ಪಡುವುದರಿಂದ ಮಾರುತಸ್ಯ

ಎಂದರೆ ವಾಯುವೆಂದೂ ಶ್ರೀಹರಿಯೆಂದೂ ಅರ್ಥವಾಗುತ್ತದೆ. ಈಗ ಈ ಶಬ್ದಗಳ ವಿಶೇಷಣಗಳಿಗೆ ಹೋಗೋಣ.

**99. ಪಾರಮೇಷ್ಠ್ಯಂ ಪದಂ ಪ್ರಾಪ್ತುಃ.** 'ಬ್ರಹ್ಮಾತ್ಮಭೂಃ ಸುರಜ್ಯೇಷ್ಠಃ ಪರಮೇಷ್ಠೀ ಪಿತಾಮಹಃ' ಎಂಬ ಅಮರದಂತೆ ಪರಮೇಷ್ಠೀ ಎಂದರೆ ಚತುರ್ಮುಖಬ್ರಹ್ಮ ; ಇದು ನಕಾರಾಂತ ಶಬ್ದ. ಪರಮೇ–ಸರ್ವೋತ್ತಮವಾದ ಪದವಿಯಲ್ಲಿ, ತಾರತಮ್ಯದಲ್ಲಿ ಜೀವಕೋಟಿಯಲ್ಲೇ ಅತ್ಯುತ್ತಮ ಕಕ್ಷೆಯಲ್ಲಿ, ಸ್ಥಾ–ಇರುವವರು ಎಂದರ್ಥ. 'ಪರಮೇ ಕಿತ್' (ಉ. ೪/೧೦) ಎಂಬ ಸೂತ್ರದಂತೆ ಸ್ಥಾ ಧಾತುವಿನ ಮೇಲೆ ಇನಿ ಪ್ರತ್ಯಯ ಬಂದಿರುವುದಲ್ಲದೆ ಅಲುಕ್‌ಸಮಾಸವೂ ಬಂದಿದೆ. ಪರಮೇಷ್ಠಿನೋ ಭಾವಃ ಪಾರಮೇಷ್ಠ್ಯಂ–ಬ್ರಹ್ಮತ್ವಮಿತ್ಯರ್ಥಃ (ವಿ.) ಬ್ರಹ್ಮಪದವಿ ಎಂದರ್ಥ ಬ್ರಾಹ್ಮಣಾದಿಗಣಕ್ಕೆ ಸೇರಿದ್ದರಿಂದ ಪಾ.೫/೧/೧೨೪ ರಂತೆ ಷ್ಯಞ್ (ಯ) ಪ್ರತ್ಯಯ ಬಂದಿದೆ (ಕಕ., ವಿ.). ಪಾರಮೇಷ್ಠ್ಯಂ ಪದಂ–ಬ್ರಹ್ಮಪದವಿಯನ್ನು ಎಂದರ್ಥ (ಕಕ.,ವಿ.). ಅಥವಾ ಪರಮೇಷ್ಠಿನಾ–ಚತುರ್ಮುಖೇನ, ಪ್ರಾಪ್ಯಂ–ಪಾರಮೇಷ್ಠ್ಯಂ, ಪದಂ–ಸ್ಥಾನಂ–ಸತ್ಯಲೋಕೇಶ್ವರತ್ವಂ–ಬ್ರಹ್ಮದೇವರಿಗೆ ಹೊಂದಲು ಯೋಗ್ಯವಾದ ಸತ್ಯಲೋಕಾಧಿಪತ್ಯವನ್ನು ಎಂದರ್ಥ (ವಿ.). **ಪ್ರಾಪ್ತುಃ** ಎಂಬುದು ಋಕಾರಾಂತ ಪ್ರಾಪ್ತೃಶಬ್ದದ ಷಷ್ಠೀ ಏಕವಚನರೂಪ. ಪ್ರ–ಉಪಸರ್ಗ, ಆಪ್‌ಲೃ ವ್ಯಾಪ್ತೌ (ಸ್ವಾ.ಪ.)–ಹೊಂದು ಎಂಬ ಧಾತುವಿನ ಮೇಲೆ ತೃಚ್ (ಖಂಡ 96, ಪಾತಾರಂ ನೋಡಿ) ಪ್ರತ್ಯಯ ಬಂದು ಪ್ರಾಪ್ತಾ ಎಂದಾಗುತ್ತದೆ; ಅದರ ಷ.ಏ.ರೂಪ–ಪ್ರಾಪ್ತುಃ–ಹೊಂದುವಂಥಾ. ಮುಂದಿನ ಕಲ್ಪದಲ್ಲಿ ಬ್ರಹ್ಮಪದವಿಯನ್ನು ಅಥವಾ ಸತ್ಯಲೋಕಾಧಿಪತ್ಯವನ್ನು ಹೊಂದುವಂಥಾ ಎಂದರ್ಥ. ಇದಕ್ಕೆ ಪ್ರಮಾಣಗಳು ಏನೆಂದರೆ—'ವಾಯುರ್ಹಿ ಬ್ರಹ್ಮತಾಮೇತಿ ತಸ್ಮಾದ್ ಬ್ರಹ್ಮೈವ ಸ ಸ್ಮೃತಃ' ಇತ್ಯಾದಿ ಸ್ಮೃತಯಃ (ಕಕ., ವಿ., ಛ.) ವಾಯುದೇವರೇ ಮುಂದಿನ ಕಲ್ಪದಲ್ಲಿ ಬ್ರಹ್ಮಪದವಿಯನ್ನು ಹೊಂದುವರು. ಆದ್ದರಿಂದ ಅವರನ್ನೂ ಬ್ರಹ್ಮ ಎಂದೇ ಕರೆಯುತ್ತಾರೆ. 'ಪವಮಾನಃ ಪ್ರಜಾಪತಿಃ' ಇತ್ಯಾದಿಶ್ರುತಯಶ್ಚ (ಕಕ.ವಿ)–ವಾಯುದೇವರೇ ಪ್ರಜಾಪತಿ ಅಥವಾ ಬ್ರಹ್ಮ ಇವೇ ಮೊದಲಾದ ಶ್ರುತಿಗಳೂ

ಹೇಳುತ್ತವೆ. ಪಾರಮೇಷ್ಠ್ಯಂ ಪದಂ ಪ್ರಾಪ್ತುಃ ಎಂಬಲ್ಲಿ ಪ್ರಾಪ್ತುಃ ಎಂಬ ಕೃದಂತಪ್ರಯೋಗವಿದ್ದರೂ ಕರ್ಮಣಿಷಷ್ಠೀ ಬಂದಿಲ್ಲ, ದ್ವಿತೀಯಾ ವಿಭಕ್ತಿಯೇ ಬಂದಿದೆ. ಏಕೆಂದರೆ 'ನ ಲೋಕಾವ್ಯಯ....ತೃನಾಮ್' (ಪಾ. ೨/೩/೬೯) ಎಂಬ ಸೂತ್ರದಂತೆ ಇಲ್ಲಿ ಪ್ರಾಪ್ತುಃ ಎಂಬುದು ತೃನ್ನಂತವಾದ್ದರಿಂದ ಷಷ್ಠೀ ಬರುವುದಿಲ್ಲ (ಕಕ.,ವಿ.)

ಶ್ರೀಹರಿಪರವಾಗಿ ಅರ್ಥಮಾಡುವಾಗ—ಆಪನ್ನ-ಪುಂಸಾಂ ಪಾರಮೇಷ್ಠ್ಯಂ ಪದಂ ಪಾತಾರಂ ಎಂದು ಅನ್ವಯ ಮಾಡಿ, ಪ್ರಾಪ್ತುಃ ಎಂಬುದನ್ನು ಬೇರೆಯಾಗಿ (ಬಿಡಿಯಾಗಿ) ಮಾರುತಸ್ಯ ಎಂಬುದಕ್ಕೆ ವಿಶೇಷಣವೆಂದು ಪರಿಗಣಿಸಬೇಕು. ಇದಕ್ಕೆ ಹೀಗೆ ಅರ್ಥ—ಆಪನ್ನಪುಂಸಾಂ-ಶರಣಾಗತ ಜನಗಳಿಗೆ, ಪಾರಮೇಷ್ಠ್ಯಂ-ಸರ್ವೋತ್ತಮವಾದ (ಹರಿಸರ್ವೋತ್ತಮ, ವಾಯುಜೀವೋತ್ತಮವೆಂಬ), ಪದಂ-(ಪದ ಗತೌ ಎಂದಿರುವುದರಿಂದ, ಗತ್ಯರ್ಥಕ ಧಾತುಗಳಿಗೆ ಜ್ಞಾನಾರ್ಥ ಇರುವುದರಿಂದಲೂ) ಜ್ಞಾನವನ್ನು (ದತ್ವಾ-ಕೊಟ್ಟು—ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು), ಪಾತಾರಂ ರಕ್ಷಿಸುವಂಥಾ. ಪ್ರಾಪ್ತುಃ-ಜಗತ್ತಿನಲ್ಲಿ ಸರ್ವತ್ರ ವ್ಯಾಪ್ತನಾದ ಎಂದರ್ಥ.

**ಅಪವಿಪದಃ** । ಅಪಗತಾ ವಿಪದ್ ಯಸ್ಮಾತ್ ಸಃ ಅಪವಿಪತ್ । ತಸ್ಯ, ಅಪವಿಪದಃ ॥ ಎಂದು ವಿಗ್ರಹವಾಕ್ಯ (ಕಕ.,ವಿ.,ಛ.)-ಯಾವ ವಿಪತ್ತೂ ಇಲ್ಲದಂಥಾ ಎಂದು ಸಾಮಾನ್ಯಾರ್ಥ. ಮೇದಿನೀಕೋಶದಲ್ಲಿ 'ಅಪ ಸ್ಯಾದಪಕೃಷ್ಟಾರ್ಥೇ ವರ್ಜನಾರ್ಥವಿಯೋಗಯೋಃ । ವಿಪರ್ಯಯೇ ಚ ವಿಕೃತೌ ಚೌರ್ಯೇ ನಿರ್ದೇಶಹರ್ಷಯೋಃ ॥' ಎಂದು ಹೇಳಿರುವುದರಿಂದ ಅಪ ಎಂಬ ಅವ್ಯಯಕ್ಕೆ ವರ್ಜನೆಯೂ ಅಭಾವವೂ ಅರ್ಥವಿಯೋಗವೂ, ಇಲ್ಲದಂತೆ ಮಾಡುವುದೂ ಅರ್ಥ. 'ವಿಪತ್ತ್ಯಾಂ ವಿಪದಾಪದೌ' ಎಂಬ ಅಮರದಂತೆ ಆಪತ್ತಿಗೆ ಅಥವಾ ಅನಿಷ್ಟಕ್ಕೆ ವಿಪತ್ (ವಿಪತ್ತು) ಎಂದು ಹೆಸರು. ಅಂಥಾ ಅನಿಷ್ಟವು ಯಾರಿಗೆ ಇಲ್ಲವೋ ಅಥವಾ ಯಾರು ಇತರರ ಆಪತ್ತುಗಳನ್ನು ದೂರಮಾಡಬಲ್ಲರೋ ಅವರಿಗೇ ಅಪವಿಪದ್ ಎಂದು ಹೆಸರು. ಪ್ರಸ್ತುತ ಇದು ಶ್ರೀಹರಿಗೂ ವಾಯುದೇವರಿಗೂ ಅನ್ವಯಿಸುತ್ತದೆ.

ಬೃಹದಾರಣ್ಯಕೋಪನಿಷತ್ತಿನಲ್ಲಿ (೩ ಅ., ೩ ಬ್ರಾ., ೯ ಕಂಡಿಕೆ) ವಾಯುದೇವರ ಮಹಿಮೆಯನ್ನು ಹೇಳುತ್ತಾ 'ಸಾ ವಾ ಏಷಾ ದೇವತಾ-

ದೂರ್ ನಾಮ ದೂರಙ್ ಹ್ಯಸ್ಯಾ ಮೃತ್ಯುರ್ದೂರಙ್ ಹ ವಾ ಅಸ್ಮಾನ್ಮೃತ್ಯುರ್ಭವತಿ ಯ ಏವಂ ವೇದ' ಎಂದು ಹೇಳಿದೆ. ಇದಕ್ಕೆ ಹೀಗೆ ಅರ್ಥ— ಈ ಮುಖ್ಯ ಪ್ರಾಣದೇವರಿಗೆ ದೂರ್ ಎಂದು ಹೆಸರು. ಏಕೆಂದರೆ ಸಕಲ ವಿಧವಾದ ಮೃತ್ಯುವೂ (ಅನಿಷ್ಟವೂ) ಇವರ ಹತ್ತಿರಕ್ಕೇ ಸುಳಿಯುವಂತಿಲ್ಲ. ಇದನ್ನೇ ಭಾಷ್ಯದಲ್ಲಿ 'ಇವರಿಗೆ ಶಾಪಗಳಿಂದಾಗಲಿ ವರಗಳಿಂದಾಗಲಿ ಯಾವ ಬಾಧೆಯೂ ಉಂಟಾಗಲಾರದು' ಎಂದು ವಿವರಿಸಿದ್ದಾರೆ. ಈ ಪ್ರಕಾರ ಆ ಮುಖ್ಯಪ್ರಾಣನಿಗೆ ಯಾವ ವಿಧವಾದ ಬಾಧೆಯೂ (ವಿಪತ್ತೂ, ತಟ್ಟಲಾರದು, ಆದಕಾರಣ ಅವನಿಗೆ ದೂರ್ ಎಂಬ ಹೆಸರು ಬಂದಿದೆ ಎಂಬ ವಿಚಾರವನ್ನು ಯಾವ ಅಧಿಕಾರಿಯು ತಿಳಿದುಕೊಳ್ಳುವನೋ ಅವನೂ ಸಹ ಶತ್ರುಗಳಿಂದಲೂ ಪಾಪಗಳಿಂದ ಮುಕ್ತನಾಗುತ್ತಾನೆ—ಎಂದು ಉಪನಿಷತ್ತು ಹೇಳುತ್ತದೆ. ಈ ಶ್ರುತಿಯಿಂದ 'ಅಪವಿಪದಃ' ಎಂಬ ವಿಶೇಷಣದ ಅರ್ಥ ಸ್ಪಷ್ಟವಾಗುತ್ತದೆ. ಶ್ರೀಹರಿಭಕ್ತರಾದ ವಾಯುದೇವರಿಗೇ ಈ ಮಹಿಮೆ ಇರುವಾಗ ಮೃತ್ಯುವಿಗೇ ಮೃತ್ಯುಸ್ವರೂಪನಾದ ಆ ಶ್ರೀಹರಿಯ ವಿಚಾರ ಹೇಳುವುದೇನಿದೆ ?

ಇಲ್ಲಿಗೆ ಕಠಿನ ಶಬ್ದಗಳ ವಿವರಣೆ ಮುಗಿದ ಕಾರಣ ಈಗ ಶ್ರೀಹರಿಪರವಾಗಿಯೂ ಶ್ರೀವಾಯುಪರವಾಗಿಯೂ ಅನ್ವಯಾರ್ಥ ಭಾವಾರ್ಥಗಳನ್ನು ಹೇಳುವೆನು.

**101. ಹರಿಪರವಾಗಿ ಅನ್ವಯಾರ್ಥ**—(ಮೊದಲು ಅವತಾರಂ ಎಂಬುದರ ವಿಶೇಷಣಗಳಿಗೆ ಅರ್ಥ ಹೇಳಿ ಆಮೇಲೆ ಮಾರುತಸ್ಯ ಎಂಬುದರ ವಿಶೇಷಣಗಳಿಗೆ ಅರ್ಥ ಹೇಳಿ ಕಿಮುತ ಎಂದು ಮುಗಿಸಬೇಕು. 1, 2 ಎಂಬ ಸಂಖ್ಯೆಗಳು ವಿಶೇಷಣಗಳ ಕ್ರಮವನ್ನು ಸೂಚಿಸುತ್ತವೆ.) 1. ಕಲಿಮಲಕಲುಷೇ ಅಸ್ಮಿನ್ ಜನೇ–ಕಲಿಯ ಸನ್ನಿಧಾನದಿಂದ ಉಂಟಾದ ಮಿಥ್ಯಾಜ್ಞಾನಾದಿ ದೋಷಗಳಿಂದ ದೂಷಿತರಾದ, (ಆದರೂ ಜ್ಞಾನಯೋಗ್ಯರಾದ) ಈ (ರುದ್ರಾದಿಭಕ್ತ) ಜನರಲ್ಲಿ* ; ಜ್ಞಾನಮಾರ್ಗಂ ಅವಿಸ್ಕೃತರ್ಕಾಮಂ–

*ಬ್ರಹ್ಮ ವಾಯು ಸರಸ್ವತೀ-ಭಾರತೀ ಈ ನಾಲ್ಕು ಮಂದಿಗೆ ಮಾತ್ರವೇ ದೈತ್ಯರ ಬಾಧೆಯಿಲ್ಲ. ಇವರಿಗೆ ಅಜ್ಞಾನವೂ ಇಲ್ಲ. ಮಿಕ್ಕ ರುದ್ರಾದಿ ಸಕಲ ದೇವತೆಗಳನ್ನೂ

ಪ್ರಕಟಪಡಿಸಲು ಇಚ್ಛೆಯುಳ್ಳಂಥಾ ; 2. ಚಂದ್ರೇಂದ್ರ....ನಾಯಕಾದ್ಯೈಃ ವಂದ್ಯಂ—ಚಂದ್ರ-ಚಂದ್ರ, ಇಂದ್ರ-ದೇವೇಂದ್ರ, ರುದ್ರ-ಮಹಾದೇವರು, ದ್ಯುಮಣಿ-ಸೂರ್ಯ, ಫಣಿ-ನಾಯಕ-ಶೇಷದೇವರು, ವಯೋನಾಯಕ-ಗರುಡ, ಆದ್ಯೈಃ—ಮೊದಲಾದವರಿಂದ, ವಂದ್ಯಂ—ವಂದ್ಯರಾದ ಮತ್ತು ಸ್ತುತಿಸಲ್ಪಡುವ 3. ಮಧು + ಆಖ್ಯಂ—ನಿರ್ದಿಷ್ಟವಾದ ಜ್ಞಾನಾನಂದ ಸ್ವರೂಪವುಳ್ಳ ; 4. ಮಂತ್ರಸಿದ್ಧಂ—ಸಕಲ ವೇದಗಳಿಂದ ಪ್ರತಿಪಾದ್ಯವಾದ ; 5. ಆಪನ್ನ-ಪುಂಸಾಂ—ಶರಣಾಗತರಾದ ರುದ್ರಾದಿದೇವತೆಗಳಿಗೂ, ಜ್ಞಾನಯೋಗ್ಯ ಜನ-ಗಳಿಗೂ ; ಪಾರಮೇಷ್ಠ್ಯಂ ಪದಂ—ಸರ್ವೋತ್ತಮವಾದ ಹರಿಸರ್ವೋತ್ತಮ ಜೀವೋತ್ತಮಾದಿ ಸಚ್ಛಾಸ್ತ್ರಪ್ರತಿಪಾದ್ಯವಾದ ಜ್ಞಾನವನ್ನು (ದತ್ವಾ—ಕೊಟ್ಟು), ಪಾತಾರಂ—ರಕ್ಷಿಸುವಂಥಾ ; ಅವತಾರಂ—ವ್ಯಾಸರೆಂಬ ಅವತಾರ-ವನ್ನು ; ಇಹ—ಈ ಭೂಮಿಯಲ್ಲಿ ; ಅದ್ಯ—ಈಗ ಎಂದರೆ ಈ ವೈವಸ್ವತ-ಮನ್ವಂತರದಲ್ಲಿ ; ೧. ಕೃತವತ—ಮಾಡಿದಂಥಾ ; ೨. ಅಪವಿಪದಃ—ವಿಪತ್ತು ಗಳಿಂದ (ಲಕ್ಷಣಯಾ ಸಕಲ ದೋಷಗಳಿಂದ) ದೂರನಾದ ಅಥವಾ ಭಕ್ತರ ವಿಪತ್ತುಗಳನ್ನು ದೂರಮಾಡುವಂಥಾ ; ೩. ಪ್ರಾಪ್ತುಃ—ಜಗತ್ತಿನಲ್ಲಿ ಎಲ್ಲ ಕಡೆಯೂ ವ್ಯಾಪ್ತನಾಗಿರುವಂಥಾ ; ೪. ಮರುತಸ್ಯ—ವಾಯುದೇವರೇ ಮೊದಲಾದ ಸಕಲ ದೇವತೆಗಳಿಗೂ ಒಡೆಯನಾದ ಅಥವಾ ವೇದಾದಿ ಸತ್ಪ್ರಮಾಣಗ್ರಂಥಗಳಲ್ಲಿ ಗೇಯನಾದ ; ೫. ಅಸ್ಯ—'ಅ ಇತಿ ಬ್ರಹ್ಮ' ಎಂಬ ಐತರೇಯ ಶ್ರುತಿಯಂತೆ ಅಕಾರಶಬ್ದವಾಚ್ಯನಾದ ಶ್ರೀಹರಿಯ ; [ಸಂಸ್ತವೇ—ಸ್ತೋತ್ರಮಾಡುವುದರಲ್ಲಿ ; ಶಕ್ತಃ ನಾಸ್ಮಿ—ಎಂದು ಹಿಂದಿನ ಶ್ಲೋಕದಿಂದ ಅನುವೃತ್ತಿ ಮಾಡಿಕೊಳ್ಳಬೇಕು] ಕಿಮುತ—ನಾನು ಸಮರ್ಥನಲ್ಲವೆಂಬುದನ್ನು ಹೇಳುವುದೇನಿದೆ ? ಎಂದರೆ ಸರ್ವಥಾ ಅಸಮರ್ಥನೆಂದು ಸ್ವಯಂಸಿದ್ಧವಾದ ವಿಷಯ ಎಂದು ಭಾವ.

---

ದೈತ್ಯರು ಬಾಧಿಸುತ್ತಿರೆಂದೂ ಅದರಿಂದ ಅವರೆಲ್ಲರಿಗೂ ಅಜ್ಞಾನ ಮಿಥ್ಯಾಜ್ಞಾನಾದಿ ದೋಷಗಳುಂಟೆಂಬುದೂ ಅನೇಕ ಉಪನಿಷತ್ತುಗಳಲ್ಲಿ ಪ್ರತಿಪಾದಿತವಾಗಿದೆ. ಕಲಿಯು ಹೇಗೆ ಅಜ್ಞಾನಾದಿ ದೋಷಗಳನ್ನುಂಟುಮಾಡುವನೆಂಬುದನ್ನು ಶ್ರೀಮನ್ಮಹಾಭಾರತ-ತಾತ್ಪರ್ಯನಿರ್ಣಯದ ಹತ್ತನೇ ಅಧ್ಯಾಯದಲ್ಲಿ ವ್ಯಾಸಾವತಾರಕಥಾ ಸಂದರ್ಭದಲ್ಲಿ ಮನಮುಟ್ಟುವಂತೆ ಶ್ರೀಮದಾಚಾರ್ಯರೇ ವರ್ಣಿಸಿದ್ದಾರೆ.

**102.** ಭಾವಾರ್ಥ—ವೇದವ್ಯಾಸರಾಗಿ ಅವತರಿಸಿದ್ದು— ಶ್ರೀಹರಿಯ ಮಹಿಮೆಯನ್ನು ಹೊಗಳುವುದಕ್ಕೆಂದು ಅನಂತ ವೇದಗಳು ಹೊರಟವು. ಅವುಗಳೆಲ್ಲಾ ಎಷ್ಟೆಷ್ಟು ಮಹಿಮೆ ಹೇಳಿದರೂ ಆ ಮಹಿಮೆಯ ಕಿಂಚಿದ್ಭಾಗವೂ ಮುಗಿಯಲಿಲ್ಲ. ಅವುಗಳು ಹೇಳಿ ಹೇಳಿ ಸೋತು ಹಿಂದಿರುಗಿದುವು ಎಂದು ತೈತ್ತಿರೀಯ ಉಪನಿಷತ್ತಿನಲ್ಲಿ ಹೇಳಿದೆ. ಹೀಗೆ ಅನಂತ ವೇದಗಳಿಗೇ ಸ್ತುತಿ ಮಾಡಲು ಅಸಮರ್ಥವಾದಾಗ ಅಲ್ಪಮತಿಯಾದ ನಾನೇನು ಹೊಗಳೇನು ? ಆ ವಿಷ್ಣುವಿನ ಪಾದಧೂಳಿನ ಮಹಿಮೆ-ಯನ್ನೇ ಹೊಗಳುವುದಕ್ಕೆ ಅಸಮರ್ಥನಾದ ಈ ನಾನು ಅಪಾರ ಮಹಿಮೆ-ಯುಳ್ಳ ಶ್ರೀಹರಿಯನ್ನು ಹೊಗಳುವುದಕ್ಕೆ ಸಮರ್ಥನಲ್ಲವೆಂಬುದನ್ನು ಹೇಳುವು-ದೇನಿದೆ—ಸ್ವಯಂಸಿದ್ಧವಾದ ವಿಷಯ.

ಏಕೆಂದರೆ ಆ ಭಗವಂತ ಅಪಾರವಾದ ದಯಾನಿಧಿ. ವೈವಸ್ವತ-ಮನ್ವಂತರದಲ್ಲಿ ದ್ವಾಪರಯುಗದ ಹೊತ್ತಿಗೇ ಕಲಿಯ ಪ್ರಾಬಲ್ಯದಿಂದ ಜ್ಞಾನವು ಶಿಥಿಲವಾಯಿತಲ್ಲದೆ ರುದ್ರೇಂದ್ರಾದಿಗಳಿಗೂ ಕಿಂಚಿತ್ ಜ್ಞಾನ-ಸ್ಖಲನವುಂಟಾಯಿತು. ಇನ್ನು ಮನುಷ್ಯರ ಪಾಡೇನು ? ಆಗ ಅವರಿಂದ ಪ್ರಾರ್ಥಿತನಾದ ಆ ನಾರಾಯಣ ವೇದವ್ಯಾಸನಾಗಿ ಅವತಾರ ಮಾಡಿ ಸಜ್ಜನ-ರಿಗೆ ಜ್ಞಾನಮಾರ್ಗವನ್ನು ತೋರಿಸಿಕೊಟ್ಟು ಅವರಿಗೆಲ್ಲಾ ಮೋಕ್ಷೋಪಯೋಗಿ ಜ್ಞಾನವನ್ನು ಬೋಧಿಸಿದನು. (ಈ ವಿಚಾರವು ತಾತ್ಪರ್ಯನಿರ್ಣಯದಲ್ಲಿ ೧೦ನೇ ಅಧ್ಯಾಯದಲ್ಲಿ ವಿಸ್ತಾರವಾಗಿ ನಿರೂಪಿತವಾಗಿದೆ.) ಆದ್ದರಿಂದಲೇ ಆ ಸ್ವಾಮಿ ರುದ್ರೇಂದ್ರಾದಿ ಸಕಲ ದೇವತೆಗಳಿಂದ ವಂದ್ಯನೂ ಸ್ತುತ್ಯನೂ ಆಗಿದ್ದಾನೆ. ಅವನು ಕೇವಲ ಜ್ಞಾನಾನಂದಮಯಮೂರ್ತಿಯೆಂದು ಸಕಲ ವೇದಗಳೂ ಸಾರುತ್ತವೆ. ಆ ವೇದವ್ಯಾಸರು ರುದ್ರಾದಿಗಳಿಗೆ ಮಾತ್ರವಲ್ಲ, ಜೀವೋತ್ತಮರಾದ ಬ್ರಹ್ಮವಾಯುಗಳಿಗೂ ಸ್ವಾಮಿಯೂ ಗುರುವೂ ಆಗಿ-ದ್ದಾರೆ. ಬ್ರಹ್ಮಾಂಡದ ಒಳಗೆ ಹೊರಗೆಲ್ಲಾ ವ್ಯಾಪ್ತನಾಗಿದ್ದಾನೆ (ಪ್ರಾಪ್ತಃ). ಅವನು ಭಕ್ತರ ಸಕಲಾನಿಷ್ಟಗಳನ್ನೂ ನಿವಾರಣೆ ಮಾಡಿ ಕಾಪಾಡುತ್ತಾನೆ. (ವೇದವ್ಯಾಸರು ಅವತಾರ ಮಾಡಿದ ವಿಷಯ ಪುನಃ ೩೬—೩೭ನೇ ಶ್ಲೋಕಗಳಲ್ಲಿ ಬರುವುದು.)

**103. ವಾಯುಪರವಾಗಿ ಅನ್ವಯಾರ್ಥ**–೧. ಅದ್ಯ–ಈಗ (ಎಂದರೆ ಕಲಿಕಾಲದಲ್ಲಿ), ಇಹ–ಇಲ್ಲಿ ಎಂದರೆ ಭೂಲೋಕದಲ್ಲಿ : ಕಲಿ-ಮಲ-ಕಲುಷೇ–ಕಲಿಯು ಪ್ರಭಾವದಿಂದ ಅಜ್ಞಾನ-ಮಿಥ್ಯಾಜ್ಞಾನಾದಿ ದೋಷಗಳಿಂದ ದೂಷಿತ-ರಾದ; ಅಥವಾ ಕಲಿಸಂಬಂಧಿ ಪಾಪದಿಂದ ಪಾಪಿಷ್ಠರಾದ (ಪು.ರಾ.) ಅಥವಾ ಕಲಿಯು ಪ್ರಭಾವದಿಂದ ದೋಷದುಷ್ಟರಾದ ಎಂದರೆ ದುರ್ಮಾರ್ಗಾವ-ಲಂಬಿಗಳಾದ (ಪು.ರಾ.) ; ಅಸ್ಮಿನ್ ಜನೇ–ಈ ಯೋಗ್ಯಜನರಲ್ಲಿ ; ಜ್ಞಾನ-ಮಾರ್ಗಂ ಆವಿಷ್ಕರ್ತುಕಾಮಂ–ತತ್ವಜ್ಞಾನದ ಪದ್ಧತಿಯನ್ನು ತೋರಿಸಿಕೊಟ್ಟು ಉದ್ಧಾರಮಾಡಬೇಕೆಂಬ ಇಚ್ಛೆಯುಳ್ಳ; ೨. ಚಂದ್ರೇಂದ್ರ....ನಾಯಕಾದ್ಯೈಃ ವಂದ್ಯಂ–ಗರುಡಶೇಷರುದ್ರ-ಚಂದ್ರಸೂರ್ಯಾದಿ ಸಕಲ ದೇವತೆಗಳಿಂದಲೂ ವಂದ್ಯರೂ ಸ್ತುತ್ಯರೂ ಆದ; ೩. ಆಪನ್ನಪುಂಸಾಂ ಪಾತಾರಂ–ಶರಣಾಗತ-ರಾದ ಭಕ್ತಜನರನ್ನು ರಕ್ಷಿಸುವ ; ೪. ಮಂತ್ರಸಿದ್ಧಂ–ಬಳಿತ್ಥಾಸೂಕ್ತಾದಿ ಋಙ್ಮಂತ್ರಗಳಲ್ಲಿ ಪ್ರಸಿದ್ಧರಾದ ; ೫. ಮಧ್ವಾಖ್ಯಂ ಅವತಾರಂ ಕೃತವತಃ–ಮಧ್ವಾಚಾರ್ಯರೆಂದೂ ಆನಂದತೀರ್ಥರೆಂದೂ ಪ್ರಖ್ಯಾತವಾದ ಅವತಾರ-ವನ್ನು ಎತ್ತಿದ ; ೬. ಅಪವಿಪದಃ–ಜರಾಮರಣಾದಿ ಯಾವ ವಿಪತ್ತುಗಳೂ ಇಲ್ಲದ ಮತ್ತು ಭಕ್ತರ ವಿಪತ್ತುಗಳನ್ನು ಪರಿಹಾರ ಮಾಡುವ ; ೩. ಪಾರ-ಮೇಷ್ಠ್ಯಂ ಪದಂ ಪ್ರಾಪ್ತುಃ–ಮುಂದಿನ ಕಲ್ಪದಲ್ಲಿ ಬ್ರಹ್ಮಪದವಿಗೆ ಬರುವ ಅಥವಾ ಸತ್ಯಲೋಕಾಧಿಪತ್ಯವನ್ನು ಹೊಂದುವ ; ೪. ಮಾರುತಸ್ಯ–ವಾಯುದೇವರ ; (ಸಂಸ್ತವೇ ಶಕ್ತಃ ನಾಸ್ಮಿ) ಕಿಮುತ–ಸ್ತೋತ್ರಮಾಡುವು-ದಕ್ಕೆ ಸಮರ್ಥನಾಗಿಲ್ಲವೆಂದು ಹೇಳುವುದೇನಿದೆ : (ಸ್ವಯಂಸಿದ್ಧವಾದ ವಿಷಯ ಎಂದು ಭಾವ.) (ಶ್ರೀಮನ್ಮಧ್ವರು ಅವತಾರ ಮಾಡಿ ಸಜ್ಜನೋದ್ಧಾರ ಮಾಡಿದ ವಿಚಾರ ಕೊನೆಯಲ್ಲಿ ಪುನಃ ೩೮–೩೯ನೇ ಶ್ಲೋಕಗಳಲ್ಲೂ ಬರುವುದು.)

**104. ವಾಯುಪರವಾಗಿ ಭಾವಾರ್ಥ**—ಹಿಂದಿನ ಶ್ಲೋಕದಲ್ಲಿ ಹೇಳಿದ ಪ್ರಕಾರ ಶ್ರೀಮದಾನಂದತೀರ್ಥರ ಪಾದಧೂಳಿಗಳ ಮಹಿಮೆಯನ್ನೇ ಸಮಗ್ರವಾಗಿ ವರ್ಣಿಸಲು ಅಸಮರ್ಥನಾದ ನಾನು ಇನ್ನು ಆ ಮಧ್ವಾ-ಚಾರ್ಯರ ಅಪಾರ ಮಹಿಮೆಯನ್ನು ಬಣ್ಣಿಸಲು ಸುತರಾಂ ಅಸಮರ್ಥನೆಂದು

ಹೇಳುವುದೇನಿದೆ ? ಅದು ಸ್ವತಸ್ಸಿದ್ಧ. ಏಕೆಂದರೆ ಈ ಮಧ್ವಾಚಾರ್ಯರು ಸಾಮಾನ್ಯ ವ್ಯಕ್ತಿಗಳಲ್ಲ, ಅವತಾರ ಪುರುಷರು. ಗರುಡಶೇಷರುದ್ರರೇನು, ಇಂದ್ರಚಂದ್ರಸೂರ್ಯಾದಿ ತೆತ್ತೀಸುಕೋಟಿ ದೇವತೆಗಳಿಂದಲೂ ಇವರು ನಮ್ಯರೂ ಸ್ತುತ್ಯರೂ ಆಗಿದ್ದಾರೆ. ಅವರ ಅವತಾರ ಮಹಿಮೆ ಬಳಿತ್ಥಾದಿ ಋಗ್ವೇದ ಸೂಕ್ತಗಳಲ್ಲೇ ನಿರೂಪಿತವಾಗಿದೆ. ಇವರ ಮೂಲರೂಪವಾದ ಮುಖ್ಯಪ್ರಾಣನ ಮಹಿಮೆಯಂತೂ ಬೃಹದಾರಣ್ಯಕ–ಛಾಂದೋಗ್ಯ–ಷಟ್ಪ್ರಶ್ನಾದಿ ಅನೇಕ ಉಪನಿಷದಾದಿ ಶ್ರುತಿಗಳಲ್ಲೂ ಪಾಂಚರಾತ್ರೇತಿಹಾಸಾದಿ ಸ್ಮೃತಿಗಳಲ್ಲೂ ಅದ್ಭುತವಾಗಿ ವರ್ಣಿಸಲ್ಪಟ್ಟಿದೆ. ಈ ವಾಯುದೇವರೇ ಜೀವೋತ್ತಮರೆಂದೂ ಮುಂದಿನ ಕಲ್ಪದಲ್ಲಿ ಇವರೇ ಬ್ರಹ್ಮಪದವಿಗೆ ಬಂದು ಸತ್ಯಲೋಕಾಧಿಪತ್ಯವನ್ನು ಪಡೆಯುವರೆಂದೂ 'ಪವಮಾನಃ ಪ್ರಜಾಪತಿಃ' 'ವಾಯುರ್ಹ್ಯೇಷಃ ಪ್ರಜಾಪತಿಃ' ಮೊದಲಾದ ಶ್ರುತಿಗಳಿಂದಲೂ 'ವಾಯುರ್ಹಿ ಬ್ರಹ್ಮತಾಮೇತಿ' ಮೊದಲಾದ ಸ್ಮೃತಿಗಳಿಂದಲೂ ಹೊರಬೀಳುತ್ತದೆ.

ಈ ವಾಯುದೇವರಿಗೆ ಅಜ್ಞಾನ ಭಯ ದೈತ್ಯಬಾಧೆ ಜನನ-ಮರಣ ಅಪಮೃತ್ಯುಗಳೇ ಮೊದಲಾದ ಯಾವ ವಿಪತ್ತುಗಳೂ ಇಲ್ಲವೆಂದೂ ಅದಕ್ಕೆ ವಿಪರೀತವಾಗಿ ಅವರ ಸ್ಮರಣೆ ಮಾಡುವವರನ್ನು ಇಂಥಾ ಬಾಧೆಗಳಿಂದ ತಪ್ಪಿಸಬಲ್ಲರೆಂದೂ ಬೃಹದಾರಣ್ಯಕಾದಿ ಶ್ರುತಿಗಳು ಸಾರುತ್ತವೆ.

ಇವರಿಗೆ ಹನುಮ ಭೀಮ ಮಧ್ವರೆಂಬ ಅವತಾರತ್ರಯವುಂಟೆಂದು ಸಾರುವ ಬಳಿತ್ಥಾಶ್ರುತಿಯು ಮಧ್ವಾಚಾರ್ಯರು ಈ ಕಲಿಕಾಲದಲ್ಲಿ ಅವತಾರ ಮಾಡಲು ಕಾರಣವೇನೆಂಬುದನ್ನು ಸಂಗ್ರಹಿಸಿ ಹೇಳುತ್ತದೆ. ಶ್ರೀಮದಾಚಾರ್ಯರ ಅವತಾರವಾಗುವುದಕ್ಕೆ ಪೂರ್ವದಲ್ಲಿ ಈ ಭೂಮಿಯಲ್ಲಿ (ಭರತಖಂಡದಲ್ಲಿ) ಕಲಿಕಾಲದ ಪ್ರಾಬಲ್ಯದಿಂದ ಜೈನ ಬೌದ್ಧ ಚಾರ್ವಾಕಾದಿ ಅವೈದಿಕಮತಗಳು ಹೆಚ್ಚಿಕೊಂಡುವು. ಅದರಿಂದ ವೈದಿಕಧರ್ಮದಲ್ಲಿ ಶ್ರದ್ಧೆಯೇ ಕುಂದಿಹೋಯಿತು. ಜೊತೆಗೆ ವೇದಪ್ರಾಮಾಣ್ಯವನ್ನು ಒಪ್ಪುವ ಮತಗಳಾದರೂ ಮೂಲಸಿದ್ಧಾಂತಗಳ ದೋಷಗಳಿಂದ ಕೂಡಿದ್ದ ಸಾಂಖ್ಯ-ಯೋಗ, ನೈಯಾಯಿಕಾದಿ ದರ್ಶನಗಳೇ ಆಗಲಿ ಸೂತ್ರೋಪನಿಷದ್ಗೀತಾದಿ ಭಾಷ್ಯಗಳನ್ನು ರಚಿಸಿದ ಶಂಕರ–ರಾಮಾನುಜಾದಿಗಳು ಬೋಧಿಸಿದ ವೇದಾಂತ-

ವಾಗಲಿ ಮೋಕ್ಷೋಪಯೋಗಿಯಾದ ಹರಿಸರ್ವೋತ್ತಮತ್ವ ಜ್ಞಾನವನ್ನು ತಿಳಿಸಲು ಅಸಮರ್ಥವಾಗಿದ್ದುವು. ಇದರಿಂದ ಸರಿಯಾದ ಮಾರ್ಗವು ಯಾವು-ದೆಂಬುದೇ ತಿಳಿಯದೆ ಸಜ್ಜನರೂ ಸಹ ತಪ್ಪುದಾರಿ ಹಿಡಿದು ಭ್ರಷ್ಟರಾಗು-ತ್ತಿದ್ದರು.* ಅದನ್ನು ನೋಡಿ ಖಿನ್ನರಾದ ರುದ್ರಾದಿ ದೇವತೆಗಳಿಂದ ಪ್ರಾರ್ಥಿತ-ನಾದ ಶ್ರೀಹರಿ ಈ ವಾಯುದೇವರಿಗೆ ಆಜ್ಞೆ ಮಾಡಿದ ಕಾರಣ ಅವರೇ ಮಧ್ವಾಚಾರ್ಯರಾಗಿ ಅವತಾರ ಮಾಡಿ ಅನಾದಿಪರಂಪರಾಪ್ರಾಪ್ತವಾದ ಶ್ರೀಮದ್ವೈಷ್ಣವಸಿದ್ಧಾಂತವನ್ನು ಪುನಃ ಸ್ಥಾಪನೆಮಾಡಿ ತಪ್ಪುದಾರಿ ಹಿಡಿದಿದ್ದ ಸಜ್ಜನರನ್ನು ತಿದ್ದಿ ಸನ್ಮಾರ್ಗ ತೋರಿಸಿ ಉದ್ಧಾರ ಮಾಡಿದರು. ಇಂಥಾ ಮಹಾನುಭಾವರಾದ ಶ್ರೀಮನ್ಮಧ್ವಾಚಾರ್ಯರ ಅಗಾಧ ಮಹಿಮೆ ಯನ್ನು ಪಾಮರನಾದ ನಾನು ವರ್ಣಿಸಲು ಸರ್ವಥಾ ಸಮರ್ಥನಲ್ಲವೆಂದು ಹೇಳತಕ್ಕದ್ದೇಸಿದೆ ಎಂದು ಭಾವ.

## ಪೀಠಿಕೆಯ ಎರಡನೇ ವಿಭಾಗ

### (ಶ್ಲೋ. ೫–೮) ವಾಯುದೇವರಲ್ಲಿ ಬಿನ್ನಪ

### ಐದನೇ ಶ್ಲೋಕ. ಸದ್ಬುದ್ಧಿಗಾಗಿ ಬೇಡಿಕೆ.

**105.** (**ಅವತಾರಿಕೆ.**) ಹೀಗೆ ನಾಲ್ಕನೇ ಶ್ಲೋಕದಲ್ಲಿ ತಾವು ಶ್ರೀ-ಹರಿವಾಯುಗಳನ್ನು ಸ್ತುತಿಸುವುದಕ್ಕೆ ಅಸಮರ್ಥರೆಂದು ಹೇಳಿ ಈಗ ತಾವು ರಚಿಸಲಿಚ್ಛಿಸಿರುವ ಸ್ತುತಿಗೆ ಉಪಯುಕ್ತವಾದ ಸದ್ಬುದ್ಧಿಯನ್ನು ಕರುಣಿಸ-ಬೇಕೆಂದು 'ಉದ್ಯದ್–' ಎಂಬ ಶ್ಲೋಕದಿಂದ ಪ್ರಾರ್ಥಿಸುತ್ತಾರೆ. (ಕ.ಕ., ವಿ., ಭ., ಪು.ರಾ.)

---

* ಈ ಕಾಲದ ಪರಿಸ್ಥಿತಿಯು ಮಣಿಮಂಜರಿಯಲ್ಲಿ ಐದರಿಂದ ಎಂಟರವರೆಗಿನ ನಾಲ್ಕು ಅಧ್ಯಾಯಗಳಲ್ಲಿ ವಿಸ್ತಾರವಾಗಿಯೂ, ಮಧ್ವವಿಜಯದ ಪ್ರಥಮ ಸರ್ಗದ ಉತ್ತರಾರ್ಧದಲ್ಲಿ ಸಂಕ್ಷೇಪವಾಗಿಯೂ ವರ್ಣಿಸಲ್ಪಟ್ಟಿದೆ.

**ಉದ್ಯದ್-ವಿದ್ಯುತ್-ಪ್ರಚಂಡಾಂ ನಿಜರುಚಿನಿಕರ-**
**ವ್ಯಾಪ್ತಲೋಕಾವಕಾಶೋ**
**ಬಿಭ್ರದ್-ಭೀಮೋ ಭುಜೇ ಯೋ ಽಭ್ಯುದಿತದಿನಕರಾ-**
**ಽಭಾಂಗದಾಢ್ಯಪ್ರಕಾಂಡೇ ।**
**ವೀರ್ಯೋದ್ಧಾರ್ಯಾಂ ಗದಾಗ್ರ್ಯಾ—ಮಯಮಿಹ ಸುಮತಿಂ**
**ವಾಯುದೇವೋ ವಿದಧ್ಯಾ-**
**ದಧ್ಯಾತ್ಮಜ್ಞಾನನೇತಾ ಯತಿವರಮಹಿತೋ**
**ಭೂಮಿಭೂಷಾಮಣಿರ್ಮೇ ॥ ೫ ॥**

**ಪದವಿಭಾಗ**—ಉದ್ಯದ್....ಪ್ರಚಂಡಾಂ, ನಿಜ....ಕಾಶಃ, ಬಿಭ್ರತ್, ಭೀಮಃ, ಭುಜೇ, ಯಃ, ಅಭ್ಯುದಿತ....ಪ್ರಕಾಂಡೇ, ವೀರ್ಯೋದ್ಧಾರ್ಯಾಂ, ಗದಾಗ್ರ್ಯಾಂ, ಅಯಂ, ಇಹ, ಸುಮತಿಂ, ವಾಯುದೇವಃ, ವಿದಧ್ಯಾತ್, ಅಧ್ಯಾತ್ಮಜ್ಞಾನನೇತಾ, ಯತಿವರಮಹಿತಃ, ಭೂಮಿಭೂಷಾಮಣಿಃ, ಮೇ ॥ (**ಹರಿಪರವಾಗಿ**)....ಭೀಮಃ, ಭುಜೇಯಃ (ಅಥವಾ ಅಭುಜೇಯಃ), ಅಭ್ಯುದಿತದಿನಕರಾಭಾಂ, ಗದಾಢ್ಯಪ್ರಕಾಂಡೇ....(ಎಂದು ಪದವಿಭಾಗ ಮಾಡಿ ಕೊಳ್ಳಬೇಕು).

**106. ಶ್ಲೋಕದ ವಿಶ್ಲೇಷಣೆ**—ಹರಿಪರವಾಗಿ ಒಂದು ರೀತಿ ಅನ್ವಯವಾದರೆ ವಾಯುಪರವಾಗಿ ಇನ್ನೊಂದು ರೀತಿ ಆಗುತ್ತದೆ. ಹರಿಪರವಾಗಿ ಅರ್ಥ ಮಾಡುವಾಗ—ಅಯಂ ಮೇ ಸುಮತಿಂ ವಿದಧ್ಯಾತ್—ಈ (ಹಿಂದಿನ ಶ್ಲೋಕದಲ್ಲಿ ಪ್ರಾರ್ಥಿತರಾದ) ವೇದವ್ಯಾಸದೇವರು ನನಗೆ (ಬಿಂಬಾಪರೋಕ್ಷವೆಂಬ) ಸದ್ಬುದ್ಧಿಯನ್ನು ಉಂಟುಮಾಡಲಿ ಎಂಬುದೇ ಪ್ರಧಾನವಾಕ್ಯ. ಈ ಪ್ರಧಾನ ವಾಕ್ಯದಲ್ಲಿರುವ **ಅಯಂ** ಎಂಬ ವಿಶೇಷ್ಯಕ್ಕೆ 1. ಗದಾಗ್ರ್ಯಾಂ ಗದಾಢ್ಯಪ್ರಕಾಂಡೇ ಬಿಭ್ರತ್, 2. ನಿಜ....ಕಾಶಃ, 3. ಭೀಮಃ, 4. ಭುಜೇಯಃ ಅಥವಾ ಅಭುಜೇಯಃ, 5. ವಾಯುದೇವಃ, 6. ಅಧ್ಯಾತ್ಮಜ್ಞಾನನೇತಾ, 7. ಯತಿವರಮಹಿತಃ, 8. ಭೂಮಿಭೂಷಾಮಣಿಃ ಎಂದು ಎಂಟು ವಿಶೇಷಣಗಳು. ಈ ಪೈಕಿ ಮೊದಲನೆಯ ವಿಶೇಷಣ-

ದಲ್ಲಿರುವ ಗದಾಗ್ರ್ಯಾಂ ಎಂಬುದಕ್ಕೆ (ಕ) ಉದ್ಯದ್ವಿದ್ಯುತ್ಪ್ರಚಂಡಾಂ, (ಖ) ಅಭ್ಯುದಿತದಿನಕರಾಭಾಂ, (ಗ) ಇಹ ವೀರ್ಯೋದ್ಧಾರ್ಯಾಂ ಎಂದು ಮೂರು ವಿಶೇಷಣಗಳು. ಏವಂಚ 1. ಕ–ಖ–ಗ ಇಂಥಾ ಗುಣಗಳುಳ್ಳ ವೇದವಾಕ್ಯ-ವನ್ನು ತಮ್ಮ ನಾಲಿಗೆಯಲ್ಲಿ ಧರಿಸಿರುವ, 2....8. ಈ ಮಹಿಮಾನ್ವಿತರಾದ ಈ ವೇದವ್ಯಾಸರು ನನಗೆ ಬಿಂಬಾಪರೋಕ್ಷವೆಂಬ ವಿಶೇಷಜ್ಞಾನವನ್ನು ಕರುಣಿಸಲಿ ಎಂಬುದೇ ಈ ಶ್ಲೋಕದ ಹರಿಪರವಾದ ಭಾವಾರ್ಥ.

ಇನ್ನು ವಾಯುಪರವಾಗಿ ಅರ್ಥ ಹೇಳುವಾಗ—ಅಯಂ ವಾಯುದೇವಃ ಮೇ ಇಹ ಸುಮತಿಂ ವಿದಧ್ಯಾತ್–ಮಧ್ವಾಚಾರ್ಯರಾಗಿ ಅವತಾರ ಮಾಡಿ-ರುವ ಈ ವಾಯುದೇವರು ನನಗೆ ವಾಯುಸ್ತುತಿಯನ್ನು ರಚಿಸುವುದಕ್ಕೆ ಉಪಯುಕ್ತವಾದ ಒಳ್ಳೆಯ (ಕುಶಲವಾದ) ಬುದ್ಧಿಯನ್ನು ದಯಪಾಲಿಸಲಿ ಎಂಬುದೇ ಪ್ರಧಾನವಾಕ್ಯ. ವಾಯುದೇವಃ ಎಂಬುದಕ್ಕೆ 1) ಅಧ್ಯಾತ್ಮ-ಜ್ಞಾನನೇತಾ, 2) ಯತಿವರಮಹಿತಃ, 3) ಭೂಮಿಭೂಷಾಮಣಿಃ ಎಂದು ನೇರವಾಗಿ ಮೂರು ವಿಶೇಷಣಗಳು : 4) ಯಃ (ದ್ವಾಪರೇ) ಗದಾಗ್ರ್ಯಾಂ ಭುಜೇ ಬಿಭ್ರತ್ ಭೀಮಃ (ಅಭೂತ್) ಎಂಬುದು ಮತ್ತೊಂದು ವಿಶೇಷಣ. 4ರಲ್ಲಿರುವ ಗದಾಗ್ರ್ಯಾಂ ಎಂಬುದಕ್ಕೆ (ಅ) ಉದ್ಯದ್ವಿದ್ಯುತ್ಪ್ರಚಂಡಾಂ (ಆ) ವೀರ್ಯೋದ್ಧಾರ್ಯಾಂ ಎಂದು ಎರಡು ವಿಶೇಷಣಗಳಾದರೆ 'ಭುಜೇ'ಗೆ ದಿನಕರಾ....ಪ್ರಕಾಂಡೇ ಎಂದೂ, ಭೀಮಃ ಎಂಬುದಕ್ಕೆ ನಿಜ....ಕಾಶಃ ಎಂದೂ ಒಂದೊಂದು ವಿಶೇಷಣ. ಅಂತೂ ಒಟ್ಟಿನಲ್ಲಿ (4) ಯಾರು ದ್ವಾಪರದಲ್ಲಿ (ಅ–ಆ) ಇಂಥಾ ಗದೆಯನ್ನು (ಇ) ಇಂಥಾ ಬಾಹುವಿನಲ್ಲಿ ಧರಿಸಿದ ಇಂಥಾ ಭೀಮಸೇನನಾಗಿದ್ದನೋ, 1) 2) 3) ಇಂಥಾ ಮಧ್ವಾವತಾರರೂಪಿ ವಾಯುದೇವರು ನನಗೆ ವಾಯುಸ್ತುತಿಯನ್ನು ರಚಿಸುವ ವಿಷಯದಲ್ಲಿ ಬೇಕಾದ ಕವಿತಾದಿ ಶಕ್ತಿಯನ್ನು ಕರುಣಿಸಲಿ ಎಂಬುದೇ ವಾಯುಪರವಾದ ಭಾವಾರ್ಥ. ಇನ್ನು ದಂಡಾನ್ವಯಕ್ಕೆ ಮೊದಲು ಕಠಿನ ಶಬ್ದಾರ್ಥಗಳಿಗೆ ಹೋಗೋಣ.

**107. ಉದ್ಯದ್ವಿದ್ಯುತ್ಪ್ರಚಂಡಾಂ............ಉದ್ಯತ್**ಎಂಬುದು ಉತ್ ಉಪಸರ್ಗಸಹಿತವಾದ ಇಣ್ ಧಾತುವಿನ (ಅದಾದಿ. ಪ.) ಶತ್ರಂತ

(ವರ್ತಮಾನ ಕೃದಂತ) ರೂಪ ; ಇದಕ್ಕೆ ಉದಯಿಸುತ್ತಿರುವ ಎಂದರ್ಥ. ವಿದ್ಯುತ್–ಸಿಡಿಲಿನಂತೆ, ಪ್ರಚಂಡಾಂ–ಉಗ್ರವಾಗಿರುವ, ಎಂದರೆ ಸಿಡಿಲು ಹೊಡೆದರೆ ಹೇಗೆ ಅನಾಹುತವಾಗುವುದೋ ಹಾಗೆ ಭೀಮ ತನ್ನ ಗದೆಯನ್ನು ಬೀಸಿದರೆ ಸರ್ವನಾಶವಾಗಿ ಹೋಗುತ್ತಿತ್ತು ಎಂದು ಭಾವ. ಭೀಮಸೇನನ ಗದೆಗೆ ಹತ್ತುಸಾವಿರ ಆನೆಗಳ ಬಲವಿತ್ತೆಂದು ಮಹಾಭಾರತದಲ್ಲಿ ಹೇಳಿದೆ. ಹರಿಪರವಾಗಿ ಅರ್ಥ ಹೇಳುವಾಗ ಇದು ವೇದವಾಕ್ಯಕ್ಕೆ ವಿಶೇಷಣವಾಗುತ್ತದೆ. ಉದ್ಯತ್ ಎಂದರೆ ಯಾವಾಗಲೂ ಉದಯಿಸಿರುವ, ಮರೆಯಾಗದ ಅಥವಾ ಅನಾದಿನಿತ್ಯವಾದ ಎಂದರ್ಥ. ವಿ–ವಿಶೇಷವಾಗಿ, ದ್ಯುತ್ (ದ್ಯುತ ದೀಪ್ತೌ ಧಾತು ಭ್ವಾ. ಆ.)–ಪ್ರಕಾಶಿಸುವಂಥಾ ಎಂದು ಒಂದರ್ಥ. 'ವಿಃ ಪಕ್ಷಿ-ಪರಮಾತ್ಮನೋಃ' ಎಂದು ವಿಶ್ವಕೋಶ ; 'ಅಕಯುಪ್ರವಿಸಂಭೂಮಸಖಹಾ ವಿಷ್ಣುವಾಚಕಾಃ' ಎಂಬ ಪ್ರಮಾಣದಂತೆಯೂ ವಿ ಎಂದರೆ ವಿಷ್ಣುವನ್ನು, ದ್ಯುತ್–ಪ್ರಕಾಶ ಮಾಡುವಂಥಾ ; ಅರ್ಥಾತ್ ಪರಮ ಮುಖ್ಯವೃತ್ತಿಯಿಂದ ವಿಷ್ಣುವನ್ನೇ ಹೇಳುವ ಎಂದರ್ಥ, ಪ್ರಚಂಡಾಂ ಎಂದರೆ ದುರ್ವಾದಿಗಳ ಯುಕ್ತಿಗಳಿಂದ ಅಪ್ರತಿಹತವಾದ, ಕುಯುಕ್ತಿಗಳಿಂದ ಅಪಾರ್ಥ ಹೇಳಿದರೆ ಹೊಂದಿಕೆಯಾಗದಂಥಾ ಎಂದರ್ಥ. ಈ ಮೂರೂ ವೇದವಾಕ್ಯಗಳಿಗೆ ಅನ್ವಯಿಸುತ್ತವೆ.

**108. ನಿಜ....ಕಾಶಃ** ಎಂಬುದು ವಾಯುಪರವಾದಾಗ ಭೀಮಸೇನ-ನಿಗೂ ಹರಿಪರವಾದಾಗ ವೇದವ್ಯಾಸರಿಗೂ ವಿಶೇಷಣವಾಗುತ್ತದೆ. ಶಬ್ದಾರ್ಥ ದಲ್ಲಿ ಹೆಚ್ಚು ವ್ಯತ್ಯಾಸವಿಲ್ಲ. ನಿಜಃ–ತಮ್ಮ , ರುಚಿ–ಪ್ರಕಾಶದ (ಸ್ಯುಃ ಪ್ರಭಾ ರುಗ್–ರುಚಿ–ಸ್ತ್ವಿಟ್ ಭಾ–ಅಮರ), ನಿಕರ–ಸಮೂಹದಿಂದ (ಸ್ತೋಮೌಘನಿಕರ-ವ್ರಾತ–ಅಮರ) ವ್ಯಾಪ್ತ–ಆವರಿಸಲ್ಪಟ್ಟ, ಲೋಕ–ಅವಕಾಶಃ–ಪ್ರಪಂಚದ ಅವಕಾಶವುಳ್ಳ : ಎಂದರೆ ತಮ್ಮ ಪ್ರಭೆಯಿಂದ ಪ್ರಪಂಚದ ಸಕಲ ಸ್ಥಳಗಳಲ್ಲೂ ಹರಡಿಕೊಂಡಿರುವ ಎಂದರ್ಥ. ಭೀಮಸೇನನ ಕೀರ್ತಿ ಜಗದ್ವ್ಯಾಪಿಯಾಗಿದೆಯೆಂದು ಭಾವ. ವೇದವ್ಯಾಸರ ಧ್ಯಾನಶ್ಲೋಕ-ದಲ್ಲಿ 'ವಿಜ್ಞಾನರೋಚಿಃಪರಿಪೂರಿತಾಂತರ್ಬಹ್ಯಾಂಡಕೋಶಂ' ಎಂದು ಹೇಳಿದಂತೆ ವೇದವ್ಯಾಸರ ಜ್ಞಾನದ ಕಿರಣಗಳ ಪ್ರಕಾಶವು ಬ್ರಹ್ಮಾಂಡದ ಒಳಗೆ–ಹೊರಗೆ ಎಲ್ಲ ಕಡೆಯೂ ವ್ಯಾಪಿಸಿಕೊಂಡಿದೆಯೆಂದರ್ಥ.

**109. ಭೀಮಃ** ॥ ಭೃತಾಃ ಮಾಃ—ಋಗಾದಿವಿದ್ಯಾಃ ಯಸ್ಮಿನ್ ಸಃ ಭೀಮಃ (ಪು.ರಾ., ಛ.) ಭೃತಾಃ ಮಾಃ–ಪ್ರಮಾಣಾನಿ ಋಗಾದಯೋಽಸ್ಮಿನ್ನಿತಿ (ಕ.ಕ., ವಿ.) ವಾ ಭೀಮಃ ॥ ಮಾ ಎಂದರೆ ಋಗಾದಿ ಸಪ್ತ ಪ್ರಮಾಣಗಳು ; ಅವುಗಳನ್ನು, ಭೀ–ಧರಿಸಿದವನಾದ್ದರಿಂದ ಭೀಮನೆಂದು ಹೆಸರು. ಈ ಶಬ್ದದ ನಿರುಕ್ತಿಯು ಭಾವವೃತ್ತವೆಂಬ ಗ್ರಂಥದಲ್ಲಿ ಹೇಳಿದೆಯೆಂದು ಉಪನಿಷದ್ಭಾಷ್ಯಗಳಲ್ಲಿ ಶ್ರೀಮದಾಚಾರ್ಯರೇ ತೋರಿಸಿದ್ದಾರೆ. (ಕ.ಕ., ಛ.)

ಭೃತ-ಮೋ ಭೀಮ ಇತ್ಯುಕ್ತೋ ವಾಚೋ ಮಾ ಮಾತರಃ ಸ್ಮೃತಾಃ ॥
ಋಗಾದ್ಯಾ ಇತಿಹಾಸಶ್ಚ ಪುರಾಣಂ ಪಂಚರಾತ್ರಕಮ್ ।
ಪ್ರೋಕ್ತಾಃ ಸಪ್ತ ಶಿವಾಸ್ತತ್ರ ಶಯೋ ಭೀಮಸ್ತತಃ ಸ್ಮೃತಃ ॥

(ಅರ್ಥ) ಮಾಃ–ಪ್ರಮಾಣಗಳನ್ನು, ಭೃತ (ಭೀ)–ಧರಿಸಿದವನಾದ್ದರಿಂದ ಭೀಮನೆಂದು ಹೆಸರು. ಮಾಃ ಎಂದರೆ ಸಪ್ತಪ್ರಮಾಣಗಳು. ಅವುಗಳು ಯಾವುವೆಂದರೆ ಋಗಾದಿ ನಾಲ್ಕು ವೇದಗಳು, ಮೂಲರಾಮಾಯಣ–ಮಹಾಭಾರತಗಳೆಂಬ ಇತಿಹಾಸ, ಪುರಾಣಗಳು, ಪಂಚರಾತ್ರ. ಈ ಏಳರಲ್ಲಿ ನಿರತನಾದ್ದರಿಂದ ಅವನಿಗೆ ಭೀಮನೆಂದು ಹೆಸರಾಗಿದೆ. ವೇದವ್ಯಾಸರ ಪರವಾಗಿ ಅರ್ಥ ಹೇಳುವಾಗ ಈ ಏಳು ಪ್ರಮಾಣಗಳಿಂದ ಪ್ರತಿಪಾದ್ಯರಾದವರು ಎಂದು ಅರ್ಥ ಹೇಳಬೇಕು.

**110.** (ಅ) **ಭೀಮೋಭುಜೇಯೋಽಭ್ಯುದಿತ** ಎಂಬಲ್ಲಿ ವಾಯುಪರವಾಗಿ ಅರ್ಥಮಾಡುವಾಗ ಭೀಮಃ, ಭುಜೇ, ಯಃ, ಅಭ್ಯುದಿತ—ಎಂದೂ ಹರಿಪರ ಅರ್ಥ ಹೇಳುವಾಗ ಭೀಮಃ, ಭುಜೇಯಃ ಅಥವಾ ಅಭುಜೇಯಃ, ಅಭ್ಯುದಿತ ಎಂದೂ ಪದಚ್ಛೇದವಾಗುತ್ತದೆ. 'ಏಙಃ ಪದಾಂತಾದತಿ' (ಪಾ. ೬/೧/೧೦೯) ಎಂಬ ಸೂತ್ರದಂತೆ ಓಕಾರದ ಮುಂದಿರುವ ಅಕಾರಕ್ಕೆ ಲೋಪ ಬರುವುದರಿಂದ ಭುಜೇಯಃ ಎಂದಿದ್ದರೂ ಅಭುಜೇಯಃ ಎಂದಿದ್ದರೂ ಭೀಮೋಭುಜೇಯಃ ಎಂದೇ ರೂಪವಾಗುತ್ತದೆ.

ವಾಯುಪರವಾಗಿ—ಭುಜೇ–ಭುಜದಲ್ಲಿ (ತೋಳಿನಲ್ಲಿ), ಯಃ–ಯಾರು ಎಂದು ಬೇರೆ ಬೇರೆ ಪದಗಳಾಗುತ್ತವೆ. ಹರಿಪದವಾಗಿ ಒಂದೇ ಪದ ;

ಭವಂತಿ ಜೇಯಾಃ ಅಸ್ಯೇತಿ ಭುಜೇಯುಃ । ನಿರುಕ್ತತ್ವಾದುಕಾರಸ್ಯ ಹ್ರಸ್ವತ್ವಮ್ । ಭುಜೇಯುಃ–ಸಮಸ್ತವಾದಿಗಳನ್ನೂ ಜಯಿಸಬಲ್ಲಂಥಾ ಎಂದರ್ಥ. ಅಭುಜೇಯುಃ ಎಂದರೆ ಯಾವ ದುರ್ವಾದಿಗಳಿಂದಲೂ ಅಥವಾ ದುಸ್ತರ್ಕಗಳಿಂದಲೂ ಜಯಿಸಲು ಅಸಾಧ್ಯರಾದ ಎಂದರ್ಥ.

(ಆ) **ಅಭ್ಯುದಿತ....ಪ್ರಕಾಂಡೇ ।** ವಾಯುಪರವಾದರೆ ಒಂದೇ ಪದ ಮತ್ತು ಭುಜೇ ಎಂಬುದಕ್ಕೆ ವಿಶೇಷಣವಾಗುತ್ತದೆ. ಅಭ್ಯುದಿತ–ಆಗಲೇ ಉದಯಿಸಿದ, ದಿನಕರ–ಸೂರ್ಯನ, ಆಭಾ–ಪ್ರಕಾಶದಂತೆ ಕಾಂತಿಯುಳ್ಳ, ಅಂಗದ–ತೋಳ್ಬಂದಿಗಳಿಂದ, ಆಢ್ಯ–ಕೂಡಿದ, ಪ್ರಕಾಂಡೇ–(ಕೊಂಕಳಿಗೂ, ಮೊಣಕೈಗೂ ಮಧ್ಯದಲ್ಲಿರುವ) ತೋಳ್ಭಾಗವುಳ್ಳ, ಅಥವಾ ದಿನಕರಾಭ–ಸೂರ್ಯನಂತೆ ಪ್ರಕಾಶಿಸುವ, ಆಢ್ಯ–ಪ್ರಶಸ್ತವೂ, ಪ್ರಕಾಂಡೇ–ಶ್ರೇಷ್ಠವೂ ಆದ, ಅಂಗದ–ತೋಳ್ಬಂದಿಯುಳ್ಳ (ವಿಶೇಷ್ಯಪೂರ್ವಪದಕರ್ಮಧಾರಯ) ಎಂದೂ ಅರ್ಥ ಹೇಳಬಹುದು. (ಕ.ಕ., ವಿ.) 'ಕೇಯೂರಮಂಗದಂ' ಎಂದು ಅಮರ. ಎಂದರೆ ಎರಡು ಬಾಹುಗಳ ಮೇಲ್ಭಾಗದಲ್ಲೂ ಉದಯಿಸಿದ ಸೂರ್ಯನಂತೆ ಪ್ರಕಾಶಿಸುತ್ತಿರುವ ಕೇಯೂರಗಳೆಂಬ ತೋಳ್ಬಂದಿ (ಆಭರಣವಿಶೇಷ)ಗಳನ್ನು ಧರಿಸಿರುವ ಎಂದರ್ಥ.

ಹರಿಪರವಾಗಿ ಅರ್ಥ ಹೇಳುವಾಗ ಅಭ್ಯುದಿನಕರಾಭಾಂ, ಗದಾಢ್ಯಪ್ರಕಾಂಡೇ ಎಂದು ಎರಡು ಪದವೆಂದು ಗ್ರಹಿಸಬೇಕು. ಮೊದಲನೆಯ ಪದ 'ಗದಾಗ್ರ್ಯಂ' ಎಂಬುದಕ್ಕೆ ವಿಶೇಷಣ ; ಇದಕ್ಕೆ ಹಿಂದೆ ಹೇಳಿದಂತೆಯೇ ಅರ್ಥ. ಎರಡನೆಯ ಪದ ಸ್ವತಂತ್ರ ವಿಶೇಷ್ಯ. ಗದ ವ್ಯಕ್ತಾಯಾಂ ವಾಚಿ (ಭ್ವಾ. ಪ.) ಎಂಬ ಧಾತುವಿನಿಂದ ಗದತಿ–ಉಚ್ಚರತಿ ವಾಕ್ಯಮನೇನೇತಿ ಗದಂ ಎಂಬ ವ್ಯುತ್ಪತ್ತಿಯಿಂದ ಮಾತಾಡುವ ಸಾಧನವಾದುದರಿಂದ ಗದಂ ಎಂದರೆ ನಾಲಿಗೆ. ಆಢ್ಯ ಎಂದರೆ ಪ್ರಶಸ್ತವಾದ ಎಂದರ್ಥ. 'ಪ್ರಕಾಂಡಮುದ್ಘತಲ್ಲಜೌ । ಪ್ರಶಸ್ತವಾಚಕಾನ್ಯಮೂನಿ' ಎಂಬ ಅಮರದಂತೆ ಪ್ರಕಾಂಡ ಎಂದರೆ 'ಶ್ರೇಷ್ಠ' ಎಂದರ್ಥ. ಆಢ್ಯಂ ಚ ತತ್ ಪ್ರಕಾಂಡಂ ಆಢ್ಯಪ್ರಕಾಂಡಂ–ಪ್ರಶಸ್ತವೂ ಶ್ರೇಷ್ಠವೂ ಆದುದು. ಆಢ್ಯಪ್ರಕಾಂಡಂ ಚ ತತ್ ಗದಂ ಚ–ಗದಾಢ್ಯಪ್ರಕಾಂಡಂ ಎಂತ ವಿಶೇಷ್ಯಪೂರ್ವಪದಕರ್ಮಧಾರಯ ; ತಸ್ಮಿನ್-

ಗದಾಢ್ಯಪ್ರಕಾಂಡೇ ಎಂದರೆ ಸಕಲ ಲಕ್ಷಣಗಳಿಂದ ಸಂಪನ್ನವಾದ (ಆಢ್ಯ) ಶ್ರೇಷ್ಠವಾದ ನಾಲಿಗೆಯಲ್ಲಿ ಎಂದರ್ಥ.

**111. ವೀರ್ಯೋದ್ಧಾರ್ಯಾಂ ಗದಾಗ್ರ್ಯಾಂ ಬಿಭ್ರತ್ ।** ವೀರ್ಯದಿಂದ (ಮಹಾಪರಾಕ್ರಮದಿಂದ), ಉದ್ಧಾರ್ಯಾಂ–ಎತ್ತುವುದಕ್ಕೆ ಸಾಧ್ಯವಾದ ; ಗದಾ+ಅಗ್ರ್ಯಾಂ–ಶ್ರೇಷ್ಠವಾದ ಗದೆಯನ್ನು ; ಬಿಭ್ರತ್–ಧರಿಸಿರುವ ಎಂದು ವಾಯುಪರವಾಗಿ ಅರ್ಥ. ಹರಿಪರವಾಗಿ ಅರ್ಥ ಹೇಳುವಾಗ ಗದಾಗ್ರ್ಯ ಎಂಬುದಕ್ಕೆ ಹೀಗೆ ಅರ್ಥ ಹೇಳಬೇಕು (ಪು.ರಾ.) : ಅಗ್ರ್ಯಾ ಚ ಸಾ ಗದಾ ಚ ಗದಾಗ್ರ್ಯಾ, ತಾಂ ಗದಾಗ್ರ್ಯಾಂ ಎಂದು ವಿಶೇಷ್ಯಪೂರ್ವಪದಕರ್ಮಧಾರಯ. ಗದ ವ್ಯಕ್ತಾಯಾಂ ವಾಚಿ ಎಂಬ (ಭ್ವಾ.ಪ.) ಧಾತುವಿನಿಂದ ಗದ್ಯತೇ–ಉಚ್ಯತೇ ಇತಿ ಗದಾ–ವಾಕ್ ಎಂಬ ವ್ಯುತ್ಪತ್ತಿಯಿಂದ ಗದಾ ಶಬ್ದವು ವೇದವಾಗ್ವಾಚಕ. ಆದ್ದರಿಂದ ಗದಾಗ್ರ್ಯಾಂ ಎಂದರೆ ಶ್ರೇಷ್ಠವಾದ ವೇದವಾಕ್ಯಗಳನ್ನು ಎಂದರ್ಥ. ಅಪೌರುಷೇಯತ್ವ, ನಿತ್ಯತ್ವ, ನಿರ್ದೋಷತ್ವಾದಿಗಳೇ ಶ್ರೇಷ್ಠತ್ವಹೇತುಗಳು. ವೀರ್ಯ–(ತಮ್ಮ ಸ್ವಂತ) ಸಾಮರ್ಥ್ಯದಿಂದ, ಉದ್ಧಾರ್ಯಾಂ–ಅವಧಾರಣೆಯಲ್ಲಿಟ್ಟುಕೊಳ್ಳಲು ಅಸಾಧ್ಯವಾದ (ಭಗವದನುಗ್ರಹವಿಲ್ಲದೆ ನೆನಪಿಟ್ಟುಕೊಳ್ಳಲು ಸಾಧ್ಯವಿಲ್ಲದ) ಎಂದರ್ಥ. ಅಥವಾ ವಿ–ವಿಶೇಷವಾಗಿ (ಅನಂತಗುಣಪರಿಪೂರ್ಣನೆಂದು), ಈರ್ಯ–ಪ್ರತಿಪಾದಿಸಲರ್ಹನೂ, ಉದ್ಧಾರ್ಯಾಂ–ಪಾರತಂತ್ರ್ಯಾದಿ ದೋಷಗಳಿಂದ ಉದ್ಧರಿಸಲರ್ಹನಾದ ವಿಷ್ಣುರೂಪವುಳ್ಳಂಥಾ ವೇದವಾಕ್ಯಗಳನ್ನು ಎಂದು, ಸಂಬಂಧ. ಇಂಥಾ ವೇದವಾಕ್ಯಗಳನ್ನು (ಗದಾಗ್ರ್ಯಾಂ) ತನ್ನ ವಾಗಿಂದ್ರಿಯದಲ್ಲಿ (ಗದಾಗ್ರ್ಯಪ್ರಕಾಂಡೇ) ಬಿಭ್ರತ್–ಧರಿಸಿದಂಥಾ ಎಂದು ವೇದವ್ಯಾಸರಿಗೆ ವಿಶೇಷಣ.

**112. (ಕ) ವಾಯುದೇವಃ ।** ವಾಯೂನಾಂ–ಮರುತಾಂ, ದೇವಃ–ಶ್ರೇಷ್ಠಃ ವಾಯುದೇವಃ (ಷ.) ಪ್ರಾಣಗಳಲ್ಲಿ ಶ್ರೇಷ್ಠರಾದ ಮುಖ್ಯಪ್ರಾಣದೇವರು. 'ವ-ಬಯೋರಭೇದಃ' ಎಂದಿರುವುದರಿಂದ ವಕಾರವು ಬಲವಾಚೀ. ಅಯ ಪಯ ಗತೌ ಎಂದು ಧಾತುಪಾಠವಿರುವುದರಿಂದಲೂ, ಗತ್ಯರ್ಥಕ ಧಾತುಗಳಿಗೆ ಜ್ಞಾನಾರ್ಥವಿರುವುದರಿಂದಲೂ ಅಯ ಶಬ್ದವು ಜ್ಞಾನವಾಚಕ.

ವ–ಬಲವೂ, ಅಯ–ಜ್ಞಾನವೂ ಉಳ್ಳವರಾದ್ದರಿಂದ (ಎಂದರೆ ಬಲಜ್ಞಾನ-ಸ್ವರೂಪರಾದ್ದರಿಂದ) ವಾಯು ಎಂದು ಹೆಸರು. 'ಕೃವಾಪಾಜಿ—' (ಉ.-೧/೧) ಎಂಬ ಸೂತ್ರದಂತೆ ಉ ಪ್ರತ್ಯಯ ಬಂದಿದೆ. (ಇದು ಗೀತಾಭಾಷ್ಯದಲ್ಲಿ ಹೇಳಿದ ಅರ್ಥ.) ಅಮರ ಟೀಕಾಕಾರರು ವಾತೀತಿ ವಾಯುಃ–ಬೀಸುವುದ-ರಿಂದ ಗಾಳಿ ಎಂದು ವ್ಯುತ್ಪತ್ತಿ ಹೇಳುತ್ತಾರೆ. ಅವರೂ ಮೇಲಿನ 'ಕೃವಾ-ಪಾಜೀ–!' ಸೂತ್ರದಿಂದ ಉ-ಪ್ರತ್ಯಯವನ್ನೂ, 'ಆತೋಯುಕ್' (ಪಾ. ೭/೩/೩೩) ಎಂಬ ಸೂತ್ರದಿಂದ ಯುಗಾಗಮವನ್ನೂ ಹೇಳುತ್ತಾರೆ. ಋಗ್ಭಾಷ್ಯ ದಲ್ಲಿ ಹರಿಪರವಾಗಿ ಅನೇಕ ಅರ್ಥಗಳನ್ನು ಹೇಳಿದ್ದಾರೆ. ಅವೆಲ್ಲ ವೇದ-ವ್ಯಾಸರಿಗೆ ಅನ್ವಯಿಸುತ್ತವೆ.

ವಾಯು ಶಬ್ದಕ್ಕೆ ಋಗ್ಭಾಷ್ಯದಲ್ಲಿ ಒಂಬತ್ತು ಅರ್ಥ ಹೇಳಿ ಶ್ರೀವಿಷ್ಣುವಿ-ನಲ್ಲಿ ಅನ್ವಯ ಮಾಡಿದ್ದಾರೆ—1) ವ ಎಂದರೆ ಬಲರೂಪನೂ, ಆಯ ಎಂದರೆ ಸದಾ ಸಂಚರಿಸುತ್ತಿರುವವನೂ ಆದ್ದರಿಂದ ವಾಯು. ಉ ಎಂಬ ಪ್ರತ್ಯಯ ಸೇರಿದೆ. 2) ಹೀಗೆಯೇ ಸದಾ ಅಡ್ಡಾಡು (ಸಂಚರಿಸು)ವವನೂ, ಪ್ರಾಣಿಗಳಿಗೆ ಆಯುಸ್ಸಿಗೆ ನಿಯಾಮಕನಾದ್ದರಿಂದಲೂ, ವಾ-ಚಲಿಸು + ಆಯುಃ 3) ಗತ್ಯರ್ಥಕವಾದ ವಾ ಧಾತುವಿಗೆ ಜ್ಞಾನಾರ್ಥ ಹೇಳಿದರೆ ವಾತಿ–ಜಾನಾತಿ–ಸರ್ವವನ್ನೂ ತಿಳಿದವನು–ಸರ್ವಜ್ಞನೆಂದೂ ವಾ + ಡಾಯು ಪ್ರತ್ಯಯ. 4) ವೃ ಧಾತುವಿಗೆ ವರಿಸು, ಸ್ವೀಕರಿಸು ಎಂದರ್ಥ. ಸಕಲವನ್ನೂ ಸ್ವೀಕರಿಸುವುದ-ರಿಂದಲೂ (ಕರ್ತರಿಪ್ರಯೋಗದಲ್ಲಿ) ಎಲ್ಲರಿಂದಲೂ ವರಿಸಲ್ಪಡುವುದರಿಂದಲೂ ಅಥವಾ ಮೊರೆ ಹೋಗಲ್ಪಡುವುದರಿಂದಲೂ (ಕರ್ಮಣಿ ಪ್ರಯೋಗ) ವೃ+ ಡಾಯು ಪ್ರತ್ಯಯ. 5) (ವೃ–ಆಶ್ರಯಿಸು) ಎಲ್ಲರೂ ಅವನಲ್ಲೇ ಆಶ್ರಯಿಸಿ ನಿಂತಿರುವುದರಿಂದಲೂ. ವಾಂತಿ–ಗಚ್ಛಂತಿ–ಪ್ರವರ್ತಂತೇ ಅಸ್ಮಿನ್ನಿತಿ ವಾಯುಃ. 6) 'ವಯ ಬಂಧನೇ' ಎಂಬ ಧಾತುವಿನಿಂದ ಎಲ್ಲರನ್ನೂ ಸಂಸಾರಾದಿ ಬಂಧನ-ದಿಂದ ಬಂಧಿಸುವವನಾದ್ದರಿಂದಲೂ, 7) ವಿ+ಅಯ–ವ್ಯಯ—ನಾಶ. ಸರ್ವ-ಸಂಹಾರಕನಾದ್ದರಿಂದಲೂ ವಿ ಎಂಬುದು ನಿರುಕ್ತದ ನಿಯಮದಂತೆ ಅಕಾರಾಂತವಾಗಿ 'ವ' ಆಗುತ್ತದೆ. (ವಿ–) ವ+ಅಯ+ಉ. 8) ವಿ+ಇ–ಹೋಗು. ವ್ಯೇತೀತಿ ವಾಯುಃ, ಕಣ್ಣಿಗೆ ಕಾಣಿಸದಂತೆ ಲೀನವಾಗುವುದ-

ರಿಂದಲೂ (ಮರೆಯಾಗಿರುವುದರಿಂದಲೂ,) 9) 'ವಯ ಶ್ರೇಷ್ಠತ್ವೇ' ಎಂಬ ಧಾತುವಿನಿಂದ ಶ್ರೇಷ್ಠನಾದುದರಿಂದಲೂ—ಶ್ರೀಹರಿಗೆ ವಾಯು ಎಂಬ ಹೆಸರು ಪರಮಮುಖ್ಯವೃತ್ತಿಯಿಂದ ಕೂಡುತ್ತದೆ.

ಇನ್ನು ವಾಯುದೇವರಿಗೆ (ಮುಖ್ಯಪ್ರಾಣನಿಗೆ) 1. ಬಲರೂಪನೂ ಸದಾ ಸಂಚರಿಸುವವನೂ [ಹಗಲೂ ರಾತ್ರಿಯೂ ಉಸಿರಾಟ ಸದಾ ನಡೆಯ-ಬೇಕಲ್ಲವೆ], 2. ಬಲರೂಪನೂ, ಆಯುರ್ನಿಯಾಮಕನೂ, 3. ರುದ್ರಾದಿ-ಗಳಿಗಿಂತ ಸರ್ವಜ್ಞನೂ, 4. ಶ್ರೀ ಹರಿಯಿಂದ ವರಿಸಲ್ಪಡುವವನಾದ್ದರಿಂದಲೂ ರುದ್ರಾದಿ ಸಕಲ ದೇವತೆಗಳಿಂದ ಶ್ರೀಹರಿಯ ಅನುಗ್ರಹಕ್ಕಾಗಿ ವರಿಸಲ್ಪಡುವವ-ನಾದ್ದರಿಂದಲೂ, 5. ವಾಯುಕೂರ್ಮಾದಿರೂಪಗಳಿಂದ ಸಕಲ ಲೋಕಗಳಿಗೂ ಆಶ್ರಯನಾಗಿರುವುದರಿಂದಲೂ, 6. ಜೀವೋತ್ತಮನಾದ್ದರಿಂದಲೂ 'ವಾಯು' ಎಂಬ ಹೆಸರು ಕೂಡುತ್ತದೆ.

(ಖ) **ದೇವಃ**—ಶಬ್ದವು 'ದಿವು ಕ್ರೀಡಾವಿಜಿಗೀಷಾವ್ಯವಹಾರಸ್ತುತಿ-ಮೋದಮದಸ್ವಪ್ನಕಾಂತಿಗತಿಷು' ಎಂಬ (ದಿವಾದಿ. ಪ.) ಧಾತುವಿನಿಂದ ಕರ್ತರಿ ಕರ್ಮಣಿ ಮತ್ತು ಪ್ರೇರಣಾರ್ಥ ಹೀಗೆ ಮೂರು ವಿಧವಾಗಿ ವ್ಯುತ್ಪನ್ನ ವಾಗಿದೆ. ಕರ್ತರಿಪ್ರಯೋಗದಲ್ಲಿ ದೀವ್ಯತೀತಿ ದೇವಃ । ಪಚಾದ್ಯಚ್ (ಪಾ. ೩/೧/೧೩೪) ಪ್ರತ್ಯಯ ಬಂದು ಗುಣವಾಗಿ ದೇವಃ ಎಂದಾಗುವುದು, ಇದಕ್ಕೆ ಕ್ರೀಡಿಸುವವನು, ಜಯಶೀಲ, ಸಕಲ ವ್ಯವಹಾರಗಳನ್ನೂ ನಡೆಸು-ವವನು, (ಸೂರ್ಯ–ಚಂದ್ರಾಗ್ನಿ–ನಕ್ಷತ್ರಾದಿಗಳನ್ನು) ಬೆಳಗಿಸುವವನು, ಸದಾ ಸುಖಿ ಅಥವಾ ಸುಖಮಯನು, ತೇಜೋವಿರಾಜಮಾನ (ಸ್ವಯಂಪ್ರಭೆ-ಯಿಂದ ಕೋಟಿಸೂರ್ಯರಂತೆ ಪ್ರಕಾಶಿಸುವವನು), ಭಕ್ತರು ಕರೆದಲ್ಲಿಗೆ ಹೋಗುವವನು, ಮತ್ತು ಜ್ಞಾನಸ್ವರೂಪ (ಜ್ಞಾನಮಯನೂ ಸಕಲವನ್ನೂ ಅತ್ಯಂತ ಸ್ಪಷ್ಟವಾಗಿ ಬಲ್ಲ ಸರ್ವಜ್ಞಮೂರ್ತಿ) ಎಂದೂ ಅರ್ಥವಾಗುತ್ತದೆ.

ಮಂತ್ರಾಲಯದ ರಾಯರು ಋಗ್ಭಾಷ್ಯ ಟೀಕಾನುಸಾರವಾಗಿ ಮಂತ್ರಾರ್ಥಮಂಜರಿಯಲ್ಲಿ ತೋರಿಸಿರುವರಂತೆ ಕರ್ಮಣಿ ಘಞ್ ಪ್ರತ್ಯಯ (ಪಾ. ೬/೩/೧೯) ಬಂದು ದೀವ್ಯತೇ–ಸ್ತೂಯತ ಇತಿ ದೇವಃ ಎಂದಾಗುವುದರಿಂದ ಸ್ತುತಿಸಲ್ಪಡುವವನು ಎಂದರ್ಥವಾಗುತ್ತದೆ. ಹೀಗೆಯೇ ಪ್ರೇರಣಾರ್ಥದಲ್ಲಿ

'ಣ್ಯಂತತ್ವಂ ಬೋಧ್ಯಂ' ಎಂದು ಛಲಾರೀಟಿಪ್ಪಣಿಕಾರರು ಋಗ್ಭಾಷ್ಯ ಟಿಪ್ಪಣಿಯಲ್ಲಿ ತೋರಿಸಿರುವಂತೆ ದೇವಯತೀತಿ ದೇವಃ ಎಂದಾಗುವುದರಿಂದ ಮದಾವಸ್ಥೆಗೂ ಹುಚ್ಚು ಹಿಡಿಯುವಿಕೆಗೂ ಸ್ವಪ್ನಾವಸ್ಥೆಗೂ ಪ್ರೇರಕ ಎಂದರ್ಥವಾಗುತ್ತದೆ. ಈ ಅರ್ಥಗಳನ್ನೆಲ್ಲ ಸಂಗ್ರಹಿಸಿ ಶ್ರೀಮದಾಚಾರ್ಯರು ಋಗ್ಭಾಷ್ಯದಲ್ಲಿ (೧ಅ., ೧ಸೂ., ೧ಋಕ್)

ದ್ಯೋತನಾದ್ ವಿಜಯಾತ್ ಕಾಂತ್ಯಾ
ಸ್ತುತ್ಯಾ ವ್ಯವಹೃತೇರಪಿ ।
ಗತ್ಯಾ ರತ್ಯಾ ಚ ದೇವಾಖ್ಯಮ್........

ಎಂದು ಹೇಳಿದ್ದಾರೆ. ವೇದವ್ಯಾಸರಿಗೆ ಅನ್ವಯಿಸುವಾಗ ವಾಯು-ದೇವ ಎರಡೂ ಶಬ್ದಗಳ ಈ ಅರ್ಥಗಳೆಲ್ಲ ಸಮಗ್ರವಾಗಿ ಅನ್ವಯಿಸುತ್ತವೆ.

ಇನ್ನು ವಾಯುದೇವಃ ಎಂಬುದನ್ನು ವಾಯೋಃ ದೇವಃ-ಸ್ತುತ್ಯಃ ಎಂದರೆ ವಾಯುದೇವರಿಂದ ಸ್ತುತ್ಯನಾದ ಅಥವಾ ವಾಯುದೇವರಿಂದ ಜಗತ್ಸೃಷ್ಟ್ಯಾದಿ ಕಾರ್ಯಗಳನ್ನು ಮಾಡಿಸುವ ಎಂದೂ, ವೇದವ್ಯಾಸಪರವಾಗಿ ಅರ್ಥವಾಗುತ್ತದೆ. ವಾಯುಪರವಾಗಿ ಬಲಜ್ಞಾನಸ್ವರೂಪರೂ ಪ್ರಕಾಶಿಸು-ವವರೂ ರುದ್ರಾದಿಗಳಿಂದ ಸ್ತುತ್ಯರೂ ಆದ ಎಂದರ್ಥವಾಗುತ್ತದೆ.

(ಗ) ಅಧ್ಯಾತ್ಮಜ್ಞಾನನೇತಾ—ಅಧಿಕಶ್ಚಾಸಾವಾತ್ಮಾ ಚ-ಅಧ್ಯಾತ್ಮಾ ಎಂದು ಸರ್ವಶ್ರೇಷ್ಠನಾದುದರಿಂದ ಪರಮಾತ್ಮನಿಗೆ ಅಧ್ಯಾತ್ಮನೆಂದು ಹೆಸರು. ಅವನ, ಜ್ಞಾನ-ಜ್ಞಾನಕ್ಕೆ, ನೇತಾ-ಪ್ರಾಪಕರಾದ—ಜ್ಞಾನಗಮ್ಯರಾದ ಎಂದರ್ಥ. ಮಧ್ವಾಚಾರ್ಯರ ಪರವಾಗಿ ಅರ್ಥ ಹೇಳುವಾಗ—1) ಪರ-ಮಾತ್ಮವಿಷಯಕ ಜ್ಞಾನಸ್ಯ ನೇತಾ-ಸಚ್ಛಾಸ್ತ್ರರಚನಯಾ ಪ್ರವರ್ತಕಃ। ಅಧ್ಯಾತ್ಮಜ್ಞಾನ-ಭಗವದ್ವಿಷಯಕ ಜ್ಞಾನಪ್ರದವಾದ ಸಚ್ಛಾಸ್ತ್ರವನ್ನು (ಭಾಷ್ಯಾದಿಗಳನ್ನು ರಚಿಸಿ) ಪ್ರಚಾರ ಮಾಡಿದಂಥಾ ; ಅಥವಾ 2) ಜ್ಞಾನೋ-ಪದೇಷ್ಟೃಗಳಲ್ಲಿ ಅಗ್ರಗಣ್ಯರಾದ (ಆದಿ ಗುರುಗಳಾದ) ಎಂದರ್ಥ. (ಕಕ., ವಿ.) ಇದರಿಂದ ಮಧ್ವಾವತಾರದ ಮುಖ್ಯಪ್ರಯೋಜನವೇ ಜ್ಞಾನಪ್ರಚಾರ ಎಂದು ಹೇಳಿದಂತಾಯಿತು (ಛ. ವಿ. ಕಕ.,) ಅಧ್ಯಾತ್ಮಜ್ಞಾನಸ್ಯ ನೇತಾ ಎಂದು ಕರ್ಮಣಃ ಶೇಷತ್ವವಿವಕ್ಷಾಯಾಂ ಷಷ್ಠೀ, ಕೃಲ್ಲಕ್ಷಣ ಷಷ್ಠೀ ಅಲ್ಲ. (ವಿ., ಕಕ.,)

(ಘ) **ಯತಿವರ ಮಹಿತಃ** || 'ಯತಿಃ ಪಾರಾಶರೀ ಭಿಕ್ಷುಃ ಪರಿವ್ರಾಡ್ ಪಾರರಕ್ಷಿಕಃ । ಅನಾಶಕೀ ಪ್ರವ್ರಜಿತಃ ಕರ್ಮಂದೀ ಮಸ್ಕರೀ ಯತೀ' ಎಂದು ವೈಜಯಂತೀಕೋಶವೂ 'ಮುನಿರ್ಲಿಂಗೀ ಯತಿರ್ವ್ರತೀ' ಎಂದು ಹಲಾಯುಧನೂ ಹೇಳುವಂತೆ ಯತಿ ಎಂದರೆ ಸನ್ಯಾಸಿ. ಯತತೇ-ಚೇಷ್ಟತೇ ಮೋಕ್ಷಾರ್ಥಮಿತಿ ಯತಿಃ ; ಇಂದ್ರಿಯಗಳನ್ನು ನಿಗ್ರಹಿಸಿ ಮೋಕ್ಷಕ್ಕಾಗಿ ಪ್ರಯತ್ನಿಸುವವನಿಗೆ ಯತಿಃ ಎಂದು ಹೆಸರು. ಯತ ಧಾತುವಿನ ಮೇಲೆ 'ಸರ್ವಧಾತುಭ್ಯ ಇನ್' (ಉ. ೪/೧೧೯) ಎಂಬ ಸೂತ್ರದಂತೆ ಇ ಪ್ರತ್ಯಯ ಬಂದಿದೆ. ಯತಿನ್ ಎಂಬ ನಕಾರಾಂತ ಶಬ್ದವೂ ಇದೆ, ಅದು ಯತೀ ಎಂದಾಗುತ್ತದೆ. ಮಹ ಪೂಜಾಯಾಂ (ಭ್ವಾ.ಪ.) ಎಂಬ ಧಾತುವಿನ ಕ್ತಾಂತ (ಭೂತಕೃದಂತ) ರೂಪವೇ ಮಹಿತ ; ಇದಕ್ಕೆ ಪೂಜಿತರಾದ ಎಂದರ್ಥ.

ವೇದವ್ಯಾಸರ ಪರವಾಗಿ ಅರ್ಥ ಹೇಳುವಾಗ 1. ಯತಿವರ-ಸನ್ಯಾಸಿಶ್ರೇಷ್ಠರಾದ ಮಧ್ವಾಚಾರ್ಯರಿಂದಲೂ ಸನಕಾದಿಗಳಿಂದಲೂ ಪೂಜಿತರಾದ ಎಂದೂ, 2. ಯತಿ-ಸನಕಾದಿ ಯತಿಗಳಿಂದ, ವರ-ಸರ್ವಶ್ರೇಷ್ಠರೆಂದು, ಮಹಿತಃ-ಪೂಜಿತರಾದ ಅಥವಾ ಸಮ್ಮಾನಿತರಾದ ಎಂದರ್ಥ (ರಾ.). ಮಧ್ವಾಚಾರ್ಯರ ಪರವಾಗಿ 1. ಯತಿವರರಾದ ಸನಕದೂರ್ವಾಸಾದಿಗಳಿಂದಲೂ ಪೂಜಿತರಾದ ಅಥವಾ ವಿಷ್ಣುತೀರ್ಥಾದಿ ಸನ್ಯಾಸಿಗಳಿಂದ ಪೂಜಿತರಾದ (ರಾ., ಛ.) 2. ಯತಿವರೇಷು-ಯತಿಶ್ರೇಷ್ಠರಲ್ಲಿ, ಮಹಿತಃ-ಸರ್ವಶ್ರೇಷ್ಠರಾದ (ಕಕ., ವಿ.) ಎಂದರ್ಥ.

(ಙ) **ಭೂಮಿಭೂಷಾಮಣೀಃ**|| 'ರತ್ನಂ ಮಣಿರ್ದ್ವಯೋರಶ್ಮಜಾತೌ' ಎಂಬ ಅಮರದಂತೆ ಮಣಿ ಎಂದರೆ ಕೆಂಪು, ವಜ್ರವೈಢೂರ್ಯಾದಿ ರತ್ನಗಳೆಂದರ್ಥ. ಇದೇ ಶಬ್ದವನ್ನು ರೂಪಕವಾಗಿ ಗ್ರಹಿಸಿದರೆ ಮಣಿಯಂತೆ ಶ್ರೇಷ್ಠ ಎಂದೂ ಅರ್ಥವಾಗುತ್ತದೆ. ಇದನ್ನೇ 'ಮಣಿರ್ಮುಖಂ ಪ್ರಧಾನಂ ಚೇ-ತ್ಯುತ್ತಮಸ್ಯ ವಚೋ ಭವೇತ್' ಎಂಬ ಅಭಿಧಾನವಾಕ್ಯವು ಹೇಳುತ್ತದೆ. ಪ್ರಕೃತದಲ್ಲಿ ಭೂಮಿ-ಈ ಭೂಮಂಡಲಕ್ಕೆ, ಭೂಷಾಮಣಿಃ-ಅಲಂಕಾರರತ್ನಪ್ರಾಯರಾದ ಎಂಬುದು ಹರಿ-ವಾಯು ಇಬ್ಬರಿಗೂ ಅನ್ವಯಿಸುತ್ತದೆ.

ಭೂಮೇಃ–ಭೂಮಂಡಲಸ್ಯ ಯಾ ಭೂಷಾ–ಅಲಂಕ್ರಿಯಾ ತಸ್ಯಾ ಮಣಿರಿವ ಮಣಿಃ (ವಿ.) ವೇದವ್ಯಾಸಪರವಾಗಿ ಅರ್ಥಹೇಳುವಾಗ ಈ ರೀತಿ ಎರಡನೇ ಅರ್ಥವನ್ನೂ ಹೇಳಬಹುದು. ಭೂಮಾ ಅಸ್ಯಾಸ್ತೀತಿ ಭೂಮೀ–ಪರಿ-ಪೂರ್ಣತ್ವವೆಂಬ ಗುಣವುಳ್ಳವರು. ಭೂಷ್ಯತೇ ಜಗದನಯೇತಿ ಭೂಷಾ–ಲಕ್ಷ್ಮೀಃ । ಜಗತ್ತಿಗೆ ಅಲಂಕಾರಸ್ವರೂಪಳಾದ್ದರಿಂದ ಭೂಷಾ ಎಂದರೆ ಲಕ್ಷ್ಮೀ-ದೇವಿ ಎಂದರ್ಥ. ಭೂಷಾಯಾಃ ಮಣಿಃ ಭೂಷಾಮಣಿಃ–ಆ ಲಕ್ಷ್ಮಿಗಿಂತಲೂ ಶ್ರೇಷ್ಠರಾದ ಎಂದರ್ಥ. ಭೂಮೀ ಚ ಭೂಷಾಮಣಿಶ್ಚ ಭೂಮಿಭೂಷಾ-ಮಣಿಃ ಎಂತ ವಿಗ್ರಹ. ಭೂಮಗುಣವುಳ್ಳವರೂ ಲಕ್ಷ್ಮೀಗಿಂತ ಶ್ರೇಷ್ಠರೂ ಆದ ಎಂದರ್ಥ ಮಾಡಬೇಕು.

**(ಚ) ವಿದಧ್ಯಾತ್**—ವಿ ಉಪಸರ್ಗ, ಡುಧಾಞ್ ಧಾರಣಪೋಷ-ಣಯೋಃ–(ಜುಹೋ. ಉ.) ಕರ್ತರಿ ವಿಧಿಲಿಙ್‌ರೂಪ. ದಧ್ಯಾತ್ । ದಧ್ಯಾತಾಂ । ದಧ್ಯುಃ ಮೊದಲಾದ ರೂಪಗಳು.

**113. ಹರಿಪರವಾಗಿ ಅನ್ವಯಾರ್ಥ**—1. (ಕ) ಉದ್ಯದ್ವಿದ್ಯುತ್ಪ್ರ-ಚಂಡಾಂ, (ಖ) ಅಭ್ಯುದಿತದಿನಕರಾಭಾಂ, (ಗ) ಇಹ ವೀರ್ಯೋದ್ಧಾರ್ಯಾಂ ಗದಾಗ್ರ್ಯಾಂ ಗದಾಢ್ಯಪ್ರಕಾಂಡೇ ಬಿಭ್ರತ್, 2. ನಿಜ....ಕಾಶಃ, 3. ಭೀಮಃ, 4. ಭುಜೇಯಃ ಅಥವಾ ಅಭುಜೇಯಃ, 5. ವಾಯುದೇವಃ, 6. ಅಧ್ಯಾತ್ಮಜ್ಞಾನನೇತಾ, 7. ಯತಿವರಮಹಿತಃ, 8. ಭೂಮಿಭೂಷಾ-ಮಣಿಃ ಅಯಂ ಮೇ ಸುಮತಿಂ ವಿದಧ್ಯಾತ್ ಎಂಬುದು ದಂಡಾನ್ವಯ.

1. ಉದ್ಯ....ಚಂಡಾಂ—ಉದ್ಯತ್–ನಿತ್ಯವೂ ಉದಯಿಸಿದಂಥಾದ್ದೂ (ನಾಶರಹಿತವಾದುದೂ), ವಿ-ದ್ಯುತ್- ವಿಶೇಷವಾಗಿ ಪ್ರಕಾಶಿಸುವಂಥಾದ್ದೂ ಅಥವಾ ವಿ–ವಿಷ್ಣುವನ್ನು, ದ್ಯುತ್–ಪ್ರಕಟಿಸುವಂಥಾದ್ದೂ, ಪ್ರಚಂಡಾಂ–ದುರ್ವಾದಿಗಳ ಯುಕ್ತಿಗಳಿಂದ ಅಪ್ರತಿಹತವಾದುದೂ ಆದ ; ಅಭ್ಯು.... ರಾಭಾಂ, ಅಭ್ಯುದಿತ–ಚೆನ್ನಾಗಿ ಉದಯಿಸಿದ, ದಿನಕರ–ಸೂರ್ಯನಂತೆ, ಆಭಾಂ–ಪ್ರಕಾಶವುಳ್ಳ (ಅಜ್ಞಾನವನ್ನು ನಾಶಮಾಡುವುದರಲ್ಲಿ ಸೂರ್ಯನ ಬೆಳಕಿನಂತಿರುವ), ಇಹ–ಈ ಪ್ರಪಂಚದಲ್ಲಿ, ವೀರ್ಯೋದ್ಧಾರ್ಯಾಂ–ವೀರ್ಯ–ಸ್ವಸಾಮರ್ಥ್ಯದಿಂದಲೇ (ಭಗವದನುಗ್ರಹವಿಲ್ಲದೆ), ಉತ್-

ಧಾರ್ಯಾಂ–ಗ್ರಹಿಸಲು ಸಾಧ್ಯವಿಲ್ಲದ ಅಥವಾ ವಿ–ಗುಣಪೂರ್ಣನೆಂದು, ಈರ್ಯ–ಪ್ರತಿಪಾದಿಸಲು ಸಾಧ್ಯವೂ, ಉದ್ಧಾರ್ಯಾಂ–ಬೇರೆ ರೀತಿಯಿಂದ ಸಾಧಿಸಲಸಾಧ್ಯವೂ ಆದ; ಗದಾಗ್ರ್ಯಾಂ–ಶ್ರೇಷ್ಠವಾದ (ಎಂದರೆ ಅಪೌರುಷೇಯವೂ ನಿರ್ದುಷ್ಟವೂ ಆದ) ವೇದವಾಕ್ಯವನ್ನು; ಗದಾಢ್ಯಪ್ರಕಾಂಡೇ–ತಮ್ಮ ಶ್ರೇಷ್ಠವಾದ ವಾಗಿಂದ್ರಿಯದಲ್ಲಿ (ನಾಲಿಗೆಯಲ್ಲಿ); ಬಿಭ್ರತ್–ಧರಿಸಿರುವ ; 2. ನಿಜ....ಕಾಶಃ—ನಿಜ–ತಮ್ಮ ಸ್ವಾಭಾವಿಕವಾದ, ರುಚಿ–ಪ್ರಕಾಶದ, ನಿಕರ–ಸಮೂಹದಿಂದ, ವ್ಯಾಪ್ತ–ವ್ಯಾಪಿಸಲ್ಪಟ್ಟ, ಲೋಕ-ಅವಕಾಶಃ–ಬ್ರಹ್ಮಾಂಡದ ಒಳ ಮತ್ತು ಹೊರಪ್ರದೇಶವುಳ್ಳಂಥಾ ; 3. ಭೀಮಃ–ಋಗ್ವೇದಾದಿ ಸಪ್ತ-ಪ್ರಮಾಣಗಳಿಂದ ಗೇಯರಾದ ; 4. ಭುಜೇಯಃ–ಸಮಸ್ತಪ್ರತಿವಾದಿಗಳನ್ನೂ ಜಯಿಸಲು ಸಮರ್ಥರಾದ, ಅಥವಾ ಅಭುಜೇಯಃ–ಸಮಸ್ತ ದುರ್ವಾದಿ-ಗಳಿಂದಲೂ ದುಸ್ತರ್ಕಗಳಿಂದ ಗೆಲ್ಲಲು ಸಾಧ್ಯವಿಲ್ಲದ ; 5. ವಾಯು-ದೇವಃ–ಬಲ-ಜ್ಞಾನಸ್ವರೂಪರಾದ್ದರಿಂದಲೂ ಆಯುಸ್ಸನ್ನು ಕೊಂಡುಹೋಗುವವರಾದ್ದರಿಂದಲೂ, ಜ್ಞಾನಸ್ವರೂಪರಾದ್ದರಿಂದಲೂ, ಸಂಸಾರಬಂಧನದಿಂದ ಬಿಡಿಸುವವರಾದ್ದರಿಂದಲೂ ಸರ್ವಶ್ರೇಷ್ಠರಾದ್ದರಿಂದಲೂ (ಇವೆಲ್ಲ ಋಗ್ಭಾಷ್ಯ-ದಲ್ಲಿ ವಾಯುಶಬ್ದಕ್ಕೆ ಹೇಳಿದ ಅರ್ಥಗಳು) ವಾಯುಶಬ್ದವಾಚ್ಯರೂ, ಕ್ರೀಡಾದಿ ಗುಣವಿಶಿಷ್ಟರಾದ್ದರಿಂದಲೂ ಸ್ವಪ್ನ-ಮೂರ್ಛಾದ್ಯವಸ್ಥಾಪ್ರೇರಕ-ರಾದ್ದರಿಂದಲೂ (ಇವೂ ಋಗ್ಭಾಷ್ಯೋಕ್ತ ದೇವ ಶಬ್ದಾರ್ಥಗಳು) ದೇವಶಬ್ದ-ವಾಚ್ಯರೂ ಆದ, ಅಥವಾ ವಾಯು–ವಾಯುದೇವರಿಂದ, ದೇವಃ–ಸ್ತುತ್ಯ-ರಾದ ಅಥವಾ ವಾಯು–ವಾಯುದೇವರ ದ್ವಾರಾ, ದೇವಃ–ಜಗತ್ಸೃಷ್ಟ್ಯಾದಿ-ಗಳನ್ನು ಮಾಡಿಸುವವರಾದ ; 6. ಅಧ್ಯಾತ್ಮಜ್ಞಾನನೇತಾ–ಶ್ರೀಹರಿಸರ್ವೋ-ತ್ತಮತ್ವ ಜ್ಞಾನವನ್ನು ಕೊಡುವಂಥಾವರಾದ (ಪ್ರಾಪಕರಾದ); 7. ಯತಿವರ ಮಹಿತಃ–ಸನಕಾದಿ ಯತೀಶ್ವರರಿಂದ ತಮಗಿಂತ ಶ್ರೇಷ್ಠರೆಂದು ಪೂಜಿತರಾದ, ಯತಿವರ–ಸನ್ಯಾಸಿಶಿರೋಮಣಿಗಳಾದ ಶ್ರೀಮಧ್ವಾಚಾರ್ಯ-ರಿಂದಲೂ, ಮಹಿತಃ–ಪೂಜಿತರಾದ ; 8. ಭೂಮಿ-ಭೂಷಾಮಣಿಃ–ಭೂಲೋಕಕ್ಕೆ ಅಲಂಕಾರರತ್ನಪ್ರಾಯರಾದ ಅಥವಾ ಭೂಮಿ–ಭೂಮ-ಗುಣವುಳ್ಳವರೂ, ಭೂಷಾ–ಜಗತ್ತಿಗೆ ಅಲಂಕಾರಪ್ರಾಯಳಾದ ಲಕ್ಷ್ಮೀದೇವಿ-

ಗಿಂತ, ಮಣಿ–ಶ್ರೇಷ್ಠರೂ ಆದ ; ಅಯಂ–ಈ (ಪೂರ್ವಶ್ಲೋಕಪ್ರಸಕ್ತರಾದ ವೇದವ್ಯಾಸದೇವರು ; ಮೇ–ನನಗೆ, ಸುಮತಿಂ–ಸಮೀಚೀನವಾದ ಬುದ್ಧಿ-ಯನ್ನು ಎಂದರೆ ಬಿಂಬಾಪರೋಕ್ಷ ಜ್ಞಾನವನ್ನು, ವಿದಧ್ಯಾತ್–ಕರುಣಿಸಲಿ.

**114. ಹರಿ (ವೇದವ್ಯಾಸರ) ಪರವಾಗಿ ಭಾವಾರ್ಥ**—ಶ್ರೀ-ಹಯಗ್ರೀವರ ಧ್ಯಾನಶ್ಲೋಕದಲ್ಲಿ 'ನಸ್ತೋ ಮುಖಾದಪಿ ನಿರಂತರಮುದ್ಗಿ-ರಂತಂ, ಎಂದರೆ, 'ಮೂಗಿನ ಹೊಳ್ಳೆಗಳಿಂದಲೂ ಬಾಯಿಂದಲೂ ಸಂತತವಾಗಿ ವೇದಾದಿ ಸಕಲವಾಣಿಯನ್ನು ಹೇಳುತ್ತಿರುವ' ಎಂದು ಹೇಳಿದ್ದಾರೆ. ಆದರಂತೆ ವೇದವ್ಯಾಸರ ಮುಖದಿಂದಲೂ ನಿರಂತರವಾಗಿ ಸಕಲವೇದಗಳೂ ಹೊರಬರು-ತ್ತಿರುತ್ತವೆ. ಈ ವೇದವಾಕ್ಯಗಳು ಅಪೌರುಷೇಯುವಾದ್ದರಿಂದಲೂ ನಿತ್ಯ-ವಾದ್ದರಿಂದಲೂ ನಿರ್ದೋಷವಾದ್ದರಿಂದಲೂ ಅವುಗಳು ದುರ್ವಾದಿಗಳಿಂದ ತಿರಸ್ಕರಿಸಲು ಸಾಧ್ಯವಿಲ್ಲದ ಪ್ರಾಮಾಣ್ಯವುಳ್ಳವಾಗಿವೆ. ಆದ್ದರಿಂದಲೇ ಶ್ರೇಷ್ಠವೂ ಆಗಿವೆ. ಇಂಥಾ ವೇದವಾಕ್ಯಗಳು ಸದಾ ವೇದವ್ಯಾಸರ ಮುಖೋದ್ಗತವಾಗಿವೆ. ಅವರ ಜ್ಞಾನದ ಪ್ರಭೆಯು ಬ್ರಹ್ಮಾಂಡದ ಒಳಗೆ-ಹೊರಗೆಲ್ಲಾ ವ್ಯಾಪಿಸಿಕೊಂಡಿದೆ. ಅವರು ಚತುರ್ವೇದಗಳು ಇತಿಹಾಸ ಪುರಾಣ ಪಂಚರಾತ್ರವೆಂಬ ಸಪ್ತಪ್ರಮಾಣಗಳಲ್ಲೂ ಮುಖ್ಯತಃ ಪ್ರತಿಪಾದ್ಯ-ರಾಗಿದ್ದಾರೆ. ಅವರನ್ನು ಶ್ರೀಮದಾಚಾರ್ಯರು 'ಮೀಮಾಂಸಾಪಾರವಾರಿಧಿ, ಎಂದಿದ್ದಾರೆ ; ಅಪಾರವಾದ ಜ್ಞಾನಭಂಡಾರವಾಗಿರುವುದರಿಂದ ಅವರು ಸಕಲರನ್ನೂ ಮೀರಿ ಅಜೇಯರಾಗಿದ್ದಾರೆ. ಅವರು ಸೂರ್ಯನ ಕಿರಣಗಳನ್ನೂ ಮೀರಿಸಿದ ಪ್ರಖರತೇಜಸ್ಸುಳ್ಳವರು—ಹೃದಯಾಂಧಕಾರವನ್ನೂ ಹೋಗ-ಲಾಡಿಸಬಲ್ಲರು. ಅಧ್ಯಾತ್ಮವಿದ್ಯೆಗೆ ಅವರೇ ಸರ್ವಪ್ರಧಾನರು. ಯತಿವರೇಣ್ಯ-ರಾದ ಸನಕಾದಿಗಳಿಗೆ ಮಾತ್ರವಲ್ಲದೆ ಶ್ರೀಮಧ್ವಾಚಾರ್ಯರಿಗೇ ಇವರು ಜ್ಞಾನದಾತೃಗಳು. ಜಗತ್ತಿಗೇ ಅಲಂಕಾರಪ್ರಾಯರಾದ ಈ ಶ್ರೀವೇದವ್ಯಾಸ-ದೇವರು ನನಗೆ ಬಿಂಬಾಪರೋಕ್ಷವನ್ನುಂಟು ಮಾಡಿ ಉದ್ಧಾರಮಾಡಲಿ ಎಂದು ಭಾವ.

**115. ವಾಯುಪರವಾಗಿ ಅನ್ವಯಾರ್ಥ**—ವಾಯುಪರವಾಗಿ ಅರ್ಥ ಹೇಳುವಾಗ ವಿಶೇಷಣಗಳನ್ನು ಹೇಗೆ ಬೇಕಾದರೂ ಅನ್ವಯಿಸಿಕೊಳ್ಳಲು

ಸಾಧ್ಯವಿರುವುದರಿಂದ ಒಬ್ಬೊಬ್ಬ ಟೀಕಾಕಾರರೂ ಒಂದೊಂದು ರೀತಿ ಅನ್ವಯ ಮಾಡಿದ್ದಾರೆ. ಒಟ್ಟು ಅರ್ಥ ಒಂದೇ ಆದರೂ ಹೇಳುವ ಕ್ರಮದಲ್ಲಿ ಸ್ವಲ್ಪ ವ್ಯತ್ಯಾಸವಾಗುತ್ತದೆ. (ಕಕ. ಮತ್ತು ವಿ.)ದಲ್ಲಿ 1. ನಿಜ....ಕಾಶಃ ಯೋ ವಾಯುದೇವಃ ಭೀಮಃ (ಸನ್) ಉದ್ಯ....ಡಾಂ ವೀರ್ಯೋದ್ಧಾರ್ಯಾಂ ಗದಾಗ್ರ್ಯಾಂ ಅಭ್ಯು....ಕಾಂಡೇ ಭುಜೇ ಬಿಭ್ರತ್ ಅಧ್ಯಾತ್ಮಜ್ಞಾನನೇತಾ.... ಮಣಿಃ (ಸಃ) ಮೇ ಸುಮತಿಂ ವಿದಧ್ಯಾತ್ ಎಂದು ಅನ್ವಯ ಮಾಡಿದ್ದಾರೆ. ಛಲಾರಿಯವರು—ಯಃ (ಪೂರ್ವಂ) ಉದ್ಯ....ಡಾಂ, ವೀರ್ಯೋದ್ಧಾರ್ಯಾಂ ಗದಾಗ್ರ್ಯಾಂ ಅಭ್ಯುದಿತ....ಕಾಂಡೇ ಭುಜೇ ಬಿಭ್ರತ್ ಭೀಮಃ (ಅಭೂತ್,-ಸಃ) ನಿಜ....ಕಾಶಃ, ಅಧ್ಯಾತ್ಮ....ಮಣಿಃ ಅಯಂ ವಾಯುದೇವಃ ಮೇ ಸುಮತಿಂ ವಿದಧ್ಯಾತ್ ಎಂದು ಅನ್ವಯ ಮಾಡುತ್ತಾರೆ. ಪು.ರಾ. ಟೀಕಾ-ಕಾರರೂ ಪ್ರಾಯಶಃ ಇದೇ ಕ್ರಮವನ್ನೇ ಅನುಸರಿಸಿದ್ದಾರೆ. ಅರ್ಥದ ಕಡೆ ಗಮನವಿಟ್ಟರೆ ಅನ್ವಯಕ್ರಮವು ಗೌಣ. ಹಿಂದೆ ಭೀಮಸೇನರಾಗಿದ್ದವರೇ ಈಗ ಮಧ್ವಾಚಾರ್ಯರಾಗಿದ್ದಾರೆ ಎಂಬುದೇ ಮುಖ್ಯಭಾವ ; ಅದು ಸ್ಪಷ್ಟ-ವಾದರೆ ಸಾಕು.

ಯಃ–ಯಾವ ವಾಯುದೇವರು ; (ಪೂರ್ವಂ–ಮೊದಲು ಅಥವಾ ಹಿಂದೆ ಎಂದರೆ ದ್ವಾಪರಯುಗದಲ್ಲಿ) (ಈಗ ಗದೆಯ ವಿಶೇಷಣಗಳಿಗೆ ಅರ್ಥ ಹೇಳೋಣ) ಉದ್ಯ....ಡಾಂ—ಉದ್ಯತ್–ಉದಯಿಸುತ್ತಿರುವ, ವಿದ್ಯುತ್–ಸಿಡಿಲಿನಂತೆ, ಪ್ರಚಂಡಾಂ–ಘೋರಪರಿಣಾಮವುಳ್ಳ (ಅಥವಾ ಥಳಥಳಿಸುವ—ಮಿಂಚಿನಂತೆ ಫಳಫಳಿಸುವ) ; ವೀರ್ಯ-ಉದ್ಧಾರ್ಯಾಂ–ಮಹಾಪರಾಕ್ರಮ-ಶಾಲಿಯಾದವನಿಂದ ಮಾತ್ರವೇ ಎತ್ತಲು ಸಾಧ್ಯವಾಗಿದ್ದ ; ಗದಾಗ್ರ್ಯಾಂ–ಶ್ರೇಷ್ಠವಾದ ಗದೆಯನ್ನು ; ಅಭ್ಯುದಿತ....ಕಾಂಡೇ—ಅಭ್ಯುದಿತ–ಸ್ಪಷ್ಟವಾಗಿ ಉದಯಿಸಿದ, ದಿನಕರ–ಸೂರ್ಯನ, ಆಭಾ–ಪ್ರಕಾಶದಂತೆ ಪ್ರಭೆಯುಳ್ಳ, ಅಂಗದ–ತೋಳಂದಿಗಳೆಂಬ ಆಭರಣಗಳಿಂದ, ಆಢ್ಯ–ಕೂಡಿದ, ಪ್ರಕಾಂಡೇ–ಹೆಗಲುಳ್ಳ (ಅಥವಾ ತೋಳ್ಬಂದಿಗಳುಳ್ಳವೂ, ಆಢ್ಯ–ತುಂಬಿಕೊಂಡು ದುಂಡಾಗಿ ಬಲಶಾಲಿಗಳಾಗಿರುವುದರಿಂದ, ಪ್ರಕಾಂಡೇ–ಪ್ರಶಸ್ತವಾಗಿರುವ), ಭುಜೇ–ಬಾಹುವಿನಲ್ಲಿ, ಬಿಭ್ರತ್–ಧರಿಸಿದ ; ಭೀಮಃ–ಭೀಮನಾಗಿ ;

ಅಭೂತ್–ಆಗಿದ್ದನೋ ; (ಇದರಿಂದ ಭೀಮಸೇನಾವತಾರವು ಮುಖ್ಯವಾಗಿ ದುಷ್ಟನಿಗ್ರಹಕ್ಕಾಗಿಯೇ ಆಗಿತ್ತೆಂದು ಸೂಚಿಸಿದ್ದಾರೆ) (ಯಃ ಎಂದು ಮೊದಲು ಬಂದಿದ್ದರಿಂದ ಸಃ ಎಂದು ಸೇರಿಸಿಕೊಳ್ಳಬೇಕು) (ಸಃ–ಅಂಥಾ) ನಿಜ....ಕಾಶಃ—ನಿಜ–ತಮ್ಮ, ರುಚಿ–ಪ್ರಕಾಶದ, ನಿಕರ–ಸಮೂಹದಿಂದ, ವ್ಯಾಪ್ತ–ಆವರಿಸಲ್ಪಟ್ಟ, ಲೋಕಾವಕಾಶಃ–ಜಗತ್ಪ್ರದೇಶವುಳ್ಳ (ಇದನ್ನು ಭೀಮನಿಗೂ ವಿಶೇಷಣವಾಗಿ ಗ್ರಹಿಸಬಹುದು ; ಆಗ ಈ ಸಮಾಸಪದವನ್ನು ಬಿಭ್ರತ್‌ಗೂ ಭೀಮಃಕ್ಕೂ ಮಧ್ಯೆ ತೆಗೆದುಕೊಳ್ಳಬೇಕು) ; ಅಧ್ಯಾತ್ಮ-ಜ್ಞಾನನೇತಾ–ತತ್ವಶಾಸ್ತ್ರಪ್ರವಕ್ತರೂ ತತ್ವಶಾಸ್ತ್ರೋಪದೇಷ್ಟೃಗಳೂ ಆದ ; ಯತಿವರಮಹಿತಃ–ಪರಮಹಂಸರಲ್ಲಿ ಶ್ರೇಷ್ಠರಾದ ಸನಕಾದಿಗಳಿಂದಲೂ ವಿಷ್ಣುತೀರ್ಥಪದ್ಮನಾಭತೀರ್ಥಾದಿ ಯತಿಶ್ರೇಷ್ಠರಿಂದಲೂ ಪೂಜಿತರಾದ ; ಭೂಮಿಭೂಷಾಮಣಿಃ–ಭೂಮಂಡಲಕ್ಕೆ ಅಲಂಕಾರರತ್ನಪ್ರಾಯರಾದ ; ಅಯಂ ವಾಯುದೇವಃ–ವಾಯುದೇವರ ಅವತಾರಭೂತರಾದ ಈ ಮಧ್ವಾ-ಚಾರ್ಯರು ; ಮೇ–ನನಗೆ ; ಇಹ–ಇಲ್ಲಿ (ಇದರಲ್ಲಿ ಎಂದರೆ ವಾಯುಸ್ತುತಿ-ಯನ್ನು ರಚಿಸುವ ವಿಷಯದಲ್ಲಿ) ; ಸುಮತಿಂ–ಒಳ್ಳೆಯ ಬುದ್ಧಿಯನ್ನು (ಕವಿತಾಚಾತುರ್ಯವನ್ನು) ವಿದಧ್ಯಾತ್–ದಯಪಾಲಿಸಲಿ. (ಉತ್ತರಾರ್ಧದಲ್ಲಿ ಅಧ್ಯಾತ್ಮಜ್ಞಾನನೇತಾ ಎಂದು ಹೇಳಿರುವುದರಿಂದ ಮಧ್ವಾವತಾರವು ಕೇವಲ ಜ್ಞಾನೋಪದೇಶ ಮಾಡುವುದಕ್ಕಾಗಿಯೇ ಆಗಿದೆಯೆಂದು ಸೂಚಿತವಾಯಿತು.)

**116. ವಾಯುಪರವಾಗಿ ಭಾವಾರ್ಥ**—ಶ್ರೀಮನ್ಮಧ್ವಾಚಾರ್ಯ-ರನ್ನು ಸ್ತುತಿಸುವುದಕ್ಕೆ ಶಕ್ತಿಯಿಲ್ಲವೆಂದು ಹೇಳಿ ಈಗ ತಮಗೆ ಆ ಶಕ್ತಿಯನ್ನು ಕರುಣಿಸಬೇಕೆಂದು ಆ ಮಧ್ವಾಚಾರ್ಯರನ್ನೇ ಪ್ರಾರ್ಥಿಸುತ್ತಾರೆ. ಈ ಮಧ್ವಾಚಾರ್ಯರು ವಾಯುದೇವರ ಮೂರನೇ ಅವತಾರವಷ್ಟೇ. ವಾಯು-ದೇವರು ಹೇಗೆ ಬಲಜ್ಞಾನಸ್ವರೂಪರಾಗಿದ್ದಾರೋ ಇವರೂ ಹಾಗೆಯೇ ಬಲ-ಜ್ಞಾನಸ್ವರೂಪರಾಗಿದ್ದಾರೆ. ಇವರು ಕಲಿಯುಗದಲ್ಲಿ ಸಚ್ಛಾಸ್ತ್ರಪ್ರವೃತ್ತಿ-ಯನ್ನುಂಟುಮಾಡಿ ಸಜ್ಜನರನ್ನು ಉದ್ಧಾರಮಾಡುವುದಕ್ಕಾಗಿಯೇ ಅವತರಿ-ಸಿದ್ದಾರೆ. ಈ ಅವತಾರದಲ್ಲಿ ಇವರು ಸನ್ಯಾಸಿಗಳಾಗಿ ಪರಮಹಂಸರೆಂದು ಪ್ರಖ್ಯಾತರಾದ ಸನಕಾದಿಗಳ ಪರಂಪರೆಯಲ್ಲಿ ಬಂದದ್ದು ಮಾತ್ರವಲ್ಲದೆ

ಭಾಷ್ಯಕಾರರಾಗಿ ಅವರೆಲ್ಲರಿಂದ ಸಮ್ಮಾನ್ಯರೂ ವಿಷ್ಣುತೀರ್ಥಾದಿ ಅಷ್ಟಮಠದ ಯತಿಗಳಿಗೂ ಪದ್ಮನಾಭತೀರ್ಥಾದಿ ಯತಿಗಳಿಗೂ ಗುರುಗಳಾಗಿ ವಂದ್ಯರೂ ಆಗಿದ್ದಾರೆ. ಇಡೀ ಭೂಮಂಡಲಕ್ಕೆ ಭೂಷಣಪ್ರಾಯರಾಗಿದ್ದಾರೆ. ಈ ವಾಯುದೇವರೇ ಹಿಂದಿನ ದ್ವಾಪರಯುಗದಲ್ಲಿ ದೈತ್ಯಸಂಹಾರ ಮಾಡಿ ಭೂಭಾರವನ್ನು ಇಳಿಸುವುದಕ್ಕಾಗಿ ಭೀಮಸೇನನಾಗಿ ಅವತಾರ ಮಾಡಿದರು. ಕ್ಷತ್ರಿಯರಿಗೆ ಬಾಹುಬಲವೇ ಮುಖ್ಯವಾಗಿರುವುದರಿಂದ ಬಲಿಷ್ಠವಾದ ದುಂಡಾದ ದೀರ್ಘವಾದ ಬಾಹುಗಳುಳ್ಳವರಾಗಿದ್ದರು. ಬಾಹುಗಳಲ್ಲಿ ಧರಿಸಿದ್ದ ತೋಳ್ಬಂದಿಗಳು ಮಿಂಚಿನಂತೆ ಥಳಥಳಿಸುತ್ತಿದ್ದುವು. ಭೀಮಸೇನನು ಹಿಡಿದಿದ್ದ ಮಹಾಗದೆಗೆ ಹತ್ತುಸಾವಿರ ಆನೆಗಳ ಬಲವಿತ್ತು. ಅದನ್ನು ಒಂದು ಸರಿ ಪ್ರಯೋಗ ಮಾಡಿದರೆ ಸಾಕು ಸಿಡಿಲು ಹೊಡೆದಂತೆ ಆಗುತ್ತಿತ್ತು. ಹೀಗೆ ಭೀಮಾವತಾರ ಮಾಡಿ ದುಷ್ಟನಿಗ್ರಹ ಮಾಡಿದ ವಾಯುದೇವರೇ ಈಗ ಜ್ಞಾನಪ್ರಚಾರಕ್ಕಾಗಿ ಮಧ್ವಾಚಾರ್ಯರಾಗಿ ಅವತಾರ ಮಾಡಿದ್ದಾರೆ. ಅವರು ನನಗೆ ಈ ಸ್ತುತಿಯನ್ನು ಮಾಡಲು ಬೇಕಾಗಿರುವ ಕವಿತಾ ಶಕ್ತಿಯನ್ನು ಕರುಣಿಸಲಿ ಎಂದು ಪ್ರಾರ್ಥಿಸುತ್ತಾರೆ.

## ಆರನೇ ಶ್ಲೋಕ. ಅನಿಷ್ಟನಿವಾರಣೆಗಾಗಿ ಪ್ರಾರ್ಥನೆ

**117. ಶ್ಲೋಕಕ್ಕೆ ಅವತಾರಿಕೆ**—ಸಾಂಸಾರಿಕ ತಾಪತ್ರಯಗಳನ್ನು ಪರಿಹರಿಸಲು ಶ್ರೀ ಹರಿವಾಯುಗಳೇ ಸಮರ್ಥರೆಂದು ತಿಳಿದು ಅವರನ್ನು ಕ್ಷೀರಸಮುದ್ರಕ್ಕೆ ಹೋಲಿಸಿ ಆಧ್ಯಾತ್ಮಿಕಾದಿ ಸಕಲತಾಪಗಳನ್ನು ಪರಿಹರಿಸ-ಲೆಂದು ಈ ಶ್ಲೋಕದಿಂದ ಪ್ರಾರ್ಥಿಸುತ್ತಾರೆ. (ಕಕ., ವಿ., ಛ., ಪು.ರಾ.)

**ಸಂಸಾರೋತ್ತಾಪನಿತ್ಯೋ—ಪಶಮದ-ಸದಯ**
**ಸ್ನೇಹಹಾಸಾಂಬುಪೂರ–**
**ಪ್ರೋದ್ಯದ್ವಿದ್ಯಾನವದ್ಯ—ದ್ಯುತಿಮಣಿಕಿರಣ–**
**ಶ್ರೇಣಿ–ಸಂಪೂರಿತಾಶಃ ।**

**ಶ್ರೀವತ್ಸಾಂಕಾಧಿವಾಸೋ-ಚಿತತರ-ಸರಲಃ**
**(ಪಾಠಾಂ ಸರಲ) ಶ್ರೀಮದಾನಂದತೀರ್ಥ-**
**ಕ್ಷೀರಾಂಭೋಧಿರ್ ವಿಭಿಂದ್ಯಾದ್ ಭವದನಭಿಮತಂ**
**ಭೂರಿ ಮೇ ಭೂತಿಹೇತುಃ ॥ ೬ ॥**

**ಪದವಿಭಾಗ**—ಹರಿಪರವಾಗಿ ಅರ್ಥ ಹೇಳುವಾಗ—ಸಂಸಾರೋ.... ಸದಯ, ಸ್ನೇಹಹಾಸ, ಅಂಬುಃಪೂರ, ಪ್ರೋದ್ಯದ್ವಿದ್ಯ, ಅನವದ್ಯ....ಪೂರಿತಾಶಃ, ಶ್ರೀವತ್ಸಾಂಕ, ಅಧಿವಾಸೋಚಿತತರಸರಲಃ, ಶ್ರೀಮದಾನಂದತೀರ್ಥ, ಕ್ಷೀರಾಂಭೋಧಿಃ, ವಿಭಿಂದ್ಯಾತ್, ಭವತ್, ಅನಭಿಮತಂ, ಭೂರಿ, ಮೇ, ಭೂತಿಹೇತುಃ ಎಂದು ಪದವಿಭಾಗ ಮಾಡಬೇಕು. ಮತ್ತು ಯಸ್ಯ, ಸಃ, ಭವಾನ್ ಎಂಬ ಪದಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕು.

ವಾಯುಪರವಾಗಿ ಅರ್ಥ ಹೇಳುವಾಗ—ಪೂರ್ವಾರ್ಧವಷ್ಟೂ ಒಂದೇ ಪದ. ಸಂಸಾರೋ....ಪೂರಿತಾಶಃ, ಶ್ರೀವತ್ಸಾಂ....ಸರಲಃ, ಶ್ರೀಮದಾ.... ಭೋಧಿಃ (ಅಥವಾ ಶ್ರೀವತ್ಸಾಂ....ಭೋಧಿಃ) ವಿಭಿಂದ್ಯಾತ್, ಭವತ್, ಅನಭಿಮತಂ ಅಥವಾ ಭವದನಭಿಮತಂ, ಭೂರಿ, ಮೇ, ಭೂತಿಹೇತುಃ ಎಂದು ಪದವಿಭಾಗ.

**118. ಶ್ಲೋಕದ ವಿಶ್ಲೇಷಣೆ**—ಹರಿಪರವಾಗಿ ಅರ್ಥ ಹೇಳುವಾಗ —ಹೇ ಶ್ರೀವತ್ಸಾಂಕ ಎಂಬುದು ಸಂಬೋಧನೆ. ಇದಕ್ಕೆ 1. ಸಂಸಾರೋ.... ಶಮದ, 2. ಸದಯ, 3. ಸ್ನೇಹಹಾಸ, 4. ಅಂಬುಪೂರ, 5. ಪ್ರೋದ್ಯದ್ವಿದ್ಯ 6. ಶ್ರೀಮದಾನಂದತೀರ್ಥ ಎಂದು ಆರು ವಿಶೇಷಣಗಳು ; ಇವುಗಳೂ ಸಂಬೋಧನರೂಪಗಳೇ ಆಗಿವೆ. ಭವಾನ್ ಎಂಬ ಅಧ್ಯಾಹೃತಪದವೇ ಕರ್ತೃಪದ. ಈ ಕರ್ತೃಪದಕ್ಕೆ (ಕ) ಯಸ್ಯ ಕ್ಷೀರಾಂಭೋಧಿಃ ಅಧಿವಾಸೋಚಿತತರ ಸರಲಃ, (ಖ) ಅನವದ್ಯ....ಪೂರಿತಾಶಃ, (ಗ) ಭೂತಿಹೇತುಃ ಎಂದು ಮೂರು ವಿಶೇಷಣಗಳು. ಹೇ ಶ್ರೀವತ್ಸಾಂಕ ! ಭವಾನ್ ಮೇ ಭವತ್ ಭೂರಿ ಅನಭಿಮತಂ ವಿಭಿಂದ್ಯಾತ್ ಎಂಬುದೇ ಪ್ರಧಾನವಾಕ್ಯ. ಇದಕ್ಕೆ—ಶ್ರೀವತ್ಸವೆಂಬ ಲಾಂಛನವುಳ್ಳ ಹೇ ವೇದವ್ಯಾಸದೇವರೇ ! ನೀವು ನನಗೆ ಬಂದೊದ-

ಗುತ್ತಿರುವ ಅನಿಷ್ಟಪುಣ್ಯಪಾಪಗಳನ್ನು ಭೇದಿಸಿರಿ ಎಂಬುದು ಅರ್ಥ. ಪ್ರಾರಬ್ಧರೂಪವಾದ ಪುಣ್ಯವಾಗಲಿ ಪಾಪವಾಗಲಿ ಅಡ್ಡವಿದ್ದರೆ ಭಗವದ-ಪರೋಕ್ಷವೂ ಆಗುವುದಿಲ್ಲ, ಮೋಕ್ಷವೂ ಲಭಿಸುವುದಿಲ್ಲವೆಂದು ನಿಯಮ. ಅದಕ್ಕಾಗಿ ಅಂಥಾ ಅನಿಷ್ಟವಾದ ಪ್ರಾರಬ್ಧಕರ್ಮರೂಪವಾದ ಪುಣ್ಯಪಾಪ-ಗಳನ್ನು ವೇದವ್ಯಾಸದೇವರು ಕತ್ತರಿಸಿ ಹಾಕಲಿ ಎಂದು ಈ ಶ್ಲೋಕದಲ್ಲಿ ಪ್ರಾರ್ಥಿಸಿದ್ದಾರೆ.

ಮೇಲಿನ ಪದಗಳಲ್ಲಿ ಭೂತಿಹೇತುಃ ಎಂಬ ಪದಕ್ಕೆ ಹರಿಪರವಾದ ಅರ್ಥವು ಮಾತ್ರ ಕ್ಲಿಷ್ಟವಾದುದರಿಂದ ಅದೊಂದಕ್ಕೆ ಮಾತ್ರ ವಿವರಣೆ ಕೊಡಲಾಗಿದೆ.

**118 (ಕ). ಭೂತಿಹೇತುಃ ||** ಭವತೀತೀ ಭೂತಿಃ । ಕರ್ತರಿ ಕ್ತಿನ್ ಪ್ರತ್ಯಯ ಬಂದಿದೆ. ಭೂ ಧಾತುವು ಉತ್ಪತ್ತ್ಯರ್ಥಕವಾಗಿಯೂ ಪ್ರಯುಕ್ತವಾಗಿರುವ ಕಾರಣ (ಗಂಗಾ ಹಿಮವತಃ ಉದ್ಭವತಿ–ಗಂಗೆಯು ಹಿಮವತ್ಪರ್ವತದಲ್ಲಿ ಹುಟ್ಟುತ್ತದೆ.) ಭೂತಿಃ ಎಂದರೆ ಸೃಷ್ಟಿಯೆಂದೂ ಅರ್ಥ-ವಾಗುತ್ತದೆ. ಭೂ ಸತ್ತಾಯಾಂ ಎಂದು ಧಾತುಪಾಠವಿರುವುದರಿಂದ ಸತ್ತಾ-ರ್ಥಕವಾದ ಸ್ಥಿತಿಯೂ ಭೂತಿ ಶಬ್ದಾರ್ಥವಾಗುತ್ತದೆ. 'ಭೂತಿರ್ಭಸ್ಮನಿ ಸಂಪದಿ' ಎಂದು ಕೋಶವಿರುವುದರಿಂದ ಭಸ್ಮೀಭಾವಾದಿರೂಪ ನಾಶವೂ, ಮೋಕ್ಷಾಖ್ಯ ಸಂಪತ್ತೂ ಸಹ ಭೂತಿ ಶಬ್ದಾರ್ಥವಾಗುತ್ತದೆ. ಆದಕಾರಣ ಭೂತಿಹೇತುಃ ಎಂಬುದಕ್ಕೆ ಜಗತ್ತಿನ ಸೃಷ್ಟಿಸ್ಥಿತಿಲಯುಗಳಿಗೂ ಮೋಕ್ಷಕ್ಕೂ ಕಾರಣೀಭೂತರಾದ ಎಂದು ಅರ್ಥವಾಗುತ್ತದೆ. ಇದರಿಂದ 'ಯತೋ ವಾ ಇಮಾನಿ ಭೂತಾನಿ ಜಾಯಂತೇ । ಯೇನ ಜಾತಾನಿ ಜೀವಂತಿ । ಯತ್ಪ್ರ-ಯಂತ್ಯಭಿಸಂವಿಶಂತೀತಿ' ಎಂಬ ಸೂತ್ರಭಾಷ್ಯೋದಾಹೃತ (೧ಅ., ೧ಪಾ., ೨ಸೂ.) ತೈತ್ತಿರೀಯ ಶ್ರುತಿಯು ಸಂಗ್ರಹೀತವಾಯಿತೆಂದು ತಿಳಿಯಬೇಕು. 'ಯಾವ ಭಗವಂತನಿಂದ ಈ ಚರಾಚರ ಜಗತ್ತು ಹುಟ್ಟುತ್ತದೋ, ಯಾರಿಂದ ಹುಟ್ಟಿದ ಪ್ರಾಣಿಗಳು ಬದುಕಿರುತ್ತವೋ ಮತ್ತು ಯಾರಲ್ಲಿ ಅವೆಲ್ಲವೂ ಲಯ ಹೊಂದುತ್ತವೋ' ಎಂದು ಆ ಶ್ರುತಿಗೆ ಸಾಮಾನ್ಯಾರ್ಥ. (ಪು.ರಾ.)

**119. ಹರಿಪರವಾಗಿ ಅನ್ವಯಾರ್ಥ—1.** ಸಂಸಾರೋ.... ಶಮದ—ಸಂಸಾರ–ಸಂಸಾರದಲ್ಲಿ ಉಂಟಾಗುವ ಉತ್-ತಾಪ–ಹೆಚ್ಚಾದ

ತಾಪಗಳಿಗೆ, ಉಪಶಮ—ಶಾಂತಿಯನ್ನು, ದ—ಕೊಡುವಂಥಾ ; 2. ಸದಯ—ದಯದಿಂದ ಕೂಡಿದ ; 3. ಸ್ನೇಹಹಾಸ—ಸ್ನೇಹದಿಂದ (ಪ್ರೀತಿಯಿಂದ) ಯುಕ್ತವಾದ ಮಂದಹಾಸವುಳ್ಳಂಥಾ ; 4. ಅಂಬುಪೂರ—ಪ್ರಳಯೋದಕದಿಂದ ಸಮಸ್ತ ಪ್ರದೇಶವನ್ನೂ ತುಂಬಿಸುವಂಥಾ, ಅಥವಾ ಪ್ರಳಯೋದಕವನ್ನು ರಕ್ಷಿಸುವಂಥಾ ; 5. ಪ್ರೋದ್ಯದ್-ವಿದ್ಯ—ಪ್ರಾದುರ್ಭವಿಸುತ್ತಿರುವ ಸಕಲವಿದ್ಯೆಗಳುಳ್ಳಂಥಾ ; 6. ಶ್ರೀಮದಾನಂದತೀರ್ಥ—ಶ್ರೀಮತ್—ಸಂಪತ್ತುಳ್ಳಂಥಾ, ಆನಂದ—ಸ್ವರೂಪಾನಂದವನ್ನು ಕೊಡುವಂಥಾ, ತೀರ್ಥ—ಬ್ರಹ್ಮಸೂತ್ರಾದಿಶಾಸ್ತ್ರಗಳನ್ನು ರಚಿಸಿದಂಥಾ ; ಹೇ ಶ್ರೀವತ್ಸ-ಅಂಕ—ಶ್ರೀವತ್ಸವೆಂಬ ಲಾಂಛನವನ್ನು ಧರಿಸಿರುವ ಹೇ ವೇದವ್ಯಾಸದೇವರೇ ! (ಕ) (ಯಸ್ಯ—ಯಾವ ನಿಮಗೆ) ಕ್ಷೀರಾಂಭೋಧಿಃ—ಕ್ಷೀರಸಮುದ್ರವು, ಅಧಿವಾಸ-ಉಚಿತತರ-ಸರಲಃ—ವಾಸ ಮಾಡುವುದಕ್ಕೆ ಬಹಳ ಉಚಿತವಾದವುಗಳಲ್ಲಿ, ಸರಳಃ—ಶ್ರೇಷ್ಠವಾದ ಸ್ಥಳವಾಗಿದೆಯೋ (ಅಂಥಾ), (ಖ) ಅನವದ್ಯ....ತಾಶಃ—ಅನವದ್ಯ—ದೋಷರಹಿತವಾದ, ದ್ಯುತಿಮಣಿ—ಶ್ರೇಷ್ಠವಾದ ಕಾಂತಿಯು, ಕಿರಣ—ರಶ್ಮಿಗಳ, ಶ್ರೇಣಿ—ಪಂಕ್ತಿಯಿಂದ, ಸಂಪೂರಿತ—ತುಂಬಿದ, ಆಶಃ—ದಿಕ್ಕುಗಳುಳ್ಳಂಥಾ, (ಗ) ಭೂತಿಹೇತುಃ—ಜಗತ್ತುಗಳ ಉತ್ಪತ್ತಿಸ್ಥಿತಿಲಯಗಳಿಗೂ ಮೋಕ್ಷಕ್ಕೂ ಕಾರಣೀಭೂತರಾದ, ಭವಾನ್—ನೀವು, ಮೇ—ನನಗೆ, ಭವತ್—ಉಂಟಾಗುತ್ತಿರುವ (ಅಡ್ಡಿಯಾಗುತ್ತಿರುವ), ಭೂರಿ—ಅಧಿಕವಾದ, ಅನಭಿಮತಂ- ಅನಿಷ್ಟರೂಪವಾದ ಪುಣ್ಯಪಾಪಗಳನ್ನು, ವಿಭಿಂಧ್ಯಾತ್—ಭೇದಿಸಿರಿ.

**120. ಹರಿಪರವಾಗಿ ಭಾವಾರ್ಥ**—ಹೇ ವೇದವ್ಯಾಸದೇವರೇ ! ನಿಮ್ಮ ಕೃಪಾಕಟಾಕ್ಷವು ದಯಾಮಯವಾದುದು. ಅದು ಬಿದ್ದರೆ ಸಾಕು. ಘೋರಸಂಸಾರದ ಸಕಲತಾಪಗಳೂ ಅಡಗಿಹೋಗುವುವು. ತಮ್ಮ ಮುಖವು ಸದಾ ಮಂದಹಾಸಯುಕ್ತವಾಗಿರುತ್ತದೆ. ತಾವು ಅತ್ಯಮೋಘವಾದ ಬ್ರಹ್ಮಸೂತ್ರಾದಿಶಾಸ್ತ್ರಗಳ ಪ್ರಣೇತೃಗಳಾಗಿದ್ದೀರಿ. ಕ್ಷೀರಸಮುದ್ರವೇ ತಮಗೆ ಮುಖ್ಯವಾದ ನೆಲೆಮನೆಯಾಗಿದೆ. ತಾವೂ ಶ್ರೀವತ್ಸಲಾಂಛನಧಾರಿಗಳು. ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಕಾರಣಕರ್ತರಾಗಿರುವಿರಲ್ಲದೆ ತಾವು ಮೋಕ್ಷಪ್ರದಾತೃಗಳೂ ಆಗಿದ್ದೀರಿ. ಲಯಕಾಲದಲ್ಲಿ ಸಕಲ ಜಗತ್ತನ್ನೂ ಜಲಮಯ-

ಮಾಡುವಿರಿ. ತಮ್ಮ ತೇಜಃಪ್ರಕಾಶವು ಬ್ರಹ್ಮಾಂಡದ ಒಳಗೆ ಹೊರಗೆಲ್ಲಾ ವ್ಯಾಪಿಸಿದೆ. ಕಠೋಪನಿಷತ್ತಿನಲ್ಲಿ ಹೇಳಿದಂತೆ 'ತಮೇವ ಭಾಂತಮನುಭಾತಿ ಸರ್ವಂ' ತಮ್ಮ ಪ್ರಕಾಶವನ್ನು ಆಶ್ರಯಿಸಿಯೇ ಚಂದ್ರಸೂರ್ಯಾದಿಗಳೂ ನಕ್ಷತ್ರಗಳೂ ಬೆಳಗುತ್ತವೆ. ಮತ್ತು ಭಗವದ್ಗೀತೆಯಲ್ಲಿ ಹೇಳಿದಂತೆ ಸೂರ್ಯ-ನಲ್ಲಿರುವ ಬೆಳಕೂ ಚಂದ್ರನಲ್ಲಿಯೂ ಅಗ್ನಿಯಲ್ಲಿಯೂ ಇರುವ ತೇಜಸ್ಸೂ ತಮ್ಮದೇ ಆಗಿದೆ. ಇಂಥಾ ತಾವು ನನಗೆ ಬಿಂಬಾಪರೋಕ್ಷವಾಗಲು ಅಡ್ಡಿಯಾಗಿರುವ ಅನಿಷ್ಟ ಪಾಪಪುಣ್ಯರೂಪ ಪ್ರಾರಬ್ಧಕರ್ಮವನ್ನು ತೊಡೆದು ಹಾಕಿರಿ ಎಂದು ಭಾವ.

**121. ವಾಯುಪರವಾಗಿ ಅನ್ವಯಾರ್ಥ**—ಶ್ರೀಮದಾನಂದ-ತೀರ್ಥಕ್ಷೀರಾಂಬೋಧಿಃ ಮೇ ಅನಭಿಮತಂ ವಿಭಿಂದ್ಯಾತ್–ಶ್ರೀಮದಾ-ನಂದತೀರ್ಥರೆಂಬ ಕ್ಷೀರಸಮುದ್ರವು ನನ್ನ ಅನಿಷ್ಟವನ್ನು ಕತ್ತರಿಸಿ ಹಾಕಲಿ ಎಂಬುದೇ ಪ್ರಧಾನವಾಕ್ಯ. ಇಲ್ಲಿ ಶ್ರೀಮದಾಚಾರ್ಯರನ್ನು ಕ್ಷೀರ-ಸಮುದ್ರಕ್ಕೆ ಹೋಲಿಸಿ ಅದರಲ್ಲಿರುವ ಗುಣಗಳೆಲ್ಲ ಇವರಲ್ಲೂ ಇವೆ ಎಂದು ವರ್ಣಿಸಿದ್ದಾರೆ. ಶ್ರೀಮದಾ....ಬೋಧಿಃ ಎಂಬ ಕರ್ತೃಪದಕ್ಕೆ 1. ಸಂಸಾರೋ....ತಾಶಃ, 2. ಶ್ರೀವತ್ಸಾಂ....ಸರಲಃ, 3. ಭೂತಿಹೇತುಃ ಎಂದು ಮೂರು ವಿಶೇಷಣಗಳು. ಈ ಮೂರಕ್ಕೂ ಆಚಾರ್ಯರ ಪರವಾ-ಗಿಯೂ ಕ್ಷೀರಸಮುದ್ರಪರವಾಗಿಯೂ ಎರಡೆರಡು ಅರ್ಥಗಳಾಗುತ್ತವೆ. ಅನಭಿಮತಂ ಎಂಬುದಕ್ಕೆ (ಕ) ಭವತ್, (ಖ) ಭೂರಿ ಎಂದು ಎರಡು ವಿಶೇಷಣಗಳು. ಛ. ಟೀಕೆಯಲ್ಲಿ ಭವದನಭಿಮತಂ ಎಂದು ಒಂದೇ ಪದ-ವಾಗಿ ಗ್ರಹಣ ಮಾಡಿಯೂ ಅರ್ಥ ಹೇಳಿದ್ದಾರೆ. ಕಕ. ಮತ್ತು ವಿ. ಟೀಕೆಗಳಲ್ಲಿ ಶ್ರೀವತ್ಸಾಂ....ಕ್ಷೀರಾಂಭೋಧಿಃ ಎಂಬುದಿಷ್ಟೂ ಒಂದೇ ಪದವೆಂದು ಗ್ರಹಣ ಮಾಡಿದ್ದಾರೆ. ಪೂರ್ವಾರ್ಧದಲ್ಲಿ ಸಂಸಾರೋ.... ಹಾಸಾಂಬುಪೂರ ಎಂಬುದು (ಪ್ರಥಮಚರಣ) ಒಂದು ವಿಶೇಷಣ; ಪ್ರೋದ್ಯದ್....ತಾಶಃ (ದ್ವಿತೀಯಚರಣ) ಇನ್ನೊಂದು ವಿಶೇಷಣ. ಈ ಎರಡೂ ಸೇರಿ ವಿಶೇಷಣ ಉಭಯಪದ ಕರ್ಮಧಾರಯ ಸಮಾಸವಾಗಿ ಒಂದೇ ಪದವಾಗಿದೆ.

**ಅನ್ವಯಾರ್ಥ**—1. ಸಂಸಾರ-ಉತ್ತಾಪ–ಸಂಸಾರದಲ್ಲಿ ಉಂಟಾಗುವ ಆಧ್ಯಾತ್ಮಿಕ-ಆಧಿದೈವಿಕ-ಆಧಿಭೌತಿಕವೆಂಬ ಘೋರವಾದ ತಾಪತ್ರಯಗಳಿಗೆ, ನಿತ್ಯ–ನಿರಂತರವಾಗಿ, ಉಪಶಮದ–ಉಪಶಾಂತಿಯನ್ನು ಕೊಡುವ, ಸದಯ-ದಯಾಮಯವಾದ (ಕೃಪಾಪೂರ್ಣವಾದ), ಸ್ನೇಹ–ಪ್ರೀತಿಯಿಂದ ಕೂಡಿದ, ಹಾಸ–ಮಂದಹಾಸವೆಂಬ, ಅಂಬುಪೂರ–ನೀರಿನಿಂದ ತುಂಬಿದ (ಕ್ಷೀರಸಮುದ್ರ-ಪಕ್ಷದಲ್ಲಿ ಸ್ನೇಹಹಾಸಾಂಬುಪೂರ–ಕ್ಷೀರವೆಂಬ ನೀರಿನಿಂದ ತುಂಬಿದ ಎಂದರ್ಥ) (ಇಲ್ಲಿಯವರೆಗೆ ಒಂದು ವಿಶೇಷಣವಾಯಿತು) ; ಪ್ರೋದ್ಯದ್–ಉದಯಿಸುತ್ತಿ-ರುವ (ಮತ್ತೆ ಮತ್ತೆ ಪ್ರಾದುರ್ಭವಿಸುತ್ತಿರುವ) ; ವಿದ್ಯಾ–ವಿದ್ಯೆಗಳೆಂಬ, ಅನವದ್ಯ-ದ್ಯುತಿ–ನಿರ್ದೋಷವಾದ ಪ್ರಕಾಶವುಳ್ಳ, ಮಣಿ–ರತ್ನಗಳ, ಕಿರಣ–ಕಿರಣಗಳ, ಶ್ರೇಣಿ–ಸಾಲುಗಳಿಂದ, ಸಂಪೂರಿತ–ತುಂಬಲ್ಪಟ್ಟ, ಆಶಃ–ದಿಕ್ಕು-ಗಳುಳ್ಳ (ಇದು ಇನ್ನೊಂದು ವಿಶೇಷಣ), ಸಮುದ್ರಪಕ್ಷದಲ್ಲಿ ಅನವದ್ಯದ್ಯುತಿಮಣಿ –ನಿರ್ದೋಷವಾದ ಪ್ರಕಾಶವುಳ್ಳ ಕೌಸ್ತುಭಾದಿ ಮಣಿಗಳ ಕಿರಣಗಳಿಂದ ಸಕಲ ದಿಕ್ಕುಗಳನ್ನೂ ತುಂಬಿಸುತ್ತಿರುವ ಎಂದರ್ಥ) ; 2. ಶ್ರೀವತ್ಸಾಂಕ–ಶ್ರೀವತ್ಸ-ವೆಂಬ ಲಾಂಛನವುಳ್ಳ ಶ್ರೀಹರಿಯ, ಅಧಿವಾಸ–ಆವಾಸಕ್ಕೆ ಎಂದರೆ ಸನ್ನಿ-ಧಾನಕ್ಕೆ, ಉಚಿತ-ತರ–ವಿಶೇಷವಾದ ಯೋಗ್ಯವಾದ ಸ್ಥಳವಾದ ರುದ್ರಾದಿ ದೇವತೆಗಳಿಗಿಂತಲೂ, ಸರಲಃ–ಶ್ರೇಷ್ಠರಾದ ('ದಕ್ಷಿಣೇ ಸರಲೋದಾರೌ' ಎಂದು ಅಮರ. ವಿ. ಛ. 'ಉತ್ಸಂಗ ಚಿಹ್ನಯೋರಂಕಃ' ಅಂಕ–ತೊಡೆ ಮತ್ತು ಲಾಂಛನ ಎಂದು ಅಭಿಧಾನವಿದೆ. ಛ.) ; ಸಮುದ್ರಪಕ್ಷದಲ್ಲಿ. ಶ್ರೀವತ್ಸಾಂಕ–ಅಧಿವಾಸ-ಉಚಿತತರ-ಸರಲಃ–ಶ್ರೀಮನ್ನಾರಾಯಣನ ವಿಶೇಷ ಆವಾಸಕ್ಕೆ ಯೋಗ್ಯವಾದ ಅನಂತಾಸನ ಶ್ವೇತದ್ವೀಪಗಳಿಗಿಂತಲೂ ಶ್ರೇಷ್ಠವಾದ–ಎಂದರ್ಥ : 3. ಭೂತಿಹೇತುಃ—ಭೂತಿ–ಭಕ್ತಿಜ್ಞಾನಾದಿ ಸಂಪತ್ತುಗಳಿಗೂ, ಐಶ್ವರ್ಯಾದಿಸಂಪತ್ತುಗಳಿಗೂ, ಹೇತುಃ–ಕಾರಣರಾದ (ಪು.ರಾ., ಛ.) ಭಕ್ತಿಜ್ಞಾನಾದಿಸಂಪತ್ತುಗಳಿಗೆ ಕಾರಣರಾದ ಅಥವಾ ಲಕ್ಷ್ಮಿಯ ಆವಿರ್ಭಾವಕ್ಕೆ ಅಧಿಷ್ಠಾನಕ್ಕೆ ಕಾರಣಭೂತರಾದ (ವಿ. ೧೧.), (ಸಮುದ್ರಪಕ್ಷದಲ್ಲಿ–ಲಕ್ಷ್ಮಿಯ ತವರುಮನೆಯಾದ, ಲಕ್ಷ್ಮಿಯು ಹುಟ್ಟಿದ ಸ್ಥಾನವಾದಂಥಾ) ; ಶ್ರೀಮದಾ-ನಂದತೀರ್ಥಕ್ಷೀರಾಂಭೋಧಿಃ–ಶ್ರೀಮನ್ಮಧ್ವಾಚಾರ್ಯರೆಂಬ ಕ್ಷೀರಸಮುದ್ರವು;

ಮೇ–ನನಗೆ, ಭವತ್–ಉಂಟಾಗುತ್ತಿರುವ, ಭೂರಿ–ಅಧಿಕವಾದ ; ಅನಭಿಮತಂ–ಅನಿಷ್ಟವನ್ನು ; (ಅಥವಾ ಭವದನಭಿಮತಂ—ಭವತ್–ವಿಷ್ಣುಭಕ್ತರ, ಅನಭಿಮತಂ–ಅನಿಷ್ಠವನ್ನು—ಭ.) ; ವಿಭಿಂದ್ಯಾತ್–ಭೇದಿಸಲಿ.

**ವಿಭಿಂದ್ಯಾತ್** ಎಂಬುದು ವೀತ್ಯುಪಸರ್ಗಪೂರ್ವಕ ಭಿದಿರ್ ವಿದಾರಣೇ ಎಂಬ ಧಾತುವಿನ (ರು.ಪ.) ವಿಧಿಲಿಙ್ ರೂಪ. (ಭ., ವಿ.) ಭಿಂದ್ಯಾತ್ । ಭಿಂದ್ಯಾತಾಂ । ಭಿಂದ್ಯುಃ । ಇತ್ಯಾದಿ ರೂಪಗಳು (ಭ.)

**122. ವಾಯುಪರವಾಗಿ ಭಾವಾರ್ಥ**—ಈ ಶ್ಲೋಕದಲ್ಲಿ ಶ್ರೀಮಧ್ವಾಚಾರ್ಯರನ್ನು ಕ್ಷೀರಸಮುದ್ರಕ್ಕೆ ಹೋಲಿಸಿದ್ದಾರೆ. ಇಬ್ಬರಲ್ಲೂ ಈ ರೀತಿ ಸಮಾನಧರ್ಮಗಳಿವೆಯೆಂಬುದನ್ನು ಮೊದಲು ತಿಳಿದುಕೊಳ್ಳಬೇಕು—

| **ಕ್ಷೀರಸಮುದ್ರದಲ್ಲಿ** | **ಶ್ರೀಮಧ್ವಾಚಾರ್ಯರಲ್ಲಿ** |
|---|---|
| 1) ಹಾಲಿನಿಂದ ತುಂಬಿದೆ ; ಆ ಹಾಲು ದಾಹಾದಿ ತಾಪವನ್ನು ಕಳೆಯಲಿಕ್ಕೆ ಕಾರಣವಾಗಿದೆ ಹಾಲು ಸ್ನೇಹ (ಜಿಡ್ಡು)ಯುಕ್ತವಾಗಿದೆ. (ಪ್ರಥಮ ಚರಣದ ಅರ್ಥ). | 1) ಮಂದಹಾಸದಿಂದ ತುಂಬಿದೆ. ಅದು ಸಂಸಾರತಾಪತ್ರಯಗಳನ್ನು ಪರಿಹರಿಸಬಲ್ಲದು. ಸ್ನೇಹದಿಂದ (ಪ್ರೀತಿಯಿಂದ) ಕೂಡಿದೆ. |
| 2) ಚಿಂತಾಮಣಿ ಕೌಸ್ತುಭಾದಿ ಮಣಿಗಳಿಗೂ, ಕಲ್ಪವೃಕ್ಷ ಕಾಮಧೇನುಗಳಿಗೂ ಜನ್ಮಸ್ಥಾನವಾಗಿದೆ. ಅವುಗಳ ಕೀರ್ತಿಯು ದಿಕ್ಕುವಿದಿಕ್ಕುಗಳಲ್ಲೆಲ್ಲಾ ಹರಡಿದೆ. (ದ್ವಿತೀಯ ಚರಣದ ಅರ್ಥ.) | 2) ಶ್ರುತಿ ಸ್ಮೃತ್ಯಾದಿ ನಾನಾ ವಿದ್ಯೆಗಳಿಗೆ ಜನ್ಮಸ್ಥಾನವಾಗಿದೆ. ಆ ವಿದ್ಯೆಗಳ ಕಾಂತಿಯು (ಕೀರ್ತಿಯು) ದಶದಿಕ್ಕುಗಳಲ್ಲೂ ಹರಡಿದೆ. |
| 3) ಹರಿಗೆ ಆವಾಸಭೂತವಾದ ಸ್ಥಾನಗಳಲ್ಲೆಲ್ಲಾ ಅತ್ಯಂತ ಶ್ರೇಷ್ಠವಾಗಿದೆ (ತೃತೀಯಚರಣಾರ್ಥ) | 3) ಹೃದಯದಲ್ಲಿ ಶ್ರೀಹರಿಯನ್ನು ಧರಿಸಿರುವ ಗರುಡಶೇಷರುದ್ರಾದಿಗಳೆಲ್ಲರಿಗಿಂತ ಶ್ರೇಷ್ಠರಾಗಿದ್ದಾರೆ. ಹರಿಯ ಸಾಕ್ಷಾತ್ ಸನ್ನಿಧಾನರಾಗಿದ್ದಾರೆ. |

4) ಲಕ್ಷ್ಮಿಯೂ ಇತರ ಕಾಮಧೇನ್ವಾದಿಗಳೂ ಇಲ್ಲೇ ಹುಟ್ಟಿದುವು. (ಭೂತಿಹೇತುಃ—ಚತುರ್ಥಚರಣದ ಅರ್ಥ.)

4) ಜ್ಞಾನಭಕ್ತಿವೈರಾಗ್ಯಾದಿ ನಿಧಿಗಳಾಗಿದ್ದಾರೆ. ಭಗವದನುಗ್ರಹಕ್ಕೆ ಮುಖ್ಯಕಾರಣರಾಗಿದ್ದಾರೆ.

ಈ ಶ್ಲೋಕದ ಅಭಿಪ್ರಾಯವನ್ನೇ ಖಿಲವಾಯುಸ್ತುತಿಯಲ್ಲಿ ಪಠಿಸುವ ಈ ಶ್ಲೋಕವೂ ಹೇಳುತ್ತದೆ—

ಸ್ವಾಂತಸ್ಥಾನಂತಶಯ್ಯಾಯ ಪೂರ್ಣಜ್ಞಾನರಸಾರ್ಣಸೇ ।
ಉತ್ತುಂಗವಾಕ್-ತರಂಗಾಯ ಮಧ್ವದುಗ್ಧಾಬ್ಧಯೇ ನಮಃ ॥

(ಅರ್ಥ) ಸ್ವ—ತಮ್ಮ, ಅಂತಸ್ಥ—ಹೃದಯದಲ್ಲಿರುವ, ಅನಂತಶಯ್ಯಾಯ—ಶೇಷಶಾಯಿಯಾದ ಶ್ರೀಹರಿಯುಳ್ಳ ; ಪೂರ್ಣ....ರ್ಣಸೇ—ಪರಿಪೂರ್ಣವಾದ ಜ್ಞಾನರಸವೆಂಬ (ಅರ್ಣಃ) ನೀರುಳ್ಳ ; ಉತ್ತುಂಗ—ಎತ್ತರವಾದ (ಪ್ರೌಢವಾದ), ವಾಕ್—ಮಾತುಗಳೆಂಬ, ತರಂಗಾಯ—ಅಲೆಗಳುಳ್ಳ ; ಮಧ್ವದುಗ್ಧಾಬ್ಧಯೇ-ಮಧ್ವಾಚಾರ್ಯರೆಂಬ ಕ್ಷೀರಸಮುದ್ರಕ್ಕೆ, ನಮಃ—ನಮಸ್ಕಾರ.

(ಭಾವಾರ್ಥ) ಕ್ಷೀರಸಮುದ್ರ ಮಧ್ಯದಲ್ಲಿ ವಿಷ್ಣು ನೆಲೆಸಿರುವಂತೆ ಮಧ್ವಾಚಾರ್ಯರ ಹೃದಯದಲ್ಲೂ ಸದಾ ನೆಲೆಸಿದ್ದಾನೆ. ಅದು ಕ್ಷೀರವೆಂಬ ಜಲದಿಂದ ತುಂಬಿರುವಂತೆ ಇವರು ಜ್ಞಾನದಿಂದ ತುಂಬಿತುಳುಕಾಡುತ್ತಿದ್ದಾರೆ. ಕ್ಷೀರಸಮುದ್ರದಲ್ಲಿ ದೊಡ್ಡ ದೊಡ್ಡ ಅಲೆಗಳು ಮೇಲಿಂದ ಮೇಲೆ ಬರುತ್ತಿರುವಂತೆ ಮಧ್ವಾಚಾರ್ಯರ ವಾಕ್ಸರಣಿಯು ಅಲೆಅಲೆಯಾಗಿ ನಿರಾತಂಕವಾಗಿ ಸಾಗಿಹೋಗುತ್ತಿರುತ್ತದೆ—ಎಂದು ಭಾವ. ಅದರಂತೆ ಈ ಶ್ಲೋಕಕ್ಕೂ ಭಾವಾರ್ಥ ಹೇಳಬೇಕು.

**ಮಧ್ವಾಚಾರ್ಯರೆಂಬ ಕ್ಷೀರಸಮುದ್ರದ ವರ್ಣನೆ**—ಕ್ಷೀರಸಮುದ್ರವು ಯಾವ ರೀತಿ ಹಾಲಿನಿಂದ ತುಂಬಿತುಳುಕಾಡುತ್ತಿರುವುದೋ ಹಾಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ಮಂದಹಾಸಯುಕ್ತರಾಗಿ ಜ್ಞಾನಭಕ್ತಿವೈರಾಗ್ಯಾದಿ ಸಾಧನಸಂಪತ್ತಿನಿಂದ ತುಂಬಿತುಳುಕಾಡುತ್ತಿದ್ದಾರೆ ಕ್ಷೀರವು ಹೇಗೆ ದಾಹಾದಿ ತಾಪಗಳನ್ನು ಪರಿಹರಿಸುವುದೋ ಅದೇ ರೀತಿ ಇವರ ಮಂದಹಾಸವು ಸಾಂಸಾರಿಕ ಸಕಲ ತಾಪತ್ರಯಗಳನ್ನೂ

ಪರಿಹಾರಮಾಡಬಲ್ಲದು. ಹಾಲು ಹೇಗೆ ಸ್ನೇಹ (ಜಿಡ್ಡು) ಯುಕ್ತವಾಗಿರುತ್ತದೋ ಹಾಗೆ ಆಚಾರ್ಯರ ಮಂದಹಾಸವು ಭಕ್ತರಲ್ಲಿ—ಶಿಷ್ಯರಲ್ಲಿ ಸ್ನೇಹಪೂರ್ಣವಾಗಿದೆ. ಕ್ಷೀರಸಮುದ್ರವು ಹೇಗೆ ಕಲ್ಪವೃಕ್ಷ, ಕಾಮಧೇನು, ಚಿಂತಾಮಣಿ ಕೌಸ್ತುಭಾದಿ ಉಜ್ವಲ ಮಣಿಗಳಿಗೆ ನಿಧಿಯಾಗಿದೆಯೋ ಅದರಂತೆ ಶ್ರೀಮಧ್ವಾಚಾರ್ಯರು ನಿರ್ದುಷ್ಟವಾದ ನಿರ್ಮಲವಾದ ಸಕಲ ವಿದ್ಯೆಗಳಿಗೆ ಭಂಡಾರದಂತೆ ಇದ್ದಾರೆ. ಕೌಸ್ತುಭಾದಿ ಮಣಿಗಳಿಂದ ಹೊರಡುವ ಕಾಂತಿಯು ಕಿರಣಗಳು ಹತ್ತು ದಿಕ್ಕುಗಳನ್ನೂ ಜಗಮಗಿಸುವಂತೆ ಶ್ರೀಮದಾಚಾರ್ಯರ ವಾಕ್‌ಪ್ರೌಢಿಮೆಯು ಹತ್ತು ದಿಕ್ಕುಗಳನ್ನೂ (ಅಲ್ಲಿರುವ ಸಕಲರನ್ನೂ) ಮುಗ್ಧಗೊಳಿಸುತ್ತದೆ. ಶ್ರೀಮನ್ನಾರಾಯಣನಿಗೆ ಅನಂತಾಸನ ಶ್ವೇತದ್ವೀಪಾದಿ ಸ್ಥಳಗಳು ಆವಾಸಕ್ಕೆಯೋಗ್ಯವಾದ ಸ್ಥಳವಾಗಿದ್ದರೂ ಕ್ಷೀರಸಮುದ್ರವು ಅಂಥಾ ಸ್ಥಳಗಳಲ್ಲೆಲ್ಲಾ ಶ್ರೇಷ್ಠವಾಗಿದೆ—ನಿತ್ಯಸನ್ನಿಧಾನಕ್ಕೆ ಯೋಗ್ಯವಾಗಿದೆ. ಅದೇ ರೀತಿ ಶ್ರೀವಿಷ್ಣುವಿನ ಸನ್ನಿಧಾನಕ್ಕೆ ಯೋಗ್ಯರೆಂದು ಪ್ರಸಿದ್ಧರಾದ ಗರುಡ-ಶೇಷ-ರುದ್ರಾದಿ ಅನೇಕ ದೇವತೆಗಳಿದ್ದರೂ ಅವರೆಲ್ಲರಿಗಿಂತಲೂ ವಿಶೇಷವಾದ ನಿತ್ಯಸನ್ನಿಧಾನವುಳ್ಳವರು ಶ್ರೀಮಧ್ವಾಚಾರ್ಯರು. (ಇದನ್ನೇ ಶ್ರೀ ಪುರಂದರ ದಾಸರು 'ಹನುಮನ ಮತವೇ ಹರಿಯ ಮತವು' ಎಂಬ ಕೀರ್ತನೆಯಲ್ಲಿ ಹೇಳಿದ್ದಾರೆ.) ಕ್ಷೀರಸಮುದ್ರವು ಹೇಗೆ ಲಕ್ಷ್ಮೀದೇವಿಗೆ ತೌರು ಮನೆಯಾಗಿದೆಯೋ ಹಾಗೆ ಶ್ರೀಮಧ್ವಾಚಾರ್ಯರ ಕೃಪಾಕಟಾಕ್ಷ ಮಾತ್ರದಿಂದ ಧನಕನಕಾದಿ ಲೌಕಿಕಸಂಪತ್ತುಗಳೇ ಅಲ್ಲದೆ ಜ್ಞಾನಭಕ್ತ್ಯಾದಿ ಪಾರತ್ರಿಕ ಸಂಪತ್ತುಗಳೂ ಲಭಿಸುತ್ತವೆ. ಇಂಥಾ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ನನಗೆ ಬಂದೊದಗುವ ಸಕಲ ವಿಧವಾದ ಅನಿಷ್ಟಗಳನ್ನೂ ಕತ್ತರಿಸಿಹಾಕಿ ರಕ್ಷಿಸಲಿ ಎಂದು ಭಾವ.

ಹೀಗೆ ಈ ಶ್ಲೋಕದಲ್ಲಿ ಕ್ಷೀರಸಮುದ್ರದ ಅನೇಕ ವಿಚಾರಗಳು ಶ್ರೀಮದಾಚಾರ್ಯರಲ್ಲಿ ಸಾಮಾನ್ಯವಾಗಿವೆಯೆಂದು ವರ್ಣಿಸಿರುವ ಕಾರಣ ಸಾಂಗರೂಪಕಾಲಂಕಾರವಿದೆ.

## ಏಳನೇ ಶ್ಲೋಕ. ಹರಿಗುರುಗಳಲ್ಲಿ ಭಕ್ತಿಗಾಗಿ ಬೇಡಿಕೆ

**123. ಶ್ಲೋಕಕ್ಕೆ ಅವತಾರಿಕೆ**—ಶ್ವೇತಾಶ್ವತರ ಶ್ರುತಿಯು (೬/೨೩) 'ಯಸ್ಯದೇವೇ ಪರಾ ಭಕ್ತಿ—ರ್ಯಥಾ ದೇವೇ ತಥಾ ಗುರೌ। ತಸ್ಯೈತೇ ಕಥಿತಾ ಹ್ಯರ್ಥಾ' ಎಂದರೆ ಯಾರಿಗೆ ಭಗವಂತನಲ್ಲಿರುವಂತೆಯೇ ಗುರುಗಳಲ್ಲೂ ಅವರವರ ಯೋಗ್ಯತಾನುಸಾರ ಭಕ್ತಿಯಿರುತ್ತದೋ ಅವರಿಗೇ ಮುಕ್ತಿಸಾಧನಗಳು ಲಭಿಸುತ್ತವೆಯೆಂದು ಹೇಳುತ್ತದೆ. ಆದಕಾರಣ ಮುಕ್ತಿಗೆ ಸಾಧನವಾದ ಹರಿಭಕ್ತಿಯನ್ನೂ ಗುರುಭಕ್ತಿಯನ್ನೂ ಕೊಡುವಂತೆ ಈ ಶ್ಲೋಕದಿಂದ ಪ್ರಾರ್ಥಿಸುತ್ತಾರೆ.

**ಮೂರ್ಧನ್ಯೇಷೋಂಜಲಿರ್ಮೇ ದೃಢತರಮಿಹ ತೇ**
**ಬಧ್ಯತೇ ಬಂಧಪಾಶ-**
**ಚ್ಛೇತ್ರೇ ದಾತ್ರೇ ಸುಖಾನಾಂ ಭಜತಿ ಭುವಿಭವಿ-**
**ಷ್ಯದ್ವಿಧಾತ್ರೇ ದ್ಯುಭರ್ತ್ರೇ।**
**ಅತ್ಯಂತಂ ಸಂತತಂ ತ್ವಂ ಪ್ರದಿಶ ಪದಯುಗೇ-**
**ಹಂತ ಸಂತಾಪಭಾಜಾ-**
**ಮಸ್ಮಾಕಂ ಭಕ್ತಿಮೇಕಾಂ ಭಗವತ ಉತತೇ**
**ಮಾಧವಸ್ಯಾಥ ವಾಯೋಃ ॥ ೭ ॥**

(ಪಾಠಾಂ—ವಾಯೋ ಎಂದೂ ಕ್ವಚಿತ್ ಪಾಠ ಉಂಟು (ಪು.ರಾ.)

**ಪದವಿಭಾಗ**—ಮೂರ್ಧನಿ, ಏಷಃ, ಅಂಜಲಿಃ, ಮೇ, ದೃಢತರಂ, ಇಹ, ತೇ, ಬಧ್ಯತೇ, ಬಂಧಪಾಶಚ್ಛೇತ್ರೇ, ದಾತ್ರೇ, ಸುಖಾನಾಂ, ಭಜತಿ, ಭುವಿ, ಭವಿಷ್ಯದ್ವಿಧಾತ್ರೇ, ದ್ಯುಭರ್ತ್ರೇ, ಅತ್ಯಂತಂ, ಸಂತತಂ, ತ್ವಂ, ಪ್ರದಿಶ, ಪದಯುಗೇ, ಹಂತ, ಸಂತಾಪಭಾಜಾಂ, ಅಸ್ಮಾಕಂ, ಭಕ್ತಿಂ, ಏಕಾಂ, ಭಗವತಃ, ಉತ, ತೇ (ಹರಿಪರವಾಗಿ ಅರ್ಥ ಹೇಳುವಾಗ ಉತತೇ ಎಂದು ಒಂದೇ ಪದ), ಮಾಧವಸ್ಯ, ಅಥ, ವಾಯೋಃ (ಅಥವಾ ಪು.ರಾ. ವಾಯೋ).

**124. ಶ್ಲೋಕದ ವಿಶ್ಲೇಷಣೆ**—ಈ ಶ್ಲೋಕದಲ್ಲಿ ಪೂರ್ವಾರ್ಧವಷ್ಟು ಒಂದು ವಾಕ್ಯ, ಉತ್ತರಾರ್ಧ ಇನ್ನೊಂದು ವಾಕ್ಯ. ಹೀಗೆ

ಇದರಲ್ಲಿ ಎರಡು ವಾಕ್ಯಗಳಿವೆ; ಇದು ಹರಿ–ವಾಯು ಎರಡು ಅರ್ಥಕ್ಕೂ ಅನ್ವಯಿಸುತ್ತದೆ. ಹರಿಪರವಾಗಿ ಅರ್ಥ ಹೇಳುವಾಗ ಕಡೆಯ ಪಾದದಲ್ಲಿರುವ ಉತತೇ ಎಂಬುದನ್ನು ಸಂಬೋಧನೆಯಾಗಿ ತೆಗೆದುಕೊಳ್ಳಬೇಕು ಹೇ ಉತತೇ ! ಮೇ ಏಷಃ ಅಂಜಲಿಃ ತೇ ಬಧ್ಯತೇ । ತ್ವಂ ಅಸ್ಮಾಕಂ ಭಕ್ತಿ ಪ್ರದಿಶ ಎಂದು ಎರಡು ಪ್ರಧಾನವಾಕ್ಯಗಳಾಗುತ್ತವೆ. ಇವಕ್ಕೆ ಹೇ ಶ್ರೀ-ಹರಿಯೇ ! ನನ್ನ ಈ ಕೈಜೋಡಣೆಯು ನಿನಗಾಗಿ ಜೋಡಿಸಲ್ಪಡುತ್ತದೆ. (ನಿನ್ನ ಉದ್ದೇಶವಾಗಿ ಈ ಕೈ ಜೋಡಿಸುತ್ತಿದ್ದೇನೆ ಎಂದು ಭಾವ). ನೀನು ನನಗೆ ಭಕ್ತಿಯನ್ನು ಅನುಗ್ರಹಿಸು ಎಂದು ಅರ್ಥ. ಮೊದಲನೇ ವಾಕ್ಯದಲ್ಲಿರುವ ತೇ (–ನಿನಗೆ) ಎಂಬುದಕ್ಕೆ 1. ಇಹ ಭುವಿ ಭಜತಿ ಬಂಧಪಾಶಚ್ಛೇತ್ರೇ, 2. ಸುಖಾನಾಂ ದಾತ್ರೇ, 3. ಭವಿಷ್ಯದ್ವಿಧಾತ್ರೇ, 4. ದ್ಯುಭರ್ತ್ರೇ ಎಂದು ನಾಲ್ಕು ವಿಶೇಷಣಗಳು. ಬಧ್ಯತೇ ಎಂಬ ಕ್ರಿಯೆಗೆ ಮೂರ್ಧನಿ ದೃಢತರಂ ಎಂದು ಕ್ರಿಯಾವಿಶೇಷಣಗಳು. ಎರಡನೇ ವಾಕ್ಯದಲ್ಲಿರುವ ಅಸ್ಮಾಕಂ ಎಂಬುದಕ್ಕೆ 5. ಅತ್ಯಂತಂ ಸಂತತಂ ಸಂತಾಪಭಾಜಾಂ ಎಂದು ವಿಶೇಷಣ. ಭಕ್ತಿಗೆ ಏಕಾಂ ಎಂದೂ, ಮತ್ತು ಭಗವತಃ ಮಾಧವಸ್ಯ ವಾಯೋಃ ತೇ ಪದಯುಗೇ ಎಂದೂ ವಿಶೇಷಣಗಳು. ಹಂತ ಮತ್ತು ಅಥ ಎಂಬುವು ಸಂಬಂಧ-ಸೂಚಕಾವ್ಯಯಗಳು.

ಇನ್ನು ವಾಯುಪರವಾಗಿ ಅರ್ಥ ಹೇಳುವಾಗ ಪ್ರಾಯಶಃ ಹಿಂದಿ-ನಂತೆಯೇ ಅನ್ವಯ. ಏಕಾಂ ಭಕ್ತಿಂ ಎಂಬುದರ ಜೊತೆ—ಭಗವತಃ ಮಾಧವಸ್ಯ ಪದಯುಗೇ, ಅಥ, ಭಗವತಃ (ಆವೃತ್ತಿ ಮಾಡಿಕೊಳ್ಳಬೇಕು.) ವಾಯೋಃ ತೇ ಪದಯುಗೇ ಉತ (ಏಕಾಂ ಭಕ್ತಿಂ ಪ್ರದಿಶ) ಎಂದು ಅನ್ವಯ ವಾಗುತ್ತದೆ. ಈ ಪೈಕಿ ಭವಿಷ್ಯದ್ವಿಧಾತ್ರೇ ದ್ಯುಭರ್ತ್ರೇ; ಉತತೇ, ಎಂಬ ಪದಗಳ ಅರ್ಥ ಹರಿಪರವಾಗಿ ಕ್ಲಿಷ್ಟವಾದ್ದರಿಂದ ಅದನ್ನು ಮೊದಲು ವಿವರಿಸುವೆನು.

**125. (ಕ) ಭವಿಷ್ಯದ್–ವಿಧಾತ್ರೇ ||** ವಾಯುಪರವಾಗಿ ಮುಂದೆ ಬ್ರಹ್ಮರಾಗುವ ಎಂದರ್ಥ. ಈ ವಿಷಯ ಹಿಂದೆ ನಾಲ್ಕನೇ ಶ್ಲೋಕದಲ್ಲಿ 'ಪಾರಮೇಷ್ಠ್ಯಂ ಪದಂ ಪ್ರಾಪ್ತುಃ' ಎಂಬಲ್ಲಿ ಬಂದಿದೆ. ಇನ್ನು ಹರಿಪರ-

ವಾಗಿ ಅರ್ಥ ಹೇಳುವಾಗ ಭವಿಷ್ಯದ್ ಎಂಬುದನ್ನೇ 'ಭೋ+ಇಷ್ಯತ್' ಎಂದು ವಿಭಾಗಿಸಿಕೊಳ್ಳಬೇಕು. ಭೋ ಎಂಬಲ್ಲಿ ಭಾ+ಉ ಎಂದು ಎರಡು ಪದಗಳಿವೆ. ಭಾತಿ–ಪ್ರಕಾಶತ ಇತಿ ಭಾ ಎಂಬ ವ್ಯುತ್ಪತ್ತಿಯಿಂದ ಭಾ ಎಂದರೆ ಪ್ರಕಾಶ. ಇದು ಆಕಾರಾಂತಸ್ತ್ರೀಲಿಂಗ ಶಬ್ದ. 'ಸ್ಯುಃ ಪ್ರಭಾರುಕ್ ರುಚಿಸ್ತ್ವಿಟ್ ಭಾ' ಎಂದು ಅಮರ.

'ಉತ್ಕೃಷ್ಟತ್ವಾದುನಾಮಕಃ' ಎಂಬ ಸ್ಮೃತಿಯಿಂದ ಉ ಎಂದರೆ ಉತ್ಕೃಷ್ಟ, ಶ್ರೇಷ್ಠ ಎಂದರ್ಥ. ಭಯಾ ಉಃ ಭೋ (ಭಾ+ಉ–ಭೋ, ಗುಣಸಂಧಿ)–ಉತ್ಕೃಷ್ಟವಾದ ಪ್ರಕಾಶವುಳ್ಳ ಎಂದರ್ಥ. ಇಷ್ಟ ಗತೌ ಎಂಬ ಧಾತುವಿನಿಂದ ಇಷ್ಯತಿ–ಗಚ್ಛತಿ–ಜನಾತಿ ವ್ಯಾಪ್ನೋತೀತಿ ಇಷ್ಯನ್ ಎಂದಾಗುತ್ತದೆ; ಇದಕ್ಕೆ ಎಲ್ಲವನ್ನೂ ಬಲ್ಲ ಮತ್ತು ಸರ್ವತ್ರ ವ್ಯಾಪ್ತನಾದ ಎಂದರ್ಥವಾಗುತ್ತದೆ. ವಿಧಾತೃ ಶಬ್ದಕ್ಕೆ ಸೃಷ್ಟ್ಯಾದಿ ಕರ್ತ ಎಂಬ ಅರ್ಥ ಪ್ರಸಿದ್ಧವಾಗಿದೆ. ಹೀಗೆ ಒಟ್ಟಿನಲ್ಲಿ ಭೋ ಎಂದರೆ ಪ್ರಕಾಶದಿಂದ ಉತ್ಕೃಷ್ಟನೂ ಇಷ್ಯತ್ ಎಂದರೆ ಸಮಸ್ತವನ್ನೂ ತಿಳಿದವನೂ ಮತ್ತು ಸಮಸ್ತವ್ಯಾಪಿಸಿದವನೂ ಎಂದೂ, ವಿಧಾತ್ರೇ ಎಂದರೆ ಸೃಷ್ಟ್ಯಾದಿಕರ್ತನೂ ಆದ ಎಂದರ್ಥವಾಗುತ್ತದೆ. ಭೋ+ಇಷ್ಯತ್ ಸೇರಿದಾಗ 'ಏ ಚೋಯವಾಯಾವಃ' (ಪಾ. ೬/೧/೭೮) ಎಂಬ ಸೂತ್ರದಂತೆ ಓಕಾರಕ್ಕೆ ಅವಾದೇಶ ಬಂದು ಭವಿಷ್ಯತ್ ಎಂದಾಗಿದೆ. ಹೀಗೆ ಭವಿಷ್ಯದ್ವಿಧಾತ್ರೇ ಎಂದರೆ ಹರಿಪರವಾಗಿ 1 ಅಧಿಕಪ್ರಕಾಶವುಳ್ಳವನೂ 2. ಸರ್ವಜ್ಞನೂ 3. ಸರ್ವವ್ಯಾಪ್ತನೂ 4. ಸೃಷ್ಟ್ಯಾದಿಕರ್ತನೂ ಎಂದೂ ವಾಯುಪರವಾಗಿ ಭಾವಿಬ್ರಹ್ಮನಾದ ಎಂದೂ ಅರ್ಥವಾಗುತ್ತದೆ.

(ಖ) **ದ್ಯುಭರ್ತ್ರೇ**—ದ್ಯು ಶಬ್ದವು ದ್ಯುತ ದೀಪ್ತೌ (ಭ್ವಾ.ಆ) ಎಂಬ ಧಾತುವಿನ ರೂಪ. ಆದ್ದರಿಂದ ಇದಕ್ಕೆ ಪ್ರಕಾಶಮಾನನು ಎಂದರ್ಥ. ಭೃಞ್ ಭರಣೇ ಧಾತುವಿನ ತೃಂಜತರೂಪವಾದ ಭರ್ತ್ರೇ ಎಂದರೆ ರಕ್ಷಕನೂ ಆದ ಎಂದರ್ಥ. ಪುರುಷಸೂಕ್ತದಲ್ಲಿ 'ತ್ರಿಪಾದಸ್ಯಾಮೃತಂ ದಿವಿ' (ಋಕ್ಸಂ.-ಋುಕ್) ಎಂಬಲ್ಲಿ ದಿವಿ (ದ್ಯು ಶಬ್ದದ ಸಪ್ತಮೀ ವಿಭಕ್ತಿರೂಪ) ಎಂದರೆ ಅನಂತಾಸನ ಶ್ವೇತದ್ವೀಪ ವೈಕುಂಠ ಎಂಬ ಮೂರು ಲೋಕಗಳಲ್ಲಿ ಎಂದು

ಅರ್ಥಮಾಡಿದ್ದಾರೆ. ಅದರಂತೆ ದ್ಯು–ಅನಂತಾಸನ ಶ್ವೇತದ್ವೀಪ ಮತ್ತು ವೈಕುಂಠವೆಂಬ ಮೂರು ಲೋಕಗಳಿಗೆ, ಭರ್ತ್ರೇ–ನಿಯಾಮಕನಾದ ಎಂದು ಎರಡನೇ ಅರ್ಥ. ಇನ್ನು ದ್ಯು ಎಂದರೆ ಪ್ರಕಾಶಮಾನಳಾದ್ದರಿಂದ ಲಕ್ಷ್ಮೀ-ದೇವಿಗೆ, ಭರ್ತ್ರೇ–ಪತಿಯಾದ ಎಂಬುದು ಮೂರನೇ ಹರಿಪರ ಅರ್ಥ. ವಾಯು-ದೇವರ ಪರವಾದರೆ ದ್ಯು–ಜ್ಞಾನಾದಿ ಗುಣಗಳಿಂದ ದ್ಯೋತಮಾನರಾದ ಭಾರತೀ ದೇವಿಗೆ, ಭರ್ತ್ರೇ–ಪತಿಯಾದ ಎಂದು ಒಂದೇ ಅರ್ಥ.

**126. (ಕ) ಉತತೇ** ಎಂದು ಹರಿಪರವಾದಾಗ ಒಂದೇ ಪದ ; ಹೇ ಹರೇ ಎಂಬಂತೆ ಸಂಬೋಧನರೂಪ. ಹಿಂದೆ (ಖಂಡ ೧೫ ಕ) ಹೇಳಿದಂತೆ ಉಕಾರವು ಉತ್ಕೃಷ್ಟವಾಚಕ. ತನು ಧಾತುವಿನ ರೂಪವಾದ ತತಿ ಎಂದರೆ ವ್ಯಾಪ್ತಿ ಎಂದರ್ಥ. ಹೀಗೆ ಉ–ಉತ್ಕೃಷ್ಟವಾದ, ತತಿ–ವ್ಯಾಪ್ತಿಯುಳ್ಳವನು ಎಂದರ್ಥ. ಉ-ತತೇ ಎಂಬುದು ಸಂಬೋಧನರೂಪವಾದ್ದರಿಂದ, ಎಲೈ ಅತ್ಯಧಿಕವಾದ ವ್ಯಾಪ್ತಿಯುಳ್ಳ ಶ್ರೀಹರಿಯೇ ಎಂದರ್ಥ. ಚತುರ್ಥಪಾದದ ಕಡೆಯ ಪದವನ್ನು 'ವಾಯೋ' ಎಂದೂ ಗ್ರಹಣ ಮಾಡಬಹುದು ; ಇದೂ ಸಂಬೋಧನರೂಪ. ಇದಕ್ಕೆ ೫ನೇ ಶ್ಲೋಕದಲ್ಲಿ ಹೇಳಿದಂತೆ ಬಲಜ್ಞಾನ-ಸ್ವರೂಪನಾದ್ದರಿಂದ ವಾಯುಶಬ್ದವಾಚ್ಯನಾದ ಹರಿಯೇ ಎಂದು ನಾನಾರ್ಥ-ಗಳನ್ನು ಹೇಳಬಹುದು. ಆದರೆ ವಾಯುಪರವಾದರೆ ವಾಯೋಃ ತೇ ಎಂದು ಷಷ್ಠೀವಿಭಕ್ತಿಯಾಗುತ್ತದೆ.

**(ಖ) ಭಗವತಃ** ಎಂಬುದು ತಕಾರಾಂತ ಭಗವಚ್ಛಬ್ದದ ಷಷ್ಠೀ ಏಕವಚನರೂಪ. ಭಗವಾನ್ (ಭಗ-ವತ್) ಎಂಬಲ್ಲಿ ಭಗ ಶಬ್ದದ ಮೇಲೆ ಮತುಪ್ (ಮತ್) ಪ್ರತ್ಯಯ ಬಂದು ಮಕಾರಕ್ಕೆ 'ಮಾದುಪಧಾಯಾಶ್ಚ—' (ಪಾ. ೮/೨/೯) ಎಂಬ ಸೂತ್ರದಂತೆ ವಕಾರಾದೇಶ ಬಂದು ಭಗವತ್ ಎಂದಾಗಿದೆ. 'ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ । ಜ್ಞಾನ-ವಿಜ್ಞಾನಯೋಶ್ಚೈವ ಷಣ್ಣಾಂ ಭಗ ಇತೀರಣಾತ್ ॥' ಎಂಬ ಪ್ರಮಾಣದಂತೆ 1. ಸಮಗ್ರವಾದ ಐಶ್ವರ್ಯ, 2. ವೀರ್ಯ, 3. ಯಶಸ್ಸು, 4. ಕಾಂತಿ, 5. ಜ್ಞಾನ, 6. ವಿಜ್ಞಾನ ಎಂಬ ಆರು ಗುಣಗಳಿಗೆ ಭಗವೆಂದು ಹೆಸರು. ಭಗಃ–ಐಶ್ವರ್ಯಾದಿ ಷಡ್ಗುಣಃ ಅಸ್ಯಾಸ್ತೀತಿ ಭಗವಾನ್ ಎಂದು

ವಿಗ್ರಹವಾಕ್ಯ ; ಐಶ್ವರ್ಯಾದಿ ಷಡ್ಗುಣವುಳ್ಳವನೆಂದು ಅರ್ಥ. ಶ್ರೀಹರಿಯಲ್ಲಿ ಈ ಗುಣಗಳೆಲ್ಲವೂ ನಿರವಧಿಕವಾಗಿ ನಿತ್ಯವಾಗಿ ಸ್ವತಂತ್ರವಾಗಿ ಇರುತ್ತವೆ. ವಾಯುದೇವರಲ್ಲಿ ಬ್ರಹ್ಮದೇವರನ್ನು ಬಿಟ್ಟು ಮಿಕ್ಕ ಜೀವಕೋಟಿಯಲ್ಲೆಲ್ಲರಿಗಿಂತ ಹೆಚ್ಚಾಗಿರುತ್ತವೆಯೆಂದು ತಿಳಿಯಬೇಕು.

**127. ಹರಿಪರವಾಗಿ ಅನ್ವಯಾರ್ಥ**–ಹೇ ಉತತೇ! (ವಾಯೋ), ಮೇ ಏಷಃ ಅಂಜಲಿಃ (ಕರ್ತೃಪದ) 1. ಇಹ ಭುವಿ ಭಜತಿ ಬಂಧಪಾಶಚ್ಛೇತ್ರೇ 2. ಸುಖಾನಾಂ ದಾತ್ರೇ 3. ಭವಿಷ್ಯದ್ವಿಧಾತ್ರೇ 4. ದ್ಯುಭರ್ತ್ರೇ ತೇ ಮೂರ್ಧನಿ ದೃಢತರಂ ಬಧ್ಯತೇ. (ಇದು ಪೂರ್ವಾರ್ಧ, ಪ್ರಥಮವಾಕ್ಯ.) ಹಂತ ! ಅಥ ತ್ವಂ ಅತ್ಯಂತಂ ಸಂತತಂ ಸಂತಾಪಭಾಜಾಂ ಅಸ್ಮಾಕಂ ಭಗವತಃ ವಾಯೋಃ ಮಾಧವಸ್ಯ (ತವ) ಪದಯುಗೇ ಏಕಾಂ ಭಕ್ತಿಂ ಪ್ರದಿಶ. (ಇದು ಉತ್ತರಾರ್ಧ ಮತ್ತು ಎರಡನೇ ವಾಕ್ಯ. ಹರಿಪರವಾಗಿ ಇದೇ ದಂಡಾನ್ವಯ.)

(ಅರ್ಥ) ಉತತೇ–ಓ ಅಧಿಕವಾದ ವ್ಯಾಪ್ತಿಯುಳ್ಳ, (ವಾಯೋ–) ಬಲಜ್ಞಾನಾದಿಸ್ವರೂಪನಾದ್ದರಿಂದ ವಾಯುಶಬ್ದವಾಚ್ಯನಾದ ಎಲೈ ಶ್ರೀಹರಿಯೇ ! ಮೇ–ನನ್ನ ; ಏಷಃ ಅಂಜಲಿಃ–ಈ ಕೈ ಜೋಡಣೆಯು, ಇಹ–ಈ, ಭುವಿ–ಭೂಲೋಕದಲ್ಲಿ, ಭಜತಿ–ಸೇವಿಸುವ ಜನರ ವಿಷಯದಲ್ಲಿ, ಬಂಧಪಾಶ-ಚ್ಛೇತ್ರೇ–ಬಂಧಕವಾದ ಲಿಂಗಶರೀರದ ಹಗ್ಗವನ್ನು (ಕಟ್ಟನ್ನು, ಗ್ರಂಥಿಯನ್ನು, ಗಂಟನ್ನು ) ಛೇದಿಸುವಂಥಾವನೂ ; ಸುಖಾನಾಂ–ಸ್ವರೂಪಸುಖಗಳನ್ನು (ಮೋಕ್ಷದಲ್ಲಿ ಸ್ವರೂಪಾನಂದಾವಿರ್ಭಾವವನ್ನು ಎಂದರ್ಥ); ದಾತ್ರೇ–ಕೊಡುವಂಥಾವನೂ ಆದ (ಹೀಗೆ ಈ ಎರಡು ವಿಶೇಷಣಗಳಿಂದ ಸಮಸ್ತಾನಿಷ್ಟಪರಿಹಾರಪೂರ್ವಕ ಸುಖಾವಿರ್ಭಾವರೂಪ ಮುಕ್ತಿಪ್ರದತ್ವವು ಪ್ರಾಪ್ತವಾಯಿತು) ; ಭವಿಷ್ಯತ್ ವಿಧಾತ್ರೇ—1. ಅಧಿಕ ಪ್ರಕಾಶವುಳ್ಳವನೂ 2. ಸರ್ವಜ್ಞನೂ 3. ಸರ್ವವ್ಯಾಪ್ತನೂ 4. ಸೃಷ್ಟ್ಯಾದಿಕರ್ತನೂ ಆದ; ದ್ಯುಭರ್ತ್ರೇ—1. ಪ್ರಕಾಶಮಾನನೂ ಸಕಲ ಲೋಕರಕ್ಷಕನೂ ಆದ, ಅಥವಾ 2. ಅನಂತಾಸನ ಶ್ವೇತದ್ವೀಪ ಮತ್ತು ವೈಕುಂಠವೆಂಬ ಲೋಕತ್ರಯದ ಒಡೆಯನಾದ, ಅಥವಾ 3. ಪ್ರಕಾಶಮಾನಳಾದ್ದರಿಂದ ದ್ಯುಶಬ್ದವಾಚ್ಯಳಾದ ಲಕ್ಷ್ಮೀದೇವಿಯ ಪತಿಯೂ ಆದ ; ತೇ–ನಿನಗೋಸ್ಕರ (ನಿನ್ನ ಉದ್ದಿಶ್ಯ-

ವಾಗಿ ಎಂದರ್ಥ) ; ಮೂರ್ಧನಿ–ನೆತ್ತಿಯಮೇಲೆ ; ದೃಢತರಂ–ಬಹಳ ಗಟ್ಟಿಯಾಗಿ ; (ಮಯಾ) ಬಧ್ಯತೇ–ನನ್ನಿಂದ ಬಂಧಿಸಲ್ಪಡುತ್ತದೆ. (ಬಲವಾಗಿ ಕೈಜೋಡಿಸಿ ನಿನ್ನ ಪ್ರಾರ್ಥನೆಗಾಗಿ ತಲೆಯ ಮೇಲೆ ದೃಢವಾಗಿ ಇಟ್ಟುಕೊಂಡಿದ್ದೇನೆ ಎಂದು ಭಾವ. ಕೈಜೋಡಿಸಿ ತಲೆಯಮೇಲೆ ಇಟ್ಟುಕೊಳ್ಳುವುದು ಶರಣಾಗತಿಯ ಅತ್ಯಂತ ದೈನ್ಯಭಾವವೆಂದು ಪ್ರಸಿದ್ಧಿಯಾದ ವಿಷಯ.) ಹಂತ–ಹರ್ಷವು. (ಅನನ್ಯಶರಣಾಗತರಾದವರನ್ನು ಶ್ರೀಹರಿ ರಕ್ಷಿಸುತ್ತಾನೆಂಬುದು "ಅನನ್ಯಾಶ್ಚಿಂತಯಂತೋ ಮಾಂ" ಎಂಬ ಗೀತೋಕ್ತಿಯಿಂದ. [೯/೨೨] ಪ್ರಸಿದ್ಧವಾಗಿರುವುದರಿಂದ ಹರ್ಷೋದ್ರೇಕಕ್ಕೆ ಕಾರಣವಾಗಿದೆ.) ಅರ್ಥ : ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ–ನನಗೆ ಬೇರೆ ಯಾರೂ ರಕ್ಷಕರಿಲ್ಲ, ನೀನೇ ನನಗೆ ಆಸರೆ—ಎಂದು ಮೊರೆಹೊಕ್ಕನಂತರ ; ತ್ವಂ–ನೀನು ; ಅತ್ಯಂತಂ–ನಿರವಧಿಕವಾಗಿ (ಮಿತಿಯಿಲ್ಲದಂತೆ) ; ಸಂತತಂ–ನಿರಂತರವಾಗಿ; ಸಂತಾಪಭಾಜಾಂ–ಸಾಂಸಾರಿಕಕ್ಲೇಶಗಳನ್ನು ನಾನಾವಿಧವಾಗಿ ಅನುಭವಿಸುತ್ತಿರುವ ; ಅಸ್ಮಾಕಂ–ನಮಗೆ ; ಭಗವತಃ–ನಿರವಧಿಕಷಡ್ಗುಣೈಶ್ವರ್ಯಪೂರ್ಣನಾದ ; ವಾಯೋಃ–ಬಲಜ್ಞಾನಸ್ವರೂಪನೂ, ಆಯುಃಪ್ರದನೂ, ಸಂಸಾರದುಃಖಪರಿಹಾರಕನೂ ಆದ್ದರಿಂದ ವಾಯುಶಬ್ದವಾಚ್ಯನಾದ ; ಮಾಧವಸ್ಯ (ತವ)–ಮಾ–ಲಕ್ಷ್ಮೀದೇವಿಗೆ, ಧವಸ್ಯ–ಪತಿಯಾದ ನಿನ್ನ(ಲ್ಲಿ) ; ಏಕಾಂ ಭಕ್ತಿಂ–ಮುಖ್ಯವಾದ (ಏಕಾಂತವಾದ) ಭಕ್ತಿಯನ್ನು ; ಪ್ರದಿಶ–ಕೊಡು.

**128. ಹರಿಪರವಾಗಿ ಭಾವಾರ್ಥ**—ಹೇ ಭಗವಂತ, ಲಕ್ಷ್ಮೀಪತೇ ನಾರಾಯಣ ! ಸರ್ವತ್ರ ವ್ಯಾಪ್ತ, ನಿನಗೆ ತಿಳಿಯದಿರುವುದು ಯಾವುದಿದೆ? ನಾವು ವಿವಿಧ ಸಾಂಸಾರಿಕ ದುಃಖಗಳ ಜಂಜಾಟದಲ್ಲಿ ಸಿಕ್ಕಿ ತೊಳಲಿ ತೊಳಲಿ ಬೇಸತ್ತುಹೋಗಿದ್ದೇವೆ. ನಮ್ಮನ್ನು ರಕ್ಷಿಸುವವರು ಬೇರೆ ಯಾರೂ ಇಲ್ಲ; ಇದೋ ನಿನ್ನನ್ನೇ ಶರಣು ಹೊಂದಿದ್ದೇವೆ. ಇದೋ ನೋಡು. ಅತ್ಯಂತ ದೈನ್ಯಭಾವದಿಂದ ನಿನಗಾಗಿ ಕೈಜೋಡಿಸಿ ತಲೆಯ ಮೇಲೆ ಇಟ್ಟುಕೊಂಡು ಅನನ್ಯಭಾವದಿಂದ ನಿನ್ನನ್ನು ಮೊರೆ ಹೊಕ್ಕಿದ್ದೇವೆ, ಸ್ವಾಮಿ. ನೀನು ಅನಾದಿಜನ್ಮಸಂಬದ್ಧವಾದ ಲಿಂಗದೇಹದ ಬಂಧನವನ್ನೇ ಬಿಡಿಸಬಲ್ಲೆ. ಈ

ಬಂಧವಿಮೋಚನೆ ಬೇರೆ ಯಾರಿಂದಲೂ ಮಾಡಲಾಗದ ದುಸ್ಸಾಧ್ಯ ಕಾರ್ಯ. ಹೇ ಸ್ವಾಮಿ, ಈ ಲಿಂಗದೇಹ ವಿಮೋಚನೆ ಮಾಡಿ ನಮ್ಮ ನಮ್ಮ ಸ್ವರೂಪಾನಂದಾನುಭವವುಂಟಾಗುವ ಮೋಕ್ಷವನ್ನೂ ನೀನೊಬ್ಬನೇ ಕೊಡಲು ಸಮರ್ಥ. ನೀನು ಸರ್ವಸಮರ್ಥ, ಅನಂತಾಸನಾದಿ ಲೋಕಗಳ ಒಡೆಯ, ಲಕ್ಷ್ಮೀಪತಿ. ಹೇ ಭಗವಂತ, ನಿನ್ನ ಪಾದಾಬ್ಜದಲ್ಲಿ ನಿರಂತರವಾಗಿ ಅನನ್ಯಭಕ್ತಿ ಮಾಡುವಂತೆ ನನ್ನ ಮೇಲೆ ಅನುಗ್ರಹ ಮಾಡು—ಎಂದು ಭಾವ.

**129. ವಾಯುಪರವಾಗಿ ಅನ್ವಯಾರ್ಥ**—ಪೂರ್ವಾರ್ಧದ ಅನ್ವಯಕ್ರಮ (ಉತತೇ ಎಂಬ ಸಂಬೋಧನೆಯನ್ನು ಬಿಟ್ಟು ಮಿಕ್ಕದ್ದೆಲ್ಲಾ) ಹಿಂದಿನಂತೆಯೇ. ಉತ್ತರಾರ್ಧದ ಅನ್ವಯ ಮಾತ್ರ ಹೀಗಾಗುತ್ತದೆ—ಹಂತ ! ತ್ವಂ ಅತ್ಯಂತಂ ಸಂತತಂ ಸಂತಾಪಭಾಜಾಂ ಅಸ್ಮಾಕಂ ಭಗವತಃ ಮಾಧವಸ್ಯ ಪದಯುಗೇ, ಅಥ (ಭಗವತಃ) ವಾಯೋಃ ತೇ (ಪದಯುಗೇ) ಉತ ಏಕಾಂ ಭಕ್ತಿಂ ಪ್ರದಿಶ ||

(ಅರ್ಥ) (ಹೇ ವಾಯೋ !–) ಎಲೌ ವಾಯುದೇವನೇ, ಮೇ ಏಷಃ ಅಂಜಲಿಃ–ಈ ನನ್ನ ಕೈಜೋಡಣೆಯು; ಇಹ ಭುವಿ ಭಜತಿ ಬಂಧಪಾಶಚ್ಛೇತ್ರೇ–ಈ ಭೂಲೋಕದಲ್ಲಿ ಸೇವಕಜನರಿಗೆ ಸಂಸಾರಬಂಧನವನ್ನು ಛೇದಿಸು-(ಬಿಡಿಸು)ವಂಥವರೂ (ಕಕ. ವಿ. ಛ.) ಎಂದರೆ ಲಿಂಗಶರೀರವನ್ನು ಬಿಡಿಸುವಂಥವರೂ (ಛ. ಪುರಾ.) ; ಸುಖಾನಾಂ ದಾತ್ರೇ–ಸ್ವರೂಪಾನಂದಾನುಭವವನ್ನು ಪಡೆಯುವ ಮೋಕ್ಷವನ್ನು ಕೊಡುವಂಥವರೂ, ಭವಿಷ್ಯದ್-ವಿಧಾತ್ರೇ–ಭಾವಿಬ್ರಹ್ಮರಾದ : ದ್ಯುಭರ್ತ್ರೇ–ಜ್ಞಾನಾದಿಗುಣಗಳಿಂದ ಪ್ರಕಾಶಿಸುವ ಭಾರತೀದೇವಿಯ ಪತಿಯೂ ಆದ, ತೇ–ನಿನಗೋಸ್ಕರ, ಮೇ–ನನ್ನ (ಛ.), ಮೂರ್ಧನಿ–ತಲೆಯಮೇಲೆ, ಸಂತತಂ–ನಿರಂತರವಾಗಿ (ಛ.), ದೃಢತರಂ ಬಧ್ಯತೇ–ಬಲವಾಗಿ (ಬಹಳ ಗಟ್ಟಿಯಾಗಿ) ಕಟ್ಟಲ್ಪಡುತ್ತದೆ. ಹಂತ–ಹರ್ಷವು ! (ಈ ರೀತಿ ಕೈಜೋಡಿಸಿ ಶರಣಾಗತನಾದುದರಿಂದ ನನ್ನ ಜನ್ಮವೇ ಸಫಲವಾಯಿತು ಎಂಬುದೇ ಹರ್ಷಕ್ಕೆ ಕಾರಣ. [ಕಕ. ವಿ. ಛ.]) ತ್ವಂ–ನೀನು, ಅತ್ಯಂತಂ ಸಂತತಂ ಸಂತಾಪಭಾಜಾಂ ಅಸ್ಮಾಕಂ–ಕೊನೆ ಮೊದಲಿಲ್ಲದಂತೆ ನಿರಂತರವಾಗಿ ನಾನಾ ವಿಧವಾದ ಮನಃಕ್ಲೇಶಗಳಿಗೆ ಒಳಗಾದ ನಮಗೆ,

ಭಗವತಃ ಮಾಧವಸ್ಯ–ಷಡ್ಗುಣಪೂರ್ಣನಾದ ಲಕ್ಷ್ಮೀಪತಿಯಾದ ಶ್ರೀಹರಿಯ, ಪದಯುಗೇ–ಎರಡು ಪಾದಗಳಲ್ಲೂ, (ಉತ–ಮತ್ತು, [ಭ.]), ಅಥ–ಅನಂತರ-ದಲ್ಲಿ (ಎಂದರೆ ವಿಷ್ಣು ಭಕ್ತಿಗಿಂತ ತಾರತಮ್ಯದಲ್ಲಿ ಕಡಿಮೆಯಾದ ಎಂದರ್ಥ), ವಾಯೋಃ ತೇ–ವಾಯುದೇವರಾದ ನಿಮ್ಮ, ಪದಯುಗೇ ಉತ–ಪಾದ-ದ್ವಯದಲ್ಲಿಯೂ ಸಹ, ಏಕಾಂ ಭಕ್ತಿಂ–ಮುಖ್ಯವಾದ ಭಕ್ತಿಯನ್ನು, ಪ್ರದಿಶ–ಕೊಡು (ಅನುಗ್ರಹಿಸು).

**130. ವಾಯುಪರವಾಗಿ ಭಾವಾರ್ಥ**—ಲೋಕದಲ್ಲಿ ಎಲ್ಲರೂ ಸುಖವನ್ನು ಬಯಸುವುದು ಸಹಜವಾಗಿಯೇ ಇದೆ. ಆದರೆ ದುಃಖವು ನಿವಾರಣೆಯಾಗುವವರೆಗೆ ಸುಖಾನುಭವವು ನಿಷ್ಪ್ರಯೋಜಕ. ದುಃಖ-ನಿವಾರಣೆಯೂ ಸುಖಲಾಭವೂ ಎರಡೂ ಶ್ರೀಹರಿಯ ಪ್ರಸಾದದಿಂದಲೇ ಲಭ್ಯವಾಗಿವೆ. ಶ್ರೀಹರಿಪ್ರಸಾದವಾದರೋ ಭಕ್ತಿಯಿಂದಲ್ಲದೆ ಬೇರೆ ಯಾವುದ-ರಿಂದಲೂ ಲಭ್ಯವಾಗಲಾರದು. ಆ ಹರಿಪ್ರಸಾದವಾಗಬೇಕಾದರೆ ಆದಿಗುರು-ಗಳಾದ ಮತ್ತು ನಮ್ಮ ಜೀವನಕ್ಕೇ ಆಧಾರಭೂತರಾದ, ವಾಯುದೇವರ ಪರಮಾನುಗ್ರಹವು ಬೇಕೇಬೇಕು. ಅದಕ್ಕೆ ಅವರಲ್ಲಿಯೂ ಭಕ್ತಿಮಾಡಬೇಕು. ಆದಕಾರಣ ಶ್ರೀ ಪಂಡಿತಾಚಾರ್ಯರು ಈ ಶ್ಲೋಕದಲ್ಲಿ ತಮಗೆ ಆ ಹರಿಭಕ್ತಿ-ಯನ್ನೂ ಗುರುಭಕ್ತಿಯನ್ನೂ ಅನುಗ್ರಹಿಸಬೇಕೆಂದು ವಾಯುದೇವರನ್ನು ಪ್ರಾರ್ಥಿಸುತ್ತಾರೆ. ಹೇ ವಾಯುದೇವರೇ ! ಅನಾದಿಕಾಲದಿಂದ ನಮ್ಮ ಲಿಂಗದೇಹಕ್ಕೆ ಅಂಟಿಕೊಂಡಿರುವ ಅನಾದಿಕರ್ಮದ ಫಲವಾಗಿ ನಾವು ಸಂಸಾರಸಾಗರದಲ್ಲಿ ಮುಳುಗಿ ಮುಳುಗಿ ನಾನಾ ಕ್ಲೇಶಗಳಿಗೆ ಒಳಗಾಗಿದ್ದೇವೆ. ಎಲ್ಲಿಯವರೆಗೆ ಲಿಂಗದೇಹವಿರುವುದೋ ಅಲ್ಲಿಯವರೆಗೆ ಈ ಕಷ್ಟಕಾರ್ಪಣ್ಯಗಳೂ ಹೋಗುವಂತಿಲ್ಲ. ನಮ್ಮ ಸ್ವರೂಪಭೂತವಾದ ಆನಂದಾನುಭವವೂ ಆಗು ವಂತಿಲ್ಲ. ಈ ಲಿಂಗದೇಹವು ಮೋಕ್ಷಕ್ಕೆ ಹೋಗುವುದಕ್ಕೆ ಪೂರ್ವದಲ್ಲಿ ವಾಯು-ದೇವರ ಗದಾಪ್ರಹಾರದಿಂದ ಬಿಟ್ಟುಹೋಗುವುದೆಂದು ಶಾಸ್ತ್ರಗಳಲ್ಲಿ ಹೇಳಿದೆ. ಆದಕಾರಣ ಭವಬಂಧನದ ಪಾಶವನ್ನು ಬಿಡಿಸುವುದಕ್ಕೂ ಸ್ವರೂಪಾ-ನಂದಾವಿರ್ಭಾವರೂಪ ಸುಖಪ್ರಾಪ್ತಿಗೂ ನೀವೇ ಮುಖ್ಯಕಾರಣರು. ನೀವು ಭಾವಿಬ್ರಹ್ಮರೂ ಆಗಿದ್ದೀರಿ. ಭಕ್ತ್ಯಭಿಮಾನಿಯಾದ ಭಾರತೀದೇವಿಗೂ

ನೀವು ಒಡೆಯರಾಗಿದ್ದೀರಿ. ಹೇ ಸ್ವಾಮಿ ! ಇಗೋ, ನಿಮ್ಮನ್ನು ಅನನ್ಯ-ಭಾವದಿಂದ ಮೊರೆಹೊಕ್ಕಿದ್ದೇನೆ. ನನ್ನ ಕೈಗಳನ್ನು ಜೋಡಿಸಿ ತಲೆಯ ಮೇಲಿಟ್ಟುಕೊಂಡು ನಿಮ್ಮನ್ನೇ ಮೊರೆಹೊಕ್ಕಿದ್ದೇನೆ—ಅಂಗಲಾಚಿ ಬೇಡಿ-ಕೊಳ್ಳುತ್ತೇನೆ. ನಮ್ಮನ್ನು ಸಂಸಾರಕೂಪದಿಂದ ಎತ್ತಿ ಉದ್ಧಾರ ಮಾಡಿರಿ. ಮೋಕ್ಷಹೇತುವಾದ ಶ್ರೀಲಕ್ಷ್ಮೀಪತಿಯಲ್ಲಿ ನಿರವಧಿಕವಾಗಿ ಅನನ್ಯವಾದ ಭಕ್ತಿ ಮಾಡುವಂತೆಯೂ ಅನಂತರ ತಾರತಮ್ಯಾನುಸಾರವಾಗಿ ಆದಿಗುರು-ಗಳಾದ ವಾಯುದೇವರಲ್ಲೂ ಇತರ ದೇವತೆಗಳಲ್ಲೂ ಭಕ್ತಿ ಮಾಡುವಂತೆಯೂ ಅನುಗ್ರಹ ಮಾಡಿರಿ ಎಂದು ಭಾವ.

**ವಿಶೇಷ ಸೂಚನೆ**—1. ಭಕ್ತಿ ಎಂದರೇನು ? ಯಾರಲ್ಲಿ ಹೇಗೆ ಭಕ್ತಿ ಮಾಡಬೇಕು ? ಅದರ ಫಲವೇನು ? ಎಂಬ ವಿಚಾರಗಳೆಲ್ಲ ಮುಂದೆ ಹದಿನೈದನೇ ಶ್ಲೋಕದಲ್ಲಿ ಬರುವುದರಿಂದ ಅಲ್ಲಿ ಹೆಚ್ಚು ವಿಸ್ತಾರ ಮಾಡು-ವೆವು. 2. ಜೀವನ ಸ್ವರೂಪದೇಹವನ್ನು ಆವರಿಸಿಕೊಂಡು ಲಿಂಗದೇಹವು ಇರುವುದು. ಅದರ ಬಂಧನ (ಪಾಶ)ದಿಂದಲೇ ಪುಣ್ಯಪಾಪಗಳ ಲೇಪವಾಗು-ವುದು. ಲಿಂಗದೇಹ ಭಂಗವಾಗುವವರೆಗೆ ಸ್ವರೂಪಾನಂದದ ಅನುಭವವಾಗು-ವುದಿಲ್ಲ. ಮೋಕ್ಷಕ್ಕೆ ಪೂರ್ವದಲ್ಲಿ ವಿರಜಾನದೀ ಸ್ನಾನಾನಂತರ ವಾಯುದೇವರ ಗದಾಪ್ರಹಾರದಿಂದ ಲಿಂಗದೇಹವು ಕಳಚಿ ಬಿಟ್ಟುಹೋಗುವುದು, ಅನಂತರ ಸ್ವರೂಪಾನಂದಾನುಭವವುಂಟಾಗುವುದೆಂದು ಶಾಸ್ತ್ರಗಳಲ್ಲಿ ಹೇಳಿದೆ. ಇದನ್ನೇ 'ಬಂಧಪಾಶಚ್ಛೇತ್ರೇ' ಎಂಬ ವಿಶೇಷಣ ತಿಳಿಸಿಕೊಡುತ್ತದೆ. 3. ಈ ಶ್ಲೋಕದ ಅವತಾರಿಕೆಯಲ್ಲಿ ತೋರಿಸಿದಂತೆ ಶ್ರೀಹರಿಯಲ್ಲಿ ಭಕ್ತಿ ಮಾಡು-ವಂತೆಯೇ ಅವನ ಪರಿವಾರಭೂತರಾದ ರಮಾಬ್ರಹ್ಮಾದಿಗಳಲ್ಲೂ ಭಕ್ತಿ ಮಾಡುವುದು ಅತ್ಯವಶ್ಯಕ. ಆದರೆ ಹರಿಭಕ್ತಿಯು ನಿರವಧಿಕವಾಗಿಯೂ ರಮಾಬ್ರಹ್ಮಾದಿಗಳ ಭಕ್ತಿಯು ಅವರವರ ತಾರತಮ್ಯಾನುಗುಣವಾಗಿ ಕಡಿಮೆ-ಕಡಿಮೆಯಾಗಿಯೂ ಇರಬೇಕೆಂಬುದು ಭಕ್ತಿಯ ನಿಯಮ. ಇದನ್ನು ಈ ಶ್ಲೋಕದಲ್ಲಿರುವ **ಅಥ** ಶಬ್ದ ತೋರಿಸಿಕೊಡುತ್ತದೆ. ಈ ವಿಚಾರವೂ ಮುಂದೆ ಹದಿನೈದನೇ ಶ್ಲೋಕದಲ್ಲಿ ಹೆಚ್ಚು ವಿಸ್ತರಿಸಲ್ಪಡುವುದು. 4. **ಪದಯುಗೇ**–ಬೃಹದಾರಣ್ಯಕೋಪನಿಷತ್ತಿನಲ್ಲಿ (೭ ಅಧ್ಯಾ. ೫ಬ್ರಾ. ೩-೪

ಕಂಡಿಕೆಗಳಲ್ಲಿ) ಭಗವಂತನ ಸ್ವರೂಪವನ್ನು ವರ್ಣಿಸುತ್ತಾ 'ಸುವರಿತಿ ಪ್ರತಿಷ್ಠಾ ದ್ವೇ ಪ್ರತಿಷ್ಠೇ ದ್ವೇ ಏತೇ ಅಕ್ಷರೇ' ಎಂದು ವರ್ಣಿಸಿದೆ. ಇದಕ್ಕೆ ಸಾಮಾನ್ಯ ರೀತಿಯಾಗಿ 'ಪರಮಾತ್ಮನ ಪಾದಗಳಿಗೆ ಸುವಃ ಎಂದು ಹೆಸರು. ಅವನ ಪಾದಗಳೂ ಎರಡಿವೆ. ಸುವಃ ಎಂಬಲ್ಲೂ ಎರಡು ಅಕ್ಷರಗಳಿವೆ' ಎಂದು ಅರ್ಥ. ಇದರ ವಿವರಣೆಯನ್ನು ಭಾಷ್ಯೋದಾಹೃತ ಈ ಪ್ರಮಾಣವಾಕ್ಯಗಳು ತಿಳಿಸುತ್ತವೆ—

ಸ್ವಿತ್ಯಾನಂದಃ ಸಮುದ್ದಿಷ್ಟೋ ವರಿತಿ ಜ್ಞಾನಮುಚ್ಯತೇ ।
ಮುಕ್ತಿದಾನೇನ ತದ್ಧಾನಾತ್ ಸುವರಸ್ಯ ಪದದ್ವಯಮ್ ॥
ದಕ್ಷಿಣಶ್ಚೈವ ಸವ್ಯಶ್ಚ ಕ್ರಮಾದ್ವರ್ಣದ್ವಯೋದಿತೌ ।

ಇದರ ಭಾವವೇನೆಂದರೆ ಭಗವಂತನಿಗೆ ಎರಡು ಕಾಲುಗಳಿವೆ, ಅವೆರಡೂ ಸ್ವಃ (ಸುವಃ) ಎಂಬ ವ್ಯಾಹೃತಿಯ ಎರಡಕ್ಷರಗಳಿಂದ ವಾಚ್ಯವಾಗಿವೆ. ಸು ಎಂದರೆ ಸುಖವೆಂದರ್ಥ. ಬಲಗಾಲು ಮುಕ್ತಿಯನ್ನು ಕೊಟ್ಟು ಸುಖವನ್ನು ಕೊಡುವುದರಿಂದ ಅದಕ್ಕೆ ಸು ಎಂಬ ಹೆಸರು ಅನ್ವರ್ಥವಾಗಿದೆ. ವರ್ ಅಥವಾ ವಃ ಎಂದರೆ ಜ್ಞಾನ ಎಂದರ್ಥ. ಭಗವಂತನ ಎಡಗಾಲು ಅದನ್ನು ಧ್ಯಾನ-ಮಾಡುವವರಿಗೆ ಮೋಕ್ಷವನ್ನು ಕೊಟ್ಟು ಜ್ಞಾನವನ್ನೂ ಕೊಡುವುದರಿಂದ ಅದಕ್ಕೆ ವಃ ಎಂಬ ಹೆಸರು ಅನ್ವರ್ಥವಾಗಿದೆ.

ಈ ಪ್ರಮಾಣದಿಂದ ಪರಮಾತ್ಮನ ಬಲಗಾಲಿಗೆ ಸು ಎಂದೂ, ಎಡಗಾಲಿಗೆ ವರ್ ಅಥವಾ ವಃ ಎಂದೂ ಹೆಸರೆಂದೂ, ಬಲಗಾಲಿನ ಧ್ಯಾನದಿಂದ ಮೋಕ್ಷದಲ್ಲಿ ಸುಖಪ್ರಾಪ್ತಿಯಾಗುವುದೆಂದೂ, ಎಡಗಾಲಿನ ಧ್ಯಾನದಿಂದ ಮೋಕ್ಷಪ್ರಾಪ್ತಿಗೆ ಮುಖ್ಯಸಾಧನವಾದ ಜ್ಞಾನವೂ ವಿಶೇಷತಃ ಅಪರೋಕ್ಷ ಜ್ಞಾನವೂ ಲಭಿಸುವುದೆಂದೂ ಹೇಳಿದಂತಾಯಿತು. ಮೋಕ್ಷಾಪೇಕ್ಷಿಗಳಿಗೆ ಈ ಎರಡೂ ಮುಖ್ಯವೇ ಆದ್ದರಿಂದ ಪದಯುಗೇ–ಪಾದದ್ವಯದಲ್ಲಿ ಎಂದು ಹೇಳಿದ್ದಾರೆಂದು ತಿಳಿಯಬೇಕು.

೫) **ಸಂತಾಪಭಾಜಾಂ**–ಬುಭುಕ್ಷಾಪಿಪಾಸಾದಿಷಡೂರ್ಮಿಪ್ರತಿಹತಿ-ಪ್ರಾಪ್ತದುಃಖಾನಾಂ (ಕಕ. ವಿ.) ಹಸಿವು, ಬಾಯಾರಿಕೆ, ಮುಪ್ಪು, ರೋಗ, ಜನನ, ಮರಣಗಳೆಂಬ ಆರು ವಿಧ ಬಾಧೆಗಳಿಗೊಳಗಾದ ಎಂದರ್ಥ.

## ಎಂಟನೇ ಶ್ಲೋಕ. ಮಾಯಿಭಿಕ್ಷುಗಳಿಂದ ರಕ್ಷಣೆ.

**131. ಅವತರಣಿಕೆ**—ಹಿಂದಿನ ಶ್ಲೋಕದಲ್ಲಿ ಪ್ರಾರ್ಥನೆ ಮಾಡಿದ ವಾಯುದೇವ ಭ್ರೂವಿಭ್ರಮದ (ಹುಬ್ಬು ಅಲ್ಲಾಡಿಸುವುದರ) ಮಹಿಮೆಯನ್ನು ವರ್ಣಿಸುತ್ತಾರೆ. (ಕಕ. ವಿ.) ವಾಯುದೇವರು ಹುಬ್ಬು ಅಲ್ಲಾಡಿಸೋಣ ಮಾತ್ರದಿಂದ ಸೃಷ್ಟ್ಯಾದಿಗಳನ್ನು ಮಾಡಬಲ್ಲರೆಂಬ ಮಹಿಮೆಯನ್ನು ವರ್ಣಿಸುತ್ತಾರೆ(ಭ.) ಈ ಶ್ಲೋಕದಲ್ಲಿ ಹರಿವಾಯುಗಳ ಸೃಷ್ಟ್ಯಾದಿಹೇತುತ್ವಗುಣವನ್ನು ವರ್ಣಿಸುತ್ತಾ ದುರ್ವಾದಿಗಳಿಂದ ತಮಗೆ ಬಾಧೆಯಾಗದಂತೆ ಅವರನ್ನು ಭ್ರಾಂತಿಗೊಳಿಸುವಂತೆ ಪ್ರಾರ್ಥಿಸುತ್ತಾರೆ. (ಪುರಾ.) ಮೊದಲನೆಯ ನಾಲ್ಕು ಶ್ಲೋಕಗಳಲ್ಲಿ ಶ್ರೀಹರಿ ಮತ್ತು ಶ್ರೀಮದಾಚಾರ್ಯರ ಪಾದಧೂಳಿಯ ಮಹಿಮೆಯನ್ನು ವರ್ಣಿಸಿದ ಪಂಡಿತಾಚಾರ್ಯರು ಐದನೇ ಶ್ಲೋಕದಲ್ಲಿ ಕವಿತಾಶಕ್ತಿಯನ್ನು ಕೊಡುವಂತೆಯೂ, ಆರನೇ ಶ್ಲೋಕದಲ್ಲಿ ಸಕಲಾನಿಷ್ಟಗಳನ್ನು ಪರಿಹರಿಸುವಂತೆಯೂ, ಏಳನೇ ಶ್ಲೋಕದಲ್ಲಿ ಸಕಲ ಸಾಧನಗಳಲ್ಲೂ ಅತಿಮುಖ್ಯವಾದ ಹರಿ-ಗುರುಭಕ್ತಿಯನ್ನು ಅನುಗ್ರಹಿಸುವಂತೆಯೂ ಪ್ರಾರ್ಥಿಸಿಕೊಂಡರು. ಅಷ್ಟರಲ್ಲೇ ಅವರಿಗೆ ತಮ್ಮ ಹಿಂದಿನ ಜೀವನದ ಸ್ಮರಣೆ ಬಂತು. ಶ್ರೀಮಧ್ವಾಚಾರ್ಯರಿಂದ ಪರಾಜಿತರಾಗುವವರೆಗೆ ಅವರು 'ಅಹಂ ಬ್ರಹ್ಮಾಸ್ಮಿ'-ನಾನೇ ಬ್ರಹ್ಮನಾಗಿದ್ದೇನೆ. ಜಗತ್ತೆಲ್ಲಾ ಮಿಥ್ಯಾ ಎಂದು ತಪ್ಪುದಾರಿ ಹಿಡಿದಿದ್ದು ನೆನಪಿಗೆ ಬಂತು. ಅಂಥಾ ವಿಚಾರಗಳು ಶ್ರೀಹರಿ-ಗುರುಭಕ್ತಿಗೆ ತೀರಾ ವಿರುದ್ಧವೆಂದು ತಿಳಿದು ಮುಂದೆ ಎಂದೂ ಜನ್ಮಜನ್ಮಾಂತರದಲ್ಲೂ ಅಂಥಾ ಕಲ್ಪನೆಗಳು ಮನಸ್ಸಿನಲ್ಲೂ ಉದಯಿಸಬಾರದೆಂಬ ಭಾವನೆಯಿಂದ ಶ್ರೀಹರಿ-ವಾಯುಗಳ ಭ್ರೂವಿಭ್ರಮದ ಮಹಿಮೆಯನ್ನು ನೆನೆಸಿಕೊಂಡು ಅದರಿಂದ ರಕ್ಷಣೆಯನ್ನು ಯಾಚಿಸುತ್ತಾ ತಮಗೆ ಎಂದೆಂದಿಗೂ ಭ್ರಾಂತಿಯುಂಟಾಗದಂತೆ ಸಲಹಬೇಕೆಂದು ಈ ಶ್ಲೋಕದಿಂದ ಯಾಚಿಸಿಕೊಳ್ಳುತ್ತಾರೆ.

(ಸೂಚನೆ—ಈ ಶ್ಲೋಕದಲ್ಲಿ ಅನೇಕ ಭಕಾರಗಳು ಬಂದಿರುವುದರಿಂದ ಈ ಶ್ಲೋಕವನ್ನು ಒಂದೇ ಬಾರಿಗೆ ಪಠಿಸುವುದು ಬಹಳ ಕ್ಲೇಶಕರ. ಆದರೂ

ಏಳೇಳು ಅಕ್ಷರಗಳಾಗಿ ವಿಂಗಡಿಸಿಕೊಂಡು ಪಾದ-ಪಾದವಾಗಿ ಅಭ್ಯಾಸ ಮಾಡಿದರೆ ಸುಲಭವಾಗುತ್ತದೆ. ಬಲ್ಲವರಿಂದ ತಿಳಿದುಕೊಳ್ಳುವುದಂತೂ ಇನ್ನೂ ಸುಲಭ.)

**ಸಾಭ್ರೋಷ್ಣಾಭೀಶು-ಶುಭ್ರ—ಪ್ರಭಮಭಯ ನಭೋ**
**ಭೂರಿ-ಭೂಭೃತ್-ವಿಭೂತಿ-**
**ಭ್ರಾಜಿಷ್ಣುರ್ ಭೂರ್ಋಭೂಣಾಂ ಭವನಮಪಿ ವಿಭೋ-**
**ಽಭೇದಿ ಬಭ್ರೇ ಬಭೂವೇ ।**
**ಯೇನ ಭ್ರೂವಿಭ್ರಮಸ್ತೇ ಭ್ರಮಯತು ಸುಭೃಶಂ**
**ಬಭ್ರುವದ್ ದುರ್ಭೃತಾಶಾನ್**
**ಭ್ರಾಂತಿರ್ ಭೇದಾವಭಾಸಸ್—ತ್ವಿತಿ ಭಯಮಭಿಭೂರ್-**
**ಭೋಕ್ಷ್ಯತೋ ಮಾಯಿಭಿಕ್ಷೂನ್ ॥ ೮॥**

**ಪದವಿಭಾಗೆ**—ಸಾಭ್ರೋಷ್ಣಾ....ಪ್ರಭಂ, ಅಭಯ, ನಭಃ, ಭೂರಿ.... ಭ್ರಾಜಿಷ್ಣುಃ, ಭೂಃ, ಋಭೂಣಾಂ, ಭವನಂ, ಅಪಿ, ವಿಭೋ, ಅಭೇದಿ, ಬಭ್ರೇ, ಬಭೂವೇ, ಯೇನ, ಭ್ರೂವಿಭ್ರಮಃ, ತೇ, ಭ್ರಮಯತು, ಸುಭೃಶಂ, ಬಭ್ರುವತ್, ದುರ್ಭೃತಾಶಾನ್, ಭ್ರಾಂತಿಃ, ಭೇದಾವಭಾಸಃ, ತು, ಇತಿ, ಭಯಂ, ಅಭಿಭೂಃ, ಭೋಕ್ಷ್ಯತಃ, ಮಾಯಿಭಿಕ್ಷೂನ್॥

**132. ಶ್ಲೋಕದ ವಿಶ್ಲೇಷಣೆ**—ಈ ಶ್ಲೋಕಕ್ಕೆ, ಹಿಂದೆ ಮೂರನೇ ಶ್ಲೋಕದಲ್ಲಿ ಇದ್ದಂತೆ, ಹರಿ-ವಾಯು ಎರಡು ಪರವಾಗಿಯೂ ಒಂದೇ ಅರ್ಥ. ಪ್ರಥಮ ಚರಣದಲ್ಲಿರುವ ಅಭಯ ಎಂಬುದೂ ದ್ವಿತೀಯ ಚರಣದಲ್ಲಿರುವ ವಿಭೋ ಎಂಬುದೂ ಸಂಬೋಧನೆಯ ರೂಪಗಳು. ಉತ್ತರಾರ್ಧದ ಪ್ರಾರಂಭ-ದಲ್ಲಿರುವ ಯೇನ ಎಂಬುದರ ಜೊತೆ ಇಡೀ ಪೂರ್ವಾರ್ಧ ಸೇರಿ ಒಂದು ವಿಶೇಷಣರೂಪ ಅಪೂರ್ಣವಾಕ್ಯವಾಗುತ್ತದೆ; ಇದು 'ತೇ ಭ್ರೂವಿಭ್ರಮಃ' ಎಂಬುದಕ್ಕೆ ವಿಶೇಷಣ. ಅಥವಾ ಇಡೀ ಪೂರ್ವಾರ್ಧವು ಭ್ರೂವಿಭ್ರಮದ ಮಹಿಮೆಯನ್ನು ವರ್ಣಿಸುತ್ತದೆ ಎನ್ನಬಹುದು. ಉತ್ತರಾರ್ಧದಲ್ಲಿರುವ ತೇ ಭ್ರೂವಿಭ್ರಮಃ (ಕರ್ತೃಪದ) ಮಾಯಿಭಿಕ್ಷೂನ್ (ಕರ್ಮಪದ) ಭ್ರಮಯತು

(ಕ್ರಿಯಾಪದ) ಎಂಬುದೇ ಪ್ರಧಾನವಾಕ್ಯ. ಇದಕ್ಕೆ (ಹೇ) ಅಭಯ ವಿಭೋ ಎಂಬ ಸಂಬೋಧನೆಗಳನ್ನು ಪ್ರಾರಂಭದಲ್ಲಿ ಸೇರಿಸಿಕೊಳ್ಳಬೇಕು. ಆಗ ಪ್ರಧಾನವಾಕ್ಯಕ್ಕೆ—ಹೇ ಭಯರಹಿತರಾದ ಮತ್ತು ಸಮರ್ಥರಾದ ನಾರಾಯಣ ದೇವರೇ (ಅಥವಾ ವಾಯುದೇವರೇ !) ನಿಮ್ಮ ಭ್ರೂವಿಲಾಸವು (ಹುಬ್ಬು ಆಡಿಸುವುದು, ಹುಬ್ಬು ಚಲಿಸುವಿಕೆಯು) ವಂಚಕರಾದ ಸನ್ಯಾಸಿಗಳನ್ನು ಭ್ರಾಂತಿಗೊಳಿಸಲಿ—ಎಂದು ಅರ್ಥವಾಗುತ್ತದೆ.

ಸುಭೃಶಂ ಎಂಬುದು ಕ್ರಿಯೆಗೆ ವಿಶೇಷಣ, ನಾಲ್ಕನೇ ಚರಣದಲ್ಲಿರುವ ಅಭಿಭೂಃ ಎಂಬುದು ಭ್ರೂವಿಭ್ರಮಕ್ಕೆ ವಿಶೇಷಣ. ಮಾಯಿಭಿಕ್ಷೂನ್ ಎಂಬುದಕ್ಕೆ 1. ಬಭೃವದ್ ದುರ್ಭೃತಾಶಾನ್, 2. ಭೇದಾವಭಾಸಃ ಭ್ರಾಂತಿಃ ತು ಇತಿ (ವದತಃ), 3. ಭಯಂ ಭೋಕ್ಷ್ಯತಃ ಎಂದು ಮೂರು ವಿಶೇಷಣಗಳು.

ಪೂರ್ವಾರ್ಧದಲ್ಲಿ—ಯೇನ ನಭಃ, ಭೂಃ, ಋಭೂಣಾಂ ಭುವನಮಪಿ ಅಭೇದಿ ಬಭ್ರೇ ಬಭೂವೇ ಎಂದು ಕರ್ಮಣಿ ಪ್ರಯೋಗವಿದೆ. ಇದಕ್ಕೆ—ಯಾರಿಂದ (ಎಂದರೆ ಭ್ರೂವಿಲಾಸದಿಂದ) ಆಕಾಶ ಭೂಲೋಕ ಮತ್ತು ಸ್ವರ್ಗಲೋಕಗಳು ಸಂಹರಿಸಲ್ಪಟ್ಟಿತೋ, ಧರಿಸಲ್ಪಟ್ಟಿತೋ ಮತ್ತು ಸೃಷ್ಟಿ-ಸಲ್ಪಟ್ಟಿತೋ ಎಂದರ್ಥ. ಈ ಪೈಕಿ ನಭಃ ಎಂಬುದಕ್ಕೆ (ಕ) ಸಾಭ್ರೋ.... ಪ್ರಭಂ ಎಂದೂ, ಭೂಃ ಎಂಬುದಕ್ಕೆ (ಖ) ಭೂರಿ....ಭ್ರಾಜಿಷ್ಣುಃ ಎಂದೂ ವಿಶೇಷಣಗಳು.

ಒಟ್ಟಿನಲ್ಲಿ—ಯಾವ ಭ್ರೂವಿಲಾಸದಿಂದಲೇ ಭೂಮಿ ಆಕಾಶ ಸ್ವರ್ಗ-ಗಳೆಂಬ ಲೋಕತ್ರಯದ ಸೃಷ್ಟಿಸ್ಥಿತಿಲಯಗಳು ನಡೆದುಹೋಗುವುವೋ ಅಂಥಾ ನಿಮ್ಮ (ನಾರಾಯಣನ ಅಥವಾ ಮುಖ್ಯಪ್ರಾಣನ) ಹುಬ್ಬಿನ ಚಲನೆಯು (ನಮ್ಮನ್ನು ವಂಚಿಸಿ ತಪ್ಪುದಾರಿಗೆ ಎಳೆಯಲು ಕುತರ್ಕಗಳನ್ನು ಸಿದ್ಧಮಾಡಿ-ಕೊಂಡಿರುವ—ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು) ವಂಚಕರಾದ ಸನ್ಯಾಸಿಗಳನ್ನು ವಂಚಿಸಲಿ (ಅವರ ಪ್ರಯತ್ನ ವಿಫಲವಾಗುವಂತೆ ಮಾಡಲಿ ಅರ್ಥಾತ್ ನಾನು ಅವರ ಕುತರ್ಕಗಳಿಗೆ ಮಾರಿಹೋಗದಂತೆ ರಕ್ಷಿಸಲಿ) ಎಂದು ಭಾವ.

ಈ ಶ್ಲೋಕದಲ್ಲಿ ಎರಡು ಅರ್ಥಗಳ ಜಂಜಾಟವಿಲ್ಲದಿದ್ದರೂ ವಿಶೇಷಣಗಳ ಹೊಂದಾಣಿಕೆಯೇ ತೊಡಕಾಗಿದೆ. ಆದ್ದರಿಂದ ಆಯಾ ವಿಶೇಷ್ಯವಿಶೇಷಣ-ಗಳನ್ನೇ ಮೊದಲು ಜೊತೆಜೊತೆಯಾಗಿ ವಿವರಿಸಿ ಅನ್ವಯಾರ್ಥಕ್ಕೆ ಹೋಗುವೆನು.

**133. ಗಗನದ ವರ್ಣನೆ**—ನಭಃ ॥ 'ನಭೋಂತರಿಕ್ಷಂ ಗಗನಂ' ಎಂಬ ಅಮರದಂತೆ ನಭಃ ಎಂಬುದು ಸಕಾರಾಂತ ನಪುಂಸಕಲಿಂಗಶಬ್ದ (ಮನಃ, ಶಿರಃ ಎಂಬಂತೆ); ಇದಕ್ಕೆ ಗಗನ, ಆಕಾಶ ಎಂದರ್ಥ. ಇದಕ್ಕೆ ಸಾಭ್ರೋಷ್ಣಾಭೀಶು-ಶುಭ್ರಪ್ರಭಂ ಎಂಬುದು ವಿಶೇಷಣ. ಇದರಲ್ಲಿ ಸ-ಅಭ್ರ-ಉಷ್ಣ-ಅಭೀಶು-ಶುಭ್ರ-ಪ್ರಭಂ ಎಂದು ಆರು ಭಾಗಗಳಿವೆ. ಸ-ಕಾರವು ಸಹ, ಸಹಿತ ಎಂಬ ಅರ್ಥದಲ್ಲಿ ಬಹುವ್ರೀಹಿ ಸಮಾಸದಲ್ಲಿ ಹೊಂದಿರುವ ರೂಪಾಂತರ; ಇದಕ್ಕೆ 'ಸಮೇತವಾದ, ಕೂಡಿದ' ಎಂದು ಅರ್ಥ. 'ಅಭ್ರಂ ಮೇಘೋ ವಾರಿವಾಹಃ' ಎಂಬ ಅಮರದಂತೆ ಅಭ್ರ ಎಂದರೆ ಮೋಡ. ಉಷ್ಣ-ಬಿಸಿಯಾದ, ಅಭೀಶು-ಕಿರಣಗಳುಳ್ಳವನು—ಉಷ್ಣಾಭೀಷು ಎಂದರೆ ಸೂರ್ಯ. 'ಅಭೀಷುಃ ಪ್ರಗ್ರಹೇ ರಶ್ಮೌ' ಇತ್ಯಮರಃ (ಪು.) ಅಭೀಷುಃ ಎಂದರೆ ಲಗಾಮು ಮತ್ತು ಕಿರಣ ಎಂದು ಎರಡರ್ಥವಾಗುತ್ತದೆ. ಶುಭ್ರ-ಸ್ವಚ್ಛವಾದ ಅಥವಾ ತಾಪವಿಲ್ಲದ, ಪ್ರಭಾ-ಪ್ರಕಾಶವುಳ್ಳವನು, ಶುಭ್ರಪ್ರಭ ಎಂದರೆ ಚಂದ್ರ. ಆದ್ದರಿಂದ ಸ+ಅಭ್ರ+ಉಷ್ಣಾಭೀಷು+ಶುಭ್ರಪ್ರಭಂ ಎಂದರೆ ಮೋಡಗಳಿಂದಲೂ ಚಂದ್ರ-ಸೂರ್ಯರಿಂದಲೂ ಕೂಡಿದ-ನಭಃ-ಗಗನವೆಂದರ್ಥ.

(ಈ ಪದಗಳ ನಿಷ್ಪತ್ತಿ) 1. ಣಹ ಆಚ್ಛಾದನೇ (ದಿವಾದಿ. ಉಭ) ಧಾತುವಿನಿಂದ ನಹ್ಯತೇ-ಬದ್ಯತೇ, ಆಚ್ಛಾದ್ಯತೇ ಮೇಘೈರಿತಿ ನಭಃ। ಮೇಘಗಳಿಂದ ಆವರಿಸಲ್ಪಡುವುದರಿಂದ ಆಕಾಶಕ್ಕೆ ನಭಃ ಎಂದು ಹೆಸರು. 'ನಹೇರ್ದಿವಿ ಭಶ್ಚ' (ಉ. ೪/೨೧) ಎಂಬ ಸೂತ್ರದಿಂದ ಅಸುನ್ ಪ್ರತ್ಯಯ ಬರಲು ಹಕಾರಕ್ಕೆ ಭಕಾರಾದೇಶ ಬಂದಿದೆ. 2. ಅಪೋ ಬಿಭರ್ತೀತಿ ಅಭ್ರಂ-ಅಪ್-ನೀರನ್ನು, ಭೃ-ಧರಿಸುವಂಥಾದ್ದು, ಮೋಡ. 'ತುಂದಶೋಕಯೋಃ-' (ಪಾ. ೩/೨/೫) ಎಂಬುದರಿಂದ ಕ ಪ್ರತ್ಯಯ, ಅಥವಾ ನ ಭ್ರಶ್ಯಂತ್ಯಾಪೋ

ಯಸ್ಮಾದಿತಿ ವಾ–ಯಾವುದರಿಂದ ನೀರು ಸೋರಿಹೋಗುವುದಿಲ್ಲವೋ ಅದು. 'ಅನ್ಯೇಭ್ಯೋಽಪಿ ದೃಶ್ಯತೇ । (ಪಾ. ೩/೨/೧೦೧ರ ವಾರ್ತಿಕ) ಎಂಬುದರಿಂದ ಡ ಪ್ರತ್ಯಯ, ಅಥವಾ ಅಭ್ರಗತೌ (ಭ್ವಾ.ಪ.) ಎಂಬ ಧಾತುವಿನಿಂದ ಅಭ್ರತಿ–(ನೀರನ್ನು ಕೊಡುವಂಥಾದ್ದು) ಇತ್ಯಭ್ರಮ್ । ಪಚಾದ್ಯಚ್ (ಪಾ. ೩/೧/೧೩೪)

ವ್ಯಾಕರಣಾಂಶ—(ಕಕ. ವಿ.) ಸಾಭ್ರೋಷಾ....ಪ್ರಭಂ ಎಂಬಲ್ಲಿ 'ತೇನ ಸಹೇತಿ ತುಲ್ಯಯೋಗೇ' (ಪಾ. ೨/೨/೨೮) ಎಂಬ ಸೂತ್ರದಂತೆ ಸಹ ಶಬ್ದ-ದೊಡನೆ ಬಹುವ್ರೀಹಿಸಮಾಸವಾಗಿದೆ. 'ವೋಪಸರ್ಜನಸ್ಯ' (ಪಾ. ೬/೩/೮೨) ಎಂಬ ಸೂತ್ರದಂತೆ ಸಹ ಶಬ್ದಕ್ಕೆ ವಿಕಲ್ಪದಿಂದ ಸಕಾರಾದೇಶ ಬಂದಿದೆ.

**134. ಭೂಮಿಯ ವಿಶೇಷಣ**—ಭೂಮಿಗೆ—ಭೂರಿ-ಭೂಭೃದ್ ವಿಭೂತಿ-ಭ್ರಾಜಿಷ್ಣುಃ (ಭೂಃ), ಎಂದು ವಿಶೇಷಣ ಕೊಟ್ಟಿದ್ದಾರೆ. ಇದರಲ್ಲಿ ಭೂರಿ ಎಂಬುದು ವಿಭೂತಿಗೆ ವಿಶೇಷಣ ; ಭೂರಿ ಎಂದರೆ ಹೆಚ್ಚಾದ, ಅಧಿಕವಾದ, ವಿಪುಲವಾದ ಎಂದರ್ಥ. 'ಪ್ರಭೂತಂ ಪ್ರಚುರಂ ಪ್ರಾಜ್ಯ-ಮದಭ್ರಂ ಬಹುಲಂ ಬಹು । ಪುರುಹಂ ಪುರು ಭೂಯಿಷ್ಠಂ ಸ್ಫಿರಂ ಭೂಯಶ್ಚ ಭೂರಿ ಚ ॥, ಎಂದು ಅಮರ ; ಈ ಹನ್ನೆರಡೂ 'ಬಹಳ' ಎಂಬ ಅರ್ಥದಲ್ಲಿ ಬರುತ್ತವೆ. **ಭೂಭೃತ್**ನಲ್ಲಿ ಭೂಃ–ಭೂಮಿಯನ್ನು, ಭೃತ್–ಧರಿಸುವಂಥಾದ್ದು ಎಂದು ಅವಯವಾರ್ಥ. ರಾಜರೂ ಭೂಮಿ-ಯನ್ನು ಧರಿಸುತ್ತಾರೆ. ಬೆಟ್ಟಗಳೂ ಧರಿಸುತ್ತವೆ. ಆದ್ದರಿಂದ ಭೂಭೃತ್ ಎಂದರೆ ರಾಜ—ಬೆಟ್ಟ ಎಂದು ಎರಡರ್ಥವನ್ನೂ ಇಲ್ಲಿ ಅನ್ವಯಿಸಬಹುದು. "ಭೂಭೃತ್ ಭೂಮಿಧರೇ ನೃಪೇ" ಎಂದು ಅಮರ. ಭುವಂ ಬಿಭರ್ತೀತಿ ಭೂಭೃತ್ । 'ಡುಭೃಞ್ ಧಾರಣ ಪೋಷಣಯೋಃ' (ಜುಹೋ. ಉ.) ಎಂಬ ಧಾತುವಿಗೆ 'ಕ್ವಿಪ್ ಚ' (ಪಾ. ೩/೨/೭೬) ಎಂಬ ಸೂತ್ರದಂತೆ ಕ್ವಿಪ್ ಪ್ರತ್ಯಯ ಬರಲು 'ಹ್ರಸ್ವಸ್ಯ ಪಿತಿಕೃತಿತುಕ್' (ಪಾ. ೬/೧/೭೧) ಎಂಬ ಸೂತ್ರದಂತೆ ತುಕ್ (ತಕಾರ) ಆಗಮಬಂದಿದೆ. 'ವಿಭೂತಿರ್ಭೂತಿರೈಶ್ವರ್ಯಂ' ಎಂಬ ಅಮರದಂತೆ ವಿಭೂತಿ ಎಂದರೆ ವೈಭವ ಅಥವಾ ಐಶ್ವರ್ಯ. ಗಜತುರಗಾದಿಗಳೂ ಕೋಶವೂ ರಾಜರ ಐಶ್ವರ್ಯ. ಭಂಗಾರಾದಿ ಖನಿಜ

ಸಂಪತ್ತು ಬೆಟ್ಟಗಳ ಐಶ್ವರ್ಯ. ಈ ಐಶ್ವರ್ಯಗಳಿಂದ **ಭ್ರಾಜಿಷ್ಣುಃ**–ಪ್ರಕಾಶಮಾನವಾದ ಎಂದರ್ಥ. 'ಭುವಶ್ಚ' (ಪಾ. ೩/೨/೧೩೮) ಎಂಬ ಸೂತ್ರದಲ್ಲಿರುವ ಚಕಾರದಿಂದ ಇಷ್ಣುಚ್‌ಪ್ರತ್ಯಯ ಬಂದಿದೆ. (ಕಕ. ವಿ.) 'ವಿಭ್ರಾಟ್ ಭ್ರಾಜಿಷ್ಣುರೋಚಿಷ್ಣೂ ಭೂಷಾ ತು ಸ್ಯಾದಲಂಕ್ರಿಯಾ' ಎಂದು ಅಮರ. ಅಂತೂ ಒಟ್ಟಿನಲ್ಲಿ ರಾಜರ ಮಹತ್ತರ (ಭೂರಿ) ಸಂಪತ್ತಾದ ಚತುರಂಗಸೈನ್ಯದ ಮತ್ತು ಧನಕನಕಾದಿಗಳಿಂದ ತುಂಬಿದ ಕೋಶದ (ಭಂಡಾರದ) ಸಂಪತ್ತಿನಿಂದಲೂ, ಅನೇಕ ವಿಧವಾದ ಖನಿಜ ಸಂಪತ್ತಿನಿಂದಲೂ, ಗಿಡ-ಮರಗಳೇ ಮೊದಲಾದ ಅರಣ್ಯಸಂಪತ್ತಿನಿಂದಲೂ ತುಂಬಿದ ಭೂಮಿ ಎಂದು ಭೂಮಿಯ ವರ್ಣನೆ.

**135. ಮಾಯಿಭಿಕ್ಷುಗಳು**—1. ಬಭ್ರುವದ್ ದುರ್ಭೃತಾಶಾನ್, 2. ಭೇದಾವಭಾಸಃ ತು ಭ್ರಾಂತಿಃ ಇತಿ (ವದತಃ), 3. ಭಯಂ ಭೋಕ್ಷ್ಯತಃ ಮಾಯಿಭಿಕ್ಷೂನ್ ಎಂದು ಅನ್ವಯ. 1. ಬಭ್ರು ಎಂದರೆ ಮುಂಗಸಿ (ಕಕ.) ಅಥವಾ ಬೆಕ್ಕು (ಛ.) ಎಂದರ್ಥ (ವಿ.) 'ಬಭ್ರುರ್ಬಿಡಾಲೋ ನಕುಲಃ' ಇತ್ಯಮರಃ (ಛ.) 'ತೇನ ತುಲ್ಯಂ ಕ್ರಿಯಾಚೇದ್ ವತಿಃ' (ಪಾ. ೫/೧/೧೧೫) ಎಂಬ ಸೂತ್ರದಂತೆ 'ಸಮಾನ, ಅದರಂತೆ' ಎಂಬ ಅರ್ಥದಲ್ಲಿ ವತಿ (ವತ್) ಪ್ರತ್ಯಯ ಬಂದಿದೆ. ಇದನ್ನೇ 'ವದ್ ವಾ ಯಥಾ ತಥೇವೈವಂ ಸಾಮ್ಯೇ' ಎಂಬ ಅಮರೋಕ್ತಿಯೂ ಹೇಳುತ್ತದೆ. ಬಭ್ರುವತ್–ಮುಂಗಸಿಯಂತೆ ಅಥವಾ ಬೆಕ್ಕಿನಂತೆ ಎಂದರ್ಥವಾದರೂ ಬೆಕ್ಕಿನ ಹೋಲಿಕೆಯೇ ಪ್ರಕೃತ-ಸಂದರ್ಭಕ್ಕೆ ಹೊಂದಿಕೆಯಾಗುತ್ತದೆ; ಇದನ್ನೇ ನಾಲ್ಕು ವ್ಯಾಖ್ಯಾನಕಾರರೂ ತೋರಿಸುತ್ತಾರೆ. ದೇವಪೂಜೋಪಯುಕ್ತವಾದ ನೈವೇದ್ಯಕ್ಕೆ ಇಡುವ ಪದಾರ್ಥಗಳನ್ನೂ, ಹೋಮಕ್ಕಾಗಿ ಸಿದ್ಧಪಡಿಸಿದ ಚರುಪುರೋಡಾಶಾದಿ-ಗಳನ್ನೂ ತಿನ್ನಬೇಕೆಂದು ಹೊಂಚುಹಾಕುವಂತೆ ದುರ್ವಾದಿಸನ್ಯಾಸಿಗಳೂ ತಮಗೆ ಸರ್ವಥಾ ಸಲ್ಲದ ಶ್ರುತ್ಯಾದಿವಿರುದ್ಧಸಿದ್ಧಾಂತಗಳಿಗಾಗಿ ಹಾತೊರೆಯು-ತ್ತಾರೆಂದು ಭಾವ. ದುಷ್ಟಾ ಚ ಸಾ ಭೃತಾ ಚ–ಧೃತಾ ಚ–ದುರ್ಭೃತಾ (ವಿ.) ಅಥವಾ ದುಷ್ಟಂ ಭೃತಾ ದುರ್ಭೃತಾ (ಕಕ.)–ಚಂಚಲತಯಾ ಧೃತೇತ್ಯರ್ಥಃ (ವಿ. ಕಕ.) । ದುರ್ಭೃತಾ ಆಶಾ–ಇಚ್ಛಾಂ ಯೈಸ್ತೇ

ದುಭ್ರ್ಯತಾಶಾಃ, ತಾನ್ (ವಿ. ಕಕ.)–ಮನಶ್ಚಾಂಚಲ್ಯದಿಂದ ಆಶೆಪಡು-ತ್ತಿರುವ ಅಥವಾ ಕೆಟ್ಟ ಬಯಕೆಗಳನ್ನು ಇಟ್ಟುಕೊಂಡಿರುವ ಎಂದರ್ಥ. ಮುಖ್ಯಾಭಿಪ್ರಾಯವೇನೆಂದರೆ ದೇವರ ನೈವೇದ್ಯಕ್ಕಾಗಿಯೋ ಅಥವಾ ಹೋಮಹವನಗಳಿಗಾಗಿಯೋ ಮೀಸಲಾಗಿಟ್ಟಿರುವ ಪದಾರ್ಥಗಳನ್ನು ಭಕ್ಷಿಸಲು ಹೊಂಚುಹಾಕುತ್ತಿರುವಂತೆ ಈರ್ವಾದಿ ಸನ್ಯಾಸಿಗಳೂ ಸಹ ಸರ್ವಪ್ರಮಾಣ-ಗಳಿಗೂ ವಿರುದ್ಧವಾಗಿರುವುದರಿಂದ ತಮ್ಮಿಂದ ಸಾಧಿಸಲು ಸುತರಾಂ ಅಸಾಧ್ಯ-ವಾಗಿದ್ದರೂ ತಮ್ಮ ದುಷ್ಟಸಿದ್ಧಾಂತಗಳನ್ನೇ ಏನೇನೋ ಕುಯುಕ್ತಿಗಳಿಂದ ಸಮರ್ಥಿಸಲು ಹವಣಿಸುತ್ತಿರುತ್ತಾರೆ—ಅಂಥಾ ಸನ್ಯಾಸಿಗಳನ್ನು ಎಂದು ಭಾವ.

2. ಭೇದಸ್ಯ ಅವಭಾಸಃ–ಪ್ರತೀತಿಃ ಭೇದಾವಭಾಸಃ–(ಕಕ. ವಿ. ಛ.) ನಾನು–ನೀನು, ಜೀವ–ಪರಮಾತ್ಮ, ಜಡ–ಚೇತನ ಮೊದಲಾದ ಕಣ್ಣಿಗೆ ಎದ್ದು ಕಾಣುವ ಭೇದವೂ ಸಹ; ಭ್ರಾಂತಿಃ ತು ಇತಿ (ವದತಃ)–ಭ್ರಮೆ, ತೋರಿಕೆ (ಮಿಥ್ಯಾ)ಯೇ ಹೊರತು ಸತ್ಯವಲ್ಲ ಎಂದು ವಾದಿಸುತ್ತಿರುವ— ಎಂಬುದು ಎರಡನೇ ವಿಶೇಷಣ. ಕಣ್ಣಿಗೆ ಎದ್ದು ಕಾಣುವ ಸಕಲ ಭೇದಗಳೂ ಸುಳ್ಳು; ಕಪ್ಪೆಚಿಪ್ಪು ಬೆಳ್ಳಿಯಂತೆ ಕಂಡರೂ ಅದು ಹೇಗೆ ಸುಳ್ಳೋ, ಹಗ್ಗವು ಹಾವಿನಂತೆ ಕಂಡರೂ ಅದು ಹೇಗೆ ವಸ್ತುತಃ ಹಾವಲ್ಲವೋ ಹಾಗೆ ನಾನು ನೀನು ಮೊದಲಾದ ಸಕಲ ಭೇದಗಳು ಕಾಣುತ್ತಿದ್ದರೂ ಎಲ್ಲವೂ ಭ್ರಮೆ-ಯೆಂದು ವಾದಿಸುವ ಎಂದರ್ಥ. ಇಲ್ಲಿ **ತು** ಏವ ಎಂಬ ಅರ್ಥದಲ್ಲೇ ಬಂದಿದೆ ಅವ್ಯಯಗಳಿಗೆ ಅನೇಕಾರ್ಥವುಂಟು.

3. ಭಯಂ–ಅಂಧಂತಮಸ್ಸೆಂಬ ದುಃಖವನ್ನು (ಕಕ.) ಅಂಧಂ-ತಮಸ್ಸಿನಲ್ಲಿ ಅತ್ಯಂತ ಕ್ಲೇಶವೆಂಬ ಭಯವನ್ನು (ಛ.), ಭೋಕ್ಷ್ಯತಃ–ಅನು-ಭವಿಷ್ಯತಃ (ಕಕ. ವಿ. ಛ.) ಮುಂದೆ ಅನುಭವಿಸುವಂಥಾ—ಎಂದರ್ಥ. ಭುಜ ಪಾಲನಾಭ್ಯವಹಾರಯೋಃ (ರುಧಾದಿ. ಪ.)–ಪಾಲಿಸು, ಅನುಭವಿಸು ಎಂಬ ಧಾತುವಿಗೆ ಭವಿಷ್ಯದರ್ಥದಲ್ಲಿ ಸ್ಯ ಪ್ರತ್ಯಯವೂ ಶತೃಪ್ರತ್ಯಯವೂ ಬರಲು ಉಕಾರಕ್ಕೆ (ಪಾ. ೭/೩/೮೬ರಂತೆ) ಗುಣವೂ ಜಕಾರಕ್ಕೆ ಕಕಾರಾದೇಶವೂ-(ಪಾ. ೮/೨/೩೦) ಸಕಾರಕ್ಕೆ ಷಕಾರಾದೇಶವೂ ಬರಲು (ಭುಜ್+ಸ್ಯ+ ಅತ್–ಭೋ–ಕ್–ಸ್ಯ–ಅತ್) ಭೋಕ್ಷ್ಯತ್ ಎಂದಾಗುತ್ತದೆ; ಇದರ

ದ್ವಿತೀಯಾ ಬಹುವಚನ ರೂಪವೇ ಭೋಕ್ಷ್ಯತಃ. ಮಿಥ್ಯೋಪಾಸನೆ ಮಾಡುವವರು ಅಂಧಂತಮಸ್ಸೆಂಬ ನಿತ್ಯನರಕಕ್ಕೆ ಹೋಗುತ್ತಾರೆಂಬ ಪ್ರಮೇಯವನ್ನು 'ಅಂಧಂತಮಃ ಪ್ರವಿಶಂತಿ ಯೇಽವಿದ್ಯಾಮುಪಾಸತೇ' (ಈಶಾವಾಸ್ಯ, ೯ ಮಂತ್ರ) ಮೊದಲಾದ ಶ್ರುತಿಗಳು ಹೇಳುತ್ತವೆ. ಅದರಂತೆ ಈ ವಂಚಕರಾದ ಸನ್ಯಾಸಿಗಳೂ ಸಹ ಭೇದವೇ ಸುಳ್ಳು, ಜಗತ್ತು ಮಿಥ್ಯಾ ಇತ್ಯಾದಿ ಮಿಥ್ಯೋಪಾಸನೆಯಲ್ಲೇ ನಿರತರಾಗಿರುವುದರಿಂದ ಅವರಿಗೂ ಈ ದುರ್ಗತಿಯೇ ಆಗುವುದೆಂದು ಭಾವ. ಒಟ್ಟು ಅಭಿಪ್ರಾಯವೇನೆಂದರೆ ನಾನು ಬ್ರಹ್ಮನೇ ಆಗಿದ್ದೇನೆ, ಭೇದಮಯವಾಗಿ ಕಾಣುವ ಜಗತ್ತೇ ಕೇವಲ ಭ್ರಮೆ, ಸಕಲವೂ ಬ್ರಹ್ಮಮಯ ಇತ್ಯಾದಿ ರೀತಿಯಾಗಿ ಅನ್ಯಥೋಪಾಸನೆ ಮಾಡುವುದರಿಂದ ಆ ಮಾಯಿ ಸನ್ಯಾಸಿಗಳು ತಾವಂತೂ ಅಂಧಂತಮಸ್ಸಿಗೆ ಹೋಗಿ ಬೀಳುತ್ತಾರೆ. ಅವರು ತಮ್ಮ ಕುಯುಕ್ತಿಗಳಿಂದ ನನ್ನನ್ನೂ ಅದೇ ರೀತಿ ಮಿಥ್ಯೋಪಾಸನೆ ಮಾಡುವಂತೆ ಭ್ರಮೆಗೊಳಿಸದಂತೆ ನನ್ನನ್ನು ಪಾರುಮಾಡಿರಿ ಎಂದು ಹರಿವಾಯುಗಳನ್ನು ಪಂಡಿತಾಚಾರ್ಯರು ಕೇಳಿ-ಕೊಳ್ಳುತ್ತಾರೆ.

**136. ಹರಿವಾಯುಪರವಾಗಿ ಅನ್ವಯಾರ್ಥ**—ಹೇ ಅಭಯ, ವಿಭೋ ! ಯೇನ ಸಾಭ್ರೋ....ಪ್ರಭಂ ನಭಃ, ಭೂರಿ....ಭ್ರಾಜಿಷ್ಣುಃ ಭೂಃ, ಋಭೂಣಾಂ ಭವನಮಪಿ ಬಭೂವೇ, ಬಭ್ರೇ, ಅಭೇದಿ ; (ಸಃ) ಅಭಿಭೂಃ ತೇ ಭ್ರೂ ವಿಭ್ರಮಃ 1. ಬಭ್ರುವತ್ ದುಭ್ರ್ಯತಾಶಾನ್, 2. ಭೇದಾವಭಾಸಃ ಭ್ರಾಂತಿಃ ತು ಇತಿ (ವದತಃ), 3. ಭಯಂ ಭೋಕ್ಷ್ಯತಃ ಮಾಯಿಭಿಕ್ಷೂನ್ ಸುಭೃಶಂ ಭ್ರಮಯತು—ಎಂಬುದೇ ದಂಡಾನ್ವಯ.

ಅಭಯ–ಭಯರಹಿತರಾದ, ವಿಭೋ–ಸರ್ವವ್ಯಾಪಕರಾದ (ಕಕ.ವಿ.) ಮತ್ತು ಸರ್ವವ್ಯಾಪ್ತರಾದ (ವೇದವ್ಯಾಸರೇ ಮತ್ತು ವಾಯುದೇವರೇ !), ಯೇನ–ಯಾವ ನಿಮ್ಮ ಭ್ರೂವಿಲಾಸದಿಂದ, ಸಾಭ್ರೋ....ಪ್ರಭಂ ನಭಃ–ಮೋಡಗಳಿಂದಲೂ ಸೂರ್ಯಚಂದ್ರರಿಂದಲೂ ಕೂಡಿದ ಆಕಾಶವೂ ; ಭೂರಿ....ಭ್ರಾಜಿಷ್ಣುಃ—ಭೂರಿ–ಅಧಿಕವಾದ, ಭೂಭೃತ್–ರಾಜರ ಅಥವಾ ಪರ್ವತಗಳ, ವಿಭೂತಿ–ಚತುರಂಗಸೈನ್ಯದ ಸಂಪತ್ತಿನಿಂದಲೂ, ಖನಿಜಾದಿ-

ಸಂಪತ್ತಿನಿಂದಲೂ, ಭ್ರಾಜಿಷ್ಣುಃ–ಪರಿಶೋಭಿಸುವ, ಭೂಃ–ಭೂಲೋಕವೂ, ಋಭೂಣಾಂ ಭವನಮಪಿ–ದೇವತೆಗಳು ವಾಸಿಸುವ ಸ್ವರ್ಗಲೋಕವೂ ಸಹ, ಬಭೂವೇ–ಸೃಷ್ಟಿಸಲ್ಪಟ್ಟಿತೋ, ಬಭ್ರೇ–ಧರಿಸಲ್ಪಟ್ಟಿತೋ ಮತ್ತು, ಅಭೇದಿ–ನಾಶಮಾಡಲ್ಪಟ್ಟಿತೋ, (ಸಃ)–ಅಂಥಾ ; ಅಭಿಭೂಃ–ಶತ್ರುಗಳೆಲ್ಲರನ್ನೂ ಪರಾಭವಗೊಳಿಸುವಂಥಾ, ತೇ–ನಿಮ್ಮ , ಭ್ರೂವಿಭ್ರಮಃ–ಭ್ರೂವಿಲಾಸವು (ಅಥವಾ ಹುಬ್ಬು ಅಲ್ಲಾಡಿಸುವಿಕೆಯು), 1. ಬಭ್ರುವತ್–(ತನಗೆ ದಕ್ಕದಂಥಾ ಪದಾರ್ಥಗಳಿಗಾಗಿ ಹಂಬಲಿಸುವ) ಬೆಕ್ಕಿನಂತೆ, ದುರ್ಭೃತಾಶಾನ್–ಅನುಚಿತವಾದ ವಸ್ತುಗಳಿಗಾಗಿ ಆಶೆಪಡುತ್ತಿರುವ, 2. ಭೇದಾವಭಾಸಃ–ಭೇದಜ್ಞಾನವು, ಭ್ರಾಂತಿಃ ತು ಇತಿ–ಕೇವಲ ಭ್ರಾಂತಿಯೆಂದು ತಿಳಿದುಕೊಂಡಿರುವ ; 3. ಭಯಂ–ಅಂಧಂತಮಸ್ಸೆಂಬ ನಿತ್ಯನರಕದಲ್ಲಿ ಬೀಳುವುದೆಂಬ ಭಯವನ್ನು ; ಭೋಕ್ಷ್ಯತಃ–ಮುಂದೆ ಅನುಭವಿಸುವ, ಮಾಯಿಭಿಕ್ಷೂನ್–ವಂಚಕಸನ್ಯಾಸಿಗಳನ್ನು ; ಸುಭೃಶಂ–ಅತ್ಯಧಿಕವಾಗಿ; ಭ್ರಮಯತು–ಭ್ರಾಂತಿಗೊಳಿಸಲಿ.

**137. ಹರಿವಾಯುಗಳ ಭ್ರೂವಿಲಾಸದ ಮಹಿಮೆ (ಭಾವಾರ್ಥ);** ಹೇ ಶ್ರೀಹರಿಯೇ ! ಹೇ ಮುಖ್ಯಪ್ರಾಣ ! ನೀವು ಯಾರಿಗೂ ಹೆದರದ ಕೆಚ್ಚೆದೆಯ ಧೀರರು. ಸ್ವಮಹಿಮಾತಿಶಯದಿಂದ ತ್ರೈಲೋಕ್ಯವನ್ನೂ ವ್ಯಾಪಿಸಿರುವ ಪ್ರಭುಗಳು ನೀವು. ನೀವು ಒಂದು ಸರಿ ಹುಬ್ಬು ಅಲ್ಲಾಡಿಸಿದರೇ ಸಾಕು, ತ್ರೈಲೋಕ್ಯದ ಸೃಷ್ಟಿಸ್ಥಿತಿಲಯಗಳೂ ಅಷ್ಟರಿಂದಲೇ ನಡೆದುಹೋಗುತ್ತವೆ ಮೇಘಮಂಡಲದಿಂದಲೂ ಸೂರ್ಯಚಂದ್ರ ನಕ್ಷತ್ರರಾಶಿಗಳಿಂದಲೂ ಕೂಡಿದ ಆಕಾಶವೇನು, ಚತುರಂಗಬಲೋಪೇತರಾದ ರಾಜಾಧಿರಾಜರ ಅತುಲೈಶ್ವರ್ಯದಿಂದಲೂ ಇನ್ನೊಂದು ಕಡೆ ನಾನಾವಿಧವಾದ ಖನಿಜಸಂಪತ್ತಿನಿಂದಲೂ ವನ್ಯಸಂಪತ್ತಿನಿಂದಲೂ ತುಂಬಿದ ಬೆಟ್ಟಗುಡ್ಡಗಳ ಸೊಬಗಿನಿಂದಲೂ ಕೂಡಿದ ಭೂಲೋಕವೇನು, ದೇವತೆಗಳ ನಿವಾಸಸ್ಥಾನವಾದ ಸ್ವರ್ಗಲೋಕವೇನು—ಎಲ್ಲವೂ ನಿಮ್ಮ ಭ್ರೂವಿಕ್ಷೇಪ ಮಾತ್ರದಿಂದ ಅಲ್ಲೋಲ ಕಲ್ಲೋಲವಾಗಿ ಹೋಗುವುವು. ಇಂಥಾ ನಿಮ್ಮ ಭ್ರೂವಿಲಾಸವನ್ನು ನಾನು ರಕ್ಷಣೆಗಾಗಿ ಮೊರೆಹೋಗುತ್ತೇನೆ. ಏಕೆಂದರೆ ಲೋಕದಲ್ಲಿ ನಾನಾವಿಧವಾದ ಅಪಸಿದ್ಧಾಂತಗಳನ್ನು ಕುಯುಕ್ತಿಗಳಿಂದ ಬೋಧಿಸಿ-

ಜನರನ್ನು ಅಪಮಾರ್ಗಕ್ಕೆ ಎಳೆಯುವ ಕಪಟಸನ್ಯಾಸಿಗಳೇ ಎಲ್ಲೆಲ್ಲೂ ತುಂಬಿದ್ದಾರೆ. ನೀಚಸ್ವಭಾವದ ಬೆಕ್ಕುಗಳು ಹೇಗೆ ತಮಗೋಸ್ಕರ ಸಿದ್ಧಪಡಿಸಿದ ಪದಾರ್ಥಗಳಲ್ಲವೆಂದು ತಿಳಿದಿದ್ದರೂ ಪೂಜೆಗಾಗಿಯೋ ಹವನಹೋಮಗಳಿಗಾಗಿಯೋ ಅಣಿಮಾಡಿಟ್ಟಿರುವ ಚರು-ಪುರೋಡಾಶಾದಿ-ಗಳನ್ನು ತಿನ್ನಲು ಹೊಂಚುಹಾಕುತ್ತವೋ ಮತ್ತು ಅದರ ರಕ್ಷಕರನ್ನು ವಂಚಿಸಿ ಅಪಹರಿಸಲು ಹವಣಿಸುತ್ತಿರುವುವೋ ಅದೇ ರೀತಿ ಈ ಕಪಟ-ಸನ್ಯಾಸಿಗಳು ಪರಬ್ರಹ್ಮನಿಗೇ ಸೇರಬೇಕಾದ 'ಅಹಂ ಬ್ರಹ್ಮಾಸ್ಮಿ' 'ತತ್ವ-ಮಸ್ಯಾ'ದಿ ಮಹಾವಾಕ್ಯಗಳನ್ನು ತಮಗೇ ಅನ್ವಯಿಸಿಕೊಂಡು ಪ್ರತ್ಯಕ್ಷ-ಸಿದ್ಧವಾದ ಸಕಲವಿಧವಾದ ಭೇದವೆಲ್ಲ ಭ್ರಾಂತಿ, ಜಗತ್ತೆಲ್ಲವೂ ಮಿಥ್ಯಾ ಎಂದು ಬೋಧಿಸುತ್ತಿದ್ದಾರೆ. ಇಂಥಾ ಮಿಥ್ಯೋಪಾಸನೆಯಿಂದ ತಾವೊಬ್ಬರೇ ಅಂಧಂತಮಸ್ಸಿಗೆ ಹೋಗಿಬೀಳುವುದಲ್ಲದೆ ನಮ್ಮನ್ನೂ ತಮ್ಮ ಜೊತೆ ಎಳೆದುಕೊಂಡು ಹೋಗುತ್ತಾರೆ. ಹಾಗೆ ಅವರ ಆ ಕುಯುಕ್ತಿಗಳೂ ದುರ್ಬೋಧನೆಗಳೂ ನಮ್ಮನ್ನು ತಪ್ಪುಮಾರ್ಗಕ್ಕೆ ಎಳೆಯದಂತೆ ಅವರ ಪ್ರಯತ್ನಗಳೆಲ್ಲ ವಿಫಲವಾಗುವಂತೆ ಮಾಡಿ ನಿಮ್ಮ ಭ್ರೂವಿಲಾಸವು ನಮ್ಮನ್ನು ಅನರ್ಥದಿಂದ ಪಾರುಮಾಡಲಿ ಎಂದು ಪ್ರಾರ್ಥಿಸುತ್ತೇನೆ.

**138. ವಿಶೇಷ ವಿಚಾರಗಳು**—1. ಈ ಶ್ಲೋಕದಲ್ಲಿ ಅನೇಕ ಭಕಾರಗಳು ಬಂದಿರುವುದರಿಂದ ವೃತ್ತ್ಯನುಪ್ರಾಸವೆಂಬ ಅಲಂಕಾರ. 2. **ಅಭೇದಿ ಬಭ್ರೇ ಬಭೂವೇ** ಈ ಮೂರು ಕ್ರಿಯಾಪದಗಳೂ ಕರ್ಮಣಿ ಲಿಟ್ ರೂಪಗಳು (ಕಕ. ವಿ. ಛ.) ಕ್ರಮವಾಗಿ ಭಿದಿರ್ ವಿದಾರಣೇ (ರುಧಾದಿ. ಉಭ.), ಭೃಞ್ ಧಾರಣಪೋಷಣಯೋಃ (ಭ್ವಾ. ಉಭ.) ಭೂ ಪ್ರಾಪ್ತೌ (ಚುರಾದಿ. ಆ.) ಎಂಬುವು ಧಾತುಗಳು. 3. ಪೂರ್ವಾರ್ಧದಲ್ಲಿರುವ ಮೇಲಿನ ಈ ಮೂರು ಕ್ರಿಯಾಪದಗಳಿಗೂ 'ಯೇನ' ಎಂಬುದೇ ಕರ್ತೃಪದ (ಕರ್ಮಣಿ ಪ್ರಯೋಗ). 'ಯಚ್ಛ'ವು ಭ್ರೂವಿಭ್ರಮಕ್ಕೆ ವಾಚಕ. ಜಗತ್ತಿನ ಸೃಷ್ಟಿ-ಸ್ಥಿತಿಲಯಗಳು ಅನಾಯಾಸವಾಗಿ ಸಾಧ್ಯವಾಗಿವೆ ಎಂಬುದನ್ನು ಸೂಚಿಸುವುದ-ಕ್ಕಾಗಿ ಭ್ರೂವಿಭ್ರಮಕ್ಕೆ ಈ ರೀತಿ ಕರ್ತೃತ್ವವನ್ನು ಹೇಳಿದ್ದಾರೆ. ಅಥವಾ 'ತ್ವಯಾ'–ನಿನ್ನಿಂದ ಎಂಬ ಪದವನ್ನಾದರೂ ಅಧ್ಯಾಹಾರಮಾಡಿಕೊಳ್ಳ-ಬಹುದು. (ಪುರಾ.)

## (ಖ) ಪೀಠಿಕಾಭಾಗದ ಕಡೆಯ ಎಂಟು ಶ್ಲೋಕಗಳಲ್ಲಿ ೩-ವಿಭಾಗ—ಭಕ್ತಿಯಿಂದ ದೊರಕುವ ಸೌಖ್ಯ

## ಒಂಭತ್ತನೇ ಶ್ಲೋಕ. ಮೋಕ್ಷಸೌಖ್ಯದ ವರ್ಣನೆ

**139. ಅವತರಣಿಕೆ**—ವಾಯುದೇವರ ತೃತೀಯಾವತಾರವು ದೇವೋತ್ತಮರಿಂದಲೂ ಮನುಷ್ಯೋತ್ತಮರಿಂದಲೂ ಸೇವಿತವಾದುದು. ಇವರ (ಮಧ್ವಾಚಾರ್ಯರ) ಸೇವೆಯಿಂದ ವೈಕುಂಠಪದ ಪ್ರಾಪ್ತಿಯಾಗುತ್ತದೆ. ಆ ವೈಕುಂಠವೇ ಅತ್ಯುತ್ತಮವಾದ ಲೋಕ. ಏಕೆಂದರೆ ಅಲ್ಲಿ ನಿತ್ಯವಾದ ನಿರ್ದುಃಖಸುಖಗಳೇ ಇರುತ್ತವೆ. ಆ ಮುಕ್ತಿಯಲ್ಲೂ ಬ್ರಹ್ಮಾದಿ ದೇವತೆಗಳು ಪೂರ್ವದಂತೆಯೇ ತಾರತಮ್ಯೋಪೇತರಾಗಿಯೇ ಇರುತ್ತಾರೆಂಬುದನ್ನು ಈ ಶ್ಲೋಕದಲ್ಲಿ ವರ್ಣಿಸುತ್ತಾರೆ. (ಕಕ. ವಿ.) ಈಗ ವಾಯುದೇವರ ತೃತೀಯಾವತಾರದ ಸೇವೆಯಿಂದ ವೈಕುಂಠಕ್ಕೆ ಹೋಗಿ ಅಲ್ಲಿ ನಾನಾವಿಧವಾದ ಅಲೌಕಿಕ ಭೋಗಗಳನ್ನು ಅನುಭವಿಸುತ್ತಾರೆಂದು ಈ ಶ್ಲೋಕದಲ್ಲಿ ವರ್ಣಿಸುತ್ತಾರೆ(ಛ). ಭಕ್ತಿಪೂರ್ವಕವಾಗಿ ಹರಿವಾಯುಗಳನ್ನು ಸೇವಿಸುವ ಜನರಿಗೆ ವೈಕುಂಠಾದಿ ಲೋಕ ಪ್ರಾಪ್ತಿಯಾಗಿ ನಾನಾವಿಧ ಅಲೌಕಿಕಾನಂದಾನುಭವವಾಗುತ್ತದೆ ಎಂತ ಹೇಳುತ್ತಾರೆ (ಪುರಾ.) ಶ್ರೀಹರಿವಾಯುಸ್ತುತಿಯ ಮೊಟ್ಟಮೊದಲ ನಾಲ್ಕು ಶ್ಲೋಕಗಳಲ್ಲಿ ಶ್ರೀಹರಿ-ವಾಯುಗಳ ಪಾದಧೂಳಿಯ ಮಹಿಮೆಯನ್ನು ವರ್ಣಿಸಿದ ಶ್ರೀ ಪಂಡಿತಾಚಾರ್ಯರು ಮುಂದಿನ ಮೂರು ಶ್ಲೋಕಗಳಲ್ಲಿ (೫, ೬, ೭) ಜ್ಞಾನಭಕ್ತಿವೈರಾಗ್ಯಗಳನ್ನು ಅನುಗ್ರಹಿಸಬೇಕೆಂದು ಅವರನ್ನೇ ಪ್ರಾರ್ಥಿಸಿಕೊಂಡರು. ಅನಂತರ, ಹಾಗೆ ಪ್ರಾಪ್ತವಾದ ಆ ಜ್ಞಾನ-ಭಕ್ತ್ಯಾದಿ ಸಾಧನಗಳು ಕಪಟದುರ್ವಾದಿಗಳ ತರ್ಕಜಾಲದಲ್ಲಿ ಸಿಕ್ಕಿಬಿದ್ದು ವಿಚಲಿತವಾದಾವೆಂಬ ಭಯದಿಂದ ವಂಚಕರಾದ ವೇಷಧಾರಿಗಳಿಂದ ರಕ್ಷಣೆ-ಯನ್ನು ಎಂಟನೆಯ ಶ್ಲೋಕದಿಂದ ಕೇಳಿಕೊಂಡರು. ಈಗ, ಹೀಗೇಕೆ ಕೇಳಿ-ಕೊಳ್ಳಬೇಕಾಗಿತ್ತು ? ಅದರ ಆವಶ್ಯಕತೆ ಏನಿತ್ತು? ಎಂದು ಶಂಕಾ ಬಂದರೆ—ಶ್ರೀಹರಿಗುರುಪ್ರಸಾದ ಲಭ್ಯವಾದ ಆ ಜ್ಞಾನಭಕ್ತ್ಯಾದಿಗಳು ಸದೃಢವಾಗಿದ್ದರೆ ಮಾತ್ರ ಇಂಥಾ ಮೋಕ್ಷಸೌಖ್ಯ ದೊರಕುತ್ತದೆ, 'ನಾನ್ಯಥಾ ತು ಕಥಂಚನ', ಇಲ್ಲದಿದ್ದರೆ ಸರ್ವಥಾ ಇಲ್ಲ ಎಂಬ ಅಭಿಪ್ರಾಯದಿಂದ ಮೋಕ್ಷದಲ್ಲಿ ಮುಕ್ತರು

ಅನುಭವಿಸುವಂಥಾ ಅಲೌಕಿಕವಾದ ಸುಖಭೋಗವನ್ನು 'ಯೇಽಮುಂ ಭಾವಂ—' 'ಆನಂದಾನ್—' ಎಂಬ (೯ನೇ ಮತ್ತು ೧೦ನೇ) ಎರಡು ಶ್ಲೋಕಗಳಲ್ಲಿ ವರ್ಣಿಸುತ್ತಾರೆ—

**ಯೇಽಮುಂ ಭಾವಂ ಭಜಂತೇ ಸುರಮುಖಸುಜನಾ-**
**ರಾಧಿತಂ ತೇ ತೃತೀಯಂ**
**ಭಾಸಂತೇ ಭಾಸುರೈಸ್ತೇ ಸಹಚರಚಲಿತೈ-**
**ಶ್ಚಾಮರೈಶ್ಚಾರುವೇಷಾಃ ।**
**ವೈಕುಂಠೇ ಕಂಠಲಗ್ನ—ಸ್ಥಿರಶುಚಿವಿಲಸತ್-**
**ಕಾಂತಿ-ತಾರುಣ್ಯ-ಲೀಲಾ-**
**ಲಾವಣ್ಯಾಪೂರ್ಣಕಾಂತಾ—ಕುಚಭರಸುಲಭಾ-**
**ಶ್ಲೇಷಸಮ್ಮೋದಸಾಂದ್ರಾಃ ॥ ೯ ॥**

**ಪದವಿಭಾಗ**—ಯೇ, ಅಮುಂ, ಭಾವಂ, ಭಜಂತೇ, ಸುರ.... ರಾಧಿತಂ (ಪುರಾ. ಪ್ರಕಾರ—ಸುರಮುಖ, ಸುಜನಾರಾಧಿತಂ ; ಹರಿಪರ- ವಾದರೆ—ಸುರಮುಖ, ಸುಜನಾಃ, ರಾಧಿತಂ), ತೇ, ತೃತೀಯಂ, ಭಾಸಂತೇ, ಭಾಸುರೈಃ, ತೇ, ಸಹಚರಚಲಿತೈಃ ಚಾಮರೈಃ, ಚಾರುವೇಷಾಃ, ವೈಕುಂಠೇ, ಕಂಠ....ಸಾಂದ್ರಾಃ ॥ (ಸೂಚನೆ—ತೇ ತೃತೀಯಂ ಎಂಬಲ್ಲಿ ಇರುವ 'ತೇ' ಶಬ್ದವು ಯುಷ್ಮದ್ ಶಬ್ದದ ಷಷ್ಠ್ಯೇಕವಚನರೂಪ. ತವ–ತೇ । ಯುವಯೋಃ–ವಾಂ । ಯುಷ್ಮಾಕಂ–ವಃ) ; ಇದಕ್ಕೆ ನಿನ್ನ ಅಥವಾ ನಿಮ್ಮ ಎಂದು ಅರ್ಥ. ಭಾಸುರೈಸ್ತೇ ಎಂಬಲ್ಲಿರುವ ತೇ ಶಬ್ದ ತಚ್ಛಬ್ದದ ಪುಲ್ಲಿಂಗ ಪ್ರಥಮಾವಿಭಕ್ತಿ ಬಹುವಚನ ರೂಪ (ಸಃ । ತೌ । ತೇ) ; ಇದಕ್ಕೆ ಅವರು ಎಂದು ಅರ್ಥ.

**140. ಶ್ಲೋಕದ ವಿಶ್ಲೇಷಣೆ**—ಈ ಶ್ಲೋಕವು ಯಚ್ಛಬ್ದೋ- ಪೇತವಾದ ಉಪವಾಕ್ಯದಿಂದ ಕೂಡಿ[illegible]ಂದು ಸಮ್ಮಿಶ್ರವಾಕ್ಯರೂಪವಾಗಿದೆ. ಇದರಲ್ಲಿ—ತೇ (ಭಾಸುರೈಸ್ತೇ ಎಂಬಲ್ಲಿರುವ ತೇ) ವೈಕುಂಠೇ ಭಾಸಂತೇ– ಅವರು ವೈಕುಂಠದಲ್ಲಿ ಶೋಭಿಸುತ್ತಾರೆ ಎಂಬುದೇ ಪ್ರಧಾನವಾಕ್ಯ. ತೇ–

ಅವರು ಎಂದರೆ ಯಾರು ? ಎಂಬುದನ್ನು ಯೇ ತೃತೀಯಂ ಭಾವಂ ಭಜಂತೇ ಎಂಬ ವಿಶೇಷಣರೂಪವಾದ ಉಪವಾಕ್ಯವು ತೇ ಎಂಬುದನ್ನು ವಿವರಿಸುತ್ತದೆ; ಈ ಉಪವಾಕ್ಯಕ್ಕೆ ಯೇ–ಯಾರು ನಿಮ್ಮ ಮೂರನೇ ರೂಪವನ್ನು (ವೇದವ್ಯಾಸರನ್ನು ಅಥವಾ ಮಧ್ವಾಚಾರ್ಯರನ್ನು) ಭಜಿಸುತ್ತಾರೋ— ಎಂದು ಅರ್ಥ. ಆದಕಾರಣ ಯಾರು ಮೂರನೇ ರೂಪವನ್ನು ಸೇವಿಸು-ತ್ತಾರೋ ಅವರು ವೈಕುಂಠದಲ್ಲಿ ಮೋದಪಡುತ್ತಾ ಶೋಭಿಸುತ್ತಾರೆ ಎಂಬುದೇ ಇಡೀ ಶ್ಲೋಕದ ಮುಖ್ಯ ವಿಚಾರ.

ಇನ್ನು ಉಪವಾಕ್ಯದಲ್ಲಿರುವ ತೃತೀಯಂ ಭಾವಂ ಎಂಬುದಕ್ಕೆ (ಕ) ಅಮುಂ, (ಖ) ಸುರ....ರಾಧಿತಂ, (ಗ) ತೇ ಎಂದು ಮೂರು ವಿಶೇಷಣ-ಗಳು. ಹರಿಪರವಾಗಿ ಅರ್ಥ ಹೇಳುವಾಗ (ಹೇ) ಸುರಮುಖ ಎಂಬುದು ಸಂಬೋಧನೆ. ಯೇ ಸುಜನಾಃ ರಾಧಿತಂ ತೃತೀಯಂ ತೇ ಅಮುಂ ಭಾವಂ ಭಜಂತೇ ಎಂದು ಉಪವಾಕ್ಯದ ಯೋಜನೆ. ಅಥವಾ ಯೇ ಸುಜನಾಃ ರಾಧಿತಂ ಅಮುಂ ತೇ ತೃತೀಯಂ ಭಾವಂ ಭಜಂತೇ ಎಂದಾದರೂ ಅನ್ವಯಿಸಿ-ಕೊಳ್ಳಬಹುದು ; ವಾಯುಪರವಾಗಿ ಅರ್ಥ ಹೇಳುವಾಗಲೂ ಇದೇ ಅನ್ವಯ-ಕ್ರಮ. ಯಾವ ರೀತಿ ಅರ್ಥ ಹೇಳಿದರೂ ತೇ ವೈಕುಂಠೇ ಭಾಸಂತೇ ಎಂಬುದೇ ಪ್ರಧಾನವಾಕ್ಯ.

ಪ್ರಧಾನವಾಕ್ಯದಲ್ಲಿರುವ ಭಾಸಂತೇ ಎಂಬ ಕ್ರಿಯೆಗೆ ಸಹಚರಚಲಿತೈಃ ಭಾಸುರೈಃ ಚಾಮರೈಃ ಎಂಬುದು ಕ್ರಿಯಾವಿಶೇಷಣ. ತೇ (ಅವರು) ಎಂಬ ಕರ್ತೃಪದಕ್ಕೆ (ಅ) ಚಾರುವೇಷಾಃ (ಆ) ಕಂಠಲಗ್ನ....ಸಾಂದ್ರಾಃ ಎಂದು ಎರಡು ವಿಶೇಷಣಗಳು. ಹೀಗೆ ಒಟ್ಟಿಗೆ ಸೇರಿಸಿ ಹೇಳಿದರೆ—ಯಾರು ಶ್ರೀ-ಹರಿಯ ಬಿಂಬೋಪಾಸನೆ (ಅಥವಾ ವೇದವ್ಯಾಸದೇವರ ಆರಾಧನೆ—೨ನೇ ಅರ್ಥ) ಮಾಡುತ್ತಾರೋ (ವಾಯುಪರವಾದರೆ—ಯಾರು ಮೂರನೇ ಅವತಾರವಾದ ಈ ಮಧ್ವಾಚಾರ್ಯರನ್ನು ಸೇವಿಸುತ್ತಾರೋ) ; ಅವರು ವೈಕುಂಠಲೋಕಕ್ಕೆ ಹೋಗುವರೆಂಬುದಲ್ಲಿ ಎಂದೆಂದಿಗೂ ಚ್ಯುತಿಯಿಲ್ಲದ ಮತ್ತು ದುಃಖದ ಗಂಧವೂ ಇಲ್ಲದ ಅಲೌಕಿಕವಾದ ಸೌಖ್ಯವನ್ನು ಅನು-ಭವಿಸುತ್ತಾರೆ ಎಂಬುದೇ ಈ ಶ್ಲೋಕದ ಒಟ್ಟು ಭಾವ. ಇದರಿಂದ ಪ್ರಥಮ

ಪಾದದ ಭಾಗಕ್ಕೆ ಮಾತ್ರ ಹರಿ-ವಾಯುಪರವಾದ ಅರ್ಥಭೇದವಿದೆ, ಮಿಕ್ಕದ್ದೆಲ್ಲಾ ಒಂದೇ ಅರ್ಥ ಎಂದು ವ್ಯಕ್ತವಾಗುತ್ತದೆ. ಪ್ರಥಮಚರಣಕ್ಕೆ ಮಾತ್ರ ಅರ್ಥಭೇದವಿರುವುದರಿಂದ ಮೊದಲೇ ಅದರ ಅರ್ಥಕ್ಕೆ ಹೋಗೋಣ.

**141. ಪ್ರಥಮ ಚರಣಕೆ, ನಾಲ್ಕು ರೀತಿ ಅರ್ಥ**—ಪುಂಗನೂರು ರಾಘವೇಂದ್ರಾಚಾರ್ಯರೊಬ್ಬರೇ ಮೂರು ಬೇರೆ ಬೇರೆ ರೀತಿಯಿಂದ ಅರ್ಥ ಹೇಳಿದರೆ ಮಿಕ್ಕ ಮೂವರು ವ್ಯಾಖ್ಯಾನಕಾರರೂ ಪ್ರಥಮಚರಣಕ್ಕೆ ಆಚಾರ್ಯರ ಪರವಾಗಿ ಒಂದೇ ಅರ್ಥವನ್ನು ಹೇಳಿದ್ದಾರೆ; ಆದಕಾರಣ ಹೆಚ್ಚು ಜನ ಹೇಳಿರುವುದರಿಂದ ಮೊದಲು ಆ ಅರ್ಥಕ್ಕೇ ಹೋಗೋಣ. 1. ಈ ಅರ್ಥದಲ್ಲಿ ಸುರ....ರಾಧಿತಂ ಎಂಬುದು ಒಂದೇ ಪದ. ಇಲ್ಲಿ 'ತೇ'–ನಿನ್ನ ಎಂದು ಬಂದಿರುವುದರಿಂದ ಅದಕ್ಕೆ ಹೊಂದಿಕೆಯಾಗುವಂತೆ 'ಹೇ ಪವನ!' (ಕಕ. ವಿ.) ಅಥವಾ 'ಹೇ ಮುಖ್ಯಪ್ರಾಣ' (ಭ.) ಎಂಬ ಸಂಬೋಧನೆಯುನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಎಲೈ ವಾಯುದೇವರೇ, ಯೇ–ಯಾವ ಸುಜೀವಿಗಳು, ಸುರ....ರಾಧಿತಂ—ಸುರ–ರುದ್ರಾದಿದೇವತೆಗಳೇ, ಮುಖ–ಮೊದಲಾದ, ಸುಜನ–ಸಜ್ಜನರಿಂದ (ಮುಕ್ತಿಯೋಗ್ಯ ಜನರಿಂದ) ಆರಾಧಿತಂ–ಸೇವಿಸಲ್ಪಟ್ಟ, ತೃತೀಯಂ–ಮೂರನೆಯದಾದ, ಅಮುಂ–(ಪ್ರಾರಂಭದಿಂದಲೂ ಪ್ರಸಕ್ತವಾಗಿರುವ) ಈ, ತೇ–ನಿಮ್ಮ, ಭಾವಂ–ಅವತಾರವನ್ನು (ಮಧ್ವಾಚಾರ್ಯರನ್ನು), ಭಜಂತೇ–ಸೇವಿಸುತ್ತಾರೋ ಎಂದು ಅರ್ಥ i. 'ಮುಖಂ ಮುಖ್ಯೇ ಚ ವಕ್ತ್ರೇ ಸ್ಯಾತ್' ಇತಿ ವಿಶ್ವಃ. (ಕಕ. ವಿ.) ಮುಖ ಎಂದರೆ ಮುಖ್ಯ ಎಂದೂ ಮುಖ–ಬಾಯಿ ಎಂದೂ ಅರ್ಥವಾಗುತ್ತದೆ—ವಿಶ್ವಕೋಶ. ii. ತ್ರಯಾಣಾಂ ಪೂರಣಃ ತೃತೀಯಃ । 'ತ್ರೇಃ ಸಂಪ್ರಸಾರಣಂ ಚ' (ಪಾ. ೫/೨/೫೫) ಇತಿ ತೀಯ ಪ್ರತ್ಯಯಃ (ಕಕ. ವಿ.). ಮೂರನೆಯ ಎಂಬ ಅರ್ಥದಲ್ಲಿ ತ್ರಿ–ಮೂರು ಎಂಬ ಶಬ್ದದ ಮೇಲೆ 'ದ್ವೇಸ್ತೀಯಃ' (ಪಾ. ೫/೨/೫೪) ಎಂಬ ಸೂತ್ರದಂತೆ ತೀಯ ಪ್ರತ್ಯಯ ಬರುತ್ತದೆ. ಅನಂತರ 'ತ್ರೇಃ ಸಂಪ್ರಸಾರಣಂ ಚ' (೫/೨/೫೫) ಎಂಬ ಸೂತ್ರದಂತೆ ತ್ರಿಯಲ್ಲಿರುವ ರಕಾರಕ್ಕೆ ಋಕಾರಾದೇಶ ಬರುತ್ತದೆ. (ವ್ಯಾಕರಣಶಾಸ್ತ್ರದಂತೆ ಯ-ವ-ರ-ಲಗಳಿಗೆ ಕ್ರಮವಾಗಿ ಇ-ಉ-ಋ-ಲುಗಳು ಆದೇಶವಾಗಿ ಬರುವುದಕ್ಕೆ ಸಂಪ್ರಸಾರಣ

ಎಂದು ಹೆಸರು. ಇದನ್ನು 'ಇಗ್ಯಣಃ ಸಂಪ್ರಸಾರಣಂ' ೧/೧/೪೫ ಎಂಬ ಸೂತ್ರ ಹೇಳುತ್ತದೆ.) ಅದರಂತೆ ತ್ರಿ+ತೀಯ ಎಂಬುದು ತ್ ಋ ಇ ತೀಯ ಎಂದಾಗಲು ಮುಂದೆ 'ಸಂಪ್ರಸಾರಣಚ್ಚ' (೬/೧/೧೦೮) ಎಂಬ ಸೂತ್ರದಂತೆ ಋಕಾರ-ಇಕಾರ ಎರಡಕ್ಕೂ ಏಕಾದೇಶ ಬರುವುದರಿಂದ ತೃತೀಯ ಎಂಬ ರೂಪ ಸಿದ್ಧವಾಗುತ್ತದೆ. **ಭಾವ** ಎಂದರೆ ಅವತಾರ ಎಂಬುದಕ್ಕೆ 'ಭಾವಃ ಸತ್ತಾ-ಸ್ವಭಾವಾಭಿಪ್ರಾಯ-ಚೇಷ್ಟಾತ್ಮ-ಜನ್ಮಸು' ಎಂದು ಅಮರ (ಘ.) ಭಜ ಸೇವಾಯಾಂ (ಭ್ವಾದಿ. ಉಭ.) ಎಂಬ ಧಾತುವಿನ ಲಟ್ ಆತ್ಮನೇಪದದ ಪ್ರಥಮಪುರುಷ ಬಹುವಚನ ರೂಪವೇ ಭಜಂತೇ.

2ನೇ ಅರ್ಥ (ಹರಿಪರ)—ಈಗ ಸುರಮುಖ, ಸುಜನಾಃ, ರಾಧಿತಂ ಎಂದು ಪದಚ್ಛೇದ ಮಾಡಿಕೊಳ್ಳಬೇಕು. ಸುಜನಾಃ ಎಂಬಲ್ಲಿ ವಿಸರ್ಗದ ಹಿಂದೆ ಆಕಾರವಿರುವುದರಿಂದಲೂ ಮುಂದೆ ರ ಎಂಬ ಮೃದುವರ್ಣ ಬಂದಿರುವುದರಿಂದಲೂ ಸಂಧಿಸಿಯಮದಂತೆ ವಿಸರ್ಗಕ್ಕೆ ಲೋಪಬರುತ್ತದೆ. ಸುರಮುಖ ಎಂಬುದು ಸಂಬೋಧನೆ. ಇದಕ್ಕೆ ಎರಡು ಪ್ರಕಾರ ವಿಗ್ರಹ ಮಾಡಬಹುದು. ೧. ಸುರಾಃ–ಅಗ್ನ್ಯಾದಿ ದೇವಾಃ ಮುಖೇಷು, ಬಹುವಚನಮಾದ್ಯರ್ಥಃ, ಮುಖಾದ್ಯಂಗೇಷು ಯಸ್ಯ ಸಃ ಸುರಮುಖಃ। (ಇದು ಬಹುವ್ರೀಹಿ) ಅಗ್ನ್ಯಾದಿದೇವತೆಗಳನ್ನು ಮುಖಾದ್ಯಂಗಗಳಲ್ಲಿ ಹುಟ್ಟಿದವರಾಗಿ ಉಳ್ಳವನು ಎಂದರ್ಥ. ಪುರುಷಸೂಕ್ತದಲ್ಲಿ (೧೪ನೇ ಮಂತ್ರ) 'ಚಂದ್ರಮಾ ಮನಸೋ ಜಾತಶ್ಚಕ್ಷೋಃ ಸೂರ್ಯೋ ಅಜಾಯತ। ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ವಾಯುರಜಾಯತ॥' ಎಂದು ಹೇಳಿದಂತೆ ಚಂದ್ರನು ಮನಸ್ಸಿನಿಂದಲೂ ಸೂರ್ಯನು ಕಣ್ಣುಗಳಿಂದಲೂ ಇಂದ್ರನೂ ಅಗ್ನಿಯೂ ಮುಖದಿಂದಲೂ ಪ್ರಾಣದಿಂದ ವಾಯುವೂ ಹುಟ್ಟಿದರೆಂದು ಹೇಳಿದ ಪ್ರಕಾರ ಸಕಲ ದೇವತೆಗಳಿಗೂ ಜನ್ಮಸ್ಥಾನನೂ ಆಶ್ರಯನೂ ಆದ್ದರಿಂದ ಶ್ರೀಹರಿಗೆ ಸುರಮುಖ ಎಂದು ಹೆಸರು. ೨. ಸುರೇಷು ಸುರಾಣಾಂ ವಾ ಮುಖಂ, ಮುಖ್ಯಂ ಪ್ರಧಾನಃ, ಸುರಮುಖಃ। ದೇವತೆಗಳಲ್ಲೆಲ್ಲಾ ಸರ್ವಶ್ರೇಷ್ಠ ಎಂಬುದು ಷಷ್ಠೀತತ್ಪುರುಷ ಸಮಾಸ. ಇದರ ಸಂಬೋಧನೆಯೇ ಸುರಮುಖ—ಸಕಲ ದೇವತೆಗಳಿಗೆ ಜನ್ಮಸ್ಥಾನವೂ ಆಶ್ರಯ-

ಭೂತವೂ ಆದ ಅಂಗಾಂಗಗಳುಳ್ಳ ಮತ್ತು ದೇವದೇವೋತ್ತಮನಾದ ಹೇ ನಾರಾಯಣ ಎಂದರ್ಥ.

ಸುರಮುಖ–ಹೇ ನಾರಾಯಣ, ಯೇ–ಯಾವ, ಸುಜನಾಃ–ಸಜ್ಜನರು, ರಾಧಿತಂ–ಬ್ರಹ್ಮಾದಿಗಳಿಂದ ಸೇವಿತನಾದ, ತೇ–ನಿನ್ನ, ಅಮುಂ–ಈ (ಬಿಂಬಾತ್ಮಕವಾದ), ಭಾವಂ–ಸ್ವರೂಪವನ್ನು, ತೃತೀಯಂ–ಚರಾಚರಕ್ಕಿಂತ ಭಿನ್ನವಾದ ಮೂರನೆಯದನ್ನಾಗಿ (ಎಂದರೆ ಜಗದ್ವಿಲಕ್ಷಣವೆಂದು), ಭಜಂತೇ–ಸೇವಿಸುತ್ತಾರೋ (ಉಪಾಸನೆ ಮಾಡುತ್ತಾರೋ) ಅವರು ಎಂದರ್ಥ. ಬಿಂಬ-ರೂಪಿ ಭಗವಂತನನ್ನು ಉಪಾಸನೆ ಮಾಡುವಾಗ ರಮಾಬ್ರಹ್ಮಾದಿ ಸಕಲ ಜಗತ್ತಿಗಿಂತಲೂ ಅತ್ಯಂತ ಭಿನ್ನನೂ ವಿಲಕ್ಷಣನೂ ಆಗಿದ್ದಾನೆಂದು ಉಪಾಸನೆ ಮಾಡುವ ಮುಕ್ತಿಯೋಗ್ಯಜನರು ಎಂದು ಎರಡನೇ ಅರ್ಥ. ನಮ್ಮ ಮಾಧ್ವಸಿದ್ಧಾಂತದ ಪ್ರಕಾರ ಬಿಂಬೋಪಾಸನೆಯನ್ನು ಬಿಟ್ಟು ಬೇರೆ ಯಾವ ಸಾಧನದಿಂದಲೂ ಮೋಕ್ಷವು ದೊರಕುವುದಿಲ್ಲ. ಆದಕಾರಣ ಹೀಗೆ ಅರ್ಥ ಹೇಳಿದ್ದಾರೆಂದು ತಿಳಿಯಬೇಕು.

3ನೇ ಅರ್ಥ)ವೇದವ್ಯಾಸರ ಪರವಾಗಿ.)—ಸುರಮುಖ–ದೇವದೇವೋ-ತ್ತಮನಾದ ಹೇ ನಾರಾಯಣನೇ ! ಯೇ ಸುಜನಾಃ–ಯಾವ ಸಜ್ಜನರು, ತೇ–ನಿನ್ನ, ಅಮುಂ ತೃತೀಯಂ ಭಾವಂ–ರಾಮಕೃಷ್ಣವೇದವ್ಯಾಸವೆಂಬ ರೂಪತ್ರಯದಲ್ಲಿ ಮೂರನೆಯದಾದ ವೇದವ್ಯಾಸರೆಂಬ ರೂಪವನ್ನು, ಭಜಂತೇ–ಸೇವಿಸುತ್ತಾರೋ.

4ನೇ ಅರ್ಥ (ವಾಯುಪರವಾಗಿ–ಪುರಾ.)—ಹೇ ಸುರಮುಖ–ಹೇ ರುದ್ರಾದಿದೇವತಾಶ್ರೇಷ್ಠರಾದ ವಾಯುದೇವರೇ, ಸುಜನಾರಾಧಿತಂ–ಸಜ್ಜನ-ರಿಂದ ಪೂಜಿತವಾದ, ತೇ–ನಿಮ್ಮ , ಅಮುಂ–ಈ (ಪ್ರತ್ಯಕ್ಷವಾಗಿ ಕಾಣುವ) ತೃತೀಯಂ ಭಾವಂ–ಮೂರನೆಯ ಅವತಾರವಾದ ಮಧ್ವಾಚಾರ್ಯರನ್ನು ; ಯೇ–ಯಾರು, ಭಜಂತೇ–ಸೇವಿಸುತ್ತಾರೋ. 'ಹನುಮನ ಮತವೇ ಹರಿಯ ಮತವು' ಎಂಬ ಪುರಂದರ ದಾಸರ ಪದವೂ 'ಕಸ್ಮಿನ್ನಹಂ' ಎಂಬ ಶ್ರುತಿಯೂ (ಷಟ್ಪ್ರಶ್ನ ೬ ೩), 'ವಿಷ್ಣುರ್ಹಿದಾತಾ ಮೋಕ್ಷಸ್ಯ ವಾಯುಶ್ಚ ತದನುಜ್ಞಯಾ' (ತಾತ್ಪರ್ಯನಿರ್ಣಯ ೧/೭೮) ಮೊದಲಾದ ವಾಕ್ಯಗಳಿಂದ ವಾಯುದೇವರ

ಅನುಗ್ರಹದಿಂದ ಮೋಕ್ಷಪ್ರಾಪ್ತಿಯಾಗುವುದೆಂಬುದು ಸಿದ್ಧವಾದ ವಿಷಯ. ಅದನ್ನೇ ಈ ಶ್ಲೋಕದಲ್ಲಿ ತೋರಿಸಿದ್ದಾರೆ.

**142. ಶ್ಲೋಕಕ್ಕೆ (ಹರಿ-ವಾಯು ಉಭಯಪರ) ಅನ್ವಯಾರ್ಥ**—(ಹರಿಪರವಾಗಿ) ಸುರಮುಖ–ಇಂದ್ರಾದಿ ದೇವತೆಗಳಿಗೆ ಮುಖಾದಿಗಳೇ ಸೃಷ್ಟಿಸ್ಥಾನವಾಗಿರುವ ಅಥವಾ ದೇವೋತ್ತಮನಾದ ಹೇ ಶ್ರೀಹರೇ! ಯೇ ಸುಜನಾಃ–ಯಾವ ಸಜ್ಜನರು ; 1. ರಾಧಿತಂ–ಬ್ರಹ್ಮಾದಿ ದೇವತೆಗಳಿಂದ ಸೇವ್ಯನಾದ ; ತೇ–ನಿನ್ನ ; ಅಮುಂ ಭಾವಂ–ಬಿಂಬಸ್ವರೂಪವನ್ನು, ತೃತೀಯಂ–ಚರಾಚರಾತ್ಮಕವಾದ ಜಗತ್ತಿಗಿಂತ ಅತ್ಯಂತಭಿನ್ನವಾದದ್ದೆಂದು, ಭಜಂತೇ–ಸೇವಿಸುತ್ತಾರೋ ; ಅಥವಾ 2. ತೇ ಅಮುಂ ತೃತೀಯಂ ಭಾವಂ–ನಿನ್ನ ಈ ಮೂರನೆಯದಾದ ವೇದವ್ಯಾಸರೂಪವನ್ನು, ಭಜಂತೇ–ಸೇವಿಸುತ್ತಾರೋ ; ಅಥವಾ (ವಾಯುಪರವಾಗಿ) 3. ಸುರಮುಖ–ರುದ್ರಾದಿ ದೇವತೆಗಳಿಗಿಂತ ಶ್ರೇಷ್ಠನಾದ ವಾಯುದೇವರೇ! ಯೇ–ಯಾವ ಸಜ್ಜನರು ; ಸುಜನಾರಾಧಿತಂ–ಸಜ್ಜನರಿಂದ ಸೇವಿತವಾದ, ತೇ ಅಮುಂ ತೃತೀಯಂ ಭಾವಂ–ನಿಮ್ಮ ಮೂರನೇ ಅವತಾರರಾದ ಶ್ರೀಮಧ್ವಾಚಾರ್ಯರನ್ನು ; ಭಜಂತೇ–ಸೇವಿಸುತ್ತಾರೋ (ಈ ಮೂರೂ ಅರ್ಥಗಳು ಪುರಾ. ಪ್ರಕಾರ ; ಮಿಕ್ಕ ಅರ್ಥಗಳು ಕಕ. ವಿ. ಥ.ಕ್ಕೆ ಅನುಗುಣವಾಗಿವೆ); 4. ಹೇ ಮುಖ್ಯಪ್ರಾಣ! (ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು) ; ಯೇ–ಯಾರು ; ಸುರ....ರಾಧಿತಂ–ರುದ್ರಾದಿದೇವತೆಗಳಿಂದ ಹಿಡಿದು ಸಕಲ ಸಜ್ಜನರಿಂದಲೂ ಸೇವಿತವಾದ; ತೇ ತೃತೀಯಂ ಅಮುಂ ಭಾವಂ–ನಿಮ್ಮ ಮೂರನೇ ಅವತಾರವಾದ ಈ ಮಧ್ವಾಚಾರ್ಯರನ್ನು ; ಭಜಂತೇ–ಸೇವಿಸುತ್ತಾರೋ ; (ಇಲ್ಲಿಂದ ಮುಂದೆ ಎಲ್ಲ ಅರ್ಥಗಳಿಗೂ ಒಂದೇ ಅನ್ವಯ) ತೇ–ಅವರು ; ಭಾಸುರೈಃ–ಹೊಳೆಯುತ್ತಿರುವ ; ಸಹಚರ-ಚಲಿತೈಃ–ಸೇವಕರು ಬೀಸುತ್ತಿರುವ (ಅಥವಾ ಆಡಿಸುತ್ತಿರುವ) ; ಚಾಮರೈಃ–ಚಾಮರಗಳಿಂದ ; (ಸೇವ್ಯಮಾನಾಃ ಇತಿ ಶೇಷಃ) ಥ.– ಸೇವಿಸಲ್ಪಡುವರಾಗಿ ; ಚಾರು-ವೇಷಾಃ–ಸುಂದರವಾದ ಭೂಷಣಗಳುಳ್ಳವರಾಗಿ; ಕಂಠ....ಸಾಂದ್ರಾಃ—ಕಂಠಲಗ್ನ–ಕುತ್ತಿಗೆಯಲ್ಲಿ ಕೈ ಹಾಕಿದ, ಸ್ಥಿರ–ನಿಶ್ಚಲವಾದ, ಶುಚಿ–ನಿರ್ಮಲವಾದ, ವಿಲಸತ್–ಪ್ರಕಾಶಿಸುವ,

ಕಾಂತಿ–ಹೊಳಪಿನಿಂದಲೂ, ತಾರುಣ್ಯ–ಯೌವನದಿಂದಲೂ, ಲೀಲಾ–ವಿಲಾಸದಿಂದಲೂ, ಲಾವಣ್ಯ–ಸೊಬಗಿನಿಂದಲೂ, ಆಪೂರ್ಣ–ಚೆನ್ನಾಗಿ ತುಂಬಿದ, ಕಾಂತಾ–ಪ್ರೇಯಸಿಯರ, ಸ್ತನಭರ–ಸ್ತನಭಾರದಿಂದ ಅಥವಾ ಮಧ್ಯದಿಂದ, ಸುಲಭ-ಆಶ್ಲೇಷ–ಅನಾಯಾಸವಾದ ಆಲಿಂಗನದಿಂದ ಲಭ್ಯವಾದ, ಸಮ್ಮೋದ–ಅತ್ಯಾನಂದದಿಂದ, ಸಾಂದ್ರಾಃ–ಸಮೃದ್ಧಿಯುಳ್ಳವರಾಗಿ ; ವೈಕುಂಠೇ–ಮುಕ್ತಿಯಲ್ಲಿ (ವೈಕುಂಠಲೋಕದಲ್ಲಿ) ; ಭಾಸಂತೇ–ಶೋಭಿಸುತ್ತಾರೆ.

**143. ಮೋಕ್ಷದಲ್ಲಿ ದೊರಕುವ ಸೌಖ್ಯ (ಭಾವಾರ್ಥ)—** (ಶ್ಲೋಕದ ಭಾವಾರ್ಥಕ್ಕೆ ಪೀಠಿಕೆ) ಲೋಕದಲ್ಲಿ ಸಾಮಾನ್ಯವಾಗಿ ಪುರುಷಾರ್ಥ-ಚತುಷ್ಟಯ (ಧರ್ಮ, ಅರ್ಥ, ಕಾಮ, ಮೋಕ್ಷ)ವೆಂದು ಪ್ರಸಿದ್ಧಿಯಿದ್ದರೂ ಅವುಗಳಲ್ಲಿ ಕಡೆಯದಾದ ಮೋಕ್ಷವೇ ವಸ್ತುತಃ ಚರಮಧ್ಯೇಯವಾಗಿರುವುದಲ್ಲದೆ ಸರ್ವಾಪೇಕ್ಷಿತವೂ ಆಗಿದೆ, ಆದ್ದರಿಂದ ಅದೇ ಸರ್ವಶ್ರೇಷ್ಠ ಆಗಿದೆಯಷ್ಟೆ. ಆದರೆ ಈ ಮೋಕ್ಷವು ಕೇವಲ ಶ್ರೀಹರಿವಾಯುಗಳ ಅತ್ಯರ್ಥ-ಪ್ರಸಾದದಿಂದ, ಬಿಂಬೋಪಾಸನೆಮಾಡಿ ಸಿದ್ಧಿಪಡೆದ ವಿಷ್ಣುಭಕ್ತರಿಗೆ ಮಾತ್ರವೇ ಲಭ್ಯವಾಗುವುದೇ ಹೊರತು ಮಿಕ್ಕ ಯಾರಿಗೂ ಬೇರೆ ಯಾವ ರೀತಿಯಿಂದಲೂ ಸರ್ವಥಾ ದೊರಕಲಾರದೆಂಬುದೂ ಸಕಲ ಸಚ್ಛಾಸ್ತ್ರಗಳಿಂದ ನಿರ್ಣೀತವಾದ ಮುಖ್ಯ ವಿಚಾರವಾಗಿದೆ. ಇಷ್ಟು ಕಷ್ಟಸಾಧ್ಯವಾದ ಆ ಮೋಕ್ಷಸುಖದಲ್ಲಿ ಅಂತಹ ಅಪೂರ್ವವಾದ ವಿಶೇಷವೇನಿರಬಹುದೆಂಬ ಸಂಶಯ ಪರಿಹಾರಕ್ಕಾಗಿ ಈ ಶ್ಲೋಕದಲ್ಲಿ ನಿದರ್ಶನರೂಪವಾಗಿ ಮೋಕ್ಷದಲ್ಲಿ ದಾಂಪತ್ಯ-ಸೌಖ್ಯ ಹೇಗಿರುವುದೆಂಬುದನ್ನು ಕವಿವರ್ಯರು ಕಿಂಚಿತ್ ತೋರಿಸಿಕೊಟ್ಟಿದ್ದಾರೆ. ಏಕೆಂದರೆ ನಾನಾ ವಿಧವಾದ ಲೌಕಿಕಸುಖಗಳೆಲ್ಲಕ್ಕೂ ದಾಂಪತ್ಯ ಜೀವನವೇ ಮುಖ್ಯವಾದ ಅಡಿಗಲ್ಲಾಗಿದೆಯೆಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಆದರೂ ಸಂಸಾರನೌಕೆಯಲ್ಲಿದ್ದಾಗ ಮಾತ್ರ ಈ ದಾಂಪತ್ಯ-ಸೌಖ್ಯಕ್ಕೆ ಸಾವಿರಾರು ಬಾಧಕಗಳೂ, ನೂರಾರು ಕುಂದುಕೊರತೆಗಳೂ ಎಣಿಕೆಯಿಲ್ಲದಷ್ಟು ಏರುಪೇರುಗಳೂ ಇರುವುದರಿಂದ ಈ ಸುಖವು ಕ್ಷಣಿಕ-ವೆಂದೂ ಭಂಗುರ(ನಶ್ವರ)ವೆಂದೂ ಲೋಕದಲ್ಲಿ ಪ್ರಸಿದ್ಧಿಗೆ ಬಂದಿದೆ. ಇದಕ್ಕೆ ವಿರುದ್ಧವಾಗಿ ಮೋಕ್ಷದಲ್ಲಿ ಮಾತ್ರ ಯಾವ ಸುಖಕ್ಕೂ ಯಾವ ಬಾಧಕವೂ

ಇಲ್ಲ, ಯಾವ ಕುಂದುಕೊರತೆಯೂ ಇರುವುದಿಲ್ಲ ; ಹೆಚ್ಚೇಕೆ, ಅದರಲ್ಲಿ ದುಃಖಲೇಶದ ಸ್ಪರ್ಶವಾಗಲಿ, ಚ್ಯುತಿಯಾಗಲಿ, ಕೊನೆಯಾಗಲಿ, ಇರುವುದಿಲ್ಲವೆಂಬುದನ್ನು ಸೂಚಿಸುತ್ತಾ ಸೌಖ್ಯದ ಒಂದು ವಿಶಿಷ್ಟಮಾದರಿಯಾಗಿ ದಾಂಪತ್ಯಸೌಖ್ಯದ ಉಲ್ಲಾಸವನ್ನು ವರ್ಣಿಸುತ್ತಾ ಇಂಥಾ ಸೌಖ್ಯವು ಶ್ರೀಹರಿವಾಯುಗಳಿಬ್ಬರ ಅತ್ಯರ್ಥಪ್ರಸಾದದಿಂದ ಮಾತ್ರವೇ ಲಭ್ಯವಾಗುತ್ತದೆಯೆಂದೂ ಆದ್ದರಿಂದ ಅಂಥಾ ಸೌಖ್ಯಕ್ಕಾಗಿ ಶ್ರೀಹರಿವಾಯುಗಳನ್ನು ಆರಾಧಿಸಬೇಕೆಂಬುದನ್ನೂ ಪರೋಕ್ಷವಾಗಿ ತೋರಿಸಿಕೊಡುತ್ತಾರೆ.

ಭಗವಂತನ ಅಂಗಾಂಗಗಳಿಂದಲೇ ಇಂದ್ರಾಗ್ನ್ಯಾದಿ ದೇವತೆಗಳು ಹುಟ್ಟಿದರಲ್ಲದೆ ಆ ಅಂಗಗಳನ್ನೇ ಆಶ್ರಯಿಸಿಕೊಂಡಿದ್ದು ಅಲ್ಲೇ ಲಯವನ್ನೂ ಹೊಂದುತ್ತಾರೆಂದು ಶಾಸ್ತ್ರಗಳಿಂದ ತಿಳಿದುಬರುತ್ತದೆ. ಈ ವಿಷಯವನ್ನೇ 'ಸುರಮುಖ' ಎಂಬ ಸಂಬೋಧನೆ ತಿಳಿಸುತ್ತದೆ. ಈ ಪದಕ್ಕೆ ಹೇ ದೇವೋತ್ತಮನೇ ಎಂದೂ ಇನ್ನೊಂದು ಅರ್ಥವಾಗುತ್ತದೆ. ವಿಭೋ ಎಂದರೆ ವ್ಯಾಪಕ ಎಂದರ್ಥ. ಭಗವಂತನಾದ ಶ್ರೀಮನ್ನಾರಾಯಣನ ಕಣ್ಣು ಬಾಯಿ ಮೊದಲಾದ ಅವಯವಗಳಿಂದ ಸೂರ್ಯ ಇಂದ್ರಾಗ್ನ್ಯಾದಿ ದೇವತೆಗಳು ಸೃಷ್ಟರಾಗಿ* ಆ ಅಂಗಗಳನ್ನೇ ಆಶ್ರಯಿಸಿಕೊಂಡು ಆ ಅಂಗಗಳನ್ನೇ ಧ್ಯಾನ ಮಾಡಿ ಮುಕ್ತರಾಗುತ್ತಾರೆ. ಆ ಸ್ವಾಮಿ ಸರ್ವವ್ಯಾಪಕ, ರಮಾಬ್ರಹ್ಮಾದಿ ಸಕಲ ದೇವತೆಗಳಿಗಿಂತಲೂ ಸರ್ವೋತ್ತಮನಾಗಿದ್ದಾನೆ. ಅಷ್ಟೇ ಅಲ್ಲ, ರಮಾಬ್ರಹ್ಮಾದಿ ಸಕಲ ಚೇತನಾಚೇತನ ಜಗತ್ತಿಗಿಂತಲೂ ಅತ್ಯಂತ ಭಿನ್ನವಾಗಿದ್ದಾನೆ. ಎಂದು ತಿಳಿದುಕೊಂಡು, ಯಾರು ಸ್ವಬಿಂಬೋಪಾಸನೆ ಮಾಡುತ್ತಾರೋ ಅವರಿಗೆ ಮಾತ್ರವೇ ಮೋಕ್ಷವಾಗುತ್ತದೆ. ಇದೇ ರೀತಿ ವೇದವ್ಯಾಸದೇವರು ಆ ಭಗವಂತನ ಅವತಾರವೇ ಆಗಿದ್ದಾರೆಂದೂ ಅವರಿಗೂ ನಾರಾಯಣನ ವಿಶಿಷ್ಟಶಕ್ತಿಗಳೂ ಇವೆಯೆಂದೂ ಮೂಲರೂಪಕ್ಕೂ

---

*ಚಂದ್ರಮಾ ಮನಸೋ ಜಾತ-ಶ್ಚಕ್ಷೋಃ ಸೂರ್ಯೋ ಅಜಾಯತ । ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ವಾಯುರಜಾಯತ ॥ (ಪುರುಷಸೂಕ್ತ, ೧೩ನೇ ಮಂತ್ರ) (ಅರ್ಥ) ಚಂದ್ರನು ಪುರುಷನಾಮಕ ವಿಷ್ಣುವಿನ ಮನಸ್ಸಿನಿಂದಲೂ, ಸೂರ್ಯನು ಕಣ್ಣಿನಿಂದಲೂ, ದೇವೇಂದ್ರನೂ ಅಗ್ನಿಯೂ ಮುಖದಿಂದಲೂ, ವಾಯುವು ಪ್ರಾಣದಿಂದಲೂ ಹುಟ್ಟಿದರು.

ಅವತಾರಕ್ಕೂ ಯಾವಯಾವ ಭೇದವಿಲ್ಲವೆಂದೂ ಅರಿತು ಉಪಾಸನೆ ಮಾಡುತ್ತಾರೋ ಅವರಿಗೂ ಮೋಕ್ಷಪ್ರಾಪ್ತಿಯಾಗುತ್ತದೆ.

ಆದರೆ ಶ್ರೀಹರಿಯ ಪ್ರಸಾದಕ್ಕೆ ವಾಯುದೇವರ ಅನುಗ್ರಹವೂ ಬೇಕೇ-ಬೇಕು. ಜೀವರಿಂದ ಸತ್ಕರ್ಮಗಳನ್ನು ಮಾಡಿಸಿ ಅದನ್ನು ಶುದ್ಧಿಮಾಡಿ ಭಗವಂತನಲ್ಲಿ ಅರ್ಪಿಸಿ ಸಿದ್ಧಿಕೊಡಿಸುವವರೇ ವಾಯುದೇವರು. ಇದನ್ನು 'ತಸ್ಮಿನ್ನಪೋ ಮಾತರಿಶ್ವಾ ದಧಾತಿ' ಎಂಬ ಈಶಾವಾಸ್ಯ ಶ್ರುತಿ (ಮಂತ್ರ ೪) ತಿಳಿಸುತ್ತದೆ. ಈ ವಿಷಯಗಳನ್ನೇ ರಾಘವೇಂದ್ರಸ್ವಾಮಿಗಳು ಪ್ರಾತಸ್ಸಂಕಲ್ಪ-ಗದ್ಯದಲ್ಲಿ 'ಪ್ರತಿದಿನಂ ಪ್ರತಿಕ್ಷಣಂ ಬುದ್ಧಿಶೋಧಕೇನ, ಸರ್ವಕರ್ಮಕರ್ತ್ರಾ ಸರ್ವಕರ್ಮಕಾರಯಿತಾ, ಸರ್ಮಕರ್ಮಸ್ವಾಮಿನಾ, ಸರ್ವಕರ್ಮಸಮರ್ಪ-ಕೇಣ, ಸರ್ವಕರ್ಮಫಲಭೋಕ್ತ್ರಾ, ಸರ್ವಕರ್ಮಫಲಭೋಜಯಿತ್ರಾ, ಸರ್ವ-ಕರ್ಮಪ್ರೇರಕೇಣ, ಸರ್ವಕರ್ಮೋದ್ಬೋಧಕೇನ, ಸರ್ವಕರ್ಮಶುದ್ಧಿಪ್ರದೇನ, ಸರ್ವಕರ್ಮಸಿದ್ಧಿಪ್ರದೇನ,....ಸರ್ವಕರ್ಮಸಾಕ್ಷಿಣಾ' ಎಂಬ ವಾಕ್ಯಗಳಿಂದ ಸ್ಪಷ್ಟವಾಗಿ ಹೇಳಿದ್ದಾರೆ. ಆ ವಾಯುದೇವರ ತೃತೀಯಾವತಾರವೇ ಶ್ರೀಮನ್ಮಧ್ವಾಚಾರ್ಯರು. ಇವರನ್ನು ರುದ್ರಾದಿದೇವತೆಗಳೇ ಜ್ಞಾನಕ್ಕಾಗಿ ಆಶ್ರಯಿಸುತ್ತಾರೆ ಎಂಬುದು 'ನಿರ್ಯದೀಂ ಬುಧ್ನಾನ್ ಮಹಿಷಸ್ಯ ವರ್ಪಸ ಈಶಾನಾಸಃ ಶ್ರವಸಾಕ್ರಂತ ಸೂರಯಃ' ಎಂಬ ಬಳಿತ್ಥಾಸೂಕ್ತದ ಮೂರನೇ ಮಂತ್ರವು (ಋ. ೧/೧೪೧/೩) ಹೇಳುತ್ತದೆ. ಈ ಮಂತ್ರಕ್ಕೆ 'ಈ ಮಧ್ವಾ-ಚಾರ್ಯರು ರುದ್ರಾದಿದೇವತೆಗಳಿಗೆ ಜ್ಞಾನೋಪದೇಶ ಮಾಡಿ ಪಂಡಿತರನ್ನಾಗಿ ಮಾಡಿದರು' ಎಂದು ಅರ್ಥ. ಹೀಗೆ ರುದ್ರಾದಿ ದೇವತೆಗಳಿಂದಲೂ ಸೇವ್ಯರಾದ ವಾಯುದೇವರ ಮೂರನೇ ಅವತಾರವಾದ ಶ್ರೀಮನ್ಮಧ್ವಾಚಾರ್ಯರನ್ನು ಯಾರು ಸೇವಿಸುತ್ತಾರೋ ಅವರು ಮುಕ್ತಿಭಾಗಿಗಳಾಗಿ ಶಾಶ್ವತಸುಖವನ್ನು ಅನುಭವಿಸುತ್ತಾರೆ.

ಆ ಮೋಕ್ಷಸುಖದಲ್ಲಿ ದುಃಖದ ಗಂಧವೂ ಇರುವುದಿಲ್ಲ. ಅದಕ್ಕೆ ಚ್ಯುತಿ-ಯಾಗಲಿ ಕೊನೆಯಾಗಲಿ ಏರುಪೇರುಗಳಾಗಲಿ ಇರುವುದಿಲ್ಲವೆಂಬುದನ್ನು ಸೂಚಿ-ಸುವುದಕ್ಕಾಗಿ ವೈಕುಂಠದಲ್ಲಿ ನಿತ್ಯತಾರುಣ್ಯದಿಂದ ಕಂಗೊಳಿಸುವ ಸುಂದರೀ-ಮಣಿಗಳು ಅಚ್ಚಳಿಯದ ಸ್ವಚ್ಛವಾಗಿ ಹೊಳೆಯುವ ವಿಲಾಸಚೆಲ್ವಿಕೆಗಳ

ಬೆಡಗಿನಿಂದ ಆಲಿಂಗನ ಮಾಡಿಕೊಂಡು ಮುಕ್ತರಾದ ಪುರುಷರ ಹರುಷವನ್ನು ಹೆಚ್ಚಿಸುತ್ತಿರುತ್ತಾರೆಂದು ವರ್ಣಿಸಿದ್ದಾರೆ. ಇಂಥಾ ಸೌಖ್ಯವು ಶ್ರೀಹರಿವಾಯು ಗಳ ಅತ್ಯರ್ಥಪ್ರಸಾದವಿಲ್ಲದೆ ದೊರಕಲಾರದೆಂದು ಮುಖ್ಯತಾತ್ಪರ್ಯ.

**144. ವಿಶೇಷಾರ್ಥಗಳು—1.** ವೈಕುಂಠದಲ್ಲಿ ಮುಕ್ತರು 'ಚಾರು-ವೇಷಾಃ' ಸುಂದರವಾದ ರೂಪವುಳ್ಳವರಾಗಿ ಪ್ರಕಾಶಿಸುತ್ತಾರೆ ಎಂದು ಹೇಳಿದ್ದರಿಂದ ಸಾಯುಜ್ಯ, ಸಾಮೀಪ್ಯ, ಸಾಲೋಕ್ಯ, ಸಾರೂಪ್ಯ ಎಂಬ ಚತುರ್ವಿಧವಾದ ಮೋಕ್ಷವನ್ನೂ ಪಡೆಯುತ್ತಾರೆಂದು ಹೇಳಿದಂತಾಯಿತು. ಹೇಗೆಂದರೆ ವೈಕುಂಠಶಬ್ದ ಹರಿವಾಚಕವಾದ ಕಾರಣ (ವೈಕುಂಠೋ ವಿಷ್ಟ-ರಶ್ರವಾಃ ಎಂದು ಅಮರ ; 'ವೈಕುಂಠಃ ಪುರುಷಃ ಪ್ರಾಣಃ' ಎಂದು ವಿಷ್ಣು-ಸಹಸ್ರನಾಮ) 'ವೈಕುಂಠೇ ಭಾಸಂತೇ' ಎಂದು ಹೇಳಿದ್ದರಿಂದ ಸಾಯುಜ್ಯ-ಮುಕ್ತಿಯನ್ನೂ, ವೈಕುಂಠೇ—ವೈಕುಂಠಲೋಕದಲ್ಲಿ ಎಂದು ಹೇಳಿದ್ದರಿಂದ ಸಾಮೀಪ್ಯಮುಕ್ತಿ ಮತ್ತು ಸಾಲೋಕ್ಯಮುಕ್ತಿಗಳೂ, 'ಚಾರುವೇಷಾಃ' ಎಂಬುದಕ್ಕೆ 'ಮನೋಹರವಾದ ಶ್ರೀಹರಿಯಂತೆ ವೇಷವುಳ್ಳವ'ರೆಂದು ಅರ್ಥ-ವಾಗುವುದರಿಂದ ಸಾರೂಪ್ಯಮುಕ್ತಿಯೂ ಹೇಳಿದಂತಾಯಿತು. (ಸಾಯುಜ್ಯ ಎಂದರೆ ಅವನನ್ನು ಹರಿಯನ್ನು ಹೊಂದುವಿಕೆ ಎಂದರ್ಥ. ಸಾಮೀಪ್ಯ ಎಂದರೆ ಭಗವಂತನ ಸಮೀಪದಲ್ಲಿರುವಿಕೆ. ಸಾಲೋಕ್ಯ ಎಂದರೆ ಅವನ ಲೋಕದಲ್ಲೇ ಇರುವಿಕೆ. ಸಾರೂಪ್ಯ ಎಂದರೆ ಅವನಂತೆ ರೂಪ ಇರುವಿಕೆ ಎಂದರ್ಥ—ಪುರಾ.)

## ಹತ್ತನೇ ಶ್ಲೋಕ. ಮೋಕ್ಷಸೌಖ್ಯದ ವರ್ಣನೆ

**145. ಅವತಾರಿಕೆ**—ಹಿಂದಿನ ಶ್ಲೋಕದಲ್ಲಿ 'ವೈಕುಂಠೇ ಭಾಸಂತೇ-ವೈಕುಂಠಲೋಕದಲ್ಲಿ ಪ್ರಕಾಶಿಸುತ್ತಾರೆ' ಎಂದು ಹೇಳಿದ್ದನ್ನು ಇನ್ನೂ ವಿಸ್ತರಿಸಿ ಹೇಳುತ್ತಾರೆ (ಕಕ. ವಿ. ಛ. ಪುರಾ.)

**ಆನಂದಾನ್ ಮಂದಮಂದಾ ದದತಿ ಹಿ ಮರುತಃ**
**ಕುಂದ-ಮಂದಾರ-ನಂದ್ಯಾ-**
**ವರ್ತಾಮೋದಾನ್ ದಧಾನಾ ಮೃದುಪದಮುದಿತೋದ್-**
**ಗೀತಕೈಃ ಸುಂದರೀಣಾಮ್ ।**

**ವೃಂದೈರಾವಂದ್ಯಮುಕ್ತೇಂ—ದ್ವಹಿಮಗು-ಮದನಾ-**
**ಹೀಂದ್ರದೇವೇಂದ್ರಸೇವ್ಯೇ**
**ಮೌಕುಂದೇ ಮಂದಿರೇಽಸ್ಮಿ—ನ್ನವಿರತಮುದಯನ್**
**ಮೋದಿನಾಂ ದೇವದೇವ ॥ ೧೦ ॥**

**ಪದವಿಭಾಗ**—ಆನಂದಾನ್, ಮಂದಮಂದಾಃ, ದದತಿ, ಹಿ, ಮರುತಃ, ಕುಂದ....ಮೋದಾನ್, ದಧಾನಾಃ, ಮೃದುಪದಂ, ಉದಿತೋದ್ಗೀತಕೈಃ, ಸುಂದರೀಣಾಂ, ವೃಂದೈಃ, ಆವಂದ್ಯ....ಸೇವ್ಯೇ, ಮೌಕುಂದೇ, ಮಂದಿರೇ, ಅಸ್ಮಿನ್, ಅವಿರತಂ, ಉದಯನ್ಮೋದಿನಾಂ, ದೇವದೇವ.

**ವಿಶ್ಲೇಷಣೆ**—ದೇವದೇವ ಎಂಬುದು ಹರಿ-ವಾಯು ಇಬ್ಬರಿಗೂ ಸಂಬೋಧನೆ. ಈ ಶ್ಲೋಕವು ಮೋಕ್ಷಸೌಖ್ಯದ ವರ್ಣನೆಯಾದ್ದರಿಂದ ಹರಿ-ವಾಯು ಎರಡು ಪರವಾಗಿಯೂ ಒಂದೇ ಅರ್ಥ. ಅಸ್ಮಿನ್ ಮೌಕುಂದೇ ಮಂದಿರೇ ಮರುತಃ ಉದಯನ್ಮೋದಿನಾಂ (ಮುಕ್ತಾನಾಂ) ಆನಂದಾನ್ ಅವಿರತಂ ದದತಿ ಹಿ ಎಂಬುದೇ ಪ್ರಧಾನವಾಕ್ಯ. ಇದಕ್ಕೆ ಈ ವಿಷ್ಣು-ಲೋಕದಲ್ಲಿ (ವೈಕುಂಠದಲ್ಲಿ) ಗಾಳಿಗಳು ನಿತ್ಯತೃಪ್ತರಾದ ಮುಕ್ತರಿಗೆ ಅನೇಕ ವಿಧವಾದ ಆನಂದಗಳನ್ನು ನಿರಂತರವಾಗಿ ಕೊಡುತ್ತಿರುತ್ತದೆ ಎಂದು ಅರ್ಥ. ಮರುತಃ ಎಂಬುದಕ್ಕೆ 1. ಮಂದಮಂದಾಃ, 2. ಕುಂದ....ಮೋದಾನ್ ದಧಾನಾಃ ಎಂದು ಎರಡು ವಿಶೇಷಣಗಳು. ಮೌಕುಂದೇ ಮಂದಿರೇ ಎಂಬು-ದಕ್ಕೆ ಮೃದುಪದ....ದೇವೇಂದ್ರಸೇವ್ಯೇ ಎಂಬುದು ದೊಡ್ಡ ವಿಶೇಷಣ. ಈ ಶ್ಲೋಕದ ಪದಾವಳಿಯೂ ಅನ್ವಯಕ್ರಮವೂ ಸುಲಭವಾಗಿರುವುದಲ್ಲದೆ ಅರ್ಥವ್ಯತ್ಯಾಸವೂ ಇಲ್ಲದಿರುವುದರಿಂದ ನೇರವಾಗಿ ಅನ್ವಯಾರ್ಥಕ್ಕೇ ಹೋಗ-ಬಹುದು.

**146. ಅನ್ವಯಾರ್ಥ** (ಉಭಯಪರವಾಗಿಯೂ ಒಂದೇ ಅರ್ಥ)— ಈ ಶ್ಲೋಕದ ದಂಡಾನ್ವಯ ಹೀಗಿದೆ—ಹೇ ದೇವದೇವ ! ಮೃದುಪದಂ ಉದಿತೋದ್ಗೀತಕೈಃ ಸುಂದರೀಣಾಂ ವೃಂದೈಃ ಆನಂದ್ಯ....ಸೇವ್ಯೇ ಅಸ್ಮಿನ್ ಮೌಕುಂದೇ ಮಂದಿರೇ, 1. ಮಂದಮಂದಾಃ 2. ಕುಂದ....ಮೋದಾನ್

ದಧಾನಾಃ ಮರುತಃ, ಉದಯನ್ಮೋದಿನಾಂ (ಮುಕ್ತಾನಾಂ) ಆನಂದಾನ್ ಅವಿರತಂ ದದತಿ ಹಿ ॥

(ಅರ್ಥ) ದೇವದೇವ–ಹೇ ದೇವದೇವೋತ್ತಮನಾದ ಶ್ರೀವಿಷ್ಣುವೇ (ಪುರಾ.) ಅಥವಾ ಗರುಡಶೇಷಾದಿ ಸಕಲ ದೇವತೆಗಳಿಗಿಂತಲೂ ಶ್ರೇಷ್ಠರಾದ (ಕಕ. ವಿ.) ಅಥವಾ ರುದ್ರಾದಿಗಳಿಂದ ಸ್ತುತ್ಯರಾದ (ಛ.) ವಾಯುದೇವರೇ ! ಮೃದು-ಪದಂ—ಮೃದು–ಕ್ಲೇಶವಿಲ್ಲದೆ ಸುಲಭವಾಗಿ ಅರ್ಥವಾಗುವ, ಪದಂ–ಪದಾವಳಿ-ಯುಳ್ಳ (ಕಕ. ವಿ. ಛ.) ಅಥವಾ ಮೃದು–ಕೇಳುವುದಕ್ಕೆ ಇಂಪಾಗಿರುವ, ಪದಂ–ಪದಗಳಿಂದ ಕೂಡಿದ (ವಿ.) ಹಾಗೆ; ಉದಿತ-ಉದ್ಗೀತಕೈಃ–ಉತ್ಕೃಷ್ಟ-ವಾದ ಹಾಡು (ಗೀತೆ)ಗಳನ್ನು ಹಾಡುತ್ತಿರುವ ; ಸುಂದರೀಣಾಂ ವೃಂದೈಃ–ಅಪ್ಸರೆಯರು ಕಿನ್ನರಿಯರೇ ಮೊದಲಾದ ಸುಂದರೀಮಣಿಗಳ ಸಮೂಹ-ಗಳಿಂದ ; ಆವಂದ್ಯ....ಸೇವ್ಯೇ—ಆವಂದ್ಯ–ಚೆನ್ನಾಗಿ ಸೇವಿತರಾದ, ಮುಕ್ತ–ಮುಕ್ತರಾದ, ಇಂದು–ಚಂದ್ರ, ಅಹಿಮಗು(ಹಿಮ–ತಂಪು, ಅಹಿಮ–ಉಷ್ಣ ; ಗು–ಕಿರಣ)–ಉಷ್ಣಕಿರಣವುಳ್ಳ ಸೂರ್ಯ, ಮದನ–ಮನ್ಮಥ, ಅಹೀಂದ್ರ–(ಅಹಿ–ಸರ್ಪಗಳ, ಇಂದ್ರ–ಒಡೆಯರಾದ) ಶೇಷದೇವರು, ದೇವೇಂದ್ರ–ಸುರಪತಿಯಾದ ಇಂದ್ರ—ಇವರೇ ಮೊದಲಾದವರಿಂದ, ಸೇವ್ಯೇ–ಸೇವಿಸಿ-ಕೊಳ್ಳಲ್ಪಡುತ್ತಿರುವ; ಅಸ್ಮಿನ್–ಈ ಎಂದರೆ ಮುಕ್ತಾಶ್ರಯತ್ವೇನ ಪ್ರಸಿದ್ಧ-ವಾದ ; ಮೌಕುಂದೇ ಮಂದಿರೇ–ವಿಷ್ಣುವಿನ ಮನೆಯಾದ ವೈಕುಂಠದಲ್ಲಿ ; ಮಂದಮಂದಾಃ–ಬಹಳ ಮೆಲ್ಲಗೆ ಬೀಸುವ; ಕುಂದ....ಮೋದಾನ್—ಕುಂದ-ಮರಜಾಜಿ ಹೂವುಗಳು, ಮಂದಾರ–ಕೋಲುಮಲ್ಲಿಗೆ ಹೂವು, ನಂದ್ಯಾವರ್ತ–ನಂದೀಬಟ್ಟಲು ಇವೇ ಮೊದಲಾದ ಸುಗಂಧಪುಷ್ಪಗಳ ; ಆಮೋದಾನ್–ಪರಿಮಳವನ್ನು; ದಧಾನಾಃ–ಧರಿಸಿದ; ಮರುತಃ–ತಂಗಾಳಿಗಳು ; ಉದಯನ್-ಮೋದಿನಾಂ–ಸ್ವರೂಪಯೋಗ್ಯತಾನುಸಾರ ಪ್ರಕಟವಾದ ಸ್ವರೂಪಾನಂದ-ವುಳ್ಳ ಮುಕ್ತರಿಗೆ ; ಆನಂದಾನ್–ನಾನಾವಿಧವಾದ ಹರ್ಷೋಲ್ಲಾಸಗಳನ್ನು ; ಅವಿರತಂ–ನಿರಂತರವಾಗಿ, ದದತಿ–ಕೊಡುತ್ತವೆ. ಹಿ–ಇದು ಶಾಸ್ತ್ರಪ್ರಸಿದ್ಧವಾದ ವಿಚಾರ.

**147. ಶ್ಲೋಕದ ಭಾವಾರ್ಥ**—ಹೇ ಭಗವನ್ ! ದೇವದೇವೋ-ತ್ತಮನಾದ ನಾರಾಯಣನೇ ! ಮತ್ತು ಗರುಡಶೇಷಾದಿ ದೇವತೆಗಳಿಗೂ

ಶ್ರೇಷ್ಠರಾದ ಹೇ ಮುಖ್ಯಪ್ರಾಣ ! ಜಗನ್ನಿಯಾಮಕನಾದ ಶ್ರೀಹರಿಯ ಮನೆಯಾದ ವೈಕುಂಠದಲ್ಲಿ ದೊರಕುವ ಸೌಖ್ಯಕ್ಕೆ ಸಮವಾದ ಆನಂದ ಬೇರೆ ಎಲ್ಲಿರಲೂ ಸಾಧ್ಯವಿಲ್ಲ. ಏಕೆಂದರೆ ಎಲ್ಲೆಲ್ಲಿ ಹೋದರೂ ದುಃಖವೇ ಎದ್ದುಕಾಣುತ್ತಿರಲು ಈ ವೈಕುಂಠದಲ್ಲಿ ಮಾತ್ರ ಯಾವ ವಿಧವಾದ ದುಃಖವೂ ಎಳ್ಳಷ್ಟೂ ಇಲ್ಲ. ಇಲ್ಲಿಯ ಸುಖಕ್ಕೆ ಎಣೆಯೇ ಇಲ್ಲ. ವೈಕುಂಠದಲ್ಲೂ ಸಹ ಚಂದ್ರ-ಸೂರ್ಯರು, ಇಂದ್ರಕಾಮರು ಗರುಡ-ಶೇಷಾದಿ ಸಕಲ ದೇವತೆಗಳೂ ತಮ್ಮ ತಮ್ಮ ಸಾಧನೆಗಳಿಗೆ ತಕ್ಕಂತೆ ತಾರ-ತಮ್ಯಾನುಗುಣವಾಗಿ ಹೆಚ್ಚು-ಹೆಚ್ಚು ಸೌಖ್ಯವನ್ನು ಅನುಭವಿಸುತ್ತಿರುತ್ತಾರೆ. ಅವರನ್ನು ಅವರಿಗಿಂತ ಅಧಮರಾದ ಗಂಧರ್ವರು ಕಿನ್ನರರು-ಕಿಂಪುರುಷರು ಅಪ್ಸರೆಯರೇ ಮೊದಲಾದ ದೇವತಾಸ್ತ್ರೀಯರು ಮೃದುಮಧುರವಾದ ಅರ್ಥ-ಗರ್ಭಿತವಾದ ಸರಳವಾದ ಸ್ತುತಿರೂಪಗಾನಗಳಿಂದಲೂ ನರ್ತನಗಳಿಂದಲೂ ಸಂತೋಷಪಡಿಸುತ್ತಿರುತ್ತಾರೆ. ಜೊತೆಗೆ ಕುಂದಮಂದಾರನಂದ್ಯಾವರ್ತಾದಿ ನಾನಾವಿಧವಾದ ಸುಗಂಧಪುಷ್ಪಗಳ ಸುಗಂಧದಿಂದ ಘಮಘಮಿಸುತ್ತಿರುವ ಮಂದಮಾರುತಗಳು ತಂಪಾಗಿ ಹಾಯೆನ್ನುವಂತೆ ಬೀಸುತ್ತಾ ಅವರ ಆನಂದ ವನ್ನು ಮತ್ತಷ್ಟು ಹೆಚ್ಚಿಸುತ್ತವೆ. ಅವರಿಗೆ ಕ್ಲೇಶದಾಯಕವಾದ ಒಂದು ವಿಚಾರವೂ ಇರುವುದಿಲ್ಲ. ಇಂಥಾ ಸೌಖ್ಯವು ಶ್ರೀಹರಿವಾಯುಗಳಲ್ಲಿ ಭಕ್ತಿಮಾಡಿ ಅವರ ಅನುಗ್ರಹಕ್ಕೆ ಪಾತ್ರರಾದವರಿಗೆ ಮಾತ್ರ ದೊರೆಯುವುದೆಂದು ಭಾವ.

**148. ವಿಶೇಷಾರ್ಥಗಳು. 1) ತಂಗಾಳಿಯ ವಿಶೇಷ ಗುಣಗಳು**—ಸಾಹಿತ್ಯಶಾಸ್ತ್ರದಲ್ಲಿ ತಂಗಾಳಿಯು ಹಿತವಾಗಿರಲು ಅದರಲ್ಲಿ ಶೈತ್ಯ, ಮಾಂದ್ಯ ಮತ್ತು ಸೌರಭ್ಯವೆಂದು ಮೂರು ವಿಶೇಷ ಗುಣಗಳಿರಬೇಕೆಂದು ಹೇಳುವುದುಂಟು. (ಶೈತ್ಯ ಎಂದರೆ ನೀರಿನ ಹನಿಗಳಿಂದ ಕೂಡಿ ತಂಪಾಗಿರುವಿಕೆ. ಮಾಂದ್ಯ ಎಂದರೆ ಮೆಲ್ಲಗೆ ಬೀಸುವುದು. ಸೌರಭ್ಯ ಎಂದರೆ ಸುವಾಸನೆಯಿಂದ ಕೂಡಿರುವುದು ಎಂದರ್ಥ.) ಪ್ರಕೃತ ಆ ಮೂರೂ ವಿಶೇಷಗುಣಗಳನ್ನು ಪಂಡಿತಾಚಾರ್ಯರು ಇಲ್ಲಿ ತೋರಿಸಿಕೊಟ್ಟಿದ್ದಾರೆ. ಮಂದಮಂದಾಃ ಎಂದು ಹೇಳಿದ್ದರಿಂದ ಸೌರಭ್ಯವೂ ಶೈತ್ಯವೂ ಸೂಚಿತವಾದುವು. ಕುಂದಮಂದಾರ-ನಂದಾವರ್ತ್ಯಾಮೋದಾನ್ ದಧಾನಾಃ ಎಂದು ಹೇಳಿದ್ದರಿಂದ ಸೌರಭ್ಯವೂ

(ಸುವಾಸನೆಯೂ) ಹೇಳಿದಂತಾಯಿತು. **2. ಮಂದಮಂದಾಃ** ಎಂಬಲ್ಲಿ 'ನಿತ್ಯವೀಪ್ಸಯೋಃ' (ಪಾ. ೮/೧/೪) ಎಂಬ ಸೂತ್ರದಂತೆ ನಿತ್ಯಾರ್ಥ (ಅತಿಶಯಾರ್ಥ) ದಲ್ಲಿ ದ್ವಿತ್ವ ಬಂದಿದೆ. ಅತಿಶಯೇನ ಮಂದಾಃ ಮಂದಮಂದಾಃ। (ಕಕ. ವಿ.) **3. ಉದಯನ್ಮೋದಿನಾಂ ದದತಿ** ಎಂಬಲ್ಲಿ—ಮೋದಿನಾಂ ಎಂಬುದು ಸಂಪ್ರದಾನಾರ್ಥದಲ್ಲಿ (ಚತುರ್ಥೀ ಅರ್ಥದಲ್ಲಿ) ಶೇಷತ್ವವಿವಕ್ಷೆ ಯಿಂದ ಷಷ್ಠೀವಿಭಕ್ತಿ ಬಂದಿದೆ. ಅಲ್ಲದೆ 'ನ ಬಹುವ್ರೀಹಿನಿರ್ವಾಹ್ಯೇ ಭವಂತಿ ಮತುಬಾದಯಃ' ಎಂದರೆ ಬಹುವ್ರೀಹಿ ಸಮಾಸವಿದ್ದಾಗ ಮತು-ಬಾದಿ ಪ್ರತ್ಯಯಗಳು ಬರುವುದಿಲ್ಲವೆಂದು ಸಾಮಾನ್ಯ ನಿಯಮವಿದ್ದರೂ, ಅದು ಪ್ರಾಯಿಕವಾದುದರಿಂದ ಇಲ್ಲಿ ಉದಯನ್–ಉದ್ಗಚ್ಛನ್ ಮೋದಃ–ಆನಂದಃ ಏಷಾಮಸ್ತೀತಿ ಉದಯನ್ಮೋದಿನಃ, ತೇಷಾಂ—ಎಂದು ಮತ್ವರ್ಥೀಯ ಇನಿ-ಪ್ರತ್ಯಯ ಬಂದೇ ಇದೆ. ಈ ರೀತಿ ಅನರ್ಘರಾಘವ ಎಂಬ ನಾಟಕದಲ್ಲಿಯೂ ಮಹಾಭಾರತಾದಿಗಳಲ್ಲೂ ಬಂದಿದೆಯಾದ್ದರಿಂದ ದೋಷವಲ್ಲ. ಮೋದ ಶಬ್ದದ ಮೇಲೆ 'ಅತ ಇನಿಠನೌ' (ಪಾ. ೫/೨/೧೧೫) ಎಂಬ ಸೂತ್ರದಂತೆ ಇನಿಪ್ರತ್ಯಯ ಬಂದಿದೆ. (ಕಕ. ವಿ.) **4. ಉದಿತೋದ್ಗೀತಕೈಃ** ಎಂಬಲ್ಲಿ ಉದಿತಾನಿ–ಉದೀರಿತಾನಿ ಉದ್ಗೀತಾನಿ–ಉತ್ಕೃಷ್ಟಗಾನಾನಿ ಯೈಸ್ತಾನಿ ಉದಿತೋದ್ಗೀತಕಾನಿ + ತೈಃ ಎಂದು ವಿಗ್ರಹವಾಕ್ಯ. ಇಲ್ಲಿ 'ಶೇಷಾದ್ವಿಭಾಷಾ' (ಪಾ. ೫/೪/೧೫೪) ಎಂಬ ಸೂತ್ರದಂತೆ ಸಮಾಸಾಂತ್ಯದಲ್ಲಿ ಕಪ್ (ಕ) ಪ್ರತ್ಯಯ ಬಂದಿದೆ' 'ಗೀತಂ ಗಾನಮಿಮೇ ಸಮೇ' ಎಂದು ಅಮರ. (ಕಕ. ವಿ.) **5. ಆಮಂದ್ಯಮುಕ್ತ**—ಎಂಬಲ್ಲಿ 'ಮುಕ್ತಾ ತು ಮೌಕ್ತಿಕೇ ಮುಕ್ತಃ ಪ್ರಾಪ್ತ ಮುಕ್ತೌ ತು ಮೋಚಿತೇ' ಎಂಬ ಯಾದವಕೋಶದ ಪ್ರಕಾರ ಮುಕ್ತ ಎಂಬ ಪದ ಮುಕ್ತಿಯನ್ನು ಹೊಂದಿದ (ಪ್ರಾಪ್ತಮೋಕ್ಷ) ಎಂಬ ಅರ್ಥದಲ್ಲಿ ಬಂದಿದೆ. ಜೈಲು ಮೊದಲಾದ ಬಂಧನಗೃಹಗಳಿಂದ ಹೊಸದಾಗಿ ಬಿಡುಗಡೆ-ಯಾದವರಿಗೂ ಮುಕ್ತ ಶಬ್ದಪ್ರಯೋಗವಿದೆ ; ಇಲ್ಲಿ ಆ ಅರ್ಥವಿಲ್ಲ. ಮುಕ್ತಾ (ಸ್ತ್ರೀಲಿಂಗ) ಎಂದರೆ ಮುತ್ತು, ರತ್ನ. 'ಮುಕ್ತಃ ಪ್ರಾಪ್ತಮೋಕ್ಷೇ ಚ ಮೋಚಿತೇ' ಎಂದು ಮೇದಿನೀಕೋಶವೂ ಹೇಳುತ್ತದೆ. (ಕಕ. ವಿ.) **6.** ಮತ್ತು ಗಾಳಿಯು ಝಂಝಾವಾತದಂತೆ (ಬಿರುಗಾಳಿಯಂತೆ) ದುಃಖಕರವಲ್ಲ,

ಅದಕ್ಕೆ ಪ್ರತಿಯಾಗಿ ಮೆಲ್ಲಗೆ ಬೀಸುತ್ತಿರುವುದರಿಂದ ಹಿತವಾಗಿದೆಯೆಂಬುದನ್ನು ಸೂಚಿಸಲು **ಮಂದಮಂದಾಃ** ಎಂಬ ವಿಶೇಷಣ ಕೊಟ್ಟಿದ್ದಾರೆ. ನಾನಾವಿಧ ಪುಷ್ಪಗಳ ಸುಗಂಧದಿಂದ ಕೂಡಿರುವುದರಿಂದಲೂ, ಶ್ರಾವ್ಯವಾದ ಗಾನದಿಂದಲೂ ಸುಂದರಸ್ತ್ರೀಯರ ದರ್ಶನದಿಂದಲೂ ಸುಖಾಭಿವೃದ್ಧಿಯಾಗುತ್ತದೆ ಎಂದು ಸೂಚಿಸಿದ್ದಾರೆ. **ಉದಯನ್ಮೋದಿನಾಂ** ಎಂಬುದಕ್ಕೆ ಪ್ರತ್ಯಕ್ಷ ದರ್ಶನ ಕೊಡುತ್ತಿರುವ ಸುಖಪೂರ್ಣನಾದ ಶ್ರೀಹರಿಯನ್ನು ನಿತ್ಯ ಕಾಣುತ್ತಿರುವುದ-ರಿಂದ ಕ್ಷಣಕ್ಷಣವೂ ಆನಂದೋದಯವಾಗುತ್ತಿರುವ ಎಂದೂ ಅರ್ಥ ಹೇಳುವು-ದಕ್ಕೆ ಬರುವುದರಿಂದ ಶ್ರೀಹರಿಯ ಸಾಕ್ಷಾತ್ ದರ್ಶನದಿಂದಲೂ ಸುಖಾಭಿ-ವೃದ್ಧಿಯುಂಟೆಂತಲೂ ತಿಳಿಯಬೇಕು. (ಪುರಾ.)

**149. ಮೋಕ್ಷದ ಬಗ್ಗೆ.** ಮೋಕ್ಷದಲ್ಲಿರುವ ಮುಕ್ತರು ಯಾವ ರೀತಿ ಆನಂದವನ್ನನುಭವಿಸುವರೆಂಬ ವಿಚಾರವು ಮುಖ್ಯವಾಗಿ ಬ್ರಹ್ಮಸೂತ್ರ-ಗಳ ನಾಲ್ಕನೇ ಅಧ್ಯಾಯದ ನಾಲ್ಕನೇ ಭೋಗಪಾದದಲ್ಲಿ ಬರುತ್ತದೆ. ಪ್ರಾಸಂಗಿಕವಾಗಿ ಉಪನಿಷತ್ತುಗಳಲ್ಲೂ ಭಾಗವತದಲ್ಲೂ ಭಗವದ್ಗೀತೆಯಲ್ಲೂ ಅಲ್ಲಲ್ಲೇ ಬಂದಿದೆ. ಅಷ್ಟೇ ಅಲ್ಲದೆ ತೈತ್ತಿರೀಯೋಪನಿಷತ್ತಿನ ಎರಡನೇ (ಆನಂದ)ವಲ್ಲಿಯ ೧೭ರಿಂದ ೨೦ ಅನುವಾಕಗಳಲ್ಲೂ ಬೃಹದಾರಣ್ಯಕೋಪ-ನಿಷತ್ತಿನ ಆರನೇ ಅಧ್ಯಾಯದ (ಮೂರನೇ) ಜ್ಯೋತಿಬ್ರಾಹ್ಮಣದ ೩೩ನೇ ಕಂಡಿಕೆಯಲ್ಲೂ ಮುಕ್ತರ ಆನಂದತಾರತಮ್ಯದ ವರ್ಣನೆ ಬಂದಿದೆ. ಪಂಡಿತಾ-ಚಾರ್ಯರು ಮುಖ್ಯ ಮುಖ್ಯವಾದ ಈ ಪ್ರಮೇಯಗಳೆಲ್ಲವನ್ನೂ ಸಂಗ್ರಹಿಸಿ ಈ ಎರಡು ಶ್ಲೋಕಗಳಲ್ಲಿ ಅಡಕ ಮಾಡಿ ಹೇಳಿದ್ದಾರೆ. ಆದಕಾರಣ ವಾಯುಸ್ತುತಿಯ ಮುಖ್ಯ ಪ್ರಮೇಯಗಳು ಮಂದಟ್ಟಾಗಿ ತಿಳಿಯಬೇಕಾದರೆ ಮೋಕ್ಷದ ಬಗ್ಗೆ ಮುಖ್ಯ ವಿಷಯಗಳೆಲ್ಲವನ್ನೂ ಸಂಕ್ಷೇಪವಾಗಿ ಇಲ್ಲಿ ತಿಳಿಸುವುದು ಅತ್ಯವಶ್ಯಕವಾಗಿದೆ.

**ಅ) ಮೋಕ್ಷ ಎಂದರೇನು ?**—ಮೋಕ್ಷ ಅಥವಾ ಮುಕ್ತಿ ಎರಡೂ ಒಂದೇ ಅರ್ಥದ ಎರಡು ಶಬ್ದಗಳು. 'ಮುಕ್ತಿಃ ಕೈವಲ್ಯ–ನಿರ್ವಾಣ–ಶ್ರೇಯೋ ನಿಃಶ್ರೇಯಸಾಮೃತಮ್ । ಮೋಕ್ಷೋಽಪವರ್ಗೋಽಥ' ಎಂದು ಅಮರ. ಮುಚಲೃ ಮೋಕ್ಷಣೇ (ತುದಾದಿ. ಉಭ.) ಎಂಬ ಧಾತುವಿಗೆ ಕ್ತಿನ್

ಪ್ರತ್ಯಯು (ಪಾ. ೩/೩/೯೪) ಸೇರಿದರೆ ಮುಕ್ತಿ ಎಂದಾಗುತ್ತದೆ. ಮೋಕ್ಷ ಅವಸಾನೇ (ಚುರಾ. ಉಭ.) ಎಂಬ ಧಾತುವಿಗೆ 'ಏರಚ್' (ಪಾ. ೩/೩/೫೬) ಎಂಬ ಸೂತ್ರದಂತೆ ಅಚ್ ಪ್ರತ್ಯಯವಾಗಲಿ, ಭಾವೇ (ಪಾ. ೩/೩/೧೮) ಘಞ್ ಪ್ರತ್ಯಯವಾಗಲಿ ಬಂದರೆ ಮೋಕ್ಷ ಎಂದೂ ಆಗುತ್ತದೆ. ಆದಕಾರಣ ಸಾಮಾನ್ಯವಾಗಿ ಮುಕ್ತಿ ಅಥವಾ ಮೋಕ್ಷ ಎಂದರೆ ಬಂಧನದಿಂದ ಬಿಡುಗಡೆ ಎಂದರ್ಥ. ಆದರೆ ರೂಢಿಯಲ್ಲಿ ಇದಕ್ಕೆ 'ಪರೇಽವ್ಯಯೇ ಸರ್ವ ಏಕೀಭವಂತಿ' ಎಂಬ ಶ್ರುತಿಯು ಹೇಳುವಂತೆ—ಪುಣ್ಯಪಾಪಗಳು ಸುಖದುಃಖಗಳು ಸ್ವರ್ಗ-ನರಕಗಳೇ ಮೊದಲಾದ ನಾನಾವಿಧವಾದ ಜಂಜಾಟಗಳೆಲ್ಲಕ್ಕೂ ಮೂಲ-ಕಾರಣವಾದ ಸಂಸಾರವೆಂಬ ಜನನ-ಮರಣಗಳ ಅನಿವಾರ್ಯವಾದ ಸುಳಿ-ಯಿಂದ ಬಿಡುಗಡೆ ಹೊಂದಿ ವಿಷ್ಣುಲೋಕಕ್ಕೆ ಹೋಗಿ ಆ ವಿಷ್ಣುವನ್ನೇ ಸೇರಿ ಸ್ವರೂಪಾನಂದವನ್ನು ನಿರಂತರವಾಗಿ ಅನುಭವಿಸುವುದಕ್ಕೇ **ಮೋಕ್ಷ** ಅಥವಾ **ಮುಕ್ತಿ** ಎಂದು ಹೆಸರೇ ಹೊರತು ಕೆಲವರು ಹೇಳುವಂತೆ ತಾನೇ ಬ್ರಹ್ಮನಾಗಿಬಿಡುವುದಾಗಲಿ ಅಥವಾ ಮತ್ತೆ ಕೆಲವರು ಹೇಳುವಂತೆ ಬ್ರಹ್ಮನಲ್ಲಿ ಎಲ್ಲರೂ ಸೇರಿ ಒಂದಾಗುವುದು ಎಂದಾಗಲಿ ಅಲ್ಲ. ಏಕೆಂದರೆ ಶ್ರುತಿಗಳು 'ಆತ್ಮಾನಮಭಿಸಂಪದ್ಯ' (ಸೌಪರ್ಣ) 'ಪರಮಾತ್ಮನನ್ನು ಹೊಂದಿ' ಎಂದೂ 'ಪರಂಜ್ಯೋತಿರುಪಸಂಪದ್ಯ' (ಛಂದೋಗ ೮/೩/೪) 'ವಿಷ್ಣುವನ್ನು ಸೇರಿ' ಇತ್ಯಾದಿಯಾಗಿ **ಸಂಪದ್ಯ**–ಹೋಗಿ, ಸೇರಿ, ಎಂದು ಹೇಳುವುದರಿಂದ ಮೋಕ್ಷದಲ್ಲಿ ಜೀವಪರಮಾತ್ಮರಿಗೆ ಭೇದವನ್ನೇ ಸ್ಪಷ್ಟವಾಗಿ ಪ್ರತಿಪಾದಿಸುತ್ತವೆ. ಹೀಗೆ ಮೋಕ್ಷದಲ್ಲೂ ಸಹ ಪಂಚಭೇದಗಳೇ ಅಲ್ಲದೆ ತಾರತಮ್ಯವೂ ಕೂಡ ಉಂಟೆಂದು ಸಿದ್ಧವಾಗುತ್ತದೆ. ಏಕೆಂದರೆ ಬೇರೆ ಬೇರೆ ಜೀವರು ಅನುಭವಿಸುವ ಆನಂದದಲ್ಲಿ ತಾರತಮ್ಯವಿರುವುದು ಮಾತ್ರವಲ್ಲದೆ ಸರ್ವ-ಶ್ರೇಷ್ಠರಾದ ಬ್ರಹ್ಮರುದ್ರಾದಿಗಳು ತಮಗೆ ಅವರರಾದ ದೇವತೆಗಳೇ ಮೊದಲಾದ ಎಲ್ಲರಿಂದಲೂ ಸೇವಿಸಲ್ಪಡುವರೆಂದೂ, ಅಷ್ಟೇ ಏಕೆ ಉತ್ತಮೋ-ತ್ತಮರಾದ ಸಕಲರೂ (ಗುರುಗಳೂ) ತಮಗಿಂತ ಅವರರಾದ ಶಿಷ್ಯರೇ ಮೊದಲಾದ ಎಲ್ಲರಿಂದಲೂ ಸೇವಿಸಲ್ಪಡುವ*ರೆಂಬ ಪ್ರಮೇಯವೂ ಆದರೆ

---

*ಪೂಜ್ಯಂತೇ ಚಾವರೈಸ್ತೇ ತು ಸರ್ವಪೂಜ್ಯಶ್ಚತುರ್ಮುಖಃ॥ (ಗರುಡಪುರಾಣ)

ತಮಗಿಂತ ಕೀಳಾದವರನ್ನು ಸೇವಿಸುವ ಅಥವಾ ಓಲಗಿಸುವ ಪ್ರಸಂಗ ಮಾತ್ರ ಮೋಕ್ಷದಲ್ಲಿ ಎಂದೆಂದಿಗೂ ಬರುವುದಿಲ್ಲವೆಂದೂ ಅನನ್ಯಾಧಿಪತ್ಯಧಿಕರಣ (ಬ್ರ.ಸೂ. ೪/೪/೭ ಅಧಿ.)ದಲ್ಲಿ ಹೇಳಿದೆ.

**ಆ) ಮುಕ್ತಿಯಲ್ಲೇನು ವಿಶೇಷ**—ಹೀಗೆ ಉಚ್ಚ-ನೀಚವೆಂಬ ಭೇದಭಾವವೂ ಸೇವಾವೃತ್ತಿಯೂ ಮೋಕ್ಷದಲ್ಲೂ ತಪ್ಪದಿದ್ದರೆ ಅಂಥಾ ಮೋಕ್ಷದಿಂದೇನು ಲಾಭ ? ಎಂದು ಶಂಕಿಸಬೇಕಾಗಿಲ್ಲ. ಏಕೆಂದರೆ ಮೊದಲ-ನೆಯದಾಗಿ, ಮುಕ್ತರಿಗೆ ವಿಷ್ಣು-ವೈಷ್ಣವರ ಸೇವೆಯು ಅತ್ಯಂತ ಪ್ರಿಯ-ವಾದುದೇ ಹೊರತು ಅನಿಷ್ಟವಲ್ಲ. ಎರಡನೆಯದಾಗಿ ಪ್ರತಿಯೊಬ್ಬರೂ ತಮ್ಮ ತಮ್ಮ ಯೋಗ್ಯತೆ ಎಷ್ಟಿದೆಯೋ ಅಷ್ಟು ಪೂರ್ಣವಾದ, ಕಲ್ಪನೆಗೂ ಎಟುಕದ ಪೂರ್ಣಾನಂದವನ್ನು (ಇದರ ವರ್ಣನೆ ಸ್ವಲ್ಪ ಮುಂದೆ ಕೆಳಗೇ ಬರುವುದು) ಅನುಭವಿಸುವುದರಿಂದಲೂ, ಮುಕ್ತಿಯಲ್ಲಿ ಈರ್ಷ್ಯಾಸೂಯೆಗಳ ಪ್ರಸಕ್ತಿಯೇ ಇಲ್ಲವಾದ್ದರಿಂದಲೂ ಯಾವ ಮುಕ್ತನೂ ತನ್ನ ಯೋಗ್ಯತೆ ಮೀರಿದ ಆನಂದಕ್ಕಾಗಿ ಇಚ್ಛೆಪಡುವುದೂ ಇಲ್ಲ, ತನಗಿಂತ ಹೆಚ್ಚು ಯೋಗ್ಯತೆ ಯುಳ್ಳವರಿಗೆ ಹೆಚ್ಚು ಆನಂದ ಲಭಿಸಿದುದಕ್ಕಾಗಿ ಕರುಬುವುದೂ ಇಲ್ಲ. ಇದಕ್ಕೂ ಕಾರಣವಿಶೇಷವಿದೆ.

ತೈತ್ತಿರೀಯೋಪನಿಷತ್ತಿನ ಪ್ರಕಾರ ಮುಕ್ತಿಯಲ್ಲಿ ಮನುಷ್ಯೋತ್ತಮರೇ ಕಟ್ಟಕಡೆಯ ಶ್ರೇಣಿಯವರು. ಇವರಿಗೆ ದೊರಕುವ (ಕಟ್ಟಕಡೆಯದೆನಿಸಿ-ಕೊಳ್ಳುವ) ಸ್ವರೂಪಾನಂದದಿಂದಲೇ ಉಪನಿಷತ್ತು ಆನಂದತಾರತಮ್ಯವನ್ನು ವಿವರಿಸುತ್ತದೆ. ತ್ರೇತಾಯುಗದಲ್ಲಿ ಇಡೀ ಭೂಮಂಡಲವನ್ನು—ಅದರಲ್ಲೂ, ಧನಧಾನ್ಯಗಳಿಂದ ಸಮೃದ್ಧವಾದ, ನಿಷ್ಕಂಟಕವಾದ ಇಡೀ ಭೂಮಂಡಲ-ವನ್ನು—ಎಂದು ಒತ್ತಿ ಹೇಳುತ್ತದೆ. ಆಳುವ ಒಬ್ಬ ಚಕ್ರವರ್ತಿಗೆ ಏನು ಆನಂದಾನುಭವವಿರುತ್ತದೋ ಅದೇ ಅತ್ಯಂತ ಕನಿಷ್ಠನಾದ ಮುಕ್ತನು ಅನುಭವಿಸುವ ಸ್ವರೂಪಾನಂದ. ಅದಕ್ಕೂ ಹೆಚ್ಚಾಗಿ ಈ ಸ್ವರೂಪಾನಂದಕ್ಕೆ ಹಾನಿವೃದ್ಧಿಗಳಾಗಲಿ, ರೋಗ-ರುಜಿನ, ಕಷ್ಟ-ಕಾರ್ಪಣ್ಯ, ದುಃಖಾನಿಷ್ಟಗಳೇ ಮೊದಲಾದ ಯಾವ ವಿಧವಾದ ಕುಂದುಕೊರತೆಯೂ ಲವಲೇಶವೂ ಇರುವು-ದಿಲ್ಲ. ಅವನಿಗೆ ಬೇಕು-ಬೇಕಾದ ಸಕಲೇಷ್ಟಾರ್ಥಗಳೂ ಸಂಕಲ್ಪಮಾತ್ರ-

ದಿಂದಲೇ ಲಭಿಸುತ್ತವೆ ಎಂಬುದರ ಕಿಂಚಿತ್ ವರ್ಣನೆ ಛಾಂದೋಗ್ಯೋಪ-ನಿಷತ್ತಿನಲ್ಲಿ (೮ ಅಧ್ಯಾ. ೨ನೇ ಖಂಡ, ೧–೧೦ಕಂಡಿಕೆಗಳಲ್ಲಿ) ಬಂದಿದೆ. ಇಂಥಾ ಸೌಖ್ಯವನ್ನು (ಆನಂದವನ್ನು) ಅವನು ನಿತ್ಯಯೌವನಯುಕ್ತನಾಗಿ ಅನಂತಕಾಲದವರೆಗೆ ಅನುಭವಿಸುತ್ತಲೇ ಇರುವನು. ಇದಕ್ಕೂ ಹೆಚ್ಚಾಗಿ ಒಂದು ಸರಿ ಮೋಕ್ಷಕ್ಕೆ ಹೋದ ಬಳಿಕ ಪುನಃ ಸಂಸಾರಕ್ಕೆ—ಜನನ-ಮರಣಗಳ ಗೋಳಾಟಕ್ಕೆ—ಹಿಂದಿರುಗುವ ಪ್ರಸಕ್ತಿಯೇ ಇಲ್ಲವೆಂಬುದನ್ನು 'ಓಂ ಅನಾ-ವೃತ್ತಿಃ ಶಬ್ದಾದನಾವೃತ್ತಿಃ ಶಬ್ದಾತ್ ಓಂ' ಎಂಬ ಕಟ್ಟಕಡೆಯ (೪/೪/೨೩) ಬ್ರಹ್ಮಸೂತ್ರವು ದ್ವಿರುಕ್ತಿಯಿಂದ ಅವಧಾರಣಾಪೂರ್ವಕವಾಗಿ ಹೇಳುತ್ತದೆ. ಇವೆಲ್ಲವೂ ಆ ಮೋಕ್ಷಸೌಖ್ಯದ ಪ್ರಾಶಸ್ತ್ಯಗಳು.

**ಇ) ಚತುರ್ವಿಧ ಮುಕ್ತಿ**—ಮುಕ್ತಿಯು ಹಿಂದೆ ಖಂಡ 144ರಲ್ಲಿ ಹೇಳಿದಂತೆ 1. ಸಾಯುಜ್ಯ, 2. ಸಾಮೀಪ್ಯ, 3. ಸಾಲೋಕ್ಯ, 4. ಸಾರೂಪ್ಯ ಎಂದು ನಾಲ್ಕು ವಿಧವಾಗಿದೆ. ವಿಷ್ಣುವಿನ ಸಮೀಪದಲ್ಲೇ ಇರು-ವುದು ಸಾಮೀಪ್ಯ. ಅವನ ಲೋಕವಾದ ವೈಕುಂಠದಲ್ಲೇ ವಾಸಮಾಡುವುದು ಸಾಲೋಕ್ಯ. ಅವನಂತೆ ಚಕ್ರಶಂಖಾದ್ಯಾಯುಧಗಳನ್ನು ಧರಿಸುವುದೂ ದೋಷರಹಿತವೂ ನಾಶರಹಿತವೂ ಜ್ಞಾನಾನಂದಮಯವೂ ಆದ ಸ್ವರೂಪದೇಹ ಧರಿಸುವುದು ಸಾರೂಪ್ಯ. 'ಬ್ರಹ್ಮಣಾ ಪಶ್ಯತಿ ಬ್ರಹ್ಮಣಾ ಶೃಣೋತಿ ಬ್ರಹ್ಮ-ಣೈವೇದಂ ಸರ್ವಮನುಭವತಿ' ಎಂದು ಮಾಧ್ಯಂದಿನಾಯನಶ್ರುತಿ ಹೇಳುವಂತೆ ವಿಷ್ಣುವಿನಿಂದಲೇ ನೋಡುವುದು ವಿಷ್ಣುವಿನಿಂದಲೇ ಕೇಳುವುದು ಆ ಪರಬ್ರಹ್ಮನಾದ ವಿಷ್ಣುವಿನೊಡನೆಯೇ ಸಕಲಭೋಗಗಳನ್ನೂ ಅನುಭವಿಸುವುದೇ ಸಾಯುಜ್ಯಮುಕ್ತಿ. (ಹೆಚ್ಚಿನ ವಿಚಾರಗಳಿಗೆ ಬ್ರಹ್ಮಸೂತ್ರಗಳಲ್ಲಿ ೪ ಅಧ್ಯಾ. ೪ಪಾ. ೫ನೇ ಬ್ರಾಹ್ಮಾಧಿಕರಣ ನೋಡಿ.)

**ಈ) ಆನಂದತಾರತಮ್ಯ**—ಈ ವಿಷಯವು ಮುಖ್ಯವಾಗಿ (ಮೇಲೆ ಹೇಳಿದಂತೆ, (ಪುಟ ೨೦೮) ತೈತ್ತಿರೀಯೋಪನಿಷತ್ತಿನಲ್ಲೂ ಬೃಹದಾರಣ್ಯ-ಕೋಪನಿಷತ್ತಿನಲ್ಲೂ ಬಂದಿದೆ. ಮೋಕ್ಷದಲ್ಲೂ ತಾರತಮ್ಯವುಂಟೆಂಬುದು ಮಧ್ವಮತದ ಮುಖ್ಯಸಿದ್ಧಾಂತಗಳಲ್ಲೇ ಒಂದು ಮುಖ್ಯವಾದ ಸಿದ್ಧಾಂತ ; ವಿಷ್ಣುಸರ್ವೋತ್ತಮತ್ವಜ್ಞಾನಕ್ಕೆ ಇದೇ ಒಂದು ತಳಪಾಯದ ಮುಖ್ಯ

ಕಲ್ಲಿನಂತಿದೆ. ಇರಲಿ, ಮೋಕ್ಷದಲ್ಲಿ ಮುಖ್ಯವಾಗಿ ಹನ್ನೊಂದು ಶ್ರೇಣಿಗಳಿವೆ. ಮನುಷ್ಯೋತ್ತಮರೇ ಎಲ್ಲರಿಗಿಂತ ಕೆಳಗಿನ ಶ್ರೇಣಿಯವರು. ಅವರ ಮೇಲಿನ ಪ್ರತಿಯೊಂದು ಶ್ರೇಣಿಯೂ ನೂರುನೂರುಪಟ್ಟು ಹೆಚ್ಚು-ಹೆಚ್ಚು ಆನಂದ-ವನ್ನು ಅನುಭವಿಸುವ ಶ್ರೇಣಿಗಳು. ಕ್ರಮವಾಗಿ ಆ ಹನ್ನೊಂದು ಶ್ರೇಣಿಗಳು ಯಾವುವೆಂದರೆ 1. ಮನುಷ್ಯೋತ್ತಮರು, 2. ಮನುಷ್ಯಗಂಧರ್ವರು, 3. ದೇವಗಂಧರ್ವರು, 4. ಚಿರಪಿತೃಗಳು, 5. ಆಜಾನಜದೇವತೆಗಳು, 6. ಕರ್ಮಜದೇವತೆಗಳು, 7. ತತ್ವಾಭಿಮಾನಿದೇವತೆಗಳು, 8. ದಕ್ಷ-ಪ್ರಜೇಶ್ವರ, 9. ದೇವೇಂದ್ರ, 10. ಮಹಾದೇವರು (ರುದ್ರದೇವರು). ಮತ್ತು ಕೊನೆಯಲ್ಲಿ ಎಲ್ಲರಿಗೂ ಶ್ರೇಷ್ಠರಾದ 11. ಬ್ರಹ್ಮದೇವರು. ಮೇಲೆ ಹೇಳಿದಂತೆ ಇಡೀ ಭೂಮಂಡಲವನ್ನು ಆಳುವ ತ್ರೇತಾಯುಗದ ಒಬ್ಬ ಚಕ್ರ-ವರ್ತಿಯ ಆನಂದವೇ ಕಟ್ಟಕಡೆಯ ಮನುಷ್ಯೋತ್ತಮನ ಸ್ವರೂಪಾನಂದ-ವಾದ್ದರಿಂದ ಚತುರ್ಮುಖಬ್ರಹ್ಮದೇವರು ಮುಕ್ತಿಯಲ್ಲಿ ಅನುಭವಿಸುವ ಆನಂದವು ಆ ಆನಂದಕ್ಕಿಂತ 100000000000000000000 (ಒಂದರ ಮುಂದೆ ಇಪ್ಪತ್ತು ಸೊನ್ನೆ ಸೇರಿಸಿದರೆ ಆಗುವಷ್ಟು) ಪಟ್ಟು ಹೆಚ್ಚಾಗಿರುತ್ತದೆ. ಆದ್ದರಿಂದಲೇ ಅವರಿಗೆ **ಶತಾನಂದ**ರೆಂದು ಹೆಸರು. ಇಂಥಾ ಅನಂತಾನಂತ ಕೋಟಿ ಬ್ರಹ್ಮರುಗಳ ಮತ್ತು ಎಲ್ಲ ಮುಕ್ತರ ಆನಂದ ಸೇರಿದರೂ ಪರಮಾತ್ಮನ ಆನಂದವೆಂಬ ಮಹಾಸಾಗರದಲ್ಲಿ ಒಂದು ಹನಿಯೂ ಸಹ ಆಗುವುದಿಲ್ಲವೆಂದು ಬೃಹದಾರಣ್ಯಕಶ್ರುತಿಯು (೬ಅ. ೩ಬ್ರಾ. ೩೨ಕಂಡಿಕೆ, 'ಏತಸ್ಯೈವಾನಂದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ') ಹೇಳು-ತ್ತದೆ. ಇನ್ನೊಂದು ವಿಶೇಷವೇನೆಂದರೆ ಮುಕ್ತರು ಯಾರೇ ಆಗಲಿ, ಬ್ರಹ್ಮ-ದೇವರೂ ಸಹ, ಭಗವಂತ ಶ್ರೀಹರಿಗೆ ಇರುವ ಜಗತ್ಸೃಷ್ಟ್ಯಾದಿ ಯಾವ ಮಹಿಮೆಯ ಕಿಂಚಿದಂಶವನ್ನಾಗಲಿ ಲಕ್ಷ್ಮೀಪತಿತ್ವರೂಪಮಹಿಮೆಯನ್ನಾಗಲಿ ಯಾವ ಕಾಲಕ್ಕೂ ಹೊಂದಲು ಸಾಧ್ಯವಿಲ್ಲ—ಮಿಕ್ಕ ಸೌಖ್ಯಗಳನ್ನೆಲ್ಲ ಹೊಂದುವರೆಂಬ ವಿಷಯವನ್ನು 'ಓಂ ಜಗದ್ವ್ಯಾಪಾರವರ್ಜಂ ಓಂ' ಎಂಬ ಬ್ರಹ್ಮಸೂತ್ರವು (೪/೪/೧೭) ಹೇಳುತ್ತದೆ. ಇಷ್ಟು ಹೇಳಿ ಈ ವಿಚಾರವನ್ನು ಮುಗಿಸಬಹುದು.

ಇಂಥಾ ಮೋಕ್ಷಸೌಖ್ಯವು ಶ್ರೀಹರಿವಾಯುಗಳ ಸೇವೆಯಿಂದ ಲಭಿಸುವ ಅವರಿಬ್ಬರ ಅತ್ಯರ್ಥಪ್ರಸಾದದಿಂದಲೇ ದೊರಕುವುದಾದ ಆ ಹರಿವಾಯು-ಗಳಿಬ್ಬರೂ ನನಗೆ ತಮ್ಮ ಪಾದಾರವಿಂದಗಳಲ್ಲಿ ನಿರಂತರವಾಗಿ ಭಕ್ತಿಯನ್ನು ಜನ್ಮಜನ್ಮಾಂತರದಲ್ಲೂ ಅನುಗ್ರಹಿಸಲೆಂದು ಪಂಡಿತಾಚಾರ್ಯರು ಇರಿಂದ ಲನೇ ಶ್ಲೋಕಗಳಲ್ಲಿ ಪ್ರಾರ್ಥಿಸಿಕೊಂಡಿದ್ದಾರೆಂದು ಹಿಂದಿನ ಶ್ಲೋಕಗಳೊಡನೆ ಸಂಬಂಧ ಹಚ್ಚಿಕೊಳ್ಳಬೇಕು.

## ಹನ್ನೊಂದನೆ ಶ್ಲೋಕ. ದ್ವೇಷಿಸುವವರಿಗೆ ಆಗುವ ದುಃಖಯಾತನೆ

**150. ಶ್ಲೋಕಕ್ಕೆ ಅವತಾರಿಕೆ**—ಹೀಗೆ ಎರಡು ಶ್ಲೋಕಗಳಲ್ಲಿ ಭಕ್ತಿ ಮಾಡುವವರಿಗೆ ಏನು ಗತಿಯಾಗುತ್ತದೆಂಬುದನ್ನು ವರ್ಣಿಸಿದ ಬಳಿಕ ಈಗ 'ಉತ್ತಪ್ತ—' ಎಂಬ ಹನ್ನೊಂದನೇ ಶ್ಲೋಕದಲ್ಲಿ ಆ ಹರಿ-ವಾಯು-ಗಳನ್ನು ದ್ವೇಷಿಸುವವರಿಗೆ ಅಂಧಂತಮಸ್ಸಿನಲ್ಲಿ ದುಃಖಪ್ರಾಪ್ತಿಯಾಗುವುದೆಂದು ಹೇಳುತ್ತಾರೆ (ಕಕ. ವಿ.) ಈ ಪ್ರಕಾರ ಹರಿವಾಯುಗಳಲ್ಲಿ ಭಕ್ತಿ ಮಾಡುವವ-ರಿಗೆ ಫಲವನ್ನು ನಿರೂಪಿಸಿ ಈ ದ್ವೇಷ ಮಾಡುವವರಿಗೆ ಲಭಿಸುವ ಫಲವನ್ನು ಹೇಳುತ್ತಾರೆ (ಭ. ಪುರಾ.)

**ಉತ್ತಪ್ತಾತ್ಯುತ್ಕಟತ್ವಿಟ್, ಪ್ರಕಟ-ಕಟಕಟ-**
**ಧ್ವಾನ-ಸಂಘಟ್ಟನೋದ್ಯದ್-**
**ವಿದ್ಯುದ್-ವ್ಯೂಢ-ಸ್ಫುಲಿಂಗ—ಪ್ರಕರ-ವಿಕಿರಣೋತ್-**
**ಕ್ವಾಥಿತೇ ಬಾಧಿತಾಂಗಾನ್ ।**
**ಉದ್ಗಾಢಂ ಪಾತ್ಯಮಾನಾ ತಮಸಿ ತತ ಇತಃ**
**ಕಿಂಕರೈಃ ಪಂಕಿಲೇ ತೇ**
**ಪಂಕ್ತಿರ್ ಗ್ರಾವ್ಣಾಂ ಗರಿಮ್ಣಾ ಗ್ಲಪಯತಿ ಹಿ ಭವದ್-**
**ದ್ವೇಷಿಣೋ ವಿದ್ವದಾದ್ಯ ॥ ೧೧ ॥**

**ಪದವಿಭಾಗ**—(ಈ ಶ್ಲೋಕದಲ್ಲಿಯೂ ಅರ್ಥಭೇದವಿಲ್ಲವಾದ್ದರಿಂದ ಒಂದೇ ರೀತಿ ಪದವಿಭಾಗ) ಉತ್ತಪ್ತಾತ್ಯುತ್ಕಟತ್ವಿಟ್, ಪ್ರಕಟ....ಕ್ವಾಥಿತೇ.

ಬಾಧಿತಾಂಗಾನ್, ಉದ್ಗಾಢಂ, ಪಾತ್ಯಮಾನಾ, ತಮಸಿ, ತತಃ, ಇತಃ, ಕಿಂಕರೈಃ, ಪಂಕಿಲೇ, ತೇ, ಪಂಕ್ತಿಃ, ಗ್ರಾವ್ಣಾಂ, ಗರಿಮ್ಣಾ, ಗ್ಲಪಯತಿ, ಹಿ, ಭವದ್ದ್ವೇಷಿಣಃ, ವಿದ್ವದಾದ್ಯ.

**151. ಶ್ಲೋಕದ ವಿಶ್ಲೇಷಣೆ**—ಈ ಶ್ಲೋಕದಲ್ಲಿರುವ ಕಡೆಯ ಪದ 'ವಿದ್ವದಾದ್ಯ' ಎಂಬುದು ಹರಿ-ವಾಯುಗಳ ಸಂಬೋಧನೆ, ಹೇ ವಿದ್ವದ್-ವರೇಣ್ಯ, ಹೇ ಸರ್ವಜ್ಞಶಿಖಾಮಣೇ ಎಂದರ್ಥ. ಗ್ರಾವ್ಣಾಂ ಪಂಕ್ತಿಃ–ಕಲ್ಲುಗಳ ಸಾಲು ಎಂಬುದು ಕರ್ತೃಪದ. ಭವದ್‌ದ್ವೇಷಿಣಃ–ನಿಮ್ಮ ದ್ವೇಷಿಗಳನ್ನು ಅರ್ಥಾತ್ ಯಾರು ನಿಮ್ಮಲ್ಲಿ ದ್ವೇಷಮಾಡುತ್ತಾರೋ ಅವರನ್ನು—ಎಂಬುದು ಕರ್ಮಪದ. ತಮಸಿ–ಅಂಧಂತಮಸ್ಸಿನಲ್ಲಿ; ಗ್ಲಪಯತಿ–ಗೋಳಾಡಿಸುತ್ತದೆ, ವಿಚಿತ್ರವಾಗಿ ಹಿಂಸೆಪಡಿಸುತ್ತದೆ ಅಥವಾ ಬಳಲಿಸುತ್ತದೆ ಎಂಬುದು ಕ್ರಿಯಾಪದ. ಹೇಗೆ (ಯಾವ ಸಾಧನದಿಂದ) ಬಳಲಿಸುತ್ತದೆ ಎಂದರೆ ಗರಿಮ್ಣಾ–ಹೊರಲಾಗದ ಮಹಾಭಾರದಿಂದ ಎಂಬುದು ಕ್ರಿಯೆಗೆ ಕರಣಕಾರಕ. ಹೀಗೆ ಒಟ್ಟಿನಲ್ಲಿ—ಹೇ ವಿದ್ವದಾದ್ಯ ! ಗ್ರಾವ್ಣಾಂ ಪಂಕ್ತಿಃ ಭವದ್ದ್ವೇಷಿಣಃ ತಮಸಿ ಗರಿಮ್ಣಾ ಗ್ಲಪಯತಿ–ಹೇ ಸರ್ವಜ್ಞಶಿಖಾಮಣಿಗಳಾದ ಶ್ರೀಹರಿ-ವಾಯುಗಳೇ! ಕಲ್ಲುಗಳ ರಾಶಿಯು ನಿಮ್ಮಲ್ಲಿ ದ್ವೇಷಮಾಡುವ ಅಧಮರನ್ನು (ನೀಚರನ್ನು) ಅಂಧಂ-ತಮಸ್ಸಿನಲ್ಲಿ ತನ್ನ ಮಹಾಭಾರದ ಹೊರೆಯಿಂದ ಅದುಮಿ ಕಿರ್ರೋಮರ್ರೋ ಎನ್ನುವಂತೆ ಗೋಳಾಡಿಸಿಬಿಡುತ್ತದೆ ಎಂಬುದೇ ಈ ಶ್ಲೋಕದ ಮುಖ್ಯಾಭಿ-ಪ್ರಾಯ—

1. ಉತ್ತಪ್ತಾತ್ಯುತ್ಕಟತ್ವಿಟ್, 2. ಉದ್ಗಾಢಂ ಪಾತ್ಯಮಾನಾ ಎಂಬ ಎರಡೂ ಪಂಕ್ತಿಃ ಎಂಬುದಕ್ಕೆ ವಿಶೇಷಣಗಳು. 1. ಪ್ರಕಟ-ಕಟಕಟ.... ಕ್ವಾಥಿತೇ, 2. ಪಂಕಿಲೇ ಎಂಬ ಎರಡೂ ತಮಸಿ ಶಬ್ದದ ವಿಶೇಷಣಗಳು. ತೇ ಕಿಂಕರೈಃ ತತಃ ಇತಃ ಪ್ರಾತ್ಯಮಾನಾ ಎಂದು ಜೋಡಿಸಿಕೊಳ್ಳ-ಬೇಕು. ಬಾಧಿತಾಂಗಾನ್ ಎಂಬುದು ಭವದ್ದ್ವೇಷಿಣಃ ಎಂಬುದರ ವಿಶೇಷಣ. ಹಿ-ಶಬ್ದವು ಇಲ್ಲಿ ಹೇಳಿದ ವಿಚಾರಗಳು ಪ್ರಮಾಣಸಿದ್ಧವೆಂಬುದನ್ನು ಸಮರ್ಥಿಸುತ್ತಾ ಪ್ರಮಾಣಪ್ರಸಿದ್ಧಿಯನ್ನು ಸೂಚಿಸುತ್ತದೆ.

ಪಂಕ್ತಿಶಬ್ದ ಸಂಸ್ಕೃತದಲ್ಲಿ ಸ್ತ್ರೀಲಿಂಗ. ಅದಕ್ಕೆ ಅನುಗುಣವಾಗಿ 'ಉತ್ತಪ್ತಾ....ತ್ವಿಟ್' ಎಂಬುದೂ ಪಾತ್ಯಮಾನಾ—ಎಂಬುವೂ ಸ್ತ್ರೀಲಿಂಗ.

ತ್ವಿಟ್ ಸಂಸ್ಕೃತದಲ್ಲಿ ಷಕಾರಾಂತ ಸ್ತ್ರೀಲಿಂಗ ಶಬ್ದ; ಇದಕ್ಕೆ ತ್ವಿಟ್ । ತ್ವಿಷೌ । ತ್ವಿಷಃ ಇತ್ಯಾದಿ ರೂಪಗಳು. ಇಲ್ಲಿ ಬಹುವ್ರೀಹಿ ಸಮಾಸದ ಕೊನೆಯ ಪದವಾಗಿದೆ. **ತಮಸಿ** ಸಪ್ತಮ್ಯೇಕವಚನರೂಪ ; ತಮಸ್ ಶಬ್ದ ಮನಸ್ ಶಬ್ದದಂತೆ ನಪುಂಸಕಲಿಂಗ ಇಲ್ಲಿ ಅಂಧಂತಮಸ್ ಎಂಬ ನಿತ್ಯನರಕಕ್ಕೆ ವಾಚಕವಾಗಿದೆ. ಉದ್ಗಾಢಂ ಎಂಬುದು ಪಾತ್ಯಮಾನಾ–ಕ್ಕೆ ಕ್ರಿಯಾ-ವಿಶೇಷಣ. **ಗ್ರಾವ್ಣಾಂ** ನಕಾರಾಂತ ಪುಲ್ಲಿಂಗ ಗ್ರಾವನ್ ಶಬ್ದದ ಷಷ್ಠೀ-ಬಹುವಚನರೂಪ. ಗ್ರಾವಾ ! ಗ್ರಾವಾಣೌ । ಗ್ರಾವಾಣಃ ಎಂದು ರಾಜನ್ ಶಬ್ದದಂತೆ ಇದರ ರೂಪಗಳು.

**152. ರೂಪನಿಷ್ಪತ್ತಿ—೧. ಪಾತ್ಯಮಾನಾ** ಎಂಬುದು ಪತ್ (ಭ್ವಾ. ಪ.) ಧಾತುವಿನ ಪ್ರೇರಣಾರ್ಥದಲ್ಲಿ ಕರ್ಮಣಿ ವರ್ತಮಾನ ಕೃದಂತ-ರೂಪ. ಪತ್‌ಗೆ ಪ್ರೇರಣಾರ್ಥ ಣಿಚ್ ಬಂದು ಪಾತ್ ಆಗುತ್ತದೆ ; ಕರ್ಮಣಿ ರೂಪವಾದುದರಿಂದ **ಯ**ಕಾರ ಬಂದಿದೆ. ಕರ್ಮಣಿ ಪ್ರಯೋಗದಲ್ಲಿ ಆತ್ಮನೇಪದ ಪ್ರತ್ಯಯಗಳು ಮಾತ್ರವೇ ಬರುವುದರಿಂದ ವರ್ತಮಾನ ಕೃದಂತ ಪ್ರತ್ಯಯ ಶಾನಚ್ (ಆನ) ಬರಲು ಮುಕಾರಾಗಮವೂ ಬರಲು ಪಾತ್ಯಮಾನಾ ಎಂದಾಗಿದೆ. ಆದ್ದರಿಂದ ಇದಕ್ಕೆ 'ಬೀಳಿಸಲ್ಪಡುತ್ತಿರುವ' ಎಂದರ್ಥ. ಇದು ಗ್ರಾವ್ಣಾಂ ಪಂಕ್ತಿಃಗೆ ವಿಶೇಷಣ. **೨. ಕಿಂಕರೈಃ** । ಕಿಂಚಿತ್–ಕುತ್ಸಿತಮಪಿ ಕುರ್ವಂತೀತಿ ಕಿಂಕರಾಃ, + ತೈಃ । ಕಿಂ ಎಂದರೆ ಏನು ಬೇಕಾದರೂ, ಕುತ್ಸಿತ-ವಾದ ಕೆಲಸವನ್ನೂ, ಕರ–ಮಾಡುವವರು ಎಂಬ ವ್ಯುತ್ಪತ್ತಿಯಿಂದ ಭೃತ್ಯ-ರಿಗೆ ಅಥವಾ ಸೇವಕರಿಗೆ ಕಿಂಕರರೆಂದು ಹೆಸರು. 'ಕಿಂಯತ್ತದ್ಬಹುಷು ಕೃಞೋಽಜ್ವಿಧಾನಮ್' (ಪಾ. ೩/೨/೨೧) ಎಂಬ ವಾರ್ತಿಕದಂತೆ ಕಿಂ-ಯೋಗ ಬಂದಿರುವುದರಿಂದ ಕೃ ಧಾತುವಿನ ಮೇಲೆ ಅಚ್ ಪ್ರತ್ಯಯ ಬಂದಿದೆ.

'ಭೃತ್ಯಾ ದಾಸೇಯ–ದಾಸೇರ—ದಾಸ–ಗೋಪ್ಯಕ–ಚೇಟಕಾಃ ।
ನಿಯೋಜ್ಯ–**ಕಿಂಕರ**–ಪ್ರೈಷ್ಯ—ಭುಜಿಷ್ಯ–ಪರಿಚಾರಿಕಾಃ ॥'

ಎಂದು ಅಮರ. **೩. ಪಂಕಿಲೇ।** ಪಂಕ ಎಂದರೆ ಕೆಸರು. 'ಪಂಕೋಽಸ್ತ್ರೀ ಕರ್ದಮೇ ಪಾಪೇ' ಎಂದು ಮೇದಿನೀಕೋಶದ ಪ್ರಕಾರ ಪಂಕಃ ಅಥವಾ ಪಂಕಂ ಎಂದರೆ ಕೆಸರು ಮತ್ತು ಪಾಪ ಎಂದರ್ಥ. 'ನಿಷದ್ವರಸ್ತು ಜಂಬಾಲಃ

ಪಂಕೋಽಸ್ತ್ರೀ ಶಾದ–ಕರ್ದಮೌ' ಎಂದು ಅಮರದಲ್ಲಿ ಅದಕ್ಕೆ ಐದು ಪರ್ಯಾಯಗಳನ್ನು ಹೇಳಿದೆ. ಪಚ್ಯತೇ–ವ್ಯಾಪ್ಯತೇ ಕ್ಲಿದ್ಯತೇ ವಾಽನೇನೇತಿ ಪಂಕಃ, ಪಂಕಂ ವಾ । ಯಾವುದು ಅಂಟಿಕೊಂಡು ಹರಡಿಕೊಳ್ಳುತ್ತದೋ ಅಥವಾ ಮನಸ್ಸಿಗೆ (ಕ್ಲಿದ್ಯತೇ) ಜಿಗುಪ್ಸೆಯನ್ನುಂಟುಮಾಡುತ್ತದೋ ಅದೇ ಪಂಕ–ಕೆಸರು. 'ಪಚಿ ವಿಸ್ತಾರೇ, ಅಥವಾ ಪಚಿ ವ್ಯಕ್ತೀಕರಣೇ ಎಂಬ ಧಾತುವಿನ ಮೇಲೆ ಕರ್ಮಣಿ ಘಞ್ (ಪಾ. ೩/೩/೧೯) ಅಥವಾ 'ಹಲಶ್ಚ' (ಪಾ. ೩/೩/೧೨೧) ಎಂಬ ಸೂತ್ರದಂತೆ ಕರಣಾರ್ಥದಲ್ಲಿ ಘಞ್ ಬಂದಿದೆ. ಪಂಕೋಽಸ್ಮಿನ್ನಸ್ತೀತಿ ಪಂಕಿಲಮ್ ; ತಸ್ಮಿನ್ । 'ಅದು ಇದರಲ್ಲಿದೆ' 'ಇದ-ರಲ್ಲುಂಟು' ಎಂಬ ಅರ್ಥದಲ್ಲಿ ಪಿಚ್ಛಾದಿಗಣಕ್ಕೆ ಸೇರಿದ ಕಾರಣ ಪಾ.೫/೨/೧೦೦ ಎಂಬ ಸೂತ್ರದ ಪ್ರಕಾರ ಇಲಚ್ ಪ್ರತ್ಯಯ ಬಂದಿದೆ. • ಆದಕಾರಣ ಪಂಕಿಲೇ ಎಂದರೆ ಕೆಸರುಮಯವಾದ ಅಥವಾ ಕೆಸರಿನಿಂದ ತುಂಬಿದ ಎಂದರ್ಥ. **೪. ಗರಿಮ್ಣಾ** ನಕಾರಾಂತ ಪುಲ್ಲಿಂಗ ಗರಿಮನ್ ಶಬ್ದದ ತೃತೀಯೈಕವಚನ ರೂಪ–ಭಾರದ ಹೊರೆಯಿಂದ ಎಂದರ್ಥ. ಗರಿಮಾ । ಗರಿಮಾಣೌ । ಗರಿ-ಮಾಣಃ ಇತ್ಯಾದಿ ರೂಪಗಳು ರಾಜನ್–ಶಬ್ದದಂತೆ. ಗುರೋರ್ಭಾವಃ ಗರಿಮಾ+ತೇನ–ಗರಿಮ್ಣಾ. ಗುರು ಎಂದರೆ ಭಾರವಾದ ಎಂದರ್ಥ. ಆದರ ಭಾವ ಎಂಬ ಅರ್ಥದಲ್ಲಿ 'ಪೃಥ್ವಾದಿಭ್ಯ ಇಮನಿಜ್ವಾ' (ಪಾ ೫/೧/೧೨೨) ಎಂಬ ಸೂತ್ರದಂತೆ ಇಮನ್ ಪ್ರತ್ಯಯ ಬರಲು 'ಪ್ರಿಯಸ್ಥಿರ—' (ಪಾ. ೬/೪/೧೫೭) ಎಂಬ ಸೂತ್ರದಂತೆ ಗುರು ಶಬ್ದಕ್ಕೆ ಗರ್ ಆದೇಶ ಬರಲು ಗರ್ + ಇಮನ್ ಸೇರಿ ಗರಿಮನ್ (ಪ್ರಥಮೈಕವಚನರೂಪ–ಗರಿಮಾ) ಎಂದಾಗುತ್ತದೆ. ಹೀಗೆ ಗರಿಮ್ಣಾ ಎಂದರೆ ಹೊರುವುದಕ್ಕೆ ಅಸಾಧ್ಯವಾದ, ಹೊರಲಾಗದ ಭಾರದಿಂದ ಎಂದರ್ಥ. **೫. ಗ್ಲಪಯತಿ ।** ಗ್ರಸು ಗ್ಲಸು ಅದನೇ (ಭ್ವಾ. ಆತ್ಮ)–ನುಂಗು, ಕಬಳಿಸು ಎಂಬ ಧಾತುವಿನ ಮೇಲೆ ಪ್ರೇರಣಾರ್ಥದಲ್ಲಿ ಣಿಚ್ ಪ್ರತ್ಯಯ ಬರಲು 'ಅರ್ತಿಹ್ರೀ—'(ಪಾ. ೭/೩/೩೬) ಎಂಬ ಸೂತ್ರದಂತೆ ಪುಗಾಗಮ ಬರುತ್ತದೆ. ಅಥವಾ ಛಲಾರಿ–ವಿಶ್ವಪತಿ ವ್ಯಾಖ್ಯಾನಕಾರರ ಪ್ರಕಾರ 'ಗ್ಲೈ ಮ್ಲೈ ಹರ್ಷಕ್ಷಯೇ' ಎಂಬ ಧಾತು ಗ್ರಹಣಮಾಡಬೇಕು. ಇದಕ್ಕೂ 'ಅರ್ತಿಹ್ರೀ—' ಎಂಬ ಸೂತ್ರದಂತೆ

ಪ್ರೇರಣಾರ್ಥದಲ್ಲಿ ಣಿಚ್ ಪ್ರತ್ಯಯವೂ ಪುಗಾಗಮವೂ ಬರುತ್ತದೆ. ಆಗ (ಕಕ. ತೋರಿಸುವಂತೆ) 'ಘಟಾದಯೋಃ ಫಣಾಂತಾ ಮಿತಃ' ಎಂದು ಗಣಪಾಠದ ಪ್ರಕಾರ ಮಿತ್ ಸಂಜ್ಞೆ ಬರುತ್ತದೆ. ಆಗ 'ಮಿತಾಂ ಹ್ರಸ್ವಃ' (ಪಾ. ೬/೪/೯೨) ಎಂಬ ಸೂತ್ರದಂತೆ ಹ್ರಸ್ವಸ್ವರವೇ ಇರುವುದರಿಂದ ಗ್ಲೈ (ಗ್ಲಸ) + ಣಿಚ್– ಗ್ಲ + ಪ + ಅಯ ಆಗಿ ಗ್ಲಪಯತಿ ಎಂಬ ರೂಪಸಿದ್ಧಿಯಾಗುತ್ತದೆ. ಗ್ಲಸ ಎಂಬ ಧಾತುವಾದರೆ ನುಂಗಿಬಿಡುವಂತೆ ಮಾಡುತ್ತದೆ. ಕಬಳಿಸುತ್ತದೆ ಎಂದೂ ಗ್ಲೈ ಧಾತುವಾದರೆ ಹಿಂಸೆಪಡಿಸುತ್ತದೆ ಎಂದೂ ಅರ್ಥವಾಗುತ್ತದೆ.

**೬. ಭವದ್-ದ್ವೇಷಿಣಃ** । ಭಾತೀತಿ ಭವಾನ್–ಪೂಜ್ಯಾರ್ಹನು ಎಂಬ ಅರ್ಥದಲ್ಲಿ ಭಾ ಧಾತು (ಅದಾ. ಪ.)ವಿನ ಮೇಲೆ ಡವತ್ ಎಂಬ ಉಣಾದಿ ಪ್ರತ್ಯಯ ಬಂದು (ಉ. ೧/೬೩) ಭವಾನ್ ಎಂದಾಗುತ್ತದೆ ; ಸ್ತ್ರೀಲಿಂಗದಲ್ಲಿ ಭವತೀ ಎಂದೂ, ನಪುಂಸಕದಲ್ಲಿ ಭವತ್ ಎಂದೂ ರೂಪಗಳಾಗುತ್ತವೆ. ಇದಕ್ಕೂ 'ನೀನು' (ಯುಷ್ಮತ್) ಎಂದೇ ಅರ್ಥವಿದ್ದರೂ ಕನ್ನಡದಲ್ಲಿ ನಾವು 'ತಾವು' ಎಂಬ ಶಬ್ದವನ್ನು ಗೌರವಾರ್ಥದಲ್ಲಿ 'ನೀವು' ಎಂಬುದಕ್ಕೆ ಬದಲಾಗಿ ಉಪಯೋಗಿಸುವಂತೆ ಕೇವಲ ಗೌರವಾರ್ಥದಲ್ಲಿ ಉಪಯೋಗಿಸುತ್ತಾರೆ. ಇಲ್ಲಿ ಇದು ಹರಿವಾಯುಗಳಿಬ್ಬರಿಗೂ ಅನ್ವಯಿಸುತ್ತದೆ. ಛ. ಪ್ರಕಾರ–ಭವತೋಃ ದ್ವೇಷಃ ಯೇಷಾಮಸ್ತೀತಿ ಭವದ್ದ್ವೇಷಿಣಃ + ತಾನ್ । ನಿಮ್ಮಲ್ಲಿ (ನಿಮ್ಮಿಬ್ಬರಲ್ಲಿ) ದ್ವೇಷಮಾಡುವವರನ್ನು ಎಂದರ್ಥ. ಅಥವಾ ಭವತಿ ದ್ವೇಷಃ–ಭವದ್ದ್ವೇಷಃ । ಭವದ್ದ್ವೇಷಃ । ಏಷಾ....ಏಷಾಮಸ್ತೀತಿ ಭವ ದ್ವೇಷಿಣಃ–ದ್ವೇಷ ಉಳ್ಳವರು ದ್ವೇಷಿಗಳು. 'ಅತ ಇನಿಠನೌ' (ಪಾ. ೫/೨/೧೧೫) ಎಂಬ ಸೂತ್ರದಂತೆ ಇನಿ ಪ್ರತ್ಯಯ ಬಂದಿದೆ. ಹರಿದ್ವೇಷವು ನಾನಾಬಗೆಯಾಗಿರುತ್ತದೆಯೆಂಬುದನ್ನು ಐತರೇಯಭಾಷ್ಯದಲ್ಲಿ (೩/೨/೪) ಸ್ಪಷ್ಟಪಡಿಸಿದ್ದಾರೆ. ಆ ಪೈಕಿ ಒಂಬತ್ತು ಬಹುಮುಖ್ಯವೆಂಬ ಅಭಿಪ್ರಾಯದಿಂದ ಕಕ. ವ್ಯಾಖ್ಯಾನಕಾರರು ಅವನ್ನು ಹೀಗೆ ತೋರಿಸಿದ್ದಾರೆ—ದ್ವೇಷಾ ನವವಿಧಾ—

ಜೀವಾಭೇದೋ ನಿರ್ಗುಣತ್ವಂ ಅಪೂರ್ಣಗುಣತಾ ತಥಾ ।
ಸಾಮ್ಯಾಧಿಕ್ಯೇ ತದನ್ಯೇಷಾಂ ಭೇದಸ್ತದ್ಗತ ಏವ ಚ ॥
ಪ್ರಾದುರ್ಭಾವವಿಪರ್ಯಾಸ—ಸ್ತದ್ಭಕ್ತದ್ವೇಷ ಏವ ಚ ।
ತತ್ಪ್ರಮಾಣಸ್ಯ ನಿಂದಾ ಚ ದ್ವೇಷಾ ಏತೇಽಖಿಲಾ ಮತಾಃ ॥

1. ಜೀವರಿಗೂ ವಿಷ್ಣುವಿಗೂ ಅಭೇದವೆಂದು ಹೇಳುವುದು ಅಥವಾ ತಿಳಿಯುವುದು. 2. ಆ ಪರಮಾತ್ಮ ನಿರ್ಗುಣ, ನಿರಾಕಾರ ಇತ್ಯಾದಿಯಾಗಿ ತಿಳಿಯುವುದು. 3. ಭಗವಂತ ಅನಂತಗುಣಪರಿಪೂರ್ಣನೆಂಬುದಕ್ಕೆ ವಿರುದ್ಧವಾಗಿ ಬೇರೆ ರೀತಿ ತಿಳಿಯುವುದು. 4. ಹರಿಹರಾದಿಗಳು ಸಮನೆಂದಾಗಲಿ ಬ್ರಹ್ಮ-ವಿಷ್ಣುಮಹೇಶ್ವರಾದಿ ತ್ರಿಮೂರ್ತಿಗಳೂ ಸರಿಸಮಾನರು ಇತ್ಯಾದಿ ರೀತಿಯಾಗಿ ಶ್ರೀಹರಿಗೆ ಸಮಾನರಾದವರು ಬೇರೊಬ್ಬರಿದ್ದಾರೆಂದು ತಿಳಿಯುವುದು. 5. ಅದಕ್ಕೂ ಬ್ರಹ್ಮರುದ್ರಗಣೇಶ ದೇವೀ (ಶಕ್ತಿ) ಮೊದಲಾದ ಬೇರೆಯವರಿಗಿಂತ ಶ್ರೀವಿಷ್ಣು ಕಡಿಮೆ (ಅವರ ಅಲ್ಪ) ಅಲ್ಪಬಲ–ಅಲ್ಪಶಕ್ತಿಯುಳ್ಳವನೆಂದು ತಿಳಿದು ವಿಷ್ಣುವಿನ ಅನಂತಶಕ್ತಿತ್ವವನ್ನು ತಿಳಿಯದಿರುವುದು ಅಥವಾ ವಿಷ್ಣುವನ್ನು ಹೀಯಾಳಿಸುವುದು. 6. ವಿಷ್ಣುವಿನ ಭಿನ್ನ ಭಿನ್ನ ರೂಪಗಳಿಗೂ ಅವತಾರಗಳಿಗೂ, ಅಂಗಾಂಗಗಳಿಗೂ ಗುಣಗಳಿಗೂ ಕ್ರಿಯೆಗಳು ಮೊದಲಾದ ಎಲ್ಲದಕ್ಕೂ ಭೇದವನ್ನು ತಿಳಿಯುವುದು. 7. ಅವನ ಅವತಾರಗಳಲ್ಲಿ ತಂದೆ-ತಾಯಿಗಳಿಂದ ಹುಟ್ಟುವುದು, ಸಾಯುವುದು, ಬೆಳೆಯುವುದು, ಅಥವಾ ಒಂದು ಅವತಾರ ಹೆಚ್ಚು, ಇನ್ನೊಂದು ಕಡಿಮೆ ಇತ್ಯಾದಿ ರೀತಿಯಾಗಿ ವ್ಯತ್ಯಾಸ ಮಾಡಿ ತಿಳಿದುಕೊಳ್ಳುವುದು. 8. ಹರಿಭಕ್ತರಲ್ಲಿ ದ್ವೇಷಮಾಡುವುದು. 9. ಆ ಭಗವಂತನ ಸ್ವರೂಪವನ್ನು ತಿಳಿಸಿಕೊಡುವ ವೇದಾದಿಗಳ—ಶಾಸ್ತ್ರಪುರಾಣಗಳ ನಿಂದೆ ಇವೆಲ್ಲವೂ ಮಹಾಅನರ್ಥಕ್ಕೆ ಕಾರಣವಾದ ದ್ವೇಷಗಳು ; ಇವುಗಳಿಂದ 'ಪ್ರಾಪ್ಯತೇಽನ್ಧಂತಮಃ ಕ್ರಮಾತ್' ಅಂಧಂತಮಸ್ಸಿಗೆ ಹೋಗುತ್ತಾನೆಂದು ಐತರೇಯಶ್ರುತಿ ಹೇಳುತ್ತದೆ.

೭. ವಿದ್ವದಾದ್ಯ—ವೇತ್ತೀತಿ ವಿದ್ವಾನ್–ತಿಳಿದವನಿಗೆ—ಶಾಸ್ತ್ರ (ಜ್ಞಾನ) ಪರಿಚಯವುಳ್ಳವನಿಗೇ ವಿದ್ವಾಂಸನೆಂದು ಹೆಸರು. ವಿದ ಜ್ಞಾನೇ (ಅದಾ. ಪ.) ಎಂಬ ಧಾತುವಿನ ಮೇಲೆ 'ವಿದೇರ್ವಸುಃ' (ಪಾ. ೭/೧/೩೬) ಎಂಬ ಸೂತ್ರದಂತೆ ವಸ್ ಪ್ರತ್ಯಯ ಬಂದು ವಿದ್+ವಸ್–ವಿದ್ವಸ್ (ಇದರ ಪ್ರಥಮೈಕವಚನರೂಪವೇ ವಿದ್ವಾನ್) ಎಂದಾಗಿದೆ. ಶ್ರೀಹರಿಗೆ ಅನ್ವಯಿಸುವಾಗ ತನ್ನನ್ನೂ ತನ್ನ ಬಿಟ್ಟು ಇತರ ಸರ್ವಸ್ವವನ್ನೂ ಸ್ವತಂತ್ರವಾಗಿ ಅನಾದಿನಿತ್ಯವಾಗಿ ಸಮಗ್ರವಾಗಿ ಬಲ್ಲವನು ಎಂದು ಯಾವ ಮಿತಿಯಿಲ್ಲ-

ದಂತೆ ಅರ್ಥ ಹೇಳಬೇಕು. ವಾಯುದೇವರಿಗೆ ಅನ್ವಯಿಸುವಾಗ (ನಖಸ್ತುತಿ ಪುಟ ೭೮-೭೯ರಲ್ಲಿ ಹೇಳಿದಂತೆ) 'ಭಗವದಿತರತ್ರ ಆಲೋಚನೇ ಸರ್ವ-ವಿಷಯಕ'ವಾದ ಎಂದು ಅರ್ಥ ಮಾಡಬೇಕು. ಆದೌ ಭವಃ ಆದ್ಯಃ। ಮೊದಲಲ್ಲಿ ಇರುವಂಥಾದ್ದು ಎಂದರೆ ಶ್ರೇಷ್ಠವಾದುದಕ್ಕೆ ಆದ್ಯ ಎಂದು ಹೆಸರು. ಆದಿಶಬ್ದವು ದಿಗಾದಿಗಣಕ್ಕೆ ಸೇರಿರುವುದರಿಂದ 'ದಿಗಾದಿಭ್ಯೋಯತ್' (ಪಾ. ೪/೩/೫೪) ಎಂಬ ಸೂತ್ರದಂತೆ ಭವಾರ್ಥದಲ್ಲಿ ಯತ್ ಪ್ರತ್ಯಯ ಬಂದಿದೆ. ವಿದುಷಾಂ ಆದ್ಯಃ-ಪ್ರಾಥಮಿಕಃ (ಕಕ. ವಿ.)-ಜ್ಞಾನಿಶ್ರೇಷ್ಠಃ (ಷ.); ತಸ್ಯ ಸಂಬುದ್ಧಿಃ-ವಿದ್ವದಾದ್ಯ ! ಹೇ ಸರ್ವಜ್ಞಶಿಖಾಮಣಿಗಳಾದ ಶ್ರೀಹರಿ-ವಾಯುಗಳೇ ಎಂದು ಅರ್ಥ. 'ವಿದ್ವಾನ್ ವಿಪಶ್ಚಿದ್ ದೋಷಜ್ಞಃ ಸನ್ ಸುಧೀಃ ಕೋವಿದೋ ಬುಧಃ।' 'ಪುಂಸ್ಯಾದಿಃ ಪೂರ್ವ-ಪೌರಸ್ತ್ಯ—ಪ್ರಥಮಾ-ಽಽದ್ಯಾ ಅಥಾಸ್ತ್ರಿಯಾಮ್' ಎಂದೂ ಅಮರ.

**153. ಅನ್ವಯ ಮತ್ತು ಪದಶಃ ಅರ್ಥ**—(ಅನ್ವಯಕ್ರಮವನ್ನು ಓದುವುದಕ್ಕೆ ಮೊದಲು ಇನ್ನೊಂದುಸಾರಿ ವಿಶ್ಲೇಷಣೆಯನ್ನು [ಖಂ. 151] ಓದಿಕೊಳ್ಳಿ.) ವಿದ್ವದಾದ್ಯ ! 1. ಉತ್ತಪ್ತಾತ್ಯುತ್ಕಟತ್ವಿಟ್ 2. ತೇ ಕಿಂಕರೈಃ ತತಇತಃ ಉದ್ಗಾಢಂ ಪಾತ್ಯಮಾನಾ ಗ್ರಾವ್ಣಾಂ ಪಂಕ್ತಿಃ (ಇದು ಕರ್ತೃಪದ). ೧. ಪ್ರಕಟ....ಕ್ವಾಥಿತೇ, ೨. ಪಂಕಿಲೇ ತಮಸಿ ಬಾಧಿತಾಂಗಾನ್ ಭವದ್ದ್ವೇಷಿಣಃ (ಇದು ಕರ್ಮಪದ). ಗರಿಮ್ಣಾ ಗ್ಲಪಯತಿ ಹಿ॥—ಎಂಬುದೇ ದಂಡಾನ್ವಯ. ಪುರಾ. ಪ್ರಕಾರ ಉತ್ತಪ್ತಾತ್ಯುತ್ಕಟತ್ವಿಟ್ ಎಂಬುದು ವಿದ್ವದಾದ್ಯ ಎಂಬ ಪದಕ್ಕೆ ವಿಶೇಷಣವೆಂದು ಯೋಜಿಸುವುದಕ್ಕೂ ಬರುತ್ತದೆ.

(ಅನ್ವಯಾರ್ಥ) [ಪುರಾ. ಪ್ರಕಾರ ಉತ್ತಪ್ತಾತ್ಯುತ್ಕಟತ್ವಿಟ್ ಎಂಬು-ದನ್ನು 'ವಿದ್ವದಾದ್ಯ' ಎಂಬುದಕ್ಕೆ ವಿಶೇಷಣವೆಂದು ಯೋಜಿಸಿದರೆ—ಬೆಳ್ಳಗೆ ಆಗುವವರೆಗೂ ಚೆನ್ನಾಗಿ ಕಾಯಿಸಿದ ಕಬ್ಬಿಣ ಮೊದಲಾದ ವಸ್ತುಗಳಂತೆ ಅತ್ಯಂತ ಪ್ರಖರವಾದ * ಕಾಂತಿಯುಳ್ಳ] ವಿದ್ವದಾದ್ಯ-ಸರ್ವಜ್ಞಶಿಖಾಮಣಿ-

*ವಿಜ್ಞಾನ ಯುಗವಾದ ಈ ಕಾಲದಲ್ಲಿ ಇದರ ಅರ್ಥವನ್ನು ವಿದ್ಯುದ್ದೀಪದ ನಿದರ್ಶನದಿಂದ ಅತ್ಯಂತ ಸ್ಪಷ್ಟವಾಗಿ ವಿವರಿಸಬಹುದು. ಟಂಗ್‌ಸ್ಟನ್ ಮೊದಲಾದ ಲೋಹಗಳು ಸ್ವಲ್ಪ ಚೆನ್ನಾಗಿ ಕಾಯಿಸಿದರೆ ಮೊದಲು ಕೆಂಪಾಗಿ ಕಾದು ಶಾಖವನ್ನು

ಗಳಾದ ಹೇ ಶ್ರೀಹರಿಯೇ ಮತ್ತು ಮುಖ್ಯಪ್ರಾಣನೇ! 1. ಉತ್ತ....ತ್ವಿಟ್— ಉತ್- ಉತ್ಕಟವಾಗಿ, ಬೆಳ್ಳಗೆ ಉರಿಯುವವರೆಗೂ, ತಪ್ತ-ಕಾಯಿಸಲ್ಪಟ್ಟ (ಶಾಖ ಮಾಡಲ್ಪಟ್ಟ) ವಸ್ತುವಿನಂತೆ, ಅತ್ಯುತ್ಕಟ-ಪ್ರಖರವಾದ ಅಥವಾ ಕಣ್ಣುಕೋರೈಸುವಂಥಾ ; ತ್ವಿಟ್-ಪ್ರಕಾಶವುಳ್ಳಂಥಾ ; 2. ತೇ-ನಿನ್ನ (ನಿಮ್ಮ) ; ಕಿಂಕರೈಃ-ಯಮಭಟರಿಂದ ; ತತಇತಃ-ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ (ಹೀಗೆ ಅತ್ತಿಂದಿತ್ತ) ; ಉದ್ಗಾಢಂ-ಬಹಳ ಬಲವಾಗಿ (ಧಢೀರನೆ ಅಥವಾ ಥಪ್ಪನೆ) ಪಾತ್ಯಮಾನಾ-ಬೀಳಿಸಲ್ಪಡುವ (ಎಳೆದಾಡಲ್ಪಡುವ ಅಥವಾ ಮೇಲಿಂದ ಕೆಳಕ್ಕೆ ಸುರಿಯಲ್ಪಡುತ್ತಿರುವ) ; ಗ್ರಾವ್ಣಾಂ ಪಂಕ್ತಿಃ-ಕಲ್ಲುಗಳ ಪಂಕ್ತಿಯು* 1. ಪ್ರಕಟ....ಕ್ವಾಥಿತೇ—ಪ್ರಕಟ-ಸ್ಪಷ್ಟವಾಗಿ ಕೇಳಿಸುವ, ಕಟಕಟ-ಧ್ವಾನ-ಕೊತಕೊತ ಕುದಿಯುವ ಧ್ವನಿಯಿಂದಲೂ, ಸಂಘಟ್ಟನ-ಕುದಿಯುವಾಗ ಕೆಳಗಿನಭಾಗ ಮೇಲೆ ಬರುತ್ತಲೂ ಮೇಲಿನ ಭಾಗ ಕೆಳಗೆ ಹೋಗುತ್ತಲೂ ಒಂದಕ್ಕೊಂದು ತಗಲಿ ಡಿಕ್ಕಿ ಹೊಡೆಯುತ್ತಲೂ ಇರುವ ರಭಸದ ತಿಕ್ಕಾಟದಿಂದ, ಉದ್ಯತ್-ಹೊರಚಿಮ್ಮುತ್ತಿರುವಂಥಾ, ವಿದ್ಯುತ್-ವಿದ್ಯುಚ್ಛಕ್ತಿಯ, ವ್ಯೂಢ-ಘರ್ಷಣೆಯಿಂದ ಹೊರಟ (ವಿಜ್ಞಾನಶಾಸ್ತ್ರದಂತೆ ಋಣಧ್ರುವ ವಿದ್ಯುತ್ಕಾಂಡಗಳು ಮಿಲನವಾದಾಗ ವಿದ್ಯುತ್ಕಿಡಿ ಹೊರಡುತ್ತದೆ), ಸ್ಫುಲಿಂಗ-ಕಿಡಿಗಳ, ಪ್ರಕರ-ಗುಂಪಿನ, ವಿಕಿರಣ-ಹೆಚ್ಚಾಗಿ ಹರಡುವಿಕೆಯಿಂದ (ವಿದ್ಯುತ್ತಿನಿಂದ ಬೆಸಿಗೆ ಹಾಕುವಾಗ ಬೆಳಕು ಹೊರಚಿಮ್ಮುವುದನ್ನು ನೋಡಿದರೆ ಈ ವಾಕ್ಯ ಸ್ಪಷ್ಟವಾಗಿ ಅರ್ಥವಾಗುತ್ತದೆ), ಉತ್-ಕ್ವಾಥಿತೇ-ಕೊತಕೊತ ಕುದಿಯುತ್ತಿರುವ ; ೨. ಪಂಕಿಲೇ-ಕೆಸರುಮಯವಾದ

---

ಮಾತ್ರ ಕೊಡುತ್ತವೆ. ಇನ್ನೂ ಹೆಚ್ಚಾಗಿ ಕಾಯಿಸಿದಾಗ ಬೆಳ್ಳಗೆ ಉರಿಯುತ್ತಾ ಬೆಳಕನ್ನು ಬೀರುತ್ತವೆ. ವಿದ್ಯುತ್ಪ್ರವಾಹದ ಒತ್ತಡವು ಅಥವಾ 'ಲೋಡ್' ಕಡಿಮೆಯಾದಾಗ ವಿದ್ಯುತ್ ಬಲ್ಬುಗಳು ಕೆಂಪಗೆ ಉರಿಯುವುದು ಎಲ್ಲರಿಗೂ ತಿಳಿದ ವಿಷಯ. ಆದಕಾರಣ ಪಂಡಿತಾಚಾರ್ಯರು ಉತ್+ತಪ್ತ ಆದಾಗ ಮಾತ್ರ ಅತ್ಯುತ್ಕಟ ತ್ವಿಟ್ ಬರುವುದೆಂದು ವರ್ಣಿಸಿದ್ದಾರೆಂದು ಗಮನಿಸಬೇಕಾದ ವಿಷಯ.

*ಭದ್ರಾವತಿಯ ಉಕ್ಕಿನ ಕಾರ್ಖಾನೆ ಮೊದಲಾದ ಸ್ಥಳಗಳಲ್ಲಿ ಕಬ್ಬಿಣದ ಕುಲುಮೆಯಿಂದ (ಬ್ಲಾಸ್ಟ್ ಫರ್ನೇಸ್‌ನಿಂದ) ಕಾದಕಬ್ಬಿಣ ಹೊರಗೆ ಬರುವುದನ್ನು ನೋಡಿದರೆ ಈ ಶ್ಲೋಕದ ಭಾವಾರ್ಥ ಮಂದಟ್ಟಾಗುತ್ತದೆ.

(ಕೆಸರು ಅಂಟಿಕೊಳ್ಳುವಂತೆ ಅಂಗಾಂಗಗಳಿಗೆ ಮೆತ್ತಿಕೊಳ್ಳುವಂಥಾ, ಅಥವಾ ಕೆಸರಿನಲ್ಲಿ ಕಾಲಿಟ್ಟರೆ ಒಳಗೆ ಹೂತುಕೊಂಡು ಕಾಲು ಎತ್ತುವುದಕ್ಕೇ ಬರದಂತೆ ಹೇಗೆ ಗೋಳಾಡಿಸುತ್ತದೋ ಅದರಂತೆ ಇರುವ ಎಂದು ಭಾವ) ; ತಮಸಿ–ಅಂಧಕಾರಮಯವಾದ ಅಂಧಂತಮಸ್ಸಿನಲ್ಲಿ ; ಬಾಧಿತಾಂಗಾನ್–ಹಿಂಸಿಸಲ್ಪಡುತ್ತಿರುವ ಸರ್ವಾವಯವಗಳುಳ್ಳ ; ಭವದ್-ದ್ವೇಷಿಣಃ–ನಿಮ್ಮಲ್ಲಿ ದ್ವೇಷ ಮಾಡುವ (ತಮೋಯೋಗ್ಯ) ಜನಗಳನ್ನು ; ಗರಿಮ್ಣಾ–ತನ್ನ ಹೊರಲಾಗದ ಅತಿಶಯವಾದ 'ಹೆಣಭಾರ'ದಿಂದ, ಗ್ಲಪಯತಿ–ಹಿಂಸಿಸಿ ಗೋಳಾಡಿಸುತ್ತದೆ (ಅಥವಾ 'ಹುರಿದು ಮುಕ್ಕುತ್ತದೆ') ಹಿ–ಇದೆಲ್ಲವೂ ಶಾಸ್ತ್ರಸಿದ್ಧವಾದ ವಿಷಯ.

ವಿಶ್ವಪತಿತೀರ್ಥರು ಪ್ರಕಟ....ಕ್ವಾಥಿತೇ ಎಂಬುದಕ್ಕೆ ಈ ಪ್ರಕಾರ ಅನೇಕ ರೀತಿ ಅನ್ವಯ–ಅರ್ಥ ತೋರಿಸುತ್ತಾರೆ:—ಪ್ರಕಟ....ಸಂಘಟ್ಟನ–ಕಟಕಟ ಎಂದು ಕುದಿಯುವ ಧ್ವನಿಯು ಕೇಳಿಸುವಂತೆ ಕರಗಿ ಕೆಳಗೆ-ಮೇಲಾಗುತ್ತಿರುವ ; ಅಥವಾ ಉಪ್ಪು ಸಿಡಿಯುವಂತೆ ಸಿಡಿಯುತ್ತಾ) ಕಟಕಟ ಎಂದು ಧ್ವನಿ ಮಾಡುತ್ತಾ ಸಿಡಿದಾಡುತ್ತಿರುವ (ಸಂಘಟ್ಟನ) ಕಲ್ಲುಗಳಿಂದ ; ಉದ್ಯತ್-ವಿದ್ಯುತ್–ಹೊರಚಿಮ್ಮುವ ಬೆಳಕಿನಿಂದ (ಮಿಂಚಿನಂತಹ ಹೊಳಪಿನಿಂದ), ವ್ಯೂಢ–ಒಟ್ಟಾಗಿ ಸೇರಿದಂತೆ ಕಾಣುವ, ಸ್ಫುಲಿಂಗ–ಕಿಡಿಗಳು ; ಅಥವಾ ಉದ್ಯತ್–ಹೊರಡುತ್ತಿರುವ, ವಿದ್ಯುತ್–ಮಿಂಚುಗಳಿಂದ, ವ್ಯೂಢ–ಹರಡಿಕೊಳ್ಳುವ ಅಥವಾ ಮಿಂಚುಗಳಂತೆ ಪುನಃ ಪುನಃ ಹೊರಡುತ್ತಿರುವ ಸ್ಫುಲಿಂಗ–ಕಾದಕಲ್ಲುಗಳಿಂದ ಸಿಡಿದ ಬೆಂಕಿಯ ಕಿಡಿಗಳಂತಹ ಸಣ್ಣ ಸಣ್ಣ ಕಲ್ಲಿನ ಕೊಳ್ಳಿಗಳ ; ಪ್ರಕರ–ಸಮೂಹಗಳು, ವಿಕಿರಣ–ಛಟ್ ಛಟ್ ಎಂದು ಸಿಡಿಯುವುದರಿಂದ, ಉತ್—ಕ್ವಾಥಿತೇ—ಸಂತಾಪದಾಯಕವಾಗಿರುವ (ಅಂಧಂತಮಸ್ಸಿನಲ್ಲಿ ಎಂದು ಅನ್ವಯಿಸಿಕೊಳ್ಳಬೇಕು.)

**154. ಶ್ಲೋಕದ ಭಾವಾರ್ಥ (ನರಕಯಾತನೆಯ ವರ್ಣನೆ)**
ಹೇ ಸರ್ವಜ್ಞಶಿಖಾಮಣಿಗಳಾದ ಹರಿ-ವಾಯುಗಳೇ, ನಿಮ್ಮಲ್ಲಿ ಭಕ್ತಿಮಾಡಿ ನಿಮ್ಮನ್ನು ಆರಾಧಿಸುವ ಭಕ್ತರಿಗೆ ಎಂಥಾ ಸೌಖ್ಯವುಂಟಾಗುವುದೆಂದು ವರ್ಣಿಸಿದ್ದಾಯಿತು. ಇದಕ್ಕೆ ಪ್ರತಿಯಾಗಿ ನಿಮ್ಮಿಬ್ಬರಲ್ಲಿ ಯಾರು ದ್ವೇಷ ಮಾಡು-

ವರೋ ಅವರಿಗೆ ಅತ್ಯಂತ ದುಃಖದಾಯಕವಾದ ಅಧೋಗತಿಯೇ ಆಗುವುದು. ಮೋಕ್ಷಕ್ಕೆ ಹೋದವರಂತೆಯೇ ಇವರಿಗೂ ಈ ದುರ್ಗತಿಯಿಂದ ಪಾರಾಗುವ ಸಂಭವವೇ ಇಲ್ಲ. ಅಂಧಂತಮಸ್ಸುಗಳೆಂಬ ಈ ನಿತ್ಯನರಕಗಳ ವರ್ಣನೆ ಕೇಳಿದರೇ ಸಾಕು, ಭಯದಿಂದ ಮೈ ರೋಮಾಂಚವಾಗುತ್ತದೆ. (ಅಂಧಯತೀ-ತ್ಯಂಧಃ ಎಂಬ ವ್ಯುತ್ಪತ್ತಿಯಿಂದ) ಕಣ್ಣುಗಳು ತಬ್ಬಿಬ್ಬಾಗುವಂತಹ ಗಾಢಾಂಧಕಾರದಿಂದ ತುಂಬಿರುವುದರಿಂದಲೇ ಈ ನರಕಗಳಿಗೆ ಅಂಧಂತಮಸ್ಸು-ಗಳೆಂದು ಹೆಸರು. ಹೀಗೆ ಒಂದು ಕಡೆ ಸುತ್ತಲೂ ಕಗ್ಗತ್ತಲು ಕವಿದು-ಕೊಂಡಿದ್ದರೂ ಅದರಲ್ಲಿ ರಾಶಿರಾಶಿಯಾಗಿ ಬಿದ್ದಿರುವ ಕಲ್ಲುಗಳು, ಕಬ್ಬಿಣ-ವನ್ನು ಕರಗಿಸುವ ದೊಡ್ಡ ಕುಲುಮೆಗಳಲ್ಲಿ ಕಬ್ಬಿಣದ ಅದುರುಗಳು ಕಾದು ಕಾದು ಕರಗಿಹೋಗುವಂತೆ ಕೆಂಪಗೆ ಕಾದರೂ ಇನ್ನೂ ಹೆಚ್ಚು ಕಾಯಿಸು-ತ್ತಿರುವುದರಿಂದ ಬೆಳ್ಳಗೆ ಕಾದು (ಬಲ್ಬುಗಳಲ್ಲಿರುವ ತಂತಿಗಳು ಬೆಳ್ಳಗಾಗಿ ಉರಿಯುತ್ತಿರುವಂತೆ) ಪ್ರಜ್ವಲಿಸುತ್ತಾ ಕರಗಿ ನೀರಾಗಿ ಅತ್ಯುಗ್ರವಾದ ಉಷ್ಣ-ದಿಂದ ಕಟಕಟ ಎಂದು ಧ್ವನಿಮಾಡುತ್ತಾ ಕುದಿಯಲಾರಂಭಿಸುತ್ತವೆ. ಹೀಗೆ ಕರಗುವಾಗಲೇ ಆ ಕಲ್ಲುಗಳಲ್ಲಿ ಕೆಲಕೆಲವು ಛಟ್ ಛಟ್ ಎಂದು ಸಿಡಿಯುತ್ತಾ ಹಾರುತ್ತಾ ಸದ್ದು ಮಾಡುತ್ತಿರುವುದರಿಂದ ಕುದಿಯುವ ಧ್ವನಿಯು ಮತ್ತಷ್ಟು ಕಠೋರವಾಗುತ್ತದೆ. ದ್ರವಗಳು ಕುದಿಯುವಾಗ ಬುಡಮೇಲಾಗಿ ಏಳುತ್ತಾ ಉಕ್ಕಿ ಬರುವಂತೆ ಈ ಕರಗಿದ ಕಲ್ಲಿನ ದ್ರವವೂ ಅಲೆ-ಅಲೆಯಾಗಿ ಪ್ರವಹಿಸಿ ಕೆಳಗಿಂದ ಮೇಲಕ್ಕೆ ಏಳುತ್ತಾ ಬರುವಾಗ ಒಂದಕ್ಕೊಂದು ತಗಲಿ ಫಳ್ ಫಳ್ ಎಂದು ಸುತ್ತಲೂ ಹರಡಿಕೊಳ್ಳುತ್ತಿರುತ್ತವೆ. ಹಾಗೆ ಸಿಡಿಯು-ವಾಗ ಉಂಟಾದ ಸಂಘರ್ಷದಿಂದ ಚಕಮುಕಿ ಕಲ್ಲನ್ನು ಕುಟ್ಟಿದರೆ ಬೆಂಕಿ ಏಳು-ವಂತೆಯೂ ಮೋಡಗಳು ಒಂದಕ್ಕೊಂದು ತಗಲಿದಾಗ ಮಿಂಚುಗಳು ಹೊರ-ಚಿಮ್ಮುವಂತೆಯೂ ಕಲ್ಲುಗಳಿಂದ ಕಣ್ಣುಕೋರೈಸುವಂತಹ ಉಜ್ವಲಪ್ರಕಾಶವು ಎದ್ದು ಎದ್ದು ಅದೃಶ್ಯವಾಗುತ್ತಿರುತ್ತವೆ. ಒಂದು ಕಡೆ ಕಾದು ಕರಗಿ ನೀರಾದ ಕಲ್ಲಿನ ದ್ರವವು ಕೊತ ಕೊತ ಕುದಿಯುತ್ತಾ ಸಮುದ್ರದ ಅಲೆಗಳಂತೆ ಉಕ್ಕುತ್ತಾ ನುಗ್ಗುತ್ತಾ ಮುಂದೆ ಸಾಗುತ್ತಿರುತ್ತದೆ. ಮಧ್ಯೆಮಧ್ಯೆ ಅವುಗಳಿಂದ ಕಿಡಿಗಳಂತಹ ಸಣ್ಣಸಣ್ಣ ಕಣಗಳು ಸಿಡಿದು ಸಿಡಿದು ಮಿಂಚಿ-

ನಂತೆ ಫಳಫಳಿಸಿ ಅದೃಶ್ಯವಾಗಿ ಹೋಗುತ್ತಿರುತ್ತವೆ. ಇಂಥಾ ಕಾದ ಕಲ್ಲಿನ ದ್ರವದಲ್ಲಿ ಹರಿವಾಯುಗಳ ದ್ವೇಷ ಮಾಡುವ ಪಾಪಿಷ್ಠರು ಬಿದ್ದು ಒದ್ದಾಡು-ತ್ತಿರುತ್ತಾರೆ. ಒಂದು ಕಡೆ ಕಾದು ಕರಗಿರುವುದರಿಂದ ಕಲ್ಲಿನ ರಸವೇ ಕೆಸರಿ-ನಂತೆ ಮೈಯ ಅಂಗಾಂಗಗಳಿಗೆಲ್ಲಾ ಮೆತ್ತುಕೊಳ್ಳುವುದರಿಂದಲೂ ಕೆಸರಿನಲ್ಲಿ ಸಿಕ್ಕಿಕೊಂಡ ಮನುಷ್ಯರಂತೆ ಮೇಲಕ್ಕೆ ಏಳುವುದಕ್ಕೇ ಆಗದೇ ಇರುವುದರಿಂದಲೂ ಅವರು ಆ ಯಾತನೆಯನ್ನೇ ಸಹಿಸಲಾರದೆ ಕುಯ್ಯೋ-ಮರ್ರೋ ಎಂದು ಗೋಳಾಡುತ್ತಿರುತ್ತಾರೆ. ಹೀಗೆ ಕುದಿಯುತ್ತಿರುವ ದ್ರವದ ಅಲೆಗೆಸಿಕ್ಕಿ ಅವರು ಅತ್ತ ಇತ್ತ ಹೊರಳಾಡುತ್ತ ಇದ್ದರೆ ನರಕದಲ್ಲಿ ನಿಯುಕ್ತರಾದ ಯಮಕಿಂಕರರು ಅವರ ಮೇಲೆ ಮತ್ತಷ್ಟು ಕಾದ ದ್ರವವನ್ನು ತುಂಬಿ ತುಂಬಿ ಸುರಿಯುತ್ತಿರುತ್ತಾರೆ. ಒಂದುಕಡೆ ಆ ದ್ರವದ ಅತ್ಯುಗ್ರವಾದ ಉಷ್ಣತೆ ಅವರನ್ನು ದಹಿಸುತ್ತಿದ್ದರೆ ಇನ್ನೊಂದುಕಡೆ ಆ ಕಲ್ಲಿನ ದ್ರವದ ಹೆಣಭಾರದಿಂದ ಅವರು ನಜ್ಜುಗುಜ್ಜಾಗಿ ಹೋಗುತ್ತಿರುತ್ತಾರೆ—ಎರಡನ್ನೂ ಸಹಿಸಲಾರದೆ ಚೀಗುಟ್ಟುತ್ತಿರುತ್ತಾರೆಂದು ಭಾವ. (ಈ ನರಕದ ಹೆಚ್ಚಿನ ವಿವರಣೆ ಪುನಃ ಹದಿಮೂರನೇ ಶ್ಲೋಕದಲ್ಲೂ ಬರುವುದು.)

**ವಿಶೇಷ**—ಉತ್ತಪ್ತಾತ್ಯುತ್, ತಮಸಿ ತತ ಇತಃ ಎಂಬಲ್ಲೂ ಅನೇಕ ತಕಾರಗಳೂ, ಉತ್ಕಟತ್ವಿಟ್ ಪ್ರಕಟ-ಕಟಕಟ—ಘಟ್ಟನ ಎಂಬಲ್ಲಿ ಅನೇಕ ಟಕಾರಗಳೂ, ಪ್ರಕಟ ಕಟಕಟ, ಪ್ರಕರವಿಕಿರ-ತ್ಕ್ವಾಥಿತೇ ಎಂಬಲ್ಲಿ ಅನೇಕ ಕಕಾರಗಳೂ ಬಂದಿರುವುದರಿಂದ ವೃತ್ತ್ಯನುಪ್ರಾಸವೆಂಬ ಶಬ್ದಾಲಂಕಾರ ಬಂದಿದೆ. ಹೀಗೆ ಈ ಶ್ಲೋಕದಲ್ಲಿ ಅನೇಕ ಕರ್ಕಶವರ್ಣಗಳನ್ನು ಉಪಯೋಗಿ-ಸಿರುವುದರಿಂದ ನರಕದ ಘೋರಯಾತನೆಯು ಸದ್ದೇ ಕಿವಿಗೆ ಕೇಳಿಸುತ್ತಿದೆಯೋ ಎನ್ನುವಂತೆ ಭಾಸವಾಗುತ್ತದೆ. ಇದು ಕವಿತಾಶಕ್ತಿಯ ಪ್ರೌಢಿಮೆ.

## ಹನ್ನೆರಡನೇ ಶ್ಲೋಕ. ಉದಾಸೀನನಿಗೆ ತ್ರಿಶಂಕುಸ್ಥಿತಿ

155. **ಅವತಾರಿಕೆ**—ಸಾತ್ವಿಕರು ರಾಜಸರು ತಾಮಸರು ಎಂದು ಜೀವರು ಮೂರು ವಿಧವಾಗಿದ್ದಾರೆಂಬುದೂ ಮಧ್ವಸಿದ್ಧಾಂತದ ಒಂದು ಮುಖ್ಯ ಪ್ರಮೇಯು. ಅವರಲ್ಲಿ ಸಾತ್ವಿಕರು ಶ್ರೀಹರಿವಾಯುಗಳಲ್ಲಿ ಭಕ್ತಿ ಮಾಡತಕ್ಕವರು. ಅವರಿಗೆ ಲಭಿಸುವ ಸದ್ಗತಿಯ ಸ್ವರೂಪವನ್ನು ೯ ಮತ್ತು

೧೦ ಎರಡು ಶ್ಲೋಕಗಳಲ್ಲಿ ವರ್ಣಿಸಿದ್ದಾಯಿತು. ಅವರಿಗೆ ಪ್ರತಿಯಾಗಿರುವ ತಾಮಸರು ಶ್ರೀಹರಿವಾಯುಗಳಿಗೆ ಬದ್ಧ ವಿರೋಧಿಗಳು. ಇವರಿಗೆ ದೊರಕುವ ದುರ್ಗತಿ ಎಂಥಾದ್ದೆಂಬುದನ್ನು ಹಿಂದಿನ ಶ್ಲೋಕದಲ್ಲಿ ಸ್ವಲ್ಪಮಟ್ಟಿಗೆ ವಿವರಿಸಿದರು. ಈಗ ಉದಾಸೀನರಾದ, ಎಂದರೆ ಇತ್ತ ಸಾತ್ವಿಕರಂತೆ ಹರಿವಾಯುಗಳಲ್ಲಿ ನಿಷ್ಠೆಯೂ ಇಲ್ಲ, ಅತ್ತ ತಾಮಸರಂತೆ ಹರಿವಾಯುಗಳಲ್ಲಿ ಪರಮ ದ್ವೇಷವೂ ಇಲ್ಲ ಇಂಥಾ—ಮಧ್ಯಮವರ್ಗಕ್ಕೆ ಸೇರಿದ ರಾಜಸರಿಗೆ ಸಾತ್ವಿಕರಿಗೆ ದೊರಕುವಂತೆ ಸ್ವರೂಪಾನಂದವು ದೊರಕುವುದು ಅಸಾಧ್ಯವಾದರೂ ಶ್ರೀಹರಿದ್ವೇಷಿಗಳಿಗೆ ಆಗುವಂತೆ ನಿತ್ಯತಮಃ ಪ್ರಾಪ್ತಿಯೂ ಇಲ್ಲ ; ಅವರು ನಿತ್ಯವಾಗಿ ಸಂಸಾರದಲ್ಲೇ ಇದ್ದು ಮಿಶ್ರವಾದ ಸುಖದುಃಖಗಳೆರಡನ್ನೂ ಅನುಭವಿಸುತ್ತಾ ಸ್ವರ್ಗ-ಭೂಮಿ-ನರಕಗಳಲ್ಲೇ ಸುತ್ತಾಡುತ್ತಿರುತ್ತಾರೆಂಬುದನ್ನು 'ಅಸ್ಮಿನ್—' ಎಂಬ ಈ ಶ್ಲೋಕದಲ್ಲಿ ವರ್ಣಿಸುತ್ತಾರೆ. (ಪುರಾ. ಆಧಾರದ ಮೇಲೆ ಬೆಳೆಸಿದೆ.) ಯಾವಾತ ಶ್ರೀಮದಾಚಾರ್ಯರ ತತ್ವಗಳನ್ನು ಒಪ್ಪಿಕೊಂಡರೂ ಶಾಸ್ತ್ರವಿಹಿತವಾದ ಸದಾಚಾರಗಳನ್ನು ಅನುಷ್ಠಾನ ಮಾಡದೆ, ಕರ್ಮಠನಾಗಿರದೆ, ಉದಾಸೀನತೆ ಮಾಡುತ್ತಾನೋ ಅವನು ಸಂಸಾರದಲ್ಲೇ ಸುತ್ತುತ್ತಿರುತ್ತಾನೆ. ಆದರೆ ಅವನಿಗೆ ನಿತ್ಯನರಕದ ಭಯವಿಲ್ಲವೆಂದು ಹೇಳುತ್ತಾರೆ. (ಕಕ. ವಿ.) ಶ್ರೀಹರಿವಾಯುಗಳ ಸನ್ನಿಧಿಗೆ ಹೋದರೂ ಕೂಡ (ಅವರು ಹೇಳಿದಂತೆ ನಡೆಯದೆ) ಉದಾಸೀನ ಮಾಡುವವನಿಗೆ ಸಂಸಾರ ಪ್ರಾಪ್ತಿಯೇ ಹೊರತು ತಮಃ ಪ್ರಾಪ್ತಿಯಿಲ್ಲವೆಂಬುದನ್ನು ತೋರಿಸುತ್ತಾರೆ (ಛ.)

**ಅಸ್ಮಿನ್ನಸ್ಮದ್-ಗುರೂಣಾಂ ಹರಿಚರಣ-ಚಿರ-**
**ಧ್ಯಾನಸನ್ಮಂಗಳಾನಾಂ**
**ಯುಷ್ಮಾಕಂ ಪಾರ್ಶ್ವಭೂಮಿಂ ಧೃತರಣರಣಿಕ-**
**ಸ್ವರ್ಗಿಸೇವ್ಯಾಂ ಪ್ರಪನ್ನಃ ।**
**ಯಸ್ತೂದಾಸ್ತೇ ಸ ಆಸ್ತೇಽಧಿಭವಮಸುಲಭ-**
**ಕ್ಲೇಶನಿರ್ಮೋಕಮಸ್ತ-**
**ಪ್ರಾಯಾನಂದಂ ಕಥಂಚಿನ್ನ ವಸತಿ ಸತತಂ**
**ಪಂಚಕಷ್ಟೇಽತಿಕಷ್ಟೇ ॥ ೧೨ ॥**

**ಪದವಿಭಾಗ**—ಅಸ್ಮಿನ್, ಅಸ್ಮದ್ಗುರೂಣಾಂ, ಹರಿ....ಮಂಗಳಾನಾಂ, ಯುಷ್ಮಾಕಂ, ಪಾರ್ಶ್ವಭೂಮಿಂ, (ಧೃತರಣರಣಿಕ ಎಂದು ಒಂದು ಸಾರಿ ಬೇರೆಯಾಗಿಯೇ ವಿಭಾಗಿಸಬೇಕೆಂದೂ ಎರಡನೇ ಸಾರಿ–ಧೃತ....ಸೇವ್ಯಾಂ ಎಂದು ತಂತ್ರದಿಂದ ಒಂದೇ ಪದವಾಗಿಯೂ ಗ್ರಹಣ ಮಾಡಬೇಕೆಂದೂ ಪುರಾ. ಹೇಳುತ್ತಾರೆ) ಧೃತ....ಸೇವ್ಯಾಂ, ಪ್ರಪನ್ನಃ, ಯಃ, ತು, ಉದಾಸ್ತೇ, ಸಃ, ಆಸ್ತೇ, ಅಧಿ, ಭವಂ (ಅಥವಾ ಅಧಿಭವಂ—ಕಕ. ವಿ. ಪ್ರಕಾರ ಒಂದೇ ಪದ) ಅಸುಲಭಕ್ಲೇಶನಿರ್ಮೋಕಂ, ಅಸ್ತಪ್ರಾಯಾನಂದಂ, ಕಥಂಚಿತ್, ನ, ವಸತಿ, ಸತತಂ, ಪಂಚಕಷ್ಟೇ, ಅತಿಕಷ್ಟೇ ||

**156. ಶ್ಲೋಕದ ವಿಶ್ಲೇಷಣೆ**—ಈ ಶ್ಲೋಕದ ಪೂರ್ವಾರ್ಧಕ್ಕೆ ಮಾತ್ರ ಹರಿಪರವಾಗಿ ಒಂದು ರೀತಿಯೂ, ವಾಯುಪರವಾಗಿ ಇನ್ನೊಂದು ರೀತಿಯೂ ಅರ್ಥವಾಗುತ್ತದೆ. ಉತ್ತರಾರ್ಧಕ್ಕೆ ಒಂದೇ ರೀತಿ ಅರ್ಥ, ಅರ್ಥವ್ಯತ್ಯಾಸವಿಲ್ಲ. ಇಡೀ ಪೂರ್ವಾರ್ಧವು ರಾಜಸಜೀವಿಯ ಉತ್ತಮಪಕ್ಷವನ್ನು ವರ್ಣಿಸುತ್ತದೆ. ಯಸ್ತು ಉದಾಸ್ತೇ ಎಂಬುದು ಪೂರ್ವಾರ್ಧದಲ್ಲಿ ಹೇಳಿದುದಕ್ಕೆ ಕಳಂಕರೂಪವಾದ ಅವಗುಣವಾಗಿದೆ. ತು ಎಂಬ ಅವ್ಯಯವು ಈ ವೈಪರೀತ್ಯವನ್ನೇ (ವಿರೋಧವನ್ನೇ) ಎತ್ತಿ ತೋರಿಸುವುದಕ್ಕಾಗಿ ಉಪಯೋಗಿಸಲ್ಪಟ್ಟಿದೆ(ಎಲ್ಲಾ ಜಾಣ, ಆದರೆ ತುಸ ಕೋಣ ಎಂಬ ಗಾದೆಯಂತೆ). ಹೀಗೆ ಈ ಒಂದು ನ್ಯೂನತೆಯಿಂದ ಅವನಿಗೆ ಆಗುವ ಹಾನಿಯನ್ನು 'ಅಸುಲಭಕ್ಲೇಶನಿರ್ಮೋಕಂ, ಅಸ್ತಪ್ರಾಯಾನಂದಂ' ಎಂಬ ಎರಡು ವಿಶೇಷಣಗಳು ತೋರಿಸುತ್ತವೆ. ಹೀಗೆ ಒಂದು ರೀತಿ ಹಾನಿಯಾದರೂ ಇನ್ನೊಂದು ರೀತಿ ಅನಿಷ್ಟನಿವಾರಣೆಯೂ ಇದೆಯೆಂಬುದನ್ನು ಕಡೆಯ ಚರಣವು ಸ್ಪಷ್ಟಪಡಿಸುತ್ತದೆ. ಹೀಗೆ ಇಡೀ ಶ್ಲೋಕಕ್ಕೆ 'ಸಃ' ಎಂಬುದೇ ಕರ್ತೃಪದ ; ಅದಕ್ಕೆ 'ರಾಜಸಜೀವೀ' ಅಥವಾ 'ರಾಜಸಗುಣಃ' ಎಂದರ್ಥ. ರಾಜಸಗುಣದಲ್ಲಿ ಬೆರಕೆಯಾಗಿರುವ ಸದ್ಗುಣವನ್ನು ಇಡೀ ಪೂರ್ವಾರ್ಧವೂ ನ್ಯೂನತೆ (ಅಥವಾ ಕೊರತೆ)ಯನ್ನು 'ಉದಾಸ್ತೇ' ಎಂಬ ಕ್ರಿಯಾಪದವೂ ಸೂಚಿಸುತ್ತದೆ. ಸಃ ಅಧಿಭವಂ ಸಂತತಂ ಆಸ್ತೇ ಎಂಬುದು ಒಂದು ಪ್ರಧಾನವಾಕ್ಯ ; ಪಂಚಕಷ್ಟೇ ಕಥಂಚಿತ್‌ನ ವಸತಿ ಎಂಬುದು ಎರಡನೇ ವಾಕ್ಯ.

(ಪೂರ್ವಾರ್ಧ) ಶ್ರೀ ಹರಿವಾಯುಗಳ (ದ್ವೇಷ ಮಾಡದೆ) ಸೇವೆ ಮಾಡಿ-ದರೂ ಕೂಡ (ಎಂದರ್ಥ, ಯಸ್ತು ಉದಾಸ್ತೇ ಎಂದರೆ) ಯಾರು ಉದಾಸೀನತೆ ಮಾಡುತ್ತಾನೋ, ಅವನು ನಿರಂತರವಾಗಿ ಸಂಸಾರದಲ್ಲೇ (ಅಡ್ಡಾಡುತ್ತಾ) ಇರುತ್ತಾನೆ; ಆದರೆ ಪಂಚಕಷ್ಟವೆಂಬ ನರಕದಲ್ಲಿ ವಾಸ-ಮಾಡಬೇಕಾಗಿಲ್ಲ ಎಂಬುದೇ ಇಡೀ ಶ್ಲೋಕದ ಒಟ್ಟು ಭಾವ.

**157. ಅನ್ವಯ ಮತ್ತು ಅರ್ಥ**—(ಹರಿವಾಯು ಉಭಯಪರವಾಗಿ) ಹೇ ಧೃತರಣರಣಿಕ ! ಅಸ್ಮಿನ್, ಹರಿ....ಮಂಗಳಾನಾಂ, ಅಸ್ಮದ್ಗುರೂಣಾಂ ಯುಷ್ಮಾಕಂ ಧೃತರಣರಣಿಕಸ್ವರ್ಗಿಸೇವ್ಯಾಂ ಪಾರ್ಶ್ವಭೂಮಿಂ ಪ್ರಪನ್ನಃ ತು, ಯಃ ಉದಾಸ್ತೇ, ಸಃ ಅಸುಲಭಕ್ಲೇಶನಿರ್ಮೋಕಂ ಅಸ್ತಪ್ರಾಯಾನಂದಂ ಭವಂ ಅಧಿ ಆಸ್ತೇ (ಅಥವಾ ಕಕ. ವಿ. ಪ್ರಕಾರ—ಅಧಿಭವಂ ಆಸ್ತೇ) । ಪಂಚಕಷ್ಟೇ ಅತಿಕಷ್ಟೇ ಕಥಂಚಿತ್ ನ ವಸತಿ ॥

**ಅನ್ವಯಾರ್ಥ**—(ಹರಿಪರವಾಗಿ) ಹೇ ಧೃತರಣರಣಿಕ—ಧೃತ–ಧರಿಸ-ಲ್ಪಟ್ಟ, ರಣರಣಿಕ*–ಔತ್ಸುಕ್ಯವುಳ್ಳ, ಆಸಕ್ತಿಯುಳ್ಳ (ಎಂದರೆ ತತ್ತದ್ಯೋಗ್ಯ-ತಾನುಸಾರ ಫಲಕೊಡುವುದರಲ್ಲಿ ಆಸಕ್ತಿಯುಳ್ಳ) ಹೇ ಶ್ರೀಹರಿಯೇ! (ಪುರಾ.) ಹರಿ....ಮಂಗಳಾನಾಂ—ಹರಿ–ಪಾಪಪರಿಹಾರಕವಾದ, ಚರಣ–ನಿಮ್ಮ ಪಾದ-ಗಳ, ಚಿರ–ನಿರಂತರವಾದ. ಧ್ಯಾನ–ಅನುಚಿಂತನವುಳ್ಳವರಿಗೆ, ಸತ್ + ಮಂಗ-ಳಾನಾಂ–ಪ್ರಶಸ್ತವಾದ (ಮೋಕ್ಷವೆಂಬ) ಶುಭವುಳ್ಳವರಾದ (ಎಂದರೆ ಪಾಪ ಪರಿಹಾರ ಮಾಡುವುದರಲ್ಲಿ ಅತ್ಯಂತ ದಕ್ಷವಾದ ನಿಮ್ಮ ಚರಣಕಮಲಗಳ ಧ್ಯಾನ ಮಾಡುವವರಿಗೆ ಮೋಕ್ಷವೆಂಬ ಪ್ರಶಸ್ತವಾದ ಶುಭಪ್ರದರಾದ ಎಂದರ್ಥ.); ಅಸ್ಮದ್–ಗುರೂಣಾಂ**–ನಮಗೆ ಸೃಷ್ಟ್ಯಾದಿಗಳನ್ನು ಕೊಡುವುದರಿಂದ ತಂದೆ ಸ್ವರೂಪರಾದ; ಯುಷ್ಮಾಕಂ–ನಿಮ್ಮ † ಧೃತ....

---

*'ಆಯಲ್ಲಕ-ಮುತ್ಕಂಠಾ ಸ್ಯಾ—ದುತ್ಕಲಿಕಾ ರತಿಶ್ಚ ರಣ (ರಣಕಂ) ರಣಿಕಮ್। ಔತ್ಸುಕ್ಯಂ ಹೃಲ್ಲೇಖಃ' ಎಂದು ಹಲಾಯುಧಕೋಶ.

**ನಿಷೇಕಾದಿಕೃದ್ ಗುರುಃ (ಅಮರ) ಪಿತ್ರಾದೌ ಸುರಮಂತ್ರಿಣಿ (ಮೇದಿನೀ)

† ಗುರಾವಾತ್ಮನಿ ಬಹುವಚನಂ—ಗುರುಗಳಲ್ಲೂ, ತಾನು ಎಂದು ಹೇಳಿಕೊಳ್ಳು-ವಾಗಲೂ ಬಹುವಚನ ಬರುತ್ತದೆ ಎಂಬ ನಿಯಮದಂತೆ ಗುರು ಶಬ್ದ ಪ್ರಯೋಗ ವಿರುವುದರಿಂದ ಬಹುವಚನ ಬಂದಿದೆ.

ಸೇವ್ಯಾಂ—ಧೃತ–ಧರಿಸಲ್ಪಟ್ಟ, ರಣರಣಕ–ಆಸಕ್ತಿಯುಳ್ಳ, ಸ್ವರ್ಗಿ–ದೇವತೆ-ಗಳಿಂದ (ದೇವತೆಗಳಿಂದಾರಂಭಿಸಿ ಮನುಷ್ಯೋತ್ತಮರ ಪರ್ಯಂತ ಎಲ್ಲರಿಂದಲೂ—ಕಕ. ವಿ.), ಸೇವ್ಯಾಂ–ಸೇವಿಸಲ್ಪಡುವ (ಎಂದರೆ ಪ್ರಕೃತ ಸಂದರ್ಭದಲ್ಲಿ—ಅಭ್ಯಾಸ ಮಾಡಲ್ಪಡುತ್ತಿರುವ ; ಅಥವಾ ಅಧ್ಯಯನ ಮಾಡಲ್ಪಡುತ್ತಿರುವ), ಪಾರ್ಶ್ವ-ಭೂಮಿಂ-(ಪಾರ್ಶ್ವ–ಪಕ್ಕಕ್ಕೆ ಎಂದರೆ ಸಮೀಪಕ್ಕೆ ಹೋಗುವ, ಭೂಮಿಂ–ಸ್ಥಾನವನ್ನು ಎಂದರೆ) ಮಹಿಮೆಯನ್ನು ತಿಳಿಸಿಕೊಟ್ಟು ಸಮೀಪಕ್ಕೆ ಒಯ್ಯುವಂಥಾ ಸಚ್ಛಾಸ್ತ್ರವನ್ನು, ಪ್ರಪನ್ನಃ ತು–ಹೊಂದಿದವನಾದರೂ ಕೂಡ (ಅರ್ಥಾತ್ ಶಾಸ್ತ್ರಾಧ್ಯಯನ ಮಾಡಿದರೂ ಕೂಡ ಎಂದರ್ಥ) ; ಯಃ–ಯಾವ ಪುರುಷನು, ಉದಾಸ್ತೇ 'ಇದಮಿತ್ಥಂ' ಎಂಬ ದೃಢಜ್ಞಾನ ಹೊಂದದೆ ಉದಾಸೀನತೆ ಮಾಡುತ್ತಾನೋ (ಎಂದರೆ ಪರಮತನಿರಾಕರಣಪೂರ್ವಕ ಸ್ವಮತಸಿದ್ಧಾಂತಗಳನ್ನು ತಿಳಿದು-ಕೊಳ್ಳುವುದಿಲ್ಲವೋ ; ಹೀಗೂ ಹೇಳಬಹುದು, ಹಾಗೂ ಹೇಳಬಹುದು ಎಂದು ಸ್ವಸಿದ್ಧಾಂತದ ಬಗ್ಗೆ ಉದಾಸೀನತೆ ವಹಿಸುವನೋ), ಸಃ–ಅವನು, ಅಸುಲಭ....ನಿರ್ವೋಕಂ—ಅಸುಲಭ–ದುರ್ಲಭವಾದ, ಕ್ಲೇಶ–ದುಃಖದ, ನಿರ್ಮೋಕಂ–ನಿವಾರಣೆಯುಳ್ಳ (ಎಂದರೆ ದುಃಖನಿವಾರಣೆಯು ದುರ್ಗಮವಾದ–ಸಾಧ್ಯವೇ ಇಲ್ಲದ) ; ಅಸ್ತಪ್ರಾಯಾನಂದಂ–ಆನಂದವು ಅಸ್ತಪ್ರಾಯವಾಗಿರುವ (ಎಂದರೆ ಆನಂದ ಇದ್ದರೂ ಕಣ್ಣಿಗೆ ಕಾಣಿಸದಂತೆ ಇರುವ—ಅರ್ಥಾತ್ ಅನೇಕ ಕಷ್ಟಗಳ ಮಧ್ಯೆ ಸ್ವಲ್ಪ ಸುಖ ದೊರೆತರೂ ದೊರೆತಂತೆಯೇ ಕಾಣುವುದಿಲ್ಲ, ಅಂತಹ), ಭವಂ–ಸಂಸಾರದಲ್ಲಿ (ಜನನ-ಮರಣಗಳ ಸುಳಿಯಲ್ಲಿ), ಸತತಂ–ನಿರಂತರವಾಗಿ, ಅಧಿ+ಆಸ್ತೇ–ಅಧ್ಯಾಸ್ತೇ–ವಾಸಮಾಡುತ್ತಾನೆ (ಅಥವಾ ಇರುತ್ತಾನೆ). (ಕಕ. ವಿ. ಪ್ರಕಾರ) ಅಸುಲಭ-ಕ್ಲೇಶನಿರ್ಮೋಕಂ ಅಸ್ತಪ್ರಾಯಾನಂದಂ (ಅರ್ಥ ಹಿಂದಿನಂತೆಯೇ, ಆದರೆ ಅವ್ಯಯಗಳು ಅಥವಾ ಕ್ರಿಯಾವಿಶೇಷಣಗಳೆಂದು ಗ್ರಹಿಸಬೇಕು) ಅಧಿಭವಂ–ಸಂಸಾರಕೂಪದಲ್ಲಿ, ಸತತಂ–ನಿರಂತರವಾಗಿ, ಆಸ್ತೇ–ಬಿದ್ದಿರುತ್ತಾನೆ. ಆದರೆ ಪಂಚಕಷ್ಟೇ—ಪಂಚ–ಐದು ವಿಧವಾದ, ಕಷ್ಟೇ–ಕಷ್ಟವುಳ್ಳ (ಪಂಚೇಂದ್ರಿಯ-ಗಳಿಗೆ ವಿಷಯುಗಳಾದ ಶಬ್ದಸ್ಪರ್ಶರೂಪಾದಿ ಐದೂ ವಿಷಯುಗಳೂ ಕಷ್ಟಪ್ರದ-

ವಾಗಿರುವ, ಅಥವಾ 1. ರೌರವ, 2. ಮಹಾರೌರವ, 3. ವಹ್ನಿ, 4. ವೈತರಣಿ, 5. ಕುಂಭೀಪಾಕ ಎಂಬ ಐದು ಮಹಾನರಕಗಳಿಗಿಂತಲೂ ಕ್ರೂರವಾದ ಅಥವಾ ಮುಂದಿನ ೧೩ನೇ ಶ್ಲೋಕದಲ್ಲಿ ತೋರಿಸುವಂತೆ 1. ಕ್ಷುದ್ಬಾಧೆ–ಹಸಿವಿನ ಗೋಳಾಟ, 2. ನೇತ್ರವೇಧೆ (ಕಣ್ಣು ಕುಕ್ಕುವುದು), 3. ಕ್ರೂರವಾದ ಕೊಕ್ಕುಗಳುಳ್ಳ ಪಕ್ಷಿಗಳು ಅಂಗಾಂಗಗಳನ್ನು ಕಿತ್ತು ಹಿಂಸಿ-ಸುವುದು, 4. ಕೀವು, ರಕ್ತ, ಮಲಮೂತ್ರಾದಿಗಳಿಂದ ತುಂಬಿದ ಕೊಚ್ಚೆಯ ಗುಂಡಿ, 5. ಜಿಗಣೆ ಮೊದಲಾದ ಹಿಂಸ್ರ ಜಂತುಗಳಿಂದ ಹಿಂಸೆ, ಈ ಪ್ರಕಾರ ಐದು ವಿಧ ಕಷ್ಟಗಳಿಂದ ಕೂಡಿದ (ಪುರಾ. ವಿ.), ಅತಿಕಷ್ಟೇ–ಬಹಳ ಉಗ್ರ-ವಾದ ಅಂಧಂತಮಸ್ಸಿನಲ್ಲಿ, ಕಥಂಚಿತ್–ಯಾವ ರೀತಿಯಿಂದಲೂ (ಅಥವಾ ಅವ್ಯಯಗಳಿಗೆ ಅನೇಕಾರ್ಥವಿರುವುದರಿಂದ) ಯಾವ ಕಾಲಕ್ಕೂ ; ನ ವಸತಿ–ವಾಸಮಾಡುವುದಿಲ್ಲ.

**ವಾಯುಪರವಾಗಿ ಅರ್ಥ**—(ಹೇ) ಧೃತರಣರಣಿಕ–ಫಲಪ್ರದಾನ ವಿಷಯದಲ್ಲಿ ಹೆಚ್ಚು ಔತ್ಸುಕ್ಯವುಳ್ಳ (ಶ್ರೀಹರಿಯಾಗಲಿ, ವಾಯುದೇವರಾಗಲಿ ಬೇಗ ಒಲಿಯುವುದಿಲ್ಲ ; ಅವರನ್ನು ಒಲಿಸುವುದು ಬಹಳ ಕಷ್ಟ. ಆದರೆ ಅವರಿಬ್ಬರೂ ಕೊಟ್ಟ ವರಾದಿಗಳಿಗೆ ಎಂದೆಂದಿಗೂ ಚ್ಯುತಿಯಿಲ್ಲವೆಂಬುದು ಶಾಸ್ತ್ರಸಿದ್ಧ) ಹೇ ವಾಯುದೇವರೇ! ಅಸ್ಮಿನ್–ಈ ಲೋಕದಲ್ಲಿ ; ಹರಿ-ಚರಣಧ್ಯಾನಸನ್ಮಂಗಳಾನಾಂ (ಶ್ರೀಮದ್ವಿಷ್ಣ್ವಂಘ್ರಿನಿಷ್ಠಾತಿಗುಣಗುರುತಮ ಎಂಬ ಮೊದಲನೇ ಶ್ಲೋಕದಲ್ಲಿ ಹೇಳಿದಂತೆ) ಶ್ರೀವಿಷ್ಣುವಿನ ಪಾದಕಮಲ-ಗಳನ್ನು ಸದಾ ಧ್ಯಾನಿಸುತ್ತಿರುವುದರಿಂದ ಪ್ರಾಪ್ತವಾದ ಸಕಲ ವೈಭವರೂಪ-ಮಂಗಳವುಳ್ಳ ; ಅಸ್ಮದ್ಗುರೂಣಾಂ ಯುಷ್ಮಾಕಂ - ನಮಗೆ ಆದಿಗುರುಗಳಾದ ನಿಮ್ಮ ; ಧೃತ....ಸೇವ್ಯಾಂ–ಅತಿಶಯವಾದ ಆದರದಿಂದ ಮನುಷ್ಯೋತ್ತಮ-ರಿಂದ ಆರಂಭಿಸಿ ಗರುಡಶೇಷರುದ್ರರ ವರೆಗೆ ಸಕಲರಿಂದಲೂ ಸೇವಿಸಲ್ಪಡುವ ; ಪಾರ್ಶ್ವಭೂಮಿಂ–ಸಮೀಪದಲ್ಲಿರುವ ಪ್ರದೇಶವನ್ನು ; ಪ್ರಪನ್ನಃ ತು–ಸೇರಿ-ದಾಗ್ಯೂ (ಹೊಂದಿದರೂನೂ) ; ಯಃ ಉದಾಸ್ತೇ–ಯಾವನು ಉದಾಸೀನ-ನಾಗುತ್ತಾನೋ (ಎಂದರೆ ಮಧ್ವಸಿದ್ಧಾಂತದ ಪ್ರಮೇಯಗಳಲ್ಲಾಗಲಿ ಶಾಸ್ತ್ರವಿಹಿತ-ಆಚಾರ ವಿಚಾರಗಳಲ್ಲಾಗಲಿ ಪೂರ್ಣಶ್ರದ್ಧೆ ವಹಿಸದೆ ತಾತ್ಸಾರ-

ಮಾಡುತ್ತಾನೋ ಮತ್ತು ಹನ್ನೊಂದನೇ ಶ್ಲೋಕದಲ್ಲಿ ಸೂಚಿಸಿದ ನವವಿಧ-ದ್ವೇಷವನ್ನು ಸರ್ವಥಾ ತ್ಯಜಿಸುವುದಿಲ್ಲವೋ); ಸಃ ಅಸುಲಭಕ್ಲೇಶ ನಿರ್ಮೋಕಂ ಅಸ್ತಪ್ರಾಯಾನಂದಂ ಭವಂ ಸತತಂ ಅಧ್ಯಾಸ್ತೇ, ಪಂಚಕಷ್ಟೇ ಅತಿಕಷ್ಟೇ ಕಥಂಚಿತ್ ನ ವಸತಿ (ಇವಿಷ್ಟಕ್ಕೂ ಹಿಂದಿನಂತೆಯೇ ಅರ್ಥ) ಅವನು ಸುಖವಿದ್ದರೂ ದುಃಖಭೂಯಿಷ್ಠವಾದ ಈ ಸಂಸಾರಕೂಪದಲ್ಲೇ ಚಿರಕಾಲ ಬಿದ್ದಿರುತ್ತಾನೆ. ಆದರೆ ಹರಿವಾಯುಗಳಲ್ಲಿ ದ್ವೇಷಮಾಡದಿರುವ ಕಾರಣ ಅಂಧಂತಮಸ್ಸಿನಲ್ಲಿ ಬೀಳುವುದಿಲ್ಲ.

**158. ಭಾವಾರ್ಥ**—(ಹರಿ-ವಾಯು ಉಭಯಪರ) ಬ್ರಹ್ಮದೇವ-ರಂತಾಗಲಿ ಸದಾಶಿವನಂತಾಗಲಿ ಶ್ರೀಹರಿವಾಯುಗಳಿಬ್ಬರೂ ಸುಲಭಸೇವೆಗಳಿ-ಗೆಲ್ಲಾ ವಶವಾಗುವವರಲ್ಲ. ಮೊದಲನೆಯದಾಗಿ ಅವರಿಬ್ಬರನ್ನೂ ಸೇವಿಸಬೇಕೆಂಬ ಬುದ್ಧಿ ಹುಟ್ಟುವುದೇ ಕಷ್ಟ. ಎರಡನೆಯದಾಗಿ ಇವರಿಬ್ಬರೂ ಒಲಿಯಬೇಕಾದರೆ ಜ್ಞಾನಭಕ್ತಿವೈರಾಗ್ಯಗಳೆಲ್ಲವೂ ದೃಢವಾಗಿರಬೇಕಲ್ಲದೆ ಆಚಾರವಿಚಾರಗಳೂ ಪರಿಶುದ್ಧವಾಗಿರಬೇಕು.* ಹಾಗಿದ್ದರೆ ಮಾತ್ರ ಅವರು ಒಲಿಯುವರು. ಆದರೆ ಒಂದು ಸರಿ ಅವರು ಪ್ರೀತರಾದರೆ ಸಾಕು, ಅದಕ್ಕೆ ಚ್ಯುತಿಯೇ ಇಲ್ಲ. ಅಲ್ಲದೆ ಅವರು ಕೊಟ್ಟ ಶಾಪವಾಗಲಿ ವರವಾಗಲಿ ಎಂದೆಂದಿಗೂ ಹುಸಿಯಾಗುವುದಿಲ್ಲ. ಅದಕ್ಕೂ ಹೆಚ್ಚಾಗಿ ಭಗವಂತ ಕೊಡುವ ಶಿಕ್ಷೆಯೂ ಅನುಗ್ರಹವೇ ಆಗಿರುತ್ತದೆ. ಈ ವಿಷಯವು ಕಳಿಂಗಸರ್ಪನ ಪತ್ನಿಯರ 'ಅನುಗ್ರಹೋಽಯಂ ಭವತಾ ಕೃತೋ ಹಿ ನೋ ದಂಡಃ' (ಭಾಗವತ ೧೦/೧೪/೩೩–೩೪) 'ಹೇ ಕೃಷ್ಣ,

*ವಸ್ತುಸ್ಥಿತಿ ಹೀಗಿದ್ದ ಪಕ್ಷಕ್ಕೆ 'ಸುಲಭನೋ ಹರಿ' ಎಂದು ಜಗನ್ನಾಥದಾಸರು ಹೇಳಿದ್ದು ಹುಸಿಯಾಯಿತಲ್ಲವೇ! ಎಂದೂ ಸಂದೇಹಪಡಬೇಕಾಗಿಲ್ಲ. ಏಕೆಂದರೆ ದಾಸರಾಯರು ಹೇಳಿದ್ದು ಆ ಹರಿ ದಯಾಮಯಿ, ಭಕ್ತರು ಮಾಡುವ ಅನಂತ ಅಪರಾಧಗಳನ್ನೂ ಕ್ಷಮಿಸಿ ಅವರು ಮಾಡಿದ ಅಲ್ಪ ಪುಣ್ಯಕ್ಕೇ ಅನಂತ ಫಲ ಕೊಡುತ್ತಾ-ನೆಂದು ತೋರಿಸುವುದಕ್ಕೇ ಹೊರತು ಅನಾಚಾರಗಳಿಗಾಗಲಿ ಶಾಸ್ತ್ರನಿಷಿದ್ಧಕರ್ಮ-ಗಳಿಂದಾಗಲಿ ಅವನು ಪ್ರೀತನಾಗುತ್ತಾನೆಂಬ ಭಾವದಿಂದ ಸರ್ವಥಾ ಹೇಳಿಲ್ಲವೆಂದು ತಿಳಿಯಬೇಕು.

ನೀನು ನಮಗೆ ಕೊಟ್ಟ ಶಿಕ್ಷೆಯೂ ಅನುಗ್ರಹವೇ ಆಗಿದೆ' ಎಂಬ ಮಾತಿ-
ನಿಂದಲೂ ಅದೇ ಸಂದರ್ಭದಲ್ಲಿ ಭಾಗವತತಾತ್ಪರ್ಯದಲ್ಲಿ ಉದಹರಿಸಿದ

ದಂಡೋಽಪಿ ಭಗವಚ್ಛೀರ್ಣೋ ಮನ್ಯೈಷೋಽನುಗ್ರಹಃ ಸ್ಮೃತಃ ।
ಇತಿ ಭಕ್ತ್ಯಾ ಚಿಂತಯತಾಂ ಶುಭಕಾರೀ ಭವತ್ಯಲಮ್ ॥

'ಭಗವಂತ ನನಗೆ ಕೊಡುವ ಶಿಕ್ಷೆಯೂ ಅನುಗ್ರಹವೇ ಆಗುತ್ತದೆ ಎಂದು ಭಕ್ತಿಯಿಂದ ತಿಳಿದುಕೊಂಡವನಿಗೆ ನಿಜವಾಗಿಯೂ ಆ ಶಿಕ್ಷೆಯೂ ಶುಭಪ್ರದವೇ ಆಗುತ್ತದೆ' ಎಂಬ ಮಹಾಕೂರ್ಮಪುರಾಣ ವಚನದಿಂದಲೂ ಸಿದ್ಧವಾಗುತ್ತದೆ. ಇಷ್ಟು ವಿಚಾರಗಳೂ **ಧೃತರಣರಣಿಕ** ಎಂಬ ಸಂಬೋಧನೆಯಲ್ಲಿ ಅಡಗಿವೆ. ಈ ವಿಚಾರಗಳಿಗೂ ಪ್ರಕೃತ ಸಂದರ್ಭಕ್ಕೂಏನು ಸಂಬಂಧ ? ಅದನ್ನೂ ವಿಮರ್ಶಿಸೋಣ.

ಪ್ರಾರಂಭದಲ್ಲೇ ಈ ಪದಕ್ಕೆ ವ್ಯಾಖ್ಯಾನಮಾಡಿದ್ದರಿಂದ ಶ್ರೀಹರಿ-ಯಾಗಲಿ ವಾಯುದೇವರಾಗಲಿ ತಮ್ಮ ಮನಸ್ಸು ಬಂದಂತೆ ಜೀವರಿಗೆ ಸದ್ಗತಿ-ಯನ್ನಾಗಲಿ ದುರ್ಗತಿಯನ್ನಾಗಲಿ ಕೊಡುವುದಿಲ್ಲ ; ಅದಕ್ಕೆ ವ್ಯತಿರಿಕ್ತವಾಗಿ ಅವರವರ ಕರ್ಮಗಳಿಗೆ ತಕ್ಕಂತೆಯೇ ಫಲ ಕೊಡುತ್ತಾರೆ. ಆದಕಾರಣ ಅವರಲ್ಲಿ ವೈಷಮ್ಯನೈರ್ಘೃಣ್ಯಾದಿ ಯಾವ ದೋಷಗಳೂ ಇಲ್ಲ. ಅತಏವ ವಿಷ್ಣುಭಕ್ತರಿಗೆ ಮೋಕ್ಷಸೌಖ್ಯವನ್ನು ಅನುಗ್ರಹಿಸುವುದಾಗಲಿ ದ್ವೇಷಮಾಡು-ವವರನ್ನು ಅಂಧಂತಮಸ್ಸಿನಲ್ಲಿ ಹಾಕುವುದಾಗಲಿ ಆಯಾ ಜೀವರ ಸ್ವರೂಪ-ವನ್ನೇ ಅವಲಂಬಿಸಿದೆ ಎಂದು ಸ್ಪಷ್ಟಪಡಿಸಿದಂತಾಯಿತು. ಹೀಗೆ ಈ ವಿಚಾರ— ಹರಿವಾಯುಗಳು ಜೀವರ ಸ್ವರೂಪಯೋಗ್ಯತೆಯನ್ನು ಅನುಸರಿಸಿಯೇ ಫಲ-ಕೊಡುತ್ತಾರೆ ಎಂಬ ಪ್ರಮೇಯ—ಪ್ರಕೃತ ಈ ಶ್ಲೋಕದ ವಿಷಯಕ್ಕೂ ಪುಷ್ಟಿಕೊಡುತ್ತದೆ. ಹೇಗೆಂದರೆ—

ತ್ರಿವಿಧ ಜೀವರ ಪೈಕಿ ಮಧ್ಯಮವರ್ಗಕ್ಕೆ ಸೇರಿದ ರಾಜಸಜೀವಿಗಳು ಹರಿವಾಯುಗಳಲ್ಲಿ ಬದ್ಧದ್ವೇಷವನ್ನಂತೂ ಸುತರಾಂ ಮಾಡುವುದಿಲ್ಲ. ಅಲ್ಲದೆ ಅವರಿಗೆ ವೇದಾದಿ ಸಚ್ಛಾಸ್ತ್ರಗಳಲ್ಲಿ ಹೇಳಿದ ವಿಚಾರಗಳೆಲ್ಲಾ ಒಪ್ಪಿಗೆಯಾಗಿರು-ತ್ತವೆ. ಆದರೆ ಮಾತ್ರ ಆ ಬಗ್ಗೆ ಅವರು ವಿಮರ್ಶೆ ಮಾಡಿ, ವಿಷಯಗಳನ್ನು ಮಥನ ಮಾಡಿ, ತಿಳಿದುಕೊಳ್ಳಲು ಪ್ರಯತ್ನಪಡದಿರುವುದರಿಂದ ಅವರಿಗೆ ಆ

ಸಿದ್ಧಾಂತಗಳ ಬಗ್ಗೆ ನಿಷ್ಠೆಯೂ ಇರುವುದಿಲ್ಲ, ದಾರ್ಢ್ಯವೂ ಇರುವುದಿಲ್ಲ. ಎರಡನೆಯದಾಗಿ, ಓದುವಾಗ ತಲೆದೂಗುತ್ತಾರಾಗಲಿ ಅದರಲ್ಲಿ ಹೇಳಿದಂತೆ ನಡೆಯುವುದಕ್ಕೆ–ಸ್ನಾನಸಂಧ್ಯಾದಿ ಸದಾಚಾರಗಳನ್ನಾಗಲಿ ಏಕಾ, ಶ್ಯುಪವಾಸದ ಚಾತುರ್ಮಾಸ್ಯಾದಿ ವಿಹಿತ ವ್ರತಗಳನ್ನಾಗಲಿ ಮಾಡಲು ಅವರು ಉದಾಸೀನ-ರಾಗಿರುತ್ತಾರೆ. ಅದರಿಂದ 'ಆಚಾರಹೀನಂ ನ ಪುನಂತಿ ವೇದಾಃ' ಎಂಬ ಪ್ರಮಾಣದಂತೆ ಅವರು ಪುನೀತರಾಗುವುದಿಲ್ಲ. ಅಲ್ಲದೆ ಅವರು ಹರಿಭಕ್ತಿ ಮಾಡಿದರೂ ಅದು ಶಾಸ್ತ್ರವಿಹಿತವಾದ ಏಕಾಂತಭಕ್ತಿ*ಯೆನಿಸಿಕೊಳ್ಳುವುದಿಲ್ಲ. ಹೀಗೆ ಅವರ ಜ್ಞಾನದಲ್ಲೂ ಅನುಷ್ಠಾನದಲ್ಲೂ ಅನೇಕ ನ್ಯೂನತೆಗಳಿರುವುದ-ರಿಂದ ಅವರಿಗೆ ಮೋಕ್ಷ ಸಿಗುವುದಂತೂ ಸರ್ವಥಾ ಅಸಂಭವ. ಹಾಗಾದರೆ ಅವರ ಗತಿಯೇನು ? ಎಂದರೆ ಹೇಳುತ್ತಾರೆ—

ಮಧ್ಯಮಾ ಮಾನುಷಾ ಯೇ ತು ಸೃತಿಯೋಗ್ಯಾ ಸದೈವ ಹಿ

ಎಂಬ ಪ್ರಮಾಣದಂತೆ (ಕಕ. ವಿ. ಛ.) ಅವರು ಕೊನೆಯವರೆಗೂ ಕಷ್ಟ-ಸುಖಗಳೆರಡನ್ನೂ ಭೋಗಿಸುತ್ತಾ ಪಾಪಪುಣ್ಯಗಳೆರಡಕ್ಕೂ ಗುರಿಯಾಗುತ್ತಾ ಸ್ವರ್ಗ ನರಕ ಭೂಮಿಗಳಲ್ಲೇ ತಿರುತಿರುಗಿ ಸುತ್ತುತ್ತಾ ಈ ಸಂಸಾರಕೂಪ-ದಲ್ಲೇ ಅಡ್ಡಾಡುತ್ತಿರುತ್ತಾರೆ. ಆದರೆ ಒಂದೇನು ಸಮಾಧಾನವೆಂದರೆ ಅವರು ಶ್ರೀಹರಿವಾಯುಗಳಲ್ಲಿ ಬದ್ಧದ್ವೇಷ ಮಾಡದಿರುವುದರಿಂದ ಅವರಿಗೆ ಅಂಧಂತಮಃ ಪ್ರಾಪ್ತಿಯೂ ಇಲ್ಲ, ಅಲ್ಲಿಯ ಆ ಘೋರ ಯಾತನಾನುಭವದ ಕಷ್ಟವೂ ಇಲ್ಲ. ಇದೇ ಈ ಶ್ಲೋಕದ ಮುಖ್ಯಭಾವ.

---

*ಏಕಾಂತಭಕ್ತಿ ಏನೆಂಬುದನ್ನು ಛಾಂದೋಗ್ಯಭಾಷ್ಯದಲ್ಲಿ (೧/೧/೧) ಹೀಗೆ ವರ್ಣಿಸಿದೆ—

ದೇವತಾನುಕ್ರಮಜ್ಞಾಶ್ಚ ವಿಷ್ಣೋಃ ಪರಮತಾವಿದಃ ।
ಏಕಾಂತಿನಸ್ತೇ ವಿಜ್ಞೇಯಾಃ........

ಸ್ವೋತ್ತಮರಿಂದ ಹಿಡಿದು ಶ್ರೀಹರಿಯ ಪರ್ಯಂತ ತಾರತಮ್ಯದಿಂದ ಕ್ರಮಕ್ರಮವಾಗಿ ಉತ್ತಮತ್ವವನ್ನು ತಿಳಿದು ಅವರೆಲ್ಲರಲ್ಲೂ ಅದಕ್ಕೆ ತಕ್ಕಂತೆ ಹೆಚ್ಚು ಹೆಚ್ಚು ಭಕ್ತಿ-ಮಾಡುತ್ತಾ ಕೊಟ್ಟಕೊನೆಯಲ್ಲಿ ಶ್ರೀಹರಿಯು ಎಲ್ಲರಿಗಿಂತಲೂ ಅನಂತಗುಣ ಸರ್ವೋ-ತ್ತಮನೆಂದು ತಿಳಿದು ಅವನಲ್ಲಿ ನಿರವಧಿಕವಾದ ನಿಶ್ಚಲ ಭಕ್ತಿಮಾಡುವುದಕ್ಕೇ ಏಕಾಂತ-ಭಕ್ತಿಯೆಂದು ಹೆಸರು. (ಈ ಭಕ್ತಿಯ ಹೆಚ್ಚಿನ ವಿವರಣೆ ಹದಿನೈದನೇ ಶ್ಲೋಕದಲ್ಲಿ ಬರುವುದು. ಅಲ್ಲಿ ನೋಡಿ)

**159. ವಿಶೇಷಾರ್ಥ**—ಸ್ವರ್ಗೀಯ ಮಹಾಮಹೋಪಾಧ್ಯಾಯ ಪೀ. ಪೀ. ಲಕ್ಷ್ಮೀನಾರಾಯಣ ಉಪಾಧ್ಯಾಯರು ಬರೆದಿರುವ ವಾಯು-ಸ್ತುತಿಯ ವಿಸ್ತೃತ ವ್ಯಾಖ್ಯಾನದಲ್ಲಿ ('ಗುರುಸಾರ್ವಭೌಮ' ಪತ್ರಿಕೆಯಲ್ಲಿ ಪ್ರಕಟವಾಗಿರುವುದರಲ್ಲಿ) 'ಧೃತರಣರಣಿಕಸ್ವರ್ಗಿಸೇವ್ಯಾಂ ಪಾರ್ಶ್ವಭೂಮಿಂ' ಎಂಬುದಕ್ಕೆ ಬರೆದಿರುವ ಒಂದು ವಿಶೇಷಾರ್ಥವು ಇಲ್ಲಿ ಉಲ್ಲೇಖನೀಯ-ವಾಗಿದೆ. ಶ್ರೀಮನ್ಮಧ್ವಾಚಾರ್ಯರೆಂದರೆ ರುದ್ರೇಂದ್ರಾದಿ ಸಕಲ ದೇವತೆ-ಗಳಿಗೂ ನಾರದಾದಿಮಹರ್ಷಿಗಳಿಗೂ ಹಿಡಿಸಲಾರದ ಗೌರವ, ಅತ್ಯಧಿಕವಾದ ಶ್ರದ್ಧಾಭಕ್ತಿಗಳು. ಕೃತಾದಿಯುಗಗಳಲ್ಲಿ ಮಾಡುವ ಸೇವೆಗಿಂತಲೂ ಇಪ್ಪ-ತ್ತೆಂಟನೇ ಈ ಕಲಿಯುಗದಲ್ಲಿ ಮಾಡುವ ಸೇವೆ ಶ್ರೀಹರಿವಾಯುಗಳಿಗೆ ಹೆಚ್ಚು ಪ್ರೀತಿಕರವಾಗಿರುತ್ತದೆ, ಇದು ಮಹಾ ಫಲಪ್ರದವೆಂಬುದನ್ನು ಅರಿತು ಆ ಇಂದ್ರಾದಿದೇವತೆಗಳೂ ಸಹ ಈ ಭರತಭೂಮಿಯಲ್ಲಿ ಮನುಷ್ಯರಾಗಿ ಹುಟ್ಟಿ ಸದ್ವೈಷ್ಣವರಾಗಿ ಬೆಳೆದು ಮಧ್ವರಾಯರ ಶಿಷ್ಯಪರಂಪರೆಯನ್ನು ಸೇರಿ ಮಾಧ್ವಸಚ್ಛಾಸ್ತ್ರಗ್ರಂಥಗಳನ್ನು ಅಭ್ಯಾಸ ಮಾಡಿ ಅವಕ್ಕೆ ಯಥೋಚಿತ ಟೀಕಾಟಿಪ್ಪಣ್ಯಾದಿಗಳನ್ನು ರಚಿಸಿ ಶ್ರೀಮದಾಚಾರ್ಯರ ಸತ್ಸಿದ್ಧಾಂತದ ಪ್ರಮೇಯಾಂಶಗಳನ್ನು ಯೋಗ್ಯಜೀವರಲ್ಲಿ ಪ್ರಚಾರ ಮಾಡಬೇಕೆಂದು ಕಾತುರ-ರಾಗಿದ್ದಾರೆ. ಹಾಗೆ ಮಾಧ್ವರಾಗಿ ಅವತಾರಮಾಡಿ ಮಧ್ವಮತ ಪ್ರಚಾರ ಮಾಡಿದ ಮಹನೀಯರೇ ಶ್ರೀಮಟ್ಟೀಕಾಕೃತ್ಪಾದರು (ಇಂದ್ರಾಂಶರು), ಶ್ರೀಪಾದರಾಯರು (ಧ್ರುವಾಂಶರು), ವ್ಯಾಸರಾಯರು-ರಾಘವೇಂದ್ರಸ್ವಾಮಿ-ಗಳು (ಪ್ರಹ್ಲಾದಾಂಶರು), ವಾದಿರಾಜರು (ಋಜುಗಣಸ್ಥರು), ರಘೂತ್ತಮ-ಸ್ವಾಮಿಗಳು(ನಿರ್ಋತ್ಯಂಶರು), ಪುರಂದರದಾಸರು (ನಾರದಾಂಶರು), ವಿಜಯ-ದಾಸರು (ಭೃಗುಋಷ್ಯಂಶರು) ಮೊದಲಾದವರು. ಇದರಂತೆ ಪ್ರತಿಯೊಬ್ಬ ಸುಜೀವಿಯೂ ತನ್ನತನ್ನ ಶಕ್ತ್ಯನುಸಾರ ಮಾಧ್ವಗ್ರಂಥಗಳನ್ನು ಓದಬೇಕು, ಮಾಧ್ವಸಂಪ್ರದಾಯವನ್ನು ಅನುಸರಿಸಬೇಕು, ಮಧ್ವಸಿದ್ಧಾಂತದಲ್ಲಿ ದೀಕ್ಷಾ-ಬದ್ಧನಾಗಿರಬೇಕು, ಅದೇ ಅವನಿಗೆ ಮಂಗಳ, ಆದರಿಂದಲೇ ಅವನಿಗೆ ಮೋಕ್ಷಾದಿ ಸಕಲ ಪುರುಷಾರ್ಥಗಳೂ ಲಭಿಸುವುವು. ಅದು ಬಿಟ್ಟು ಉದಾಸೀನತೆ ಮಾಡಿದರೆ 'ಕೈಗೆ ಬಂದ ತುತ್ತು ಬಾಯಿಗೆ ಇಲ್ಲದಂತೆ' ಆಗುತ್ತದೆಯೆಂಬು-

ದನ್ನು ಪಂಡಿತಾಚಾರ್ಯರು ಎಲ್ಲ ಮಧ್ವಭಕ್ತರಿಗೂ ಎಚ್ಚರಿಸಿ ತೋರಿಸಿ-ಕೊಟ್ಟಿದ್ದಾರೆಂದು ಉಪಾಧ್ಯಾಯರು ಸೂಚಿಸುತ್ತಾರೆ.

**160. ವ್ಯಾಕರಣಾಂಶ—೧.** ಮೂರನೇ ಚರಣದಲ್ಲಿ 'ಸ ಆಸ್ತೇಽಧಿ ಭವಂ' ಎಂದಿದೆ. ಇದಕ್ಕೆ ಎರಡು ಪ್ರಕಾರ ಅನ್ವಯ ಹೇಳಬಹುದು—1. ಸಃ ಭವಂ ಅಧಿ ಆಸ್ತೇ ಅಥವಾ ಅಧ್ಯಾಸ್ತೇ (ಛ. ಪುರಾ), 2. ಸಃ ಅಧಿಭವಂ ಆಸ್ತೇ (ಕಕ. ವಿ.) ಭವಂ ಅಧ್ಯಾಸ್ತೇ ಎಂದು ಅನ್ವಯ ಹೇಳಿದಾಗ ಭವಂ–ಸಂಸಾರವನ್ನು ಎಂದು ದ್ವಿತೀಯಾ ವಿಭಕ್ತಿಯು 'ಅಧಿಶೀಙ್ಸ್ಥಾಸಾಂ ಕರ್ಮ' (ಪಾ. ೧/೪/೪೬) ಎಂಬ ಸೂತ್ರದಂತೆ ಸಪ್ತಮ್ಯರ್ಥದಲ್ಲಿ ಬಂದಿದೆ. ಇಲ್ಲಿ ಆಸ ಧಾತುವಿನೊಡನೆ ಅಧಿ ಉಪಸರ್ಗಸೇರಿರುವುದರಿಂದ ಅಧಿಕರಣವೇ ಕರ್ಮ-ವಾಗಿದೆ. ಆದ್ದರಿಂದ ಭವಂ ಅಧ್ಯಾಸ್ತೇ ಎಂದರೆ ಸಂಸಾರ**ದಲ್ಲಿ** ಸದಾ ಇರುತ್ತಾ-ನೆಂದು ಅರ್ಥವಾಗುತ್ತದೆ. ಇನ್ನು ಅಧಿಭವಂ ಎಂಬುದು ಒಂದೇ ಪದ ಎಂದು ಇಟ್ಟುಕೊಂಡರೆ ಭವೇ ಇತ್ಯಧಿಭವಂ ಎಂದು ವಿಗ್ರಹ ; ಹರೌ ಇತ್ಯಧಿಹರಿ ಎಂಬಂತೆ ಸಪ್ತಮೀ ಅರ್ಥದಲ್ಲಿ ಅಧಿ ಬಂದು ಅವ್ಯಯೀಭಾವ ಸಮಾಸ-ವಾಗಿದೆ. ಇದಕ್ಕೆ ನಿಯಾಮಕಸೂತ್ರ 'ಅವ್ಯಯಂ ವಿಭಕ್ತಿಸಮೀಪ—' (ಪಾ. ೨/೧/೬) **೨. ಪ್ರಪನ್ನಃ** ಹೇಗಾಗಿದೆ ? ಪ್ರ ಉಪಸರ್ಗ, ಪದ ಗತೌ (ದಿವಾದಿ.ಆತ್ಮ)–ಹೊಂದು, ಸೇರು ಧಾತುವಿಗೆ ಭೂತಕೃದಂತ ಕ್ತ ಪ್ರತ್ಯಯ (ಪಾ. ೩/೨/೧೦೨) ಸೇರಿದಾಗ 'ರದಾಭ್ಯಾಂ ನಿಷ್ಠಾತೋ ನಃ ಪೂರ್ವಸ್ಯ ಚ ದಃ' (ಪಾ. ೮/೨/೪೨) ಎಂಬ ಸೂತ್ರದಂತೆ ಪದ್ ಧಾತುವಿನ ದಕಾರಕ್ಕೂ ಕ್ತ ಪ್ರತ್ಯಯದ ತಕಾರಕ್ಕೂ ನಕಾರಾದೇಶ ಬರುವುದರಿಂದ ಪ್ರ+ಪದ್+ಕ್ತ–ಪ್ರ ಪನ್ ನ ಸೇರಿ ಪ್ರಪನ್ನ ಎಂದಾಗುತ್ತದೆ. ಐದನೇ ಶ್ಲೋಕದಲ್ಲಿ "ಪ್ರಾಪ್ತುರಾಪನ್ನಪುಂಸಾಂ" ಎಂಬಲ್ಲಿರುವ **ಆಪನ್ನ** ಶಬ್ದವೂ ಹೀಗೆಯೇ ಆಗಿದೆಯೆಂದು ತಿಳಿಯಬೇಕು.

## ಹದಿಮೂರನೇ ಶ್ಲೋಕ. ನಿತ್ಯನರಕದ ಕಡುದುಃಖ

**161. ಶ್ಲೋಕಕ್ಕೆ ಅವತಾರಿಕೆ—**ಹಿಂದಿನ ಶ್ಲೋಕದಲ್ಲಿ ಅಸುರರು ಅತಿಕಷ್ಟವಾದ ತಮಸ್ಸಿನಲ್ಲಿ ಘೋರವಾದ ದುಃಖವನ್ನು ಅನುಭವಿಸುವರೆಂದು

ಸೂಚಿಸಿದರು. ಆ ತಮಸ್ಸು ಎಂಥಾದ್ದು ? ಆ ದುಃಖವಾದರೂ ಏನು ? ಎಂಬುದನ್ನು ಈ ಶ್ಲೋಕದಲ್ಲಿ ವರ್ಣಿಸುತ್ತಾರೆ. (ಕಕ. ವಿ.) ಹರಿವಾಯುಗಳ ದ್ವೇಷಿಗಳಿಂದ ಅನುಭವಿಸಲ್ಪಡುವ ತಮಸ್ಸೆಂಬ ನಿತ್ಯನರಕದ ಸ್ವರೂಪವನ್ನು ಹೇಳುತ್ತಾರೆ. (ಛ. ಪುರಾ) ಏಳನೇ ಶ್ಲೋಕದಲ್ಲಿ ಪ್ರಾರ್ಥಿತವಾದ ಹರಿ-ವಾಯುಗಳ ಭಕ್ತಿಯಿಂದ ಎಂಥಾ ಮೋಕ್ಷಸುಖವು ಲಭಿಸುತ್ತದೆ ಎಂಬುದನ್ನು ೯-೧೦ ಈ ಎರಡು ಶ್ಲೋಕಗಳಲ್ಲಿ ವರ್ಣಿಸಿದರು. ಭಕ್ತಿ ಮಾಡದೆ ಹರಿ-ವಾಯುಗಳಲ್ಲಿ ದ್ವೇಷ ಮಾಡುವವರಿಗೆ ಎಂಥಾ ದುರ್ಗತಿಯಾಗುವುದೆಂಬುದನ್ನು ಮುಂದಿನ ೧೧ನೇ ಶ್ಲೋಕದಲ್ಲಿ ವರ್ಣಿಸಿದರು. ಅನಂತರ ೧೨ನೇ ಶ್ಲೋಕದಲ್ಲಿ ಹರಿವಾಯುಗಳಲ್ಲಿ ಮಾಡುವ ಭಕ್ತಿಯು ಪರಿಪಕ್ವವಾಗದಿದ್ದರೆ ಹೇಗೆ ಮೋಕ್ಷ ಸಾಧಕವಾಗಲಾರದೆಂಬುದನ್ನು ತೋರಿಸುತ್ತಾ ವಿಷ್ಣುವೈಷ್ಣವರ ದ್ವೇಷ ಮಾಡದವರಿಗೆ ಪಂಚಕಷ್ಟವೆಂಬ ಘೋರನರಕಯಾತನೆಯೂ ಇಲ್ಲವೆಂದು ತಿಳಿಸಿದರು. ಹೀಗೆ ಪಂಚಕಷ್ಟವೆಂಬ ಅಂಧಂತಮಸ್ಸಿನ ಸ್ವರೂಪವು ಪುನಃ ಪ್ರಸಕ್ತವಾದ ಕಾರಣ ಈ ೧೩ನೇ ಶ್ಲೋಕದಲ್ಲಿ ಅದನ್ನೇ ವರ್ಣಿಸಿ ಮುಗಿಸು-ತ್ತಾರೆ—ಕ್ಷುತ್‌ಕ್ಷಾಮಾನ್ ಇತ್ಯಾದಿ.

**ಕ್ಷುತ್‌ಕ್ಷಾಮಾನ್ ರೂಕ್ಷರಕ್ಷೋ—ರದ-ಖರ-ನಖರ-**
**ಕ್ಷುಣ್ಣ-ವಿಕ್ಷೋಭಿತಾಕ್ಷಾ(ನ್)-**
**ನಾ(ಅ)ಮಗ್ನಾ-ನಂಧಕೂಪೇ ಕ್ಷುರಮುಖ-ಮುಖರೈಃ**
**ಪಕ್ಷಿಭಿ-ರ್ವಿಕ್ಷತಾಂಗಾನ್ ।**
**ಪೂಯಾಸೃಜ್-ಮೂತ್ರ-ವಿಷ್ಠಾ—ಕೃಮಿ-ಕುಲ-ಕಲಿಲೇ**
**ತತ್‌ಕ್ಷಣಾಕ್ಷಿಪ್ತಶಕ್ತ್ಯಾ-**
(ಪಾಠಾಂ.) ಕ್ಷಣಕ್ಷಿಪ್ತ, ಕ್ಷಣೋತ್‌ಕ್ಷಿಪ್ತ-
**ದ್ಯಸ್ತ್ರ-ವ್ರಾತಾರ್ದಿತಾಂಸ್ತ್ವದ್—ದ್ವಿಷ ಉಪಜಿಹತೇ**
**ವಜ್ರಕಲ್ಪಾ ಜಲೂಕಾಃ ॥ ೧೩ ॥**

ಸೂಚನೆ—ಕೃಮಿ–ಕ್ರಿಮಿ ಎರಡು ರೂಪಗಳೂ ಶುದ್ಧ ; ಆದ್ದರಿಂದ ಕೆಲವು ಪುಸ್ತಕಗಳಲ್ಲಿ ಕ್ರಿಮಿ ಎಂಬ ಪಾಠವೂ ಇದೆ.

**ಪದವಿಭಾಗ**—(ಉಭಯಪರ ಒಂದೇ ರೀತಿ) ಕ್ಷುತ್‌ಕ್ಷಾಮಾನ್ ರೂಕ್ಷ....ಕ್ಷೋಭಿತಾಕ್ಷಾನ್, ಆಮಗ್ನಾನ್, ಅಂಧಕೂಪೇ, ಕ್ಷುರಮುಖ-ಮುಖೈಃ, ಪಕ್ಷಿಭಿಃ, ವಿಕ್ಷತಾಂಗಾನ್, ಪೂಯಾ....ಕಲಿಲೇ, ತತ್‌ಕ್ಷಣ (ಣಾ, –ಣೋತ್) ಕ್ಷಿಪ್ತ....ವ್ರಾತಾರ್ದಿತಾನ್, ತ್ವದ್ದ್ವಿಷಃ, ಉಪಜಿಹತೇ, ವಜ್ರಕಲ್ಪಾಃ ಜಲೂಕಾಃ ||

**162. ಶ್ಲೋಕದ ವಿಶ್ಲೇಷಣೆ**—ಈ ಶ್ಲೋಕದಲ್ಲಿ—ಜಲೂಕಾಃ (ಕರ್ತೃಪದ) ತ್ವದ್‌ದ್ವಿಷಃ (ಕರ್ಮಪದ) ಉಪಜಿಹತೇ (ಕ್ರಿಯೆ) ಎಂಬುದೇ ಪ್ರಧಾನವಾಕ್ಯ. ದ್ವಿಷಃ ಎಂಬುದು ಷಕಾರಾಂತ ಪುಲ್ಲಿಂಗ ದ್ವಿಟ್ (ದ್ವಿಷ್) ಶಬ್ದದ ದ್ವಿತೀಯಾ ವಿಭಕ್ತಿ ಬಹುವಚನ ರೂಪ : ಇದಕ್ಕೆ ದ್ವೇಷಿಗಳನ್ನು ದ್ವೇಷಮಾಡುವವರನ್ನು ಎಂದರ್ಥ. ಈ ಪ್ರಧಾನವಾಕ್ಯಕ್ಕೆ—ಜಿಗಣೆ (ಜಿಗಳಿ)ಗಳು ನಿಮ್ಮ ದ್ವೇಷಿಗಳನ್ನು (ಸುತ್ತಲೂ) ಮುತ್ತಿಕೊಳ್ಳುತ್ತವೆ ಎಂದು ಅರ್ಥ. ಜಲೂಕಾಃ ಎಂಬ ಕರ್ತೃಪದಕ್ಕೆ 'ವಜ್ರಕಲ್ಪಾಃ' ಎಂದು ಒಂದು ವಿಶೇಷಣ. ತ್ವದ್ದ್ವಿಷಃ ಎಂಬ ಕರ್ಮಪದಕ್ಕೆ ಕ್ರಮವಾಗಿ 1. ಕ್ಷುತ್-ಕ್ಷಾಮಾನ್, 2. ರೂಕ್ಷ....ಕ್ಷೋಭಿತಾಕ್ಷಾನ್, 3. ಅಂಧಕೂಪೇ ಆಮ-ಗ್ನಾನ್, 4. ಕ್ಷುರ....ಕ್ಷತಾಂಗಾನ್, 5. ತತ್‌ಕ್ಷಣ (ಣಾ, –ಣೋತ್) ವ್ರಾತಾರ್ದಿತಾನ್ ಎಂದು ಐದು ವಿಶೇಷಣಗಳು. ಇವು ಐದೂ ಹಿಂದಿನ (೧೨ನೇ) ಶ್ಲೋಕದಲ್ಲಿ ಹೇಳಿದ 'ಪಂಚಕಷ್ಟ'ಗಳನ್ನೇ ವರ್ಣಿಸುತ್ತವೆ. ೩ನೇ ವಿಶೇಷಣದಲ್ಲಿರುವ 'ಅಂಧಕೂಪೇ'ಗೆ ಪೂಯಾ....ಕಲಿಲೇ ಎಂಬುದು ವಿಶೇಷಣ. ಒಟ್ಟಿನಲ್ಲಿ ಪೂಯಾಸೃಜ್ ಮೊದಲಾದುವುಗಳಿಂದ ತುಂಬಿದ ನರಕವೆಂಬ ಕೂಪದಲ್ಲಿ ಬಿದ್ದು ಈ ರೀತಿ ಕಷ್ಟಪಡುತ್ತಿರುವ ನಿಮ್ಮ ದ್ವೇಷಿ-ಗಳನ್ನು ವಜ್ರಾಯುಧದಂತೆ ಬಹು ತೀಕ್ಷ್ಣವಾದ ಮುಖವುಳ್ಳ ಜಿಗಣೆಗಳು ಸುತ್ತಮುತ್ತ ಮುತ್ತಿಕೊಂಡು ಹಿಂಸಿಸುತ್ತವೆ ಎಂಬುದೇ ಈ ಶ್ಲೋಕದ ಒಟ್ಟು ಭಾವ. ಈಗ ಅನ್ವಯ ಅರ್ಥಗಳಿಗೆ ಹೋಗೋಣ.

**163. ಅನ್ವಯಾರ್ಥ—(ಅನ್ವಯ)** (ಹೇ ಹರೇ !) ಕ್ಷುತ್-ಕ್ಷಾಮಾನ್, 2. ರೂಕ್ಷ....ಕ್ಷೋಭಿತಾಕ್ಷಾನ್, 3. ಪೂಯಾ....ಕಲಿಲೇ ಅಂಧಕೂಪೇ ಆಮಗ್ನಾನ್, 4. ಕ್ಷುರ....ಮುಖೈಃ ಪಕ್ಷಿಭಿಃ ವಿಕ್ಷತಾಂಗಾನ್,

5. ತತ್ಕ್ಷಣ (ಣಾ, -ಣೋತ್) ಕ್ಷಿಪ್ತ....ವ್ರಾತಾರ್ದಿತಾನ್ ತ್ವದ್ದ್ವಿಷಃ ವಜ್ರಕಲ್ಪಾಃ ಜಲೂಕಾಃ ಉಪಜಿಹತೇ ॥

**ಪದಶಃ ಅರ್ಥ**—(ಉಭಯಪರವಾಗಿ ಒಂದೇ ಅರ್ಥ) (ಹೇ ಹರೇ-ಹೇ ಶ್ರೀಹರಿಯೇ! ಅಥವಾ ಹೇ ವಾಯುದೇವರೇ!) 1. ಕ್ಷುತ್-ಹಸಿವಿನಿಂದ, ಕ್ಷಾಮಾನ್-ಬಳಲಿ ಕಂಗೆಟ್ಟವರಾದ, 2. ರೂಕ್ಷ....ಕ್ಷೋಭಿತಾಂಗಾನ್—ರೂಕ್ಷ-ಕ್ರೂರರಾದ ಅಥವಾ ನಿರ್ದಯರಾದ (ರೂಕ್ಷಸ್ತ್ವಪ್ರೇಮ್ಣಿ ಚಿಕ್ಕಣೇ -- ಅಮರ, ರೂಕ್ಷೋಽಸ್ನಿಗ್ಧ-ಪರುಷಯೋಃ—ಹೇಮಚಂದ್ರಃ, ಅಥ-ಕಾಲಾಯಸಂ ತೀಕ್ಷ್ಣಂ ಸುಲೋಹಂ ರೂಕ್ಷಮಾಸುರಮ್—ವೈಜಯಂತೀ), ರಕ್ಷಃ-ರಾಕ್ಷಸರ (ನೈರ್ಋತೋ ಯಾತು-ರಕ್ಷಸೀ—ಅಮರ; ಅಥ ರಕ್ಷಾಂಸಿ ಯಾತೂನಿ ರಾಕ್ಷಸಾ ಅಲಲೋಹಿತಾಃ—ವೈಜಯಂತೀ); ರದ-ಹಲ್ಲುಗಳಿಂದಲೂ (ರದನಾ ದಶನಾ ದಂತಾ ರದಾಃ-ಅಮರ); ಖರ-ತೀಕ್ಷ್ಣವಾದ (ತಿಗ್ಮಂ ತೀಕ್ಷ್ಣಂ ಖರಂ ತದ್ವತ್-ಅಮರ), ನಖರ-ಉಗುರುಗಳಿಂದಲೂ, ಕ್ಷುಣ್ಣ-ಪರಚಲ್ಪಟ್ಟು (ಗೀಳಿಹಾಕಲ್ಪಟ್ಟು), ವಿಕ್ಷೋಭಿತ-ದಿಕ್ಕುಗೆಟ್ಟಂತೆ ಆದ (ದಿಗ್ಭ್ರಾಂತವಾದ), ಅಕ್ಷಾನ್-ಕಣ್ಣುಗಳುಳ್ಳ; 3. ಪೂಯಾ.... ಕಲಿಲೇ—ಪೂಯ-ಕೀವು (ಲಸೀಕಾ ಲಸಿಕಾ ರಕ್ತ । ರಸಮಾಂಸವಿಪಾಕಜಾಃ ಪೂಯಂ ತು—ವೈಜಯಂತೀ), ಅಸೃಕ್-ರಕ್ತ (ರುಧಿರೇಽಸೃಗ್-ಲೋಹಿತಾಸ್ರ-ರಕ್ತ-ಕ್ಷತಜ-ಶೋಣಿತಂ-ಅಮರ—ಕಕ. ಛ.), ಮೂತ್ರ-ಮೂತ್ರ, ವಿಷ್ಠಾ-ಪುರೀಷ (ಮಲ, ಅಮೇಧ್ಯ) (ಗೂಥಂ ಪುರೀಷಂ ವರ್ಚಸ್ಕ-ಮಸ್ತ್ರೀ ವಿಷ್ಠಾ-ವಿಷೌ ಸ್ತ್ರಿಯೌ—ಅಮರ. ಕಕ.), ಕೃಮಿ*-ಕುಲ-ಕ್ರಿಮಿಗಳ ಸಮೂಹ, ಇವುಗಳಿಂದ, ಕಲಿಲೇ-ಹೇಸಿಗೆಯಾದ (ಅಸಹ್ಯವಾದ) ಅಥವಾ ಗಹನವಾದ (ಘೋರವಾದ) (ಕಲಿಲಂ ಗಹನಂ ಸಮೇ—ಅಮರ) ಅಥವಾ ಕ್ಷುಬ್ಧವಾದ (ವಿ.) ಅಥವಾ ಮಿಶ್ರವಾದ; ('ಯದಾ ತೇ ಮೋಹಕಲಿಲಂ

---

*ಕ್ರಾಮತೀತಿ ಕೃಮಿಃ ಕ್ರಿಮಿರ್ವಾ. ಹರಿದಾಡುವ ಹುಳಗಳಿಗೆ ಈ ಹೆಸರು. 'ಕ್ರಿಮಿ-ತಮಿ-ಶಸ್ತಂಭಾಮತ ಇತ್ (೪/೧೨೨) ಎಂಬ ಉಣಾದಿ ಸೂತ್ರದಂತೆ ಕಿ ಪ್ರತ್ಯಯಬಂದಿದೆ. 'ಕ್ರಿಮಿರ್ನಾ ಕೃಮಿವತ್ ಕೀಟೇ'—ಮೇದಿನೀ; 'ಕೀಟೇ ಚ ಕ್ರಿಮಿವತ್ ಕೃಮಿಃ' ರಭಸಃ ॥

ಬುದ್ಧಿರ್ವ್ಯತಿಕರಿಷ್ಯತಿ—ಗೀತೆ ೨/೫೨), ಅಂಧಕೂಪೇ-ಕಾರ್ಗತ್ತಲಿಂದ ಕೂಡಿದ ಅಂಧಂತಮಸ್ಸಿನಲ್ಲಿ, ಆಮಗ್ನಾನ್-ಮುಳುಗಿ-ಮುಳುಗಿ ತೇಲು-ತ್ತಿರುವಂಥಾ, 4. ಕ್ಷುರ-ಮುಖ-ಮುಖರೈಃ—ಕ್ಷುರ-ಕ್ಷೌರದ ಕತ್ತಿ-ಯಂತೆ ಹರಿತವಾದ, ಮುಖ-ಮುಖ (ಕೊಕ್ಕು)ಗಳುಳ್ಳವೂ, ಮುಖರೈಃ-ಕರ್ಣಕಠೋರವಾಗಿ ಕೂಗುತ್ತಿರುವುವೂ ಆದ (ದುರ್ಮುಖೇ ಮುಖರಾ-ಬದ್ಧಮುಖೌ—ಅಮರ. ವಾಚಾಟೋ ಬಹುಗರ್ಹ್ಯವಾಕ್ । ಮುಖರೋ ದುರ್ಮುಖೋಽಬದ್ಧ-ಮುಖಃ—ವೈಜಯಂತೀ) ; ಪಕ್ಷಿಭಿಃ-ರಣಹದ್ದು-ಗಳಂತಹ ಕ್ರೂರವಾದ ಹಕ್ಕಿಗಳಿಂದ, ವಿಕ್ಷತಾಂಗಾನ್—ವಿಕ್ಷತ-ಕುಕ್ಕಿಕುಕ್ಕಿ ಎಳದಾಡಲ್ಪಟ್ಟ, ಅಂಗಾನ್-ಅಂಗಾಂಗಗಳುಳ್ಳಂಥಾ, 5. ತತ್‌ಕ್ಷಣಾ (ಣ, -ಣೋತ್) ಕ್ಷಿಪ್ತ....ವ್ರಾತಾರ್ದಿತಾನ್—ತತ್-ಕ್ಷಣ ಆ ಕ್ಷಣ (ಆಗತಾನೇ ಹೊಸದಾಗಿ) ಅಥವಾ ಒಂದು ಕಡೆ ಪಕ್ಷಿಗಳು ಮೈ-ಯನ್ನು ಕುಕ್ಕಿ ಕೀಳುತ್ತಿರುತ್ತವೆ. ಅದೇ ಸಮಯದಲ್ಲೇ ಎಂದರ್ಥ), ಕ್ಷಿಪ್ತ (ಪಾಠಾಂತರ—ಆಕ್ಷಿಪ್ತ ಅಥವಾ ಉತ್‌ಕ್ಷಿಪ್ತ)-ಹೊಡೆಯಲ್ಪಟ್ಟ (ಪ್ರಯುಕ್ತವಾದ, ಪ್ರಯೋಗಿಸಲ್ಪಟ್ಟ), ಶಕ್ತಿ+ಆದಿ-ಶಕ್ತಿಯೆಂಬ ತೀಕ್ಷ್ಣ-ವಾದ ಆಯುಧವೇ ಮೊದಲಾದ (ಕಾಸೂ-ಸಾಮರ್ಥ್ಯಯೋಃ ಶಕ್ತಿಃ-ಅಮರ. ಕಕ. ಏ.), ಅಸ್ತ್ರ-ಆಯುಧಗಳ ವ್ರಾತ-ಸಮೂಹಗಳಿಂದ (ಸ್ತೋಮೌಘ-ನಿಕರ-ವ್ರಾತ—ಅಮರ), ಆರ್ದಿತಾನ್-ಪೀಡಿಸಲ್ಪಡುತ್ತಿರುವ, ತ್ವದ್-ದ್ವಿಷಃ-ನಿಮ್ಮ ದ್ವೇಷಿಗಳನ್ನು, ವಜ್ರಕಲ್ಪಾಃ-ವಜ್ರದಂತೆ ಅತಿಕಠೋರ-ವಾಗಿರುವ, ಜಲೂಕಾಃ-ಜಿಗಣೆಗಳು, ಉಪಜಿಹತೇ-(ಸುತ್ತಮುತ್ತಲೂ) ಮುತ್ತಿಕೊಳ್ಳುತ್ತವೆ.

164. **ವ್ಯಾಕರಣಾಂಶಗಳು—೧. ಕ್ಷುತ್-ಕ್ಷಾಮಾನ್**—ಕ್ಷುತ್ ಎಂದರೆ ಹಸಿವು ಎಂದರ್ಥ. ಸಂಸ್ಕೃತದಲ್ಲಿ ಇದು ಧಕಾರಾಂತ ಸ್ತ್ರೀಲಿಂಗ ಶಬ್ದ. 'ಅಶನಾಯಾ ಬುಭುಕ್ಷಾ ಕ್ಷುತ್' ಎಂದು ಅಮರ. (ಕ್ಷುತ್ ಎಂದರೆ ಸೀನುವುದು, ಸೀನು ಎಂದೂ ಅರ್ಥವಿದೆ.) 'ಕ್ಷೈ ಕ್ಷಯೇ' (ಭ್ವಾ.ಪ.)-ಕ್ಷಯಿಸು, ನಶಿಸು ಎಂಬ ಧಾತುವಿಗೆ ಭೂತಕೃದಂತ ಕ್ತ ಪ್ರತ್ಯಯ ಸೇರಿದಾಗ 'ಕ್ಷಾಯೋ ಮಃ' (ಪಾ. ೮/೨/೫೩) ಎಂಬ ಸೂತ್ರದಂತೆ ತಕಾರಕ್ಕೆ ಮಾದೇಶ

ಬರುವುದರಿಂದ **ಕ್ಷಾಮ** ಎಂದಾಗಿದೆ. (ಕಕ. ವಿ.) ಹೀಗೆಯೇ ಕ್ಷಿ ಕ್ಷಯೇ (ಭ್ವಾ.ಪ.) ಎಂಬ ಧಾತುವಿಗೆ ಕ್ತ ಸೇರಿದಾಗ 'ಕ್ಷಿಯೋ ದೀರ್ಘಾತ್' (ಪಾ. ೮/೨/೪೬) ಎಂಬ ಸೂತ್ರದಂತೆ ದೀರ್ಘವೂ ಣಕಾರಾದೇಶವೂ ಬಂದು ಕ್ಷೀಣ ಎಂಬ ರೂಪವಾಗುತ್ತದೆ. ಕ್ಷಾಮ–ಕ್ಷೀಣ ಎರಡಕ್ಕೂ ಅರ್ಥ ಒಂದೇ. **೨. ಕ್ಷುಣ್ಣ**—ಕ್ಷುದಿರ್ ಸಂಪೇಷಣೇ (ರುಧಾದಿ. ಉಭ.) ಹೊಡಿ, ಬಡಿ ಎಂಬ ಧಾತುವಿಗೆ ಕ್ತ ಪ್ರತ್ಯಯ ಸೇರಿದಾಗ 'ರದಾಭ್ಯಾಂ—' (ಪಾ. ೮/೨/೪೨) ಎಂಬ ಸೂತ್ರದಂತೆ (ಖಂಡ 162–2) ತಕಾರಕ್ಕೆ ನಕಾರಾದೇಶ ಬಂದು ರಕಾರದ ಯೋಗವಿರುವುದರಿಂದ ಣಕಾರಾದೇಶವೂ ಬರುವುದರಿಂದ ಕ್ಷುಣ್ಣ ಎಂದಾಗಿದೆ. **೩. ವಿಕ್ಷೋಭಿತಾಕ್ಷಾನ್** ಅಕ್ಷಿನ್ ನಕಾರಾಂತ ನಪುಂಸಕಲಿಂಗ ಶಬ್ದ ; ಇದಕ್ಕೆ ಅಕ್ಷಿ-ಅಕ್ಷಿಣೀ-ಅಕ್ಷೀಣಿ ಇತ್ಯಾದಿ ರೂಪಗಳು. ಅಂದರೆ ಇದು ಬಹುವ್ರೀಹಿಸಮಾಸದ ಕಡೆಯಲ್ಲಿ ಬಂದರೆ ಇದಕ್ಕೆ 'ಬಹುವ್ರೀಹೌ ಸಕ್ಥ್ಯಕ್ಷ್ಣೋಃ ಸ್ವಾಂಗಾತ್ ಷಚ್' (ಪಾ. ೫/೪/೧೧೩) ಎಂಬ ಸೂತ್ರದಂತೆ ಷಚ್ (ಅ) ಪ್ರತ್ಯಯ ಬರುವುದರಿಂದ ಅದು ಅಕಾರಾಂತವಾಗುತ್ತದೆ. (ಕಕ.ವಿ.) **೪ ವಜ್ರಕಲ್ಪಾಃ** । ಈಷದ-ಸಮಾಪ್ತವಜ್ರಾಃ ವಜ್ರಕಲ್ಪಾಃ (ಕಕ. ವಿ.)–ವಜ್ರಸದೃಶಾ ಇತ್ಯರ್ಥಃ । 'ಅದಕ್ಕೆ ಸ್ವಲ್ಪ ಕಡಿಮೆ ಅರ್ಥಾತ್ ಅದಕ್ಕೆ ಸರಿಸಮಾನವೇ' ಎಂಬ ಅರ್ಥದಲ್ಲಿ ಕಲ್ಪಪ್ ಪ್ರತ್ಯಯ ಬಂದಿದೆ. 'ಈಷದಸಮಾಪ್ತೌ ಕಲ್ಪಪ್-ದೇಶ್ಯ-ದೇಶೀಯರಃ' (ಪಾ. ೫/೩/೬೭) (ಕಕ. ವಿ.). **೫ ಜಲೂಕಾಃ** ಎಂಬುದು ಅಕಾರಾಂತ ಪುಲ್ಲಿಂಗ ಶಬ್ದದ ಬಹುವಚನರೂಪ. ಜಲಂ ಓಕೋ ವಾಸಸ್ಥಾನಂ ಯೇಷಾಂ ತೇ ಜಲೂಕಾಃ । ಪೃಷೋದರಾದಿತ್ವಾತ್ ಸಾಧುಃ ಎಂದು ಕಕ. ವಿವರಿಸಿ 'ರಕ್ತಪಾ ತು ಜಲೂಕಾಯಾಂ ಸ್ತ್ರಿಯಾಂ ಭೂಮ್ನಿ ಜಲೌಕಸಃ' ಇತ್ಯಮರಃ ಎಂದು ಕೋಶವನ್ನೂ ಹೇಳಿದ್ದಾರೆ, ಕೆಲವು ಅಮರಗಳಲ್ಲಿ 'ಜಲೌಕಾಯಾಂ' ಎಂದೇ ಪಾಠವಿದೆ. ಈ ಶಬ್ದದ ಅನೇಕ ರೂಪಗಳು ಹೀಗಿವೆ—ಜಲೂಕಾ (ಆಕಾರಾಂತ ಸ್ತ್ರೀ.), ಜಲೂಕ (ಅಕಾರಾಂತ ಪು.), ಜಲೌಕಾ (ಆಕಾ.ಸ್ತ್ರೀ), ಜಲೌಕ (ಅಕಾ.ಪು.), ಜಲೌಕಾಃ (ಸಕಾ.ಪು.ಸ್ತ್ರೀ.) ಜಲೌಕಸಃ (ಸಕಾ. ಸ್ತ್ರೀ.ಬಹು.), ಜಲೋಕಾ (ಆಕಾ.ಸ್ತ್ರೀ) ಇತ್ಯಾದಿ. **೬. ಉಪಜಿಹತೇ**

ಎಂಬುದು ಉಪಸಹಿತವಾದ ಓಹಾಙ್ ಗತೌ ಎಂಬ ಜುಹೋತ್ಯಾದಿ ಆತ್ಮನೇಪದಿ ಧಾತುವಿನ ಲಟ್ ಪ್ರಥಮಪುರುಷ ಬಹುವಚನರೂಪ. ಜಿಹೀತೇ। ಜಿಹಾತೇ। ಜಿಹತೇ ಇತ್ಯಾದಿರೂಪಗಳು (ಕಕ. ವಿ. ಛ.), 'ಭೃಞಾಮಿತ್' (ಪಾ. ೭/೪/೭೬) ಮತ್ತು 'ಅದಭ್ಯಸ್ತಾತ್' (ಪಾ. ೭/೧/೪) ಎಂಬ ಸೂತ್ರಗಳಂತೆ ಅದಾದೇಶ ಬಂದು 'ಜಿಹತೇ' ಎಂದಾಗಿದೆ.

**165. ಶ್ಲೋಕದ ಭಾವಾರ್ಥ**—ವಿಷ್ಣು-ವೈಷ್ಣವರಲ್ಲಿ ಮಾಡುವ ಏಕಾಂತಭಕ್ತಿಯು ಹೇಗೆ ಆತ್ಯಂತಿಕಸುಖಕ್ಕೆ ಕಾರಣವಾಗುವುದೋ ಅದೇ ರೀತಿ, ಆದರೆ ಅದಕ್ಕೆ ವಿಪರೀತವಾಗಿ, ಅವರಲ್ಲಿ ಮಾಡುವ ಬದ್ಧದ್ವೇಷವು ಅತಿ ಘೋರವಾದ ಅನರ್ಥಕ್ಕೆ ಕಾರಣವಾಗುತ್ತದೆ ಎಂಬುದನ್ನು ಪಂಡಿತಾ-ಚಾರ್ಯರು ಈ ಶ್ಲೋಕದಲ್ಲಿ ಮನಸ್ಸಿಗೆ ನಾಟುವಂತೆ ವರ್ಣಿಸಿದ್ದಾರೆ. ಇದನ್ನು ಓದುವ ನಮ್ಮೆಲ್ಲರಲ್ಲೂ 'ಎಂದೆಂದಿಗೂ ಜನ್ಮಜನ್ಮಾಂತರದಲ್ಲೂ ಕನಸಾ-ಮನಸಾಕೂಡ ವಿಷ್ಣು-ವೈಷ್ಣವರ ದ್ವೇಷದ ಕಲ್ಪನೆ ಸಹ ಕಿಂಚಿತ್ತೂ ಮೂಡದಿರಲಿ' ಎಂಬ ಭಾವನೆಯನ್ನು ಜಾಗ್ರತಗೊಳಿಸುವುದೇ ಈ ಶ್ಲೋಕದ ಮುಖ್ಯಧ್ಯೇಯ.

**ನರಕದ ಬಗ್ಗೆ ಕೆಲವು ಮುಖ್ಯ ವಿಚಾರಗಳು**—ಪಾಪಿಗಳು ತಾವು ಮಾಡಿದ ಮಹಾಪರಾಧಗಳಿಗಾಗಿ—ಪಾಪಗಳಿಗಾಗಿ, ಹಿಂಸೆಯನ್ನು ಅನುಭವಿ-ಸುವ ಯಾತನಾಸ್ಥಾನಗಳಿಗೇ ನರಕಗಳೆಂದು ಹೆಸರು. ನರತಿ, ನೃಣಾತಿ ವಾ–ಕ್ಲೇಶಂ ಪ್ರಾಪಯತೀತಿ ನರಕಃ। ಯಾವ ಸ್ಥಾನವು ಹಿಂಸೆಕೊಡು-ತ್ತದೋ ಅದೇ ನರಕ. ನೄ ನಯೇ (ಭ್ವಾದಿ. ಕ್ರ್ಯಾದಿ. ಪ.) ಎಂಬ ಧಾತುವಿಗೆ 'ಕೃಞಾದಿಭ್ಯಃ ಸಂಜ್ಞಾಯಾಂ ವುನ್' (ಪಾ. ೫/೩೫) ಎಂಬ ಉಣಾದಿ ಸೂತ್ರದಂತೆ ವುನ್‌ಪ್ರತ್ಯಯ ಬರಲು ಅದಕ್ಕೆ 'ಯುವೋರನಾಕೌ' (ಪಾ. ೭/೧/೧) ಎಂಬ ಸೂತ್ರದಂತೆ ಅಕಾದೇಶ ಬಂದು ನರಕ ಎಂದಾಗು-ತ್ತದೆ. ಈ ನರಕಗಳು ಸಂಖ್ಯೆಯಲ್ಲಿ ಅನೇಕವಿದ್ದರೂ ಮುಖ್ಯವಾಗಿ ನಿತ್ಯ-ಅನಿತ್ಯವೆಂದು ಎರಡು ವಿಧವಾಗಿವೆ. ಈ ನರಕಗಳ ವರ್ಣನೆಯು ಅನೇಕ ಶ್ರುತಿಗಳಲ್ಲೂ ಬಂದಿರುವುದಲ್ಲದೆ ಭಾರತದಲ್ಲೂ ಅನೇಕ ಪುರಾಣಗಳಲ್ಲೂ ಸಾಕಷ್ಟು ವಿಸ್ತಾರವಾಗಿ ದೊರಕುತ್ತದೆ. ಉದಾಹರಣೆಗೆ ಭಾಗವತದ

ಪಂಚಮಸ್ಕಂಧದ ಇಪ್ಪತ್ತನಾಲ್ಕನೇ ಅಧ್ಯಾಯದಲ್ಲಿ ಇಪ್ಪತ್ತೊಂದು ನರಕಗಳ ವರ್ಣನೆ ಮಾಡಿದೆ. ಆದರೆ ಎಲ್ಲಾ ನರಕಗಳಿಗಿಂತಲೂ ಅತ್ಯಂತ ಘೋರವಾದುವು ಬೇರೆ ಏಳು ಇವೆಯೆಂದೂ ಈ ಏಳರಲ್ಲೂ ಮೊದ-ಮೊದಲನೆಯುವಕ್ಕಿಂತ ಕಡೇ-ಕಡೆಯುವು ಹೆಚ್ಚು ಹೆಚ್ಚು ಕಠೋರವಾದುವೆಂದೂ (ಬಲೀಯಸ್ತೂತ್ತರೋತ್ತರಮ್), ಈ ಏಳರಲ್ಲಿ ಮೊದಲ ಐದಕ್ಕೆ 'ಪಂಚಕಷ್ಟ' ವೆಂದು ಹೆಸರೆಂದೂ, ಕಡೆಯ ಎರಡು ಪಂಚಕಷ್ಟವೆಂಬ ಈ ಐದು ನರಕಗಳಿಗಿಂತಲೂ ಮಹಾಘೋರವಾದುವೆಂದೂ ಮಹಾಭಾರತದಲ್ಲಿ ಹೇಳಿದೆಯೆಂಬ ಪ್ರಮೇಯ ಬ್ರಹ್ಮಸೂತ್ರಗಳ ತೃತೀಯಾಧ್ಯಾಯ ಪ್ರಥಮಪಾದದ ಸಪ್ತಾಧಿಕರಣದಿಂದ (೧೨ನೇ ಅಧಿ.) ಗೊತ್ತಾಗುತ್ತದೆ. ಈ ಸಪ್ತನರಕಗಳ ಇನ್ನೊಂದು ವಿಶೇಷವೇನೆಂದರೆ ಸಾಮಾನ್ಯವಾಗಿ ಎಲ್ಲ ಕಡೆಯೂ 'ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಮ್' ಸುಖವಾದ ಮೇಲೆ ದುಃಖ, ದುಃಖವಾದ ಬಳಿಕ ಸುಖವೆಂಬ ನಿಯಮವಿದ್ದರೂ 'ಪಂಚಕಷ್ಟೇ ತು ತತ್ಸದಾ' ಈ ಪಂಚಕಷ್ಟಗಳಲ್ಲಿ ಮಾತ್ರ ಸದಾ ದುಃಖವೇ ದುಃಖ, ಸುಖದ ಹೆಸರೂ ಸಹ ಇರುವುದಿಲ್ಲ. ಇದನ್ನೇ

ನಾಂಧೇತಮಸಿ ಮಗ್ನಾನಾಂ ಸುಖಲೇಶೋಪಿ ಕಶ್ಚನ

ಎಂದರೆ ಅಂಧಂತಮಸ್ಸಿನಲ್ಲಿ ಮುಳುಗಿದವರಿಗೆ ಯಾವ ವಿಧವಾದ ಲೇಶಮಾತ್ರ ಸುಖವೂ ಇರುವುದಿಲ್ಲ ಎಂಬ ಸ್ಮೃತಿವಾಕ್ಯ ಹೇಳುತ್ತದೆ. 1. ರೌರವ 2. ಮಹಾರೌರವ, 3. ವಹ್ನಿ, 4. ವೈತರಣಿ ಮತ್ತು 5. ಕುಂಭೀಪಾಕ ಎಂಬುವೇ ಆ ಪಂಚಕಷ್ಟಗಳೆಂಬ ಘೋರನರಕಗಳು ; ಈ ಐದೂ ಅನಿತ್ಯನರಕಗಳೇ—

ರೌರವೋಽಥ ಮಹಾಂಶ್ಚೈವ ವಹ್ನಿ—ರ್ವೈತರಣೀ ತಥಾ ।
ಕುಂಭೀಪಾಕ ಇತಿ ಪ್ರೋಕ್ತಾ—ನ್ಯನಿತ್ಯನರಕಾಣಿ ತು ॥

ಎಂದರೆ ಈ ಐದರಲ್ಲಿ ಬಿದ್ದರೂ ಸಹ ,ಕ್ವಚಿತ್ ಕಷ್ಟವನ್ನೂ—ದುಃಖವನ್ನೂ ಅನುಭವಿಸಿ ಮೇಲೆ ಬರಲು ಸಾಧ್ಯವಿದೆ. ಆದರೆ ಕಡೆಯ ಎರಡರಲ್ಲಿ, 6. ತಾಮಿಸ್ರ ಮತ್ತು 7. ಅಂಧತಾಮಿಸ್ರಗಳಲ್ಲಿ, ಬಿದ್ದರೆ ಮಾತ್ರ ಪುನಃ ಮೇಲೆ ಏಳುವಂತೆಯೇ ಇಲ್ಲ—

ತಾಮಿಸ್ರಶ್ಚಾಂಧತಾಮಿಸ್ರೋ ದ್ವೌ ನಿತ್ಯೌ ಸಂಪ್ರಕೀರ್ತಿತೌ ॥

ಇವೆರಡೂ ನಿತ್ಯನರಕಗಳಾಗಿದ್ದರಿಂದ ಇವುಗಳಲ್ಲಿ ಒಂದು ಸರಿ ಮಗ್ನ-ರಾದರೆ ಮುಗಿಯಿತು—ಪುನಃ ಎಂದೆಂದಿಗೂ ಮೇಲಕ್ಕೆ ಏಳುವ ಹಾಗೆಯೇ ಇಲ್ಲ—

ಮಹಾತಮಸಿ ಮಗ್ನಾನಾಂ ನ ತೇಷಾಮುತ್ಥಿತಿಃ ಕ್ವಚಿತ್ ॥

ಈ ತಾಮಿಸ್ರ-ಅಂಧತಾಮಿಸ್ರ ಎರಡೂ ಪಂಚಕಷ್ಟಗಳೆಂಬ ರೌರವಾದಿ ನರಕ-ಗಳೈದಕ್ಕಿಂತಲೂ ಮಹಾಕಠೋರವಾದುವು ; ಈ ಎರಡರಲ್ಲೂ ತಾಮಿಸ್ರ ಕ್ಕಿಂತಲೂ ಅಂಧತಾಮಿಸ್ರ ಮತ್ತಷ್ಟು ಕ್ರೂರ, ಅತ್ಯಂತ ಘೋರ. ಅಷ್ಟೇ ಅಲ್ಲ. ಅಂಧತಾಮಿಸ್ರವೆಂಬ ಈ ಏಳನೇ ನರಕದಲ್ಲೇ ಪುನಃ ಮೂರು ತಳಮಾಡಗಳಿವೆಯಂತೆ—

ಮಹಾತಮಸ್ತ್ರಿಧಾ ಪ್ರೋಕ್ತಂ ಊರ್ಧ್ವಂ ಮಧ್ಯಂ ತಥಾಧರಮ್॥

ಎಲ್ಲಕ್ಕೂ ಮೇಲಿನ ಭಾಗ, ಅದರ ಕೆಳಗಿನ ಮಧ್ಯಭಾಗ ಮತ್ತು ಎಲ್ಲದಕ್ಕೂ ಕೆಳಗಿನ ತಳಭಾಗ ಎಂದು ಮೂರು ತಳಮಾಡಗಳಿವೆ. ಮೇಲುಮೇಲಿನ ಮಾಡಕ್ಕಿಂತ ಕೆಳಕೆಳಗಿನ ಮಾಡಗಳು ಹೆಚ್ಚು-ಹೆಚ್ಚು ಕಠೋರವಾಗಿರುತ್ತವೆ. ಕೆಟ್ಟಕೆಳಗಿನ ಮಾಡದ ಈ ಅಂಧಂತಮಸ್ಸಿನಲ್ಲಿ ಬಿದ್ದಿರುವ ಕಲಿಯೇ ಮೊದಲಾದ ದೈತ್ಯರು ಅನುಭವಿಸುವ ಯಾತನೆಯನ್ನು ಶಬ್ದಗಳಿಂದ ವರ್ಣಿಸುವುದಕ್ಕೆ ಸಾಧ್ಯವಿಲ್ಲವೆಂದೂ ಆ ಯಾತನೆಯನ್ನು ಕೇಳಿದರೇ ಸಾಕು—ರೋಮಾಂಚವಲ್ಲ, ಮೈಮೇಲೆ ಎಚ್ಚರವೇ ತಪ್ಪುತ್ತದೆ —ಮೂರ್ಛೆಯೇ ಬರುತ್ತದೆ ಎಂದು ಕೂರ್ಮಪುರಾಣದಲ್ಲಿ ವರ್ಣಿಸಿದೆ—

ಶ್ರವಣಾದೇವ ಮೂರ್ಛಾದಿ—ರಧರಸ್ಯ ಯತೋ ಭವೇತ್ ।<br>
ತಸ್ಮಾನ್ನ ವಿಸ್ತರೇಣೈತತ್ ಕಥ್ಯತೇ ರಾಜಸತ್ತಮ ॥<br>
ಇತಿ ಕೌರ್ಮೇ (ಬ್ರ.ಸೂ. ಭಾಷ್ಯ ೩.೧/೨೩ ಸೂ.)

ಅದರ ಹೆಚ್ಚು ವರ್ಣನೆ ಕೇಳುತ್ತಾ ಹೋದರೆ ಮೈಮೇಲೆ ಎಚ್ಚ-ರಿಕೆಯೂ ತಪ್ಪಬಹುದು, ಅಥವಾ ಸೂಕ್ಷ್ಮಪ್ರಕೃತಿಯುವರಿಗೆ ಹುಚ್ಚೇ ಹಿಡಿಯುವ ಸಂಭವವೂ ಉಂಟು. ಇನ್ನೂ ಸೂಕ್ಷ್ಮಸ್ವಭಾವದವರಿಗಂತೂ ಮರಣವೇ ಸಂಭವಿಸುವುದು (ಎಂದು 'ತತ್ವಪ್ರದೀಪ'ವೆಂಬ ಸೂತ್ರಭಾಷ್ಯದ

ಟೀಕೆಯಲ್ಲಿ ಸ್ವಯಂ ತ್ರಿವಿಕ್ರಮಪಂಡಿತಾಚಾರ್ಯರೇ ಹೇಳಿದ್ದಾರೆ). ಆದ-
ಕಾರಣ ಆ ತಾಮಿಸ್ರ-ಅಂಧತಾಮಿಸ್ರಗಳ ನರಕಯಾತನೆಯನ್ನು ವಿಸ್ತಾರವಾಗಿ
ಹೇಳಿಲ್ಲ ಎಂದು ಕೂರ್ಮಪುರಾಣವು ಉಪಸಂಹಾರಮಾಡುತ್ತದೆ. ಈ
ಸಂಕ್ಷಿಪ್ತವರ್ಣನೆಯಿಂದಲೇ ವಿಷ್ಣು-ವೈಷ್ಣವ ದ್ವೇಷಿಗಳು ಎಂಥಾ ಘೋರ
ಯಾತನೆಯನ್ನು ಅನುಭವಿಸುವರೆಂಬ ಕಲ್ಪನೆ ಬರುತ್ತದೆ. ಸೂತ್ರಭಾಷ್ಯದಲ್ಲಿ
ಶ್ರೀಮದಾಚಾರ್ಯರು ಹೇಳಿದ ಈ ವಿಚಾರಗಳ ವಿಸ್ತಾರವನ್ನು ಸಾಕ್ಷಾತ್
ಅವರ ಬಾಯಿಂದಲೇ ಕೇಳಿದ ತ್ರಿವಿಕ್ರಮಪಂಡಿತಾಚಾರ್ಯರು ಸ್ವಯಂ
ಕವಿಕುಲತಿಲಕರೂ ಆದಕಾರಣ ಅಂಧಂತಮಸ್ಸಿನ ಘೋರ ಯಾತನೆಯ
ಪಂಚಕಷ್ಟಗಳನ್ನು ಕಣ್ಣಿಗೆ ಕಟ್ಟುವಂತೆ ಈ ರೀತಿ ಒಂದೇ ಶ್ಲೋಕದಲ್ಲೇ
ವರ್ಣಿಸಿದ್ದಾರೆ.

**ಯಾತನೆಗಳ ಸ್ವರೂಪ**—ಪಂಚಕಷ್ಟಗಳೆಂಬ ರೌರವಾದಿ ನರಕ-
ಗಳಲ್ಲೂ ಅವಕ್ಕಿಂತಲೂ ಘೋರಯಾತನೆಯ ಬೀಡುಗಳಾದ ತಾಮಿಸ್ರ-ಅಂಧ-
ತಾಮಿಸ್ರಗಳೆಂಬ ನಿತ್ಯನರಕಗಳಲ್ಲೂ ಅನುಭವಿಸಲ್ಪಡುವ ಸಮಸ್ತಯಾತನೆ-
ಗಳಲ್ಲೂ, ಮೇಲೆ ನಿರೂಪಿಸಿದಂತೆ, ಸುಖಲೇಶದ ಕಿಂಚಿದಂಶವೂ ಕೂಡ
ಇರುವುದಿಲ್ಲವೆಂಬುದೇ ಮೊದಲನೆಯ ವಿಶೇಷ. ಎರಡನೆಯದಾಗಿ ಈ ದುಃಖ-
ಗಳನ್ನು ಅನುಭವಿಸುವ ಜೀವಿಗಳ ಸ್ವರೂಪದೇಹವೇ ದುಃಖಮಯವಾಗಿರುವು-
ದರಿಂದಲೂ ಆ ಸ್ವರೂಪದೇಹದಿಂದಲೇ ಈ ಸಕಲಯಾತನೆಗಳನ್ನೂ ಅವರು
ಅನುಭವಿಸುತ್ತಿರುವುದರಿಂದಲೂ ಅವರ ಈ ದೇಹಗಳಿಗೆ ಛೇದ-ಭೇದ-ನಾಶಾದಿ
ಯಾವ ವ್ಯತ್ಯಾಸವೂ ಎಂದಿಗೂ ಇರುವುದಿಲ್ಲ. ಅಂದರೆ ನೇರವಾಗಿ ತುಂಡಾ-
ಗುವುದಾಗಲಿ ಸೀಳುವುದಾಗಲಿ ಇರುವುದಿಲ್ಲವಾದರೂ ಆ ನೋವು ಮಾತ್ರ
ಉಂಟಾಗುತ್ತದೆ. ಹಾಗೆಯೇ ನಿಜವಾಗಿ ಸುಟ್ಟು ಗುಳ್ಳೆ ಬರದಿದ್ದರೂ
ಸುಟ್ಟರೆ ಏನು ನೋವಾಗುವುದೋ ಗುಳ್ಳೆ (ಬೊಬ್ಬೆ) ಎದ್ದರೆ ಏನು
ಯಾತನೆಯಾಗುವುದೋ ಅದೇ ನೋವು, ಅದೇ ಯಾತನೆ, ಅವೇ
ದುಃಖಗಳು ಮಾತ್ರ ಆಗುವುವು. ಆದಕಾರಣ ಅವರವರ ಆ ಒಂದು
ಸ್ವರೂಪದೇಹವೇ, ನಾಶವಾಗದೆ ಹಾಗೆಯೇ ಶಾಶ್ವತವಾಗಿ ಇರುವುದಲ್ಲದೆ ಆ
ಸ್ವರೂಪದೇಹದಿಂದಲೇ ಕೊನೆಯವರೆಗೆ ಈ ಸಮಸ್ತ ಯಾತನೆಗಳನ್ನೂ ಪುನಃ

ಪುನಃ ಅನುಭವಿಸುತ್ತಲೇ ಇರುವರು—ಇದು ಇನ್ನೊಂದು ವಿಶೇಷ. ಮೂರನೆಯದಾಗಿ, ಈ ಲೋಕದಲ್ಲಿ ಎಲ್ಲರಿಗೂ ಹೇಗೆ ಕೈ-ಕಾಲುಗಳೇ ಮೊದಲಾದ ಪಂಚೇಂದ್ರಿಯಗಳೂ ಅಂಗಾಂಗಗಳೂ ಇರುತ್ತವೋ ಹಾಗೆಯೇ ಆ ದುಃಖಜೀವಿಗಳಿಗೂ ಪಂಚೇಂದ್ರಿಯಗಳೂ ಅಂಗಾಂಗಗಳೂ ಇದ್ದೇ ಇರುತ್ತವೆ. ಆದರೆ ಮಾತ್ರ ಅವರಿಗೆ ಆ ಪಂಚೇಂದ್ರಿಯಗಳಿಂದಲೂ ಅವರ ಅಂಗಾಂಗಗಳೆಲ್ಲಕ್ಕೂ ದುಃಖ-ನೋವುಗಳೇ ಆಗುತ್ತಿರುತ್ತವೆ. ಇದನ್ನು ಈ ಶ್ಲೋಕದಲ್ಲಿ ಎಷ್ಟು ಮಾರ್ಮಿಕವಾಗಿ ವರ್ಣಿಸುತ್ತಾರೆಂಬುದನ್ನೂ ನಾವು ಮುಖ್ಯವಾಗಿ ಗಮನಿಸಬೇಕು. (ಈ ಯಾತನೆಗಳ ಸ್ವರೂಪವನ್ನು ವರ್ಣಿಸು-ವುದಕ್ಕೆ ಸ್ವರ್ಗೀಯ ಮಹಾಮಹೋಪಾಧ್ಯಾಯ ಲಕ್ಷ್ಮೀನಾರಾಯಣ ಉಪಾಧ್ಯಾಯರ ವಾಯುಸ್ತುತಿ ವಿವರಣೆಯು ನಮಗೆ ಬಹಳ ಉಪಕಾರ ಮಾಡಿದೆ.) ಈಗ ಒಂದೊಂದಾಗಿ ಆ ಪಂಚಕಷ್ಟಗಳ ವರ್ಣನೆಗೇ ಹೋಗೋಣ.

**(ಪ್ರಥಮಕಷ್ಟ) ಕಾರ್ಗತ್ತಲಿನ ಕೊಳಚೆಯ ಗುಂಡಿ**—ಹಿಂದೆ ಹನ್ನೊಂದನೇ ಶ್ಲೋಕದಲ್ಲಿ ಈ ನರಕಗಳನ್ನು ಬಣ್ಣಿಸುತ್ತಾ ಇವುಗಳು ಕಾರ್ಗತ್ತಲಿಂದ ತುಂಬಿ ಏನೇನೂ ಕಾಣಿಸದಂತೆ ನಿಬಿಡಾಂಧಕಾರಮಯ-ವಾಗಿರುತ್ತವೆಂದೂ ಆದರೂ ಕಾದು-ಕಾದು ಬೆಳ್ಳಗಾಗಿ ಪ್ರಜ್ವಲಿಸುತ್ತ ಕರಗಿ ನೀರಾದ ಕಲ್ಲುದ್ರವವೇ ಕೊತಕೊತ ಕುದಿಯುತ್ತ ಉಕ್ಕುತ್ತಾ ಅಲೆಅಲೆಯಾಗಿ ಪ್ರವಹಿಸುತ್ತಾ ಒಂದಕ್ಕೊಂದು ತಗಲಿ ಡಿಕ್ಕಿ ಹೊಡೆದಾಗ ಮಿಂಚಿನಂತೆ ಹೊಳೆದು ಕೋರೈಸಿ ಕಣ್ಮರೆಯಾಗುತ್ತಿರುತ್ತದೆಂದೂ ವರ್ಣಿಸಿದ್ದರಲ್ಲವೆ. ಅದನ್ನೇ ಈಗ ಮುಂದರಿಸಿ ವರ್ಣಿಸುತ್ತಾರೆ. ಆರೀತಿ ಕರಗಿ ನೀರಾಗಿ ಪ್ರವಹಿಸು-ತ್ತಿರುವ ಪಾಷಾಣರಸವು ಬರೀ ಕಲ್ಲೇ ಆಗಿದ್ದಿದ್ದರೆ ಎಷ್ಟೋ ಮೇಲಾಗಿತ್ತು ; ಆದರೆ ಹಾಗಲ್ಲ. ಆ ಕಾದ ಕಲ್ಲುದ್ರವದಲ್ಲಿ ಬಿದ್ದು ಹೊರಳಾಡುತ್ತಿರುವ ದುಃಖಜೀವಿಗಳು ದ್ರವದ ಆ ಮಿತಿಮೀರಿದ ಕಾವನ್ನೂ ಅದರ ಕಡು-ಭಾರವನ್ನೂ ತಾಳಲಾರದೆ ಒಂದು ಕಡೆ ಮಲ-ಮೂತ್ರಗಳನ್ನು ವಿಸರ್ಜನೆ ಮಾಡಿಕೊಳ್ಳುತ್ತಾರೆ, ಇನ್ನೊಂದು ಕಡೆ ನೋವು ಉಲ್ಬಣವಾಗಿ ರಕ್ತ-ಕೀವುಗಳು ಹೊರಟಿಕೊಳ್ಳುತ್ತವೆ. ಅವೆಲ್ಲ ಎಲ್ಲಿ ಹೋಗಬೇಕು ? ಆ ಕಲ್ಲು-ದ್ರವದಲ್ಲೇ ಬೆರೆತುಕೊಳ್ಳುತ್ತವೆ, ಅದರ ಕಾವಿನಿಂದ ಇವೂ ಕಾದು ಕುದಿಯು-

ಲಾರಂಭಿಸಿ ದೊಡ್ಡ ಕೊಳಚೆಯ ಗುಂಡಿಯಾಗುತ್ತವೆ. ಕೊಚ್ಚೆ ಗುಂಡಿ-ಗಳಲ್ಲಿ ಲಕ್ಷಾಂತರ ಹುಳಗಳು-ಜಿಗಣೆಗಳು ಪಿತಗುಟ್ಟುವಂತೆ ಇಲ್ಲಿಯೂ ಅಸಂಖ್ಯ ಕ್ರಿಮಿಗಳೂ ಜಿಗಣೆಗಳೂ ಅಡ್ಡಾಡುತ್ತಾ ಆ ಅಂಧಕೂಪದಲ್ಲಿ ಬಿದ್ದ ಪಾಪಿಷ್ಠ-ರನ್ನು ಸುತ್ತುಮುತ್ತ ಮುಲಮುಲ ಮುತ್ತಿಕೊಂಡುಬಿಡುತ್ತವೆ. ಮುತ್ತಿ-ಕೊಂಡು ರಕ್ತಹೀರುತ್ತಾ ಗೋಳಾಡಿಸಿಬಿಡುತ್ತವೆ. ಹೀಗೆ ಒಂದು ಕಡೆ ಕಾರ್ಗತ್ತಲು, ಕೆಳಗೆ ಕುದಿಯುತ್ತಿರುವ ಕಲ್ಲುದ್ರವ—ಅದರ ಕಾವಿನ ಜೊತೆ ಕಲ್ಲಿನ ಜಗ್ಗಿಹಾಕುವ ಭಾರ ಬೇರೆ. ಇದನ್ನು ಸಹಿಸಲಾರದೆ ಜೀವರು ವಿಸರ್ಜಿಸುವ ಮಲ-ಮೂತ್ರಗಳ—ಕೀವು, ರಕ್ತಗಳ ದುರ್ನಾಥವೋ ಮೂಗಿನ ಸೆಲೆಗಳನ್ನೇ ಭೇದಿಸುವಂತಿರುತ್ತವೆ. ಹೀಗೆ ಮೂಗೂ (ಘ್ರಾಣವೂ) ದುಃಖಾ-ಪಾದಕವಾಗಿರುತ್ತದೆ. ಅದೂ ಹೋಗಲೆಂದರೆ ಸಾವಿರಾರು ಕ್ರಿಮಿಗಳೂ ಜಿಗಣೆಗಳೂ ಸುತ್ತಮುತ್ತ ಮುತ್ತಿಕೊಂಡು ಪ್ರಾಣಹೀರುತ್ತಿರುತ್ತವೆ. ಇದೆಲ್ಲ ದೇಹಕ್ಕೆ-ಚರ್ಮಕ್ಕೆ ಒದಗುವ ಒಂದು ವಿಧವಾದ ಕಷ್ಟವಾದರೆ ಹಸಿವು-ಬಾಯಾರಿಕೆಯದು ಎರಡನೆಯ ಕಷ್ಟ.

೨. **ಕ್ಷುತ್‌ಕ್ಷಾಮಾನ್**—ಇಂಥಾ ಭಯಂಕರ ಬೇಗೆಯ ತಾಪದಲ್ಲಿ ತೊಳಲುತ್ತಿರುವುದರಿಂದ ಅವರ ಬಾಯಿಗಳು ನೀರಡಿಕೆಯಿಂದ ಒಣಗಿ ಒಣಗಿ ಬೆಂಡಾಗಿಹೋಗುತ್ತಿದ್ದರೆ ಹಸಿವಿನಿಂದ ಕಾದು ಕಾದು ಅವರ ಹೊಟ್ಟೆ ಹಪಹಪ ಗುಟ್ಟುತ್ತಿರುತ್ತದೆ. ನೀರಿಗಾಗಿ-ಆಹಾರಕ್ಕಾಗಿ ತಲ್ಲಣಿಸುತ್ತಾರೆ. ಹೀಗೆ ಅವರ ಬಾಯಿ ಅವರ ನಾಲಿಗೆಗಳೇ ಅವರಿಗೆ ಶತ್ರುಪ್ರಾಯವಾಗಿರುತ್ತವೆ.

೩. **ಕ್ಷುಣ್ಣವಿಕ್ಷೋಭಿತಾಕ್ಷಾನ್**—ನರಕಗಳಲ್ಲಿ ನಿಯುಕ್ತರಾದ ಯಮದೂತರು ಆಯಾ ನರಕಗಳಲ್ಲಿ ಬಿದ್ದಿರುವ ಪಾಪಿಷ್ಠರನ್ನು ಚಿತ್ರವಿಚಿತ್ರ-ವಾಗಿ ಹಿಂಸಿಸುತ್ತಿರುವಂತೆಯೇ ಆಯಾ ತಾಮಸಜೀವಿಗಳಿಗೆ ಅವರವರ ದ್ವೇಷಕ್ಕೆ ತಕ್ಕಷ್ಟೇ ದುಃಖವನ್ನು ಕೊಡುವಂತೆ ನಿಯಮಿಸುವುದಕ್ಕಾಗಿಯೇ ಪಂಚಕಷ್ಟಾದಿ ಸಪ್ತನರಕಗಳಲ್ಲೂ ಸಹ ವಿಷ್ಣುದೂತರು ನಿಯುಕ್ತರಾಗಿ-ದ್ದಾರೆ. ಏಕೆಂದರೆ ಹರಿಭಕ್ತಿಯ ಮಟ್ಟದಲ್ಲಿ ತಾರತಮ್ಯವಿದ್ದು ಅದಕ್ಕೆ ತಕ್ಕಂತೆ ಮೋಕ್ಷದಲ್ಲಿ ದೊರಕುವ ಆನಂದದಲ್ಲೂ ಹೇಗೆ ತಾರತಮ್ಯವುಂಟೋ ಅದರಂತೆಯೇ ವಿಷ್ಣು-ವೈಷ್ಣವ ದ್ವೇಷದಲ್ಲೂ ಸಹ ತಾರತಮ್ಯ ಉಂಟೇ

ಉಂಟು ! ಬ್ರಹ್ಮದೇವರು ಹರಿಭಕ್ತರಲ್ಲಿ ಹೇಗೆ ಅಗ್ರಗಣ್ಯರೋ ಹಾಗೆ ಕಲಿಯು ಶ್ರೀಹರಿ-ವಾಯುಗಳ ದ್ವೇಷದಲ್ಲಿ ಸರ್ವಪ್ರಧಾನನು. ಅತ ಏವ ಅವನಿಗೆ ಮಿಕ್ಕ ಎಲ್ಲಾ ತಾಮಸಜೀವಿಗಳಿಗಿಂತಲೂ ಅತ್ಯಂತಾಧಿಕವಾದ ದುಃಖಾನುಭವ. ಇನ್ನು ದ್ವೇಷಸಾಧನೆ ಕಡಿಮೆ-ಕಡಿಮೆಯಾದಷ್ಟು ದುಃಖವೂ ಅಲ್ಪಅಲ್ಪವಾಗುತ್ತದೆ. ಈ ದುಃಖನಿಯಂತ್ರಣಕ್ಕಾಗಿಯೇ ಹರಿದೂತರು ಎಲ್ಲಾ ನರಕಗಳಲ್ಲೂ ನಿಯುಕ್ತರಾಗಿರುತ್ತಾರೆ. (ನರಕದಲ್ಲೇ ಇದ್ದರೂ ಇವರಿಗೆ ಮಾತ್ರ ಯಾವ ಯಾತನೆಯೂ ತಟ್ಟುವುದಿಲ್ಲ.)

ಹೀಗೆ ನಿಯುಕ್ತರಾಗಿರುವ ಆ ವಿಷ್ಣುದೂತರು ರಾಕ್ಷಸರಂತೆ ಉಗ್ರ-ವೇಷಗಳನ್ನು ಧರಿಸುವರಲ್ಲದೆ ಕರಾಳವಾದ ಕೋರೆದಾಡೆಗಳಿಂದಲೂ ವಜ್ರಾ-ಯುಧದಂತೆ ಪ್ರಖರವಾದ ಹರಿತವಾದ ಮೊನಚಾದ ಉಗುರುಗಳಿಂದಲೂ ಭಯಂಕರ ವೇಷದಿಂದಲೂ ಆ ನರಕಕೂಪಗಳಲ್ಲಿ ಬಿದ್ದು ಗೋಳಾಡುತ್ತಿರುವ ಹರಿದ್ವೇಷಿಗಳನ್ನು ಪರಚಿ ಕಿತ್ತಾಡುತ್ತಾ ಬೆದರಿಸುತ್ತಾ ಅವರ ಕಣ್ಣುಗಳನ್ನೇ ಕುಕ್ಕಿಕುಕ್ಕಿ ಕೀಳುತ್ತಾ ಹಿಂಸೆಪಡಿಸುತ್ತಾರೆ. ಈ ಪ್ರಕಾರ ಕಾರ್ಗತ್ತಲಿಂದ ಕಣ್ಣೇ ಕಾಣಿಸದಂತಿದ್ದರೆ ಮಧ್ಯೆ ಮಧ್ಯೆ ಝಳಪಿಸಿ ಮಾಯವಾಗುತ್ತಿರುವ ಮಿಂಚುಗಳು (೧೧ನೇ ಶ್ಲೋಕದಲ್ಲಿ ವರ್ಣಿಸಿದಂತೆ) ಕಣ್ಣುಗಳನ್ನು ಕ್ಷಣಕಾಲ ಕೋರೈಸಿಬಿಡುತ್ತವೆ. ಒಂದು ಕಡೆ ಘೋರದೃಶ್ಯಗಳು ಬೇಡಬೇಡವೆಂದರೂ ಕಣ್ಣಿಗೆ ಗೋಚರವಾಗುತ್ತಿದ್ದರೆ ಇನ್ನೊಂದು ಕಡೆ ಆ ಕಣ್ಣುಗಳನ್ನೇ ಕುಕ್ಕಿ-ಕುಕ್ಕಿ ಕೀಳುತ್ತಿರುತ್ತಾರೆ. ಹೀಗೆ ಅವರಿಗೆ ತಮ್ಮ ಕಣ್ಣುಗಳೇ ಮೃತ್ಯು-ಪ್ರಾಯವಾಗಿರುತ್ತವೆ. ಇದು ಮತ್ತೊಂದು ವಿಧವಾದ ಕಷ್ಟ.

೪ **ಪಕ್ಷಿಭಿರ್ವಿಕ್ಷತಾಂಗಾನ್**—ಬಯಲಲ್ಲಿ ಎಲ್ಲಾದರೂ ಒಂದು ಕಡೆ ಸತ್ತಪ್ರಾಣಿಯ ದೇಹ ಕಣ್ಣಿಗೆ ಬಿದ್ದರೆ ಸಾಕು, ಅದನ್ನು ನೂರಾರು ರಣಹದ್ದುಗಳೂ ಸಾವಿರಾರು ಕಾಗೆ-ಗೃಧ್ರಗಳೂ ಮುತ್ತಿಕೊಂಡು ಹೇಗೆ ಎಳೆದಾಡಿ ಕಿತ್ತಾಡಿ ಗದ್ದಲ ಎಬ್ಬಿಸಿಬಿಡುವುವೋ ಈ ನರಕಗಳಲ್ಲೂ ತದ್ವತ್ ಆಗುತ್ತಿರುತ್ತದೆಯೆಂದು ಹೇಳುತ್ತಾರೆ. ಕ್ಷೌರದ ಕತ್ತಿಯಂತೆ ಹರಿತವಾದ ಕೊಕ್ಕುಗಳುಳ್ಳ ಸಾವಿರಾರು ಕ್ರೂರಪಕ್ಷಿಗಳು ಈ ನರಕಗಳಲ್ಲಿ ಹರಿಯುವ ಮಾಂಸ-ರಕ್ತದ ಪ್ರವಾಹದ ಮೇಲೂ ಹಾರಾಡುತ್ತಿರುತ್ತವೆ. ಆ ಪ್ರವಾಹದಲ್ಲಿ

ಬಿದ್ದು ಮುಳುಗಿ ಏಳುತ್ತಿರುವ ತಾಮಸಜೀವಿಗಳ ದೇಹಕ್ಕೆ ಈ ಕ್ರೂರ-ಪಕ್ಷಿಗಳು ನಾ ಮುಂದು ತಾ ಮುಂದು ಎಂದು ಮುನ್ನುಗ್ಗುತ್ತಾ ಕೌಕೌ-ಗುಟ್ಟುತ್ತಾ ಧಾವಿಸಿ ಬಂದು ಮುತ್ತಿಕೊಂಡು ಬಿಡುತ್ತವೆ. ಅವುಗಳ ಆ ಕೌಕೌಗುಟ್ಟುವ ಗದ್ದಲ ಕೇಳಿದರೇ ಕಿವಿಯ ಶೆಲೆ ಒಡೆದು ಹೋಗುತ್ತಿರುತ್ತದೆ. ಅದರ ಮೇಲೆ ಅವುಗಳು ದೇಹವನ್ನು ಮುತ್ತಿಕೊಂಡು ಅಂಗಾಂಗಗಳನ್ನೆಲ್ಲಾ ಕಿತ್ತುಕಿತ್ತು ಎಳೆದಾಡಹತ್ತಿದಾಗ ಅವರಿಗಾಗುವ ಯಾತನೆ ವರ್ಣಿಸಲಸದಳ-ವಾಗಿರುತ್ತದೆ. ಅವನು ಕುಯ್ಯೋ ಮರ್ರೋ ಎಂದು ಕಿರುಚಿಕೊಳ್ಳುತ್ತಾ-ನಾದರೂ ಎಲ್ಲಿಯೂ ತಲೆಮರೆಸಿಕೊಳ್ಳುವಂತಿರುವುದಿಲ್ಲ. ಹೀಗೆ ಆ ಹಕ್ಕಿಗಳ ಕಚ್ಚಾಟದ ಧ್ವನಿಯೇ ಕರ್ಣಗಳನ್ನು ಭೇದಿಸುವಂತಿರುವುದು ; ಅದರ ಮೇಲೆ ಅಂಗಾಂಗಗಳಲ್ಲೆಲ್ಲಾ ವ್ರಣಗಳ ಬಾಧೆ ಬೇರೆ. ಇದು ಮತ್ತೊಂದು ವಿಧವಾದ ಕಷ್ಟದ ವರ್ಣನೆ.

**೫. ಅಸ್ತ್ರವ್ರಾತಾರ್ದಿತಾನ್**—ಹೀಗೆ ರೌರವಾದಿ ನರಕಗಳಲ್ಲಿ ಬಿದ್ದಿರುವ ಹರಿ-ವಾಯುಗಳ ದ್ವೇಷಿಗಳು ಅನುಭವಿಸುತ್ತಿರುವ ದುಃಖಗಳು ಒಂದಲ್ಲ, ಎರಡಲ್ಲ. ಅವರು ವಿಧವಿಧವಾದ ನಾನಾಕ್ಲೇಶಗಳಿಗೆ ಗುರಿಯಾಗು-ತ್ತಾರೆ. ಕೊತಕೊತ ಕುದಿಯುತ್ತ ಉಕ್ಕಿ ಉಕ್ಕಿ ಹರಿಯುತ್ತಿರುವ ದ್ರವೀ-ಭೂತ ಕಲ್ಲಿನ ಭಾರಿ ಕುಲುಮೆಯಲ್ಲೇ ಬಿದ್ದು ಮುಳುಗಿ–ಮುಳುಗಿ ತೇಲುತ್ತಿ-ರುತ್ತಾರೆ. ಅದರ ಜೊತೆಗೆ ಅವರ ದೇಹದಿಂದಲೇ ಹೊರಟ ಕೀವು–ರಕ್ತ ಮಲ–ಮೂತ್ರಗಳೂ ಸೇರಿಕೊಂಡು ದುರ್ನಾಥ ಹತ್ತಿ ಮೂಗಿನ ಶೆಲೆಗಳನ್ನೇ ಭೇದಿಸುತ್ತಿರುತ್ತವೆ. ಹಸಿವು ಬಾಯಾರಿಕೆಗಳಿಂದ ಬಳಲಿ ಬಳಲಿ ಅನ್ನನೀರು-ಗಳಾವುವೂ ಇಲ್ಲದೆ ಕಂಗೆಟ್ಟು ಕಂಗಾಳಿಗಳಾಗಿ ಗೋಳಾಡುತ್ತಿರುತ್ತಾರೆ. ಒಂದು ಕಡೆ ಉಗ್ರವೇಷದ ಯಮದೂತರು ಹಲ್ಲುಗಳಿಂದಲೂ ಉಗುರು-ಗಳಿಂದಲೂ ಕಣ್ಣುಗಳನ್ನು ಕೀಳುತ್ತಿದ್ದರೆ ಇನ್ನೊಂದು ಕಡೆ ಕ್ಷೌರದ ಕತ್ತಿಗಳಂತೆ ಹರಿತವಾದ ಕೊಕ್ಕುಗಳುಳ್ಳ ರಣಹದ್ದುಗಳಂತಹ ಕ್ರೂರಪಕ್ಷಿಗಳು ದೇಹದ ಅಂಗಾಂಗಗಳನ್ನೆಲ್ಲಾ ಕುಕ್ಕಿ ಕುಕ್ಕಿ ಕೀಳುತ್ತಾ ಕೌಕೌ ಎಂದು ಗುದ್ದಾಡಿಕೊಳ್ಳುತ್ತಾ ಕರ್ಣಕಠೋರವಾಗಿ ಕಿರುಚಾಡುತ್ತಿರುತ್ತವೆ. ಈ ಸಂದಿಯಲ್ಲೇ ಕೆಸರಿನಲ್ಲಿ ಅಡಗಿಕೊಂಡಿರುವ ಜಿಗಣೆಗಳೂ ಕ್ರಿಮಿ ಕೀಟಗಳೂ

ಸುತ್ತಮುತ್ತ ಮುತ್ತಿಕೊಂಡು ರಕ್ತ ಹೀರುತ್ತಾ ಸಹಿಸಲಾರದ ನೋವನ್ನು ಉಂಟುಮಾಡುತ್ತಿರುತ್ತವೆ. ಇಷ್ಟರ ಮೇಲೆ ಅವರ ಮೈಮೇಲೆ ಶಕ್ತಿ ಕುಂತಲ ಪ್ರಾಸಾದಿ ವಿಧವಿಧವಾದ ಶಸ್ತ್ರಾಸ್ತ್ರಗಳೂ ಬಿದ್ದು ಅವರನ್ನು ಹಣ್ಣು-ಗಾಯಿ–ನೀರುಗಾಯಿಗಳನ್ನಾಗಿ ಮಾಡಿಬಿಡುತ್ತವೆ. ಅವರು ಆ ನೋವನ್ನು ಸಹಿಸಲಾರದೆ ಕಿರುಚುತ್ತಿರುತ್ತಾರೆ–ಅರಚುತ್ತಿರುತ್ತಾರೆ. ಹಾಗೆಯೇ ಮೂರ್ಛೆ ಬೀಳುತ್ತಾರೆ. ಪುನಃ ಗೋಳಾಟ, ಪುನಃ ಚೀರಾಟ ಇದಕ್ಕೂ ಹೆಚ್ಚಾಗಿ ವರ್ಣಿಸುವುದು ಅಪಾಯಕರ—ಮೂರ್ಛಾದಿ ದುಷ್ಪರಿಣಾಮ-ಗಳಿಗೆ ಕಾರಣವಾಗುವುದರಿಂದ ಅವರ ದುಃಖಾನುಭವದ ಪ್ರಸಂಗವನ್ನು ಇಲ್ಲಿಗೇ ಸಾಕುಮಾಡಿ ನಿಲ್ಲಿಸಿಬಿಡೋಣ.

## (ಈ) ಎರಡನೇ ಉಪವಿಭಾಗದ ಮೂರು ಶ್ಲೋಕಗಳು

## ಹದಿನಾಲ್ಕನೇ ಶ್ಲೋಕ. ಹರಿ-ವಾಯುಗಳಲ್ಲಿ ಭಕ್ತಿಯ ಬೇಡಿಕೆ

**166. ಅವತಾರಿಕೆ**—ಹಿಂದೆಯೇ 'ಮೂರ್ಧನಿ–' ಎಂಬ ಏಳನೇ ಶ್ಲೋಕದಲ್ಲೇ ಸಾಮಾನ್ಯ ರೀತಿಯಿಂದ ಭಕ್ತಿಗಾಗಿ ಪ್ರಾರ್ಥನೆ ಮಾಡಿದ್ದರೂ ಅತೃಪ್ತಿಯಿಂದ ಆ ಭಕ್ತಿಯನ್ನೇ ವಿಶೇಷವಾಗಿ ಕೊಡಲೆಂದು ಪ್ರಾರ್ಥಿಸು-ತ್ತಾರೆ (ಕಕ. ವಿ.) ಆದರಾತಿಶಯದಿಂದ ಹರಿಗುರುಗಳಿಬ್ಬರಲ್ಲೂ ಮಾತೃ-ತ್ವಾದಿ ಕಾರಣಗಳಿಂದ ಪುನಃ ಭಕ್ತಿಯನ್ನು ಬೇಡುತ್ತಾರೆ. (ಛ) ಹರಿವಾಯು-ಗಳಲ್ಲಿ ಭಕ್ತಿಯಿಲ್ಲದವರಿಗೆ ಸದ್ಗತಿಯಿಲ್ಲವಾದ ಕಾರಣ ಹರಿವಾಯುಗಳಲ್ಲಿ ಭಕ್ತಿಯನ್ನು ಅನೇಕ ಪ್ರಕಾರದಿಂದ ಪ್ರಾರ್ಥಿಸುತ್ತಾರೆ (ಪುರಾ.). ಮೇಲೆ ೧೧ರಿಂದ ೧೩ರವರೆಗಿನ ಮೂರು ಶ್ಲೋಕಗಳಲ್ಲಿ ವರ್ಣಿಸಿದ ಪ್ರಕಾರ ಹರಿ-ವಾಯುಗಳಲ್ಲಿ ಭಕ್ತಿ ಮಾಡಿದರೂ ಅದು ಅಪಕ್ವವಾಗಿದ್ದರೆ ಮೋಕ್ಷೋಪ-ಯೋಗಿಯಾಗದೆ ನಶ್ವರಫಲಪ್ರಾಪ್ತಿಯಲ್ಲೇ ಪರ್ಯವಸಾನಗೊಳ್ಳುವುದ-ರಿಂದಲೂ ಹರಿ-ವಾಯುಗಳ ದ್ವೇಷವಂತೂ ಮಹಾಅನರ್ಥಕ್ಕೆ ಸಾಧನವಾಗಿ-ರುವುದರಿಂದಲೂ, ಹಿಂದೆ ಏಳನೇ 'ಮೂರ್ಧನಿ–' ಎಂಬ ಶ್ಲೋಕದಲ್ಲಿ ಕೇಳಿ-ಕೊಂಡ ಭಕ್ತಿಯು ಸರ್ವಾಂಗಪೂರ್ಣವಾಗಿರಲಿಲ್ಲವೆಂದೂ ಅತಏವ ಇದು ಭಗವಂತನ ಅತ್ಯರ್ಥಪ್ರಸಾದ ಸಂಪಾದನೆಗೆ ಸಾಧಕವಾಗಲಾರದೆಂದೂ ತಿಳಿದು

ಸರ್ವಾಂಗಪೂರ್ಣವಾದ ನಿಶ್ಚಲಭಕ್ತಿಯನ್ನು ಹರಿ-ವಾಯುಗಳಿಬ್ಬರಲ್ಲೂ ಅನುಗ್ರಹಿಸಬೇಕೆಂದು ಪ್ರಾರ್ಥಿಸುತ್ತಾ 'ತ್ವಮೇವ ಸರ್ವಂ ಮಮ ದೇವದೇವ' ಎಂಬ ಉಕ್ತಿಯಂತೆ ಸರ್ವಭಾವದಿಂದ ಅವರಿಬ್ಬರಲ್ಲೂ ದೈನ್ಯತೆಯಿಂದ ಮೊರೆ ಹೋಗುತ್ತಾರೆ—'ಮಾತರ್ಮೇ—' ಇತ್ಯಾದಿ.

**ಮಾತರ್ಮೇ ಮಾತರಿಶ್ವನ್ ಪಿತ-ರತುಲ ಗುರೋ**
**ಭ್ರಾತರಿಷ್ಟಾಪ್ತ ಬಂಧೋ**
**ಸ್ವಾಮಿನ್ ಸರ್ವಾಂತರಾತ್ಮ—ನ್ನಜರ ಜರಯಿತರ್–**
**ಜನ್ಮ-ಮೃತ್ಯಾಮಯಾನಾಮ್ ।**
**ಗೋವಿಂದೇ ದೇಹಿ ಭಕ್ತಿಂ ಭವತಿ ಚ ಭಗವ(ನ್)–**
**ನ್ನೂರ್ಜಿತಾಂ ನಿರ್ನಿಮಿತ್ತಾಂ**
**ನಿರ್ವ್ಯಾಜಾಂ ನಿಶ್ಚಲಾಂ ಸದ್—ಗುಣಗಣಬೃಹತೀಂ**
**ಶಾಶ್ವತೀಮಾಶು ದೇವ ॥೧೪॥**

**ಪದವಿಭಾಗ—**ಮಾತಃ, ಮೇ, ಮಾತರಿಶ್ವನ್, ಪಿತಃ, ಅತುಲ, ಗುರೋ (ಅಥವಾ ಅತುಲಗುರೋ), ಭ್ರಾತಃ, ಇಷ್ಟ, ಆಪ್ತ ಬಂಧೋ (ಅಥವಾ ಆಪ್ತಬಂಧೋ ಕಕ.), ಸ್ವಾಮಿನ್, ಸರ್ವಾಂತರಾತ್ಮನ್, ಅಜರ, ಜರಯಿತಃ, ಜನ್ಮ–ಮೃತಿ–ಆಮಯಾನಾಂ, ಗೋವಿಂದೇ, ದೇಹಿ, ಭಕ್ತಿಂ, ಭವತಿ, ಚ, ಭಗವನ್, ಊರ್ಜಿತಾಂ; ನಿರ್ನಿಮಿತ್ತಾಂ, ನಿರ್ವ್ಯಾಜಾಂ, ನಿಶ್ಚಲಾಂ, ಸದ್ಗುಣಗಣಬೃಹತೀಂ, ಶಾಶ್ವತೀಂ, ಆಶು, ದೇವ ॥

**167. ಶ್ಲೋಕದ ವಿಶ್ಲೇಷಣೆ—**(ಪ್ರಾಯಶಃ ಎಲ್ಲ ಪದಗಳಿಗೂ ಉಭಯಪರವಾಗಿ ಅನ್ವಯವೂ ಅರ್ಥವೂ ಒಂದೇ ರೀತಿ ಆಗುತ್ತದೆ; ಒಂದೆರಡು ಕಡೆ ಮಾತ್ರ ಸ್ವಲ್ಪ ವ್ಯತ್ಯಾಸವಾಗುತ್ತದೆ.) ಪೂರ್ವಾರ್ಧದಲ್ಲಿ ಮೇ, ಜನ್ಮ-ಮೃತ್ಯಾಮಯಾನಾಂ ಎಂಬ ಎರಡು ಪದಗಳನ್ನು ಬಿಟ್ಟರೆ ಮಿಕ್ಕದ್ದೆಲ್ಲವೂ ಸಂಬುದ್ಧಿರೂಪಗಳೇ ಆಗಿವೆ; ಉತ್ತರಾರ್ಧದಲ್ಲಿರುವ ಭಗವನ್, ದೇವ ಎಂಬ ಎರಡೂ ಸಂಬುದ್ಧಿರೂಪಗಳೇ. ಇವೆಲ್ಲ ಪ್ರಾಯಶಃ ಹರಿ-ವಾಯುಗಳಿಬ್ಬರಿಗೂ ಅನ್ವಯಿಸುತ್ತವೆ. ಗೋವಿಂದೇ ಭವತಿ ಚ ಭಕ್ತಿಂ

ದೇಹಿ ಎಂಬುದೇ ಪ್ರಧಾನವಾಕ್ಯ ಈ ವಾಕ್ಯಕ್ಕೆ ಹರಿಪರವಾಗಿ ಸಕಲವೇದ-ಪ್ರತಿಪಾದ್ಯನಾದ ನಿನ್ನಲ್ಲಿಯೇ ಭಕ್ತಿಯನ್ನು ಕೊಡು ಎಂದರ್ಥ. ವಾಯು-ಪರವಾಗಿ ಆದರೆ ಗೋವಿಂದನಲ್ಲೂ (ಅನಂತರ) ನಿಮ್ಮಲ್ಲೂ ಭಕ್ತಿಯನ್ನು ಕೊಡಿ ಎಂದರ್ಥವಾಗುತ್ತದೆ. ಸಂಬೋಧನೆಗಳೆಲ್ಲವೂ ಹರಿಗೂ ವಾಯುವಿಗೂ ಇಬ್ಬರಿಗೂ ಅನ್ವಯಿಸುತ್ತವೆ. ಮೇ ಎಂಬುದನ್ನು 'ಮಾತಃ' ಪಿತಃ ಎಂದೂ ಜೋಡಿಸಿಕೊಳ್ಳಬೇಕು. ಅದೇ ರೀತಿ ಜನ್ಮಮೃತ್ಯ್ವಾಮಯಾನಾಂ ಜರಯಿತಃ ಎಂದು ಅನ್ವಯಿಸಬೇಕು. ಊರ್ಜಿತಾಂ ಮೊದಲಾದ ಆರು ದ್ವಿತೀಯಾ-ವಿಭಕ್ತ್ಯಂತಪದಗಳೂ ಭಕ್ತಿಂ–ಗೆ ವಿಶೇಷಣಗಳು. ಕಡೆಯ ಚರಣದಲ್ಲಿರುವ ಆಶು ಎಂಬ ಅವ್ಯಯ ದೇಹಿ ಎಂಬ ಕ್ರಿಯೆಗೆ ಕ್ರಿಯಾವಿಶೇಷಣ. ಮೇ ಎಂಬುದು ಅಸ್ಮದ್ ಶಬ್ದದ ಚತುರ್ಥೀ ಏಕವಚನವೂ ಆಗುತ್ತದೆ ; ಆಗ ಮೇ ಎಂದರೆ ನನಗೆ ಎಂದರ್ಥವಾಗುವುದರಿಂದ ಅದನ್ನು 'ಭಕ್ತಿಂ ಮೇ ದೇಹಿ'– 'ಭಕ್ತಿಯನ್ನು ನನಗೆ ಕೊಡಿ' ಎಂದು ಕ್ರಿಯಾಪದದೊಡನೆ ಸಂಪ್ರದಾನ-ವಾಗಿ ಅನ್ವಯಿಸಬೇಕಾಗುತ್ತದೆ. ಒಟ್ಟಿನಲ್ಲಿ ಹೇ ಭಗವಂತ, ಶ್ರೀಹರಿಯೇ, ನಿನ್ನಲ್ಲಿ ನಿಶ್ಚಲವಾದ ಭಕ್ತಿಯನ್ನು ನನಗೆ ಬೇಗ ಕೊಡು ಎಂದು ಹರಿಪರ-ವಾಗಿಯೂ, ಹೇ ಸ್ವಾಮಿ, ವಾಯುದೇವರೇ, ಶ್ರೀಹರಿಯಲ್ಲೂ ನಿಮ್ಮಲ್ಲೂ ನಿಶ್ಚಲವಾದ ಭಕ್ತಿಯನ್ನು ನನಗೆ ಶೀಘ್ರವಾಗಿ ಕೊಡಿ ಎಂದು ವಾಯು-ಪರವಾಗಿಯೂ ಅರ್ಥ. ಈಗ ಕೆಲವು ಕಠಿನ ಪದಗಳ ಅರ್ಥವನ್ನು ಬಿಡಿಸಿ-ತೋರಿಸಿ ಆಮೇಲೆ ಅನ್ವಯಾರ್ಥಕ್ಕೆ ಹೋಗುವೆನು.

**168. ಶಬ್ದಾರ್ಥವಿವರಣೆ—೧. ಮಾತರಿಶ್ವನ್** ಎಂಬುದು ನಕಾರಾಂತ ಪುಲ್ಲಿಂಗ ಮಾತರಿಶ್ವಾ ಶಬ್ದದ ಸಂಬುದ್ಧಿ (ಏಕವಚನ) ರೂಪ. 'ಶ್ವಸನಃ ಸ್ಪರ್ಶನೋ ವಾಯುರ್ ಮಾತರಿಶ್ವಾ ಸದಾಗತಿಃ' ಎಂದು ಅಮರದಲ್ಲಿ ವಾಯುವಿನ ಹೆಸರುಗಳಲ್ಲಿ ಪಠಿತವಾಗಿದೆ. ಇದಕ್ಕೆ ಭಟ್ಟೋಜಿ ದೀಕ್ಷಿತರೂ ಕೋಶವ್ಯಾಖ್ಯಾಕಾರರೂ ಮಾತರಿ–ಅಂತರಿಕ್ಷೇ ಶ್ವಯತಿ–ಸಂಚರತೀತಿ ಮಾತ-ರಿಶ್ವಾ ಎಂದು ವ್ಯುತ್ಪತ್ತಿ ತೋರಿಸಿದ್ದಾರೆ. ಮಾತರಿ ಎಂದರೆ ಅಂತರಿಕ್ಷದಲ್ಲಿ, ಶ್ವಾ–ಸಂಚರಿಸುವಂಥಾದ್ದು ಗಾಳಿ ಎಂದು ವ್ಯುತ್ಪತ್ತಿ ಹೇಳಿದ್ದಾರಾದರೂ ಮಾತೃಶಬ್ದಕ್ಕೆ ಅಂತರಿಕ್ಷ ಎಂಬ ಅರ್ಥ ಹೇಗೆ ಬಂತೆಂದು ಸ್ಪಷ್ಟಪಡಿಸಿಲ್ಲ.

ಮಾತರಿ ಎಂದರೆ ದಿತಿಯ ಗರ್ಭದಲ್ಲಿದ್ದಾಗ ದೇವೇಂದ್ರನು ಆ ಗರ್ಭವನ್ನು ನಲವತ್ತೊಂಬತ್ತು ತುಂಡಾಗಿ ಕತ್ತರಿಸಿದನೆಂದೂ ಅವರೇ ಮರುತ್ತುಗಳಾದ-ರೆಂಬ ಕಥೆ ಭಾಗವತದಲ್ಲಿ ಆರನೇ ಸ್ಕಂಧದ ಹದಿನೆಂಟನೇ ಅಧ್ಯಾಯದಲ್ಲಿ ಬರುತ್ತದೆ. ಅದನ್ನು ಉದ್ದೇಶಿಸಿ ಮಾತರಿ–ದಿತಿಗರ್ಭೇ, ಶ್ವಯತಿ-ಶೇತೇ) ತಾಯಿಯ ಗರ್ಭದಲ್ಲಿ ಇದ್ದವರು ಎಂದೂ ಇನ್ನೊಂದು ನಿಷ್ಪತ್ತಿ ಹೇಳುತ್ತಾರೆ. ಉಣಾದಿಸೂತ್ರಗಳಲ್ಲಿ (೧/೧೫೭) 'ಶ್ವನ್ನುಕ್ಷನ್—' ಎಂಬ ಸೂತ್ರದಲ್ಲಿ ಹದಿಮೂರು ಶಬ್ದಗಳ ವ್ಯುತ್ಪತ್ತಿ ನಿಪಾತ (ಕ್ರಮರಹಿತ)ವಾಗಿದೆಯೆಂದು ಪಠಿಸಿದೆ; ಅವುಗಳಲ್ಲಿ ಮಾತರಿಶ್ವಾ ಹನ್ನೆರಡನೆಯದು. (ಮಾತರಿ ಎಂಬಲ್ಲಿ ಸಪ್ತಮೀ ವಿಭಕ್ತಿಗೆ ಅಲುಕ್ (ಲೋಪಾಭಾವ)ವನ್ನೂ ಟುಓಶ್ವಿ ಗತಿ-ವೃದ್ಧ್ಯೋಃ (ಭ್ವಾದಿ. ಪ.) ಎಂಬ ಧಾತುವಿನ ಮೇಲೆ ಕನಿನ್ ಪ್ರತ್ಯಯ-ವನ್ನೂ ಧಾತುವಿನ ಇಕಾರಕ್ಕೆ ಲೋಪವನ್ನೂ ಈ ಸೂತ್ರ ಹೇಳಿದೆ. ಮಾತರಿ+ಶ್ವಿ+ಕನಿನ್ (ಅನ್)–ಮಾತರಿ-ಶ್ವನ್ । ಇನ್ನು ನಮ್ಮ ಸಿದ್ಧಾಂತ-ರೀತ್ಯಾ ಮಾತರಿ ಎಂದರೆ ವೇದಾದಿ ಸಪ್ತಮಾತೃಕೆಗಳಲ್ಲಿ (ಖಂಡ 109 ನೋಡಿ) ಶ್ವಾ-ಸಂಚರಿಸುವವನು, ಪ್ರತಿಪಾದ್ಯನು ಎಂದರ್ಥ. ಇದಕ್ಕೆ ಸಕಲ ವೇದಪ್ರತಿಪಾದ್ಯ ನಾರಾಯಣ ಎಂದು ಹರಿಪರವಾದ ಅರ್ಥ. ವಾಯು-ಪರವಾದರೆ ಸಪ್ತಮಾತೃಕೆಗಳಲ್ಲಿ ನಿರತರಾದವರು, ಅವುಗಳನ್ನು ವಿಷ್ಣುಪರ-ವಾಗಿ ಪ್ರತಿಪಾದಿಸತಕ್ಕವರು ಎಂದರ್ಥವಾಗುತ್ತದೆ.

ಆದರೆ ಪು.ರಾ.ದಲ್ಲಿ ಇನ್ನೊಂದು ವಿಶೇಷಾರ್ಥ ತೋರಿಸಿದ್ದಾರೆ. ಹರಿ-ಪರವಾಗಿ—ಮಾತರಿ–ಜಗಜ್ಜನನಿಯಾದ ಲಕ್ಷ್ಮಿಯಲ್ಲಿ, ಶ್ವಾ–ವಾಸಮಾಡು-ವವನು ಎಂದರೆ ಶ್ರೀನಿವಾಸ–ಶ್ರೀಹರಿ ಎಂದು ಅರ್ಥ. ವಾಯುಪರವಾಗಿ ಮಾತರಿ–ಜಗಜ್ಜನನಿಯಾದ ಲಕ್ಷ್ಮಿಯಲ್ಲಿ, ಶ್ವಾ–ಪ್ರಳಯಕಾಲದಲ್ಲಿ ಲಯ ಹೊಂದುವವರು ಎಂದು ಅರ್ಥ ಮಾಡಿದ್ದಾರೆ.

೨. **ಗೋವಿಂದೇ**—ಗೋ ಶಬ್ದಕ್ಕೆ ಸ್ವರ್ಗ, ಭೂಮಿ, ಹಸು, ವೇದ ಎಂದು ನಾನಾರ್ಥಗಳಿರುವುದರಿಂದ ಗೋವಿಧ ಎಂಬುದಕ್ಕೂ ಅನೇಕಾರ್ಥ-ಗಳಾಗುತ್ತವೆ. ಗಾಂ (ಏಕವಚನ) ಗಾಃ ವಾ (ಬಹುವಚನ)–ಭೂಮಿಯನ್ನು ಸ್ವರ್ಗವನ್ನು, ವೇದವನ್ನು ಅಥವಾ ವೇದಗಳನ್ನು, ಆಕಳುಗಳನ್ನು, ವಿಂದತಿ–

ಲಭತ ಇತಿ ಗೋವಿಂದಃ, ಹೊಂದುವವನಾದ್ದರಿಂದ (ರಕ್ಷಕನಾದ್ದರಿಂದ) ಗೋವಿಂದ ಎಂದು ವ್ಯುತ್ಪತ್ತಿ. 'ಅನುಪಸರ್ಗಾಲ್ಲಿಂಪವಿಂದ—' (ಪಾ. ೩/೧/೧೩೮) ಎಂಬ ಸೂತ್ರವಿಹಿತವಾದ ಶ ಪ್ರತ್ಯಯವು 'ಗವಾದಿಷು ವಿಂದೇಃ ಸಂಜ್ಞಾಯಾಮ್' ಎಂಬ ವಾರ್ತಿಕದಂತೆ ಗೋ ಶಬ್ದದೊಡನೆ ಸೇರಿ ಹೆಸರು ಸೂಚಿಸುವಾಗಲೂ ವಿಂದ್‌ಗೆ ಶ-ಪ್ರತ್ಯಯ ಬರುವುದೆಂದು ಹೇಳಿರುವುದರಿಂದ ಗೋ+ವಿದ್ (ವಿಂದ್) ಶ ಸೇರಿ ಗೋವಿಂದ ಎಂದಾಗುತ್ತದೆ. ಇಲ್ಲಿಯ ಸಂದರ್ಭಕ್ಕೆ ಗೋ—ವೇದಗಳಿಂದ, ವಿಂದ—ಹೊಂದಲ್ಪಡುವವನು ಎಂದರೆ ಪ್ರತಿಪಾದ್ಯ ಎಂಬ ಅರ್ಥ ಹೆಚ್ಚು ಸಂಗತವಾಗುತ್ತದೆ. ಹರಿಪರವಾಗಿ ಅರ್ಥ ಹೇಳುವಾಗ ಗೋವಿಂದೇ—ಸಕಲವೇದಪ್ರತಿಪಾದ್ಯನಾದ, ಭವತಿ—ನಿನ್ನಲ್ಲಿ ಎಂದರೆ ವಿಷ್ಣುವಿನಲ್ಲಿ ಎಂದು ಅರ್ಥವಾಗುತ್ತದೆ. ವಾಯುಪರವಾಗಿ ಅರ್ಥ ಹೇಳುವಾಗ—ಗೋವಿಂದೇ—ಶ್ರೀಹರಿಯಲ್ಲಿಯೂ, ಭವತಿ ಚ—ನಿಮ್ಮಲ್ಲಿಯೂ (ಎಂದರೆ ವಾಯುವಿನಲ್ಲಿಯೂ) ಎಂದರ್ಥ. ಪುರಾ. ಚ ಪ್ರಯೋಗದಲ್ಲೇ ವಿಶೇಷಾರ್ಥ ತೋರಿಸುತ್ತಾರೆ. ಚ ಶಬ್ದ ಏವಕಾರಾರ್ಥಕವಾದ ಕಾರಣ 'ಗೋವಿಂದೇ ಭವತಿ ಚ' ಎಂಬುದಕ್ಕೆ ಸಕಲವೇದಪ್ರತಿಪಾದ್ಯನಾದವನು ನೀನೊಬ್ಬನೇ ಆದಕಾರಣ ನಿನ್ನಲ್ಲಿಯೇ ಎಂದರೆ ನಿನ್ನೊಬ್ಬನಲ್ಲಿ ಮಾತ್ರವೇ— ಭಕ್ತಿಯನ್ನು ಕೊಡು ಎಂದು ಕೇಳಿದ್ದರಿಂದ 'ಇತರ ದೇವತೆಗಳಲ್ಲಿ ಸರ್ವೋತ್ತಮತ್ವೇನ ಭಕ್ತಿ ಪ್ರಾರ್ಥನೀಯವಲ್ಲವೆಂತ' ಸಿದ್ಧವಾಗುತ್ತದೆ.

೩. **ಗೋವಿಂದೇ ಭವತಿ ಚ**—ಎಂಬಲ್ಲಿ ತಂತ್ರದಿಂದ ಗೋವಿಂದೇ ಎಂಬುದನ್ನು ಎರಡು ಸರಿ ಅನ್ವಯಿಸಿಕೊಂಡು ಹೀಗೂ ಹೇಳಬಹುದು (ಪುರಾ.) ಗೋವಿಂದೇ ಚ—ಸರ್ವಶಬ್ದವಾಚ್ಯನಾದ ಗೋವಿಂದನೊಬ್ಬನಲ್ಲೇ ಸರ್ವೋತ್ತಮನೆಂಬುದಾಗಿಯೂ, ಗೋವಿಂದೇ—(ವಿಷ್ಣುವನ್ನೂ ರಮಾ-ಬ್ರಹ್ಮ ಇವರಿಬ್ಬರನ್ನೂ) ಬಿಟ್ಟು ಸರ್ವವೇದಪ್ರತಿಪಾದ್ಯರಾದ, ಭವತಿ ಚ—ನಿಮ್ಮಲ್ಲಿಯೂ 'ಜೀವೋತ್ತಮತ್ವವಿವಕ್ಷಯಾ ಅಧಿಕಭಕ್ತಿಯನ್ನು ಕೊಡು ಎಂದೂ ಅರ್ಥಮಾಡಬಹುದು. ಏಕೆಂದರೆ ಐತರೇಯ ಭಾಷ್ಯದಲ್ಲಿ (೨-೨-೨) ವಿಷ್ಣುವಿನಲ್ಲಿ ಸರ್ವಶಬ್ದಗಳೂ ಪ್ರವೃತ್ತವಾಗುವಂತೆ ವಾಯುವಿನಲ್ಲೂ ಪ್ರವೃತ್ತವಾಗುತ್ತವೆ ಎಂಬುದನ್ನು—

ತಥೈವ ಸರ್ವನಾಮಾನಿ ಪ್ರವರ್ತಂತೇ ಚ ಮಾರುತೇ ।

ಎಂದು ಸ್ಪಷ್ಟಪ್ರಮಾಣಗಳಿಂದ ತೋರಿಸಿಕೊಡುತ್ತಾರೆ. ಇದನ್ನೇ ಸ್ಪಷ್ಟ-ಪಡಿಸಿ 'ಅನ್ಯವ್ಯಪೇಕ್ಷಯಾ ವಾಯೌ ಮುಖ್ಯವೃತ್ತಿರ್ವಿಧೀಯತೇ' ಎಂದರೆ ರುದ್ರಾದಿ ಅವರ (ಕಡಿಮೆಯಾದ) ದೇವತೆಗಳ ಅಪೇಕ್ಷಯಾ ವಾಯುದೇವ-ರಲ್ಲಿ (ವಿಷ್ಣು ನಾರಾಯಣಾದಿ ಕೇವಲ ವಿಷ್ಣುನಾಮಗಳನ್ನೂ ಲಕ್ಷ್ಮೀದೇವಿಗೆ ಅನ್ವಯಿಸುವ ಶ್ರೀಲಕ್ಷ್ಮೀ, ರಮಾದಿ ಶಬ್ದಗಳನ್ನೂ, ಬ್ರಹ್ಮದೇವರಿಗೆ ಮಾತ್ರ ಅನ್ವಯಿಸುವ ಹಿರಣ್ಯಗರ್ಭ, ಚತುರ್ಮುಖಾದಿ ಶಬ್ದಗಳನ್ನೂ ಬಿಟ್ಟು) ಮಿಕ್ಕ ಎಲ್ಲ **ಶಬ್ದಗಳೂ** ವಾಯುದೇವರಲ್ಲಿ **ಮುಖ್ಯವೃತ್ತಿ**ಯಿಂದಲೇ ಅನ್ವಯಿಸುತ್ತವೆ. ಶ್ರೀಹರಿಯಲ್ಲಂತೂ ನಿರವಧಿಕವೃತ್ತಿಯಿಂದ (ಎಂದರೆ ಯಾವ ಸಂಕೋಚವಿಲ್ಲದಂತೆ) ಅನ್ವಯಿಸುತ್ತದೆ. ಹೀಗೆ ಹರಿವಾಯು-ಗಳಿಬ್ಬರು ಮಾತ್ರವೇ 'ಸರ್ವಶಬ್ದವಾಚ್ಯರು' ಎಂಬ ಅಂಶವನ್ನು ಬ್ರಹ್ಮಾಂಡ ಪುರಾಣವಾಕ್ಯ (ಐತರೇಯಭಾಷ್ಯೋದಾಹೃತ) ಸ್ಪಷ್ಟವಾಗಿ ಹೀಗೆ ಹೇಳು-ತ್ತದೆ—

ಮಧ್ಯಮೋ ವಾಯುರೇವೈಕ ಉತ್ತಮಃ ಕೇವಲೋ ಹರಿಃ ।
ಸರ್ವಶಬ್ದೋದಿತೌ ತಸ್ಮಾತ್ ಏತೌ ದ್ವಾವೇವ ನಾಪರಃ ।
ಅನ್ಯೇ ಚೈವ ಮಿತೈಃ ಶಬ್ದೈ—ರುಚ್ಯಂತೇ ನಾಮಿತೈಃ ಕ್ವಚಿತ್ ॥

(ಅರ್ಥ) ವಾಯುದೇವರೊಬ್ಬರೇ ಸರ್ವಶಬ್ದವಾಚ್ಯತ್ವದೃಷ್ಟ್ಯಾ (ಶ್ರೀಸ್ವತತ್ತ್ವ-ದಲ್ಲಿ) ಮಧ್ಯಮರು. ಶ್ರೀಹರಿ ಒಬ್ಬನೇ ಸರ್ವೋತ್ತಮ. ಆದಕಾರಣ ಶ್ರೀಹರಿ ಮತ್ತು ಮುಖ್ಯಪ್ರಾಣ ಈ ಇಬ್ಬರು ಮಾತ್ರವೇ ಸರ್ವಶಬ್ದ-ವಾಚ್ಯರು, ಬೇರೆ ಯಾರೂ ಅಲ್ಲ. ಮಿಕ್ಕವರೆಲ್ಲರಿಗೂ ಮಿತಶಬ್ದಗಳಿಂದ ವಾಚ್ಯತ್ವವುಂಟೇ ಹೊರತು ಸರ್ವಶಬ್ದವಾಚ್ಯತ್ವ ಇಲ್ಲ.

**ಸರ್ವಾಂತರಾತ್ಮನ್**—ಸರ್ವಸ್ಯ ಅಂತರಾತ್ಮಾ–ನಿಯಾಮಕಃ ಸರ್ವಾಂತರಾತ್ಮಾ । ತಸ್ಯ ಸಂಬುದ್ಧಿಃ । ಎಲ್ಲರ ಒಳಗೂ ಇದ್ದು ಸಕಲ-ಕಾರ್ಯಗಳನ್ನೂ ನಡೆಯಿಸುವವನೇ ಎಂದು ಅರ್ಥ. ಹರಿಪರವಾಗಿ ಸರ್ವ-ಶಬ್ದಕ್ಕೆ ನಿರುಪಾಧಿಕವಾಗಿ ರಮಾ-ಬ್ರಹ್ಮ-ಮುಖ್ಯಪ್ರಾಣಾದಿ ಸಕಲರಿಗೂ ನಿಯಾಮಕ ಎಂದರ್ಥ. ಈ ವಿಷಯವು ಬ್ರಹ್ಮಸೂತ್ರಗಳಲ್ಲಿ ಅಂತರ್ಯಾಮ್ಯಧಿ-

ಕರಣದಲ್ಲಿ (೧ ಅ. ೧ ಪಾ. ೭ ಅಧಿ. ೨೦–೨೧ ಸೂ.) ವಿಚಾರಮಾಡಿ ನಿರ್ಣಯಿಸಲ್ಪಟ್ಟಿದೆ. 'ಅಂತಃಸಮುದ್ರೇ ಮನಸಾ ಚರಂತಂ ಬ್ರಹ್ಮಾನ್ವವಿಂದದ್ ದಶಹೋತಾರಮರ್ಣೇ' (ತೈತ್ತಿರೀಯ ಅರಣ್ಯಕ ೩ ೧೧/೧) ಕ್ಷೀರಸಮುದ್ರದಲ್ಲೂ ಪ್ರಲಯೋದಕದಲ್ಲೂ ಅಲ್ಲದೆ ಜಲದಲ್ಲೂ ಕ್ಷೀರದಲ್ಲೂ ಸ್ವೇಚ್ಛೆಯಿಂದ ಸಂಚರಿಸುವ, ದಶೇಂದ್ರಿಯ ನಿಯಾಮಕನಾದ ವಿಷ್ಣುವನ್ನು ಬ್ರಹ್ಮದೇವರು ಅರಿತುಕೊಂಡರು; 'ಇಂದ್ರಸ್ಯಾತ್ಮಾನಿಹಿತಃ ಪಂಚಹೋತಾ' (ಅಲ್ಲೇ ೩/೧೧/೨೨) ದೇವೇಂದ್ರನಿಗೆ ನಿಯಾಮಕನೂ, ಸರ್ವರ ಹೃದಯದಲ್ಲಿರುವವನೂ ಚಕ್ಷುರಾದಿ ಪಂಚೇಂದ್ರಿಯಗಳಲ್ಲಿದ್ದು ರೂಪಾದಿ ವಿಷಯಗಳಿಗೆ ಹೋತೃವೂ ಆದ, 'ವಾಯೋರಾತ್ಮಾನಂ' (ಅಲ್ಲೇ ೩/೧೧/೨೩) ವಾಯುವಿಗೂ ಪ್ರೇರಕನಾದ, 'ಅಂತರಾದಿತ್ಯೇ ಮನಸಾ ಚರಂತಂ, ದೇವಾನಾಂ ಹೃದಯಂ' (ಅಲ್ಲೇ ೩/೧೧/೨೫) ಸೂರ್ಯನಲ್ಲಿಯೂ ಸಹ ಪ್ರೇರಕನಾಗಿ ಸ್ವೇಚ್ಛೆಯಿಂದ ಸಂಚರಿಸುವ ಮತ್ತು ಸಕಲ ದೇವತೆಗಳ ಹೃದಯಗಳಲ್ಲೂ ವಾಸವಾಗಿರುವ, ಇತ್ಯಾದಿ ಪ್ರಮಾಣಗಳಿಂದ ಶ್ರೀಹರಿ ನಿರವಧಿಕವಾಗಿ ಸರ್ವಪ್ರೇರಕನೆಂದು ಅರ್ಥವಾಗುತ್ತದೆ.

ವಾಯುದೇವರ ಪರವಾಗಿ ಅರ್ಥ ಹೇಳುವಾಗ ಗರುಡಶೇಷಾದಿ ಸಕಲರಿಗೂ ಪ್ರೇರಕರು ವಾಯುದೇವರೆಂದು ಸಂಕೋಚಮಾಡಿ ಹೇಳಬೇಕು. ಇದನ್ನೇ 'ಮುಖ್ಯಪ್ರಾಣವಶೇ ಸರ್ವಂ' ಎಂಬ ಅಣುಭಾಷ್ಯ (೨ ಅ. ೭ ಶ್ಲೋಕ) ವಾಕ್ಯವೂ, 'ಚೇಷ್ಟಾ-ಮೋಕ್ಷ-ಜ್ಞಾನದಾತಾ ಸುರಾಣಾಂ ಮಾರುತಸ್ತತಃ' (ಐ.ಭಾ. ೨/೪/೩)–ರುದ್ರಾದಿ ಸಕಲ ದೇವತೆಗಳಿಗೂ ಚಲನಶಕ್ತಿಯನ್ನೂ ಜ್ಞಾನವನ್ನೂ ಕೊನೆಗೆ ಮೋಕ್ಷವನ್ನೂ ಕೊಡುವವನು ಮುಖ್ಯಪ್ರಾಣನೇ ಆಗಿದ್ದಾನೆ ಎಂಬ ಐತರೇಯ ಭಾಷ್ಯೋದಾಹೃತಪ್ರಮಾಣವೇ ಮೊದಲಾದ ಅನೇಕ ವಾಕ್ಯಗಳು ಹೇಳುತ್ತವೆ.

ಇದು ಒಂದು ವಿಧವಾದ ಅರ್ಥವಾದರೆ ಕಕ. ಮತ್ತು ವಿ. ಟೀಕಾಕಾರರು ಸರ್ವ ಎಂಬುದಕ್ಕೆ ಈ ಶ್ಲೋಕದಲ್ಲಿ ಹೇಳಿದ ತಂದೆ-ತಾಯಿ, ಬಂಧು–ಬಳಗ, ಸ್ವಾಮಿ ಎಲ್ಲರಲ್ಲೂ ನಿಂತು ಪ್ರೀತ್ಯಾದರಗಳನ್ನು ಪ್ರೇರಿಸುವವರು ಎಂದು ಅರ್ಥಮಾಡುತ್ತಾರೆ. ಈ ರೀತಿ ಅರ್ಥ ಹೇಳುವುದಕ್ಕೆ 'ನ ವಾ

ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತ್ಯಾತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ' (ಬೃ.ಉ. ೪/೪/೫) ಎಂಬ ಬೃಹದಾರಣ್ಯಕೋಪ-ನಿಷತ್ತಿನಲ್ಲಿ ಪ್ರತಿಪಾದಿಸಿದ ವಿಷಯುವೇ ಮುಖ್ಯ ಆಧಾರ. ಆ ಪ್ರಕರಣ-ದಲ್ಲಿ ಯಾಜ್ಞವಲ್ಕ್ಯರು ತಮ್ಮ ಪತ್ನಿ ಮೈತ್ರೇಯಿಗೆ ಗಂಡ ಹೆಂಡತಿ ಮಕ್ಕಳು ಇಷ್ಟಮಿತ್ರರು ಯಾರೇ ಆಗಲಿ ತಾವು ಇನ್ನೊಬ್ಬರಿಗೆ ಪ್ರಿಯರಾಗ-ಬೇಕೆಂದು ಬಯಸಿದರೆ ಪ್ರಿಯರಾಗುವುದಿಲ್ಲ ; ಆ ಭಗವಂತ ನಾರಾಯಣ (ಆತ್ಮಾ ) ಇವರು ಇವನನ್ನು ಪ್ರೀತಿಸಲಿ ಎಂದು ಇಚ್ಛಿಸಿದರೆ ಮಾತ್ರವೇ ಪ್ರಿಯರಾಗುತ್ತಾರೆ, ಇಲ್ಲದಿದ್ದರೆ ಸರ್ವಥಾ ಪ್ರಿಯರಾಗಲಾರರು ಎಂದು ತೋರಿಸಿದ್ದಾರೆ. ಅದರಂತೆ ಶ್ರೀಹರಿವಾಯುಗಳೇ ತಂದೆ-ತಾಯಿಗಳೆಲ್ಲರಲ್ಲೂ ನಿಂತು ನಮ್ಮಲ್ಲಿ ಪ್ರೀತಿಮಾಡಿ ನಮ್ಮನ್ನು ಉದ್ಧಾರಮಾಡುತ್ತಾರೆಂಬುದೇ ಈ ಅರ್ಥದ ಸಾರಾಂಶ. ಈಗ ಅನ್ವಯಾರ್ಥಕ್ಕೆ ಹೋಗಬಹುದು.

**169. ಅನ್ವಯ ಮತ್ತು ಪದಶಃ ಅರ್ಥ**—(ಮೇ) ಮಾತಃ ಪಿತಃ ಅತುಲ ಗುರೋ (ಅತುಲಗುರೋ) ಭ್ರಾತಃ ಇಷ್ಟ, ಆಪ್ತಬಂಧೋ (ಆಪ್ತಬಂಧೋ) ಸ್ವಾಮಿನ್ ಸರ್ವಾಂತರಾತ್ಮನ್ ಅಜರಜನ್ಮಮೃತ್ಯಾಮ-ಯಾನಾಂ ಜರಯಿತಃ ಭಗವನ್ ಮಾತರಿಶ್ವನ್ ದೇವ ಗೋವಿಂದೇ ಭವತಿ ಚ ಊರ್ಜಿತಾಂ ನಿರ್ನಿಮಿತ್ತಾಂ ನಿರ್ವ್ಯಾಜಾಂ ನಿಶ್ಚಲಾಂ ಸದ್ಗುಣಗಣಬೃಹತೀಂ ಶಾಶ್ವತೀಂ ಭಕ್ತಿಂ ಮೇ ಆಶು ದೇಹಿ ಎಂದು ಉಭಯಪರವಾಗಿ ಒಂದೇ ಅನ್ವಯ. ಅರ್ಥವೂ ಪ್ರಾಯಶಃ ಒಂದೇ ಎಂದಿಟ್ಟುಕೊಳ್ಳಬಹುದು.

**ಪದಶಃ ಅರ್ಥ**—(ಮೇ–ನನ್ನ ಅಥವಾ ನನಗೆ), ಮಾತಃ–ತಾಯಿ ಸ್ವರೂಪರಾದವರೇ (ಭ. ಪುರಾ. ತಾಯಿಯಂತೆ ಪೋಷಕರಾದ) ; ಪಿತಃ–ತಂದೆಯೇ (ಭ. ಪುರಾ. ತಂದೆಯಂತೆ ಶಿಕ್ಷಿಸಿ ನಿಗ್ರಹ ಮಾಡು-ವವರೇ,) ಅತುಲ–(ವಿ. ನ ವಿದ್ಯತೇ ತುಲಾ ಉಪಮಾ ಯಸ್ಯ ಸಃ ಅತುಲಃ) ಅಸದೃಶರಾದವರೇ, ಗುರೋ–ಜ್ಞಾನೋಪದೇಶಕರೇ, (ಭ. ಪುರಾ. ಹಿತೋಪದೇಶಕರೇ) (ಅಥವಾ ಕಕ.,ವಿ.) ಅತುಲ ಗುರೋ–ಎದು-ರಿಲ್ಲದ ಗುರುಗಳೇ, ಭ್ರಾತಃ–ಸಹೋದರನೇ (ಭ. ಪುರಾ.)–ಒಡಹುಟ್ಟಿ-ದವರಂತೆ ನಿರ್ವ್ಯಾಜಪ್ರೇಮ ಮಾಡುವವರೇ, ಇಷ್ಟ–ನನಗೆ ಪ್ರಿಯ-

ರಾದವರೇ, ಆಪ್ತ–(ಪುರಾ) ಯಥಾರ್ಥವಾದಿಗಳೇ (ಇದ್ದದ್ದು ಇದ್ದ ಹಾಗೆ ಮರೆಮಾಚದೆ ಹೇಳುವವರೇ ಎಂದರ್ಥ), ಬಂಧೋ–ಬಾಂಧವರೇ (ಬಾಂಧವಾ ವಿಷ್ಣು) ಭಕ್ತಾಶ್ಚ ಎಂದು ಹೇಳಿದಂತೆ ಬಂಧುವೇ (ಕಕ. ವಿ.ಭ. ಆಪ್ತಬಂಧೋ–ಆಪತ್ಕಾಲದ ಬಂಧುವೇ) ; ಸ್ವಾಮಿನ್–(ಕಕ. ವಿ.) ಶಾಸನ ಮಾಡುವವರೇ (ಎಂದರೆ ತಪ್ಪುದಾರಿಯಲ್ಲಿ ಹೋಗದಂತೆ ತಡೆಯುವ ಒಡೆಯರೇ) (ಭ. ಸರ್ವಕ್ಕೂ ಒಡೆಯರಾದವರೇ.), (ಪು.ರಾ.) ಸರ್ವಕ್ಕೂ ನಿಯಾಮಕರಾದ ವರೇ, ಸರ್ವಾಂತರಾತ್ಮನ್–(ಹರಿಪರವಾಗಿ) ರಮಾಬ್ರಹ್ಮಾದಿ ಸಕಲ ಚೇತನಾ-ಚೇತನ ವರ್ಗಕ್ಕೂ ನಿಯಾಮಕನಾದವನೇ, (ವಾಯುದೇವರಪರವಾಗಿ) ಗರುಡಶೇಷಾದಿ ಸಕಲ ಜೀವರಲ್ಲೂ ಹೃದಯದಲ್ಲೇ ನಿಂತು ಬದುಕುವುದಕ್ಕೇ ಆಧಾರವಾಗಿದ್ದು ನಿಯಮನ ಮಾಡುವವರೇ ; ಅಜರ–ಜನನಮರಣ-ವೃದ್ಧಿ ಹ್ರಾಸಾದಿ ಯಾವ ವಿಕಾರವೂ ಇಲ್ಲದವರೇ,* ಜನ್ಮ-ಮೃತಿ-ಆಮಯಾನಾಂ–ಜನನ ಮರಣ ರೋಗಾದಿ ಸಕಲ ಉಪದ್ರವಗಳನ್ನೂ, ಜರಯಿತಃ–ನಾಶ-ಮಾಡುವವರೇ, ಭಗವನ್–'ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ । ಜ್ಞಾನವಿಜ್ಞಾನಯೋಶ್ಚೈವ ಷಣ್ಣಾಂ ಭಗ ಇತೀರಣಾತ್॥' ಎಂಬ ಪ್ರಮಾಣದಂತೆ ಸಮಗ್ರವಾದ ಐಶ್ವರ್ಯ, ವೀರ್ಯ, ಕೀರ್ತಿ, ಕಾಂತಿ, ಜ್ಞಾನ ಮತ್ತು ವಿಜ್ಞಾನ** ಈ ಆರಕ್ಕೆ ಭಗ ಎಂದು ಹೆಸರು;

---

* ಈಶಾವಾಸ್ಯಭಾಷ್ಯದಲ್ಲಿ (ಶ್ಲೋಕ ೧೮) ಹೇಳಿದಂತೆ 'ಅತಿರೋಹಿತವಿಜ್ಞಾನಾದ್ ವಾಯುರಪ್ಯಮೃತಃ ೖೃತಃ । ಮುಖ್ಯಾಮೃತಃ ಸ್ವಯಂ ರಾಮಃ' ಪ್ರಳಯಕಾಲದಲ್ಲೂ ತಿರೋಭಾವವನ್ನು ಹೊಂದದ ಜ್ಞಾನವುಳ್ಳವರಾದ್ದರಿಂದ ವಾಯುದೇವರಿಗೆ ಅಜರ-ಅಮೃತ ಎಂಬ ವಿಶೇಷಣಗಳು ಹೊಂದುತ್ತವೆ. ವಾಯುದೇವರಿಗೇ ಹೀಗಿರುವಾಗ ಶ್ರೀಹರಿಯ ವಿಷಯದಲ್ಲಿ ಹೇಳುವುದೇನಿದೆ ?

** ಜ್ಞಾನಕ್ಕೂ ವಿಜ್ಞಾನಕ್ಕೂ ಏನು ಭೇದ ಗೀತಾತಾತ್ಪರ್ಯದಲ್ಲಿ (೬ ಅ., ೮ ಶ್ಲೋ.) 'ಸರ್ವತ್ರ ವಿಷ್ಣೋರುತ್ಕರ್ಷ-ಜ್ಞಾನಂ ಜ್ಞಾನಮಿತೀರ್ಯತೇ । ತದ್ವಿಶೇಷ ಪರಿಜ್ಞಾನಂ ವಿಜ್ಞಾನಮಿತಿ ಗೀಯತೇ' ಇತಿ ಚ-ಎಂದು ಹೇಳಿರುವ ಪ್ರಕಾರ ಸಾಮಾನ್ಯಾ-ಕಾರೇಣ ವಿಷ್ಣುವೇ ಸರ್ವೋತ್ತಮನೆಂಬ ತಿಳಿವಳಿಕೆಗೇ 'ಜ್ಞಾನ'ವೆಂದು ಹೆಸರು. ಆ ಜ್ಞಾನವನ್ನೇ ಪೂರ್ವಾಪರಪಕ್ಷ ವಿಚಾರಪೂರ್ವಕ (ಸುಧಾದಿ ಗ್ರಂಥಗಳಲ್ಲೂ, ಚಂದ್ರಿಕಾ-ನ್ಯಾಯಾಮೃತಾದಿ ಗ್ರಂಥಗಳಲ್ಲೂ ತೋರಿಸಿರುವಂತೆ ವಿಚಾರಮಾಡಿ ಮಥನಮಾಡಿ

ಈ ಆರೂ ಗುಣಗಳುಳ್ಳವರೇ, ದೇವ–ಕ್ರೀಡಾದಿ ಗುಣವಿಶಿಷ್ಟರಾದ ; ಮಾತರಿಶ್ವನ್–(ಹರಿಪರವಾಗಿ) ಹೇ ಲಕ್ಷ್ಮೀಪತಿಯಾದ ಶ್ರೀನಿವಾಸನೇ ಅಥವಾ ಸಕಲ ಸಚ್ಛಾಸ್ತ್ರಪ್ರತಿಪಾದ್ಯನಾದ ಶ್ರೀಹರಿಯೇ, (ವಾಯುಪರವಾದರೆ) ಪ್ರಳಯಕಾಲದಲ್ಲಿ ದುರ್ಗಾದೇವಿಯಲ್ಲಿ ಲಯಹೊಂದುವ ವೇದಾದಿ ಸಪ್ತಮಾತೃಕೆಗಳನ್ನು ವಿಷ್ಣುಪರವಾಗಿ ಸಮನ್ವಯಿಸುವುದರಲ್ಲಿ ನಿರತರಾದ ಹೇ ವಾಯುದೇವರೇ ! (ಇಲ್ಲಿಯವರೆಗೆ ಸಂಬೋಧನೆ ಆಯಿತು. ಈಗ ಭಕ್ತಿಗಾಗಿ ಪ್ರಾರ್ಥನೆ ಮಾಡುತ್ತಾರೆ.)

(ವಿಷ್ಣುಪರವಾಗಿ) ಗೋವಿಂದೇ–ಸಕಲ ವೇದಪ್ರತಿಪಾದ್ಯನಾದ, ಭವತಿ ಚ (ಇಲ್ಲಿ ಚಕಾರಕ್ಕೆ ಏವಕಾರಾರ್ಥ-ಪು.ರಾ.)–ಆದ್ದರಿಂದ ಸರ್ವೋತ್ತಮನಾದ ನಿನ್ನಲ್ಲಿ ಮಾತ್ರವೇ (ಸರ್ವೋತ್ತಮತ್ವೇನ ಅನನ್ಯಭಕ್ತಿಯನ್ನೂ), (ವಾಯುಪರತ್ವೇನ ಅರ್ಥ) ಗೋವಿಂದೇ–ಸಕಲ ವೇದಪ್ರತಿಪಾದ್ಯನಾದ ಶ್ರೀಹರಿಯಲ್ಲಿ (ಸರ್ವೋತ್ತಮತ್ವಜ್ಞಾನದಿಂದಲೂ), ಭವತಿ ಚ–ಹರಿಭಕ್ತಾಗ್ರೇಸರರಾದ (ವಿಷ್ಣುವನ್ನು ಬಿಟ್ಟರೆ ಸರ್ವಸಮಸ್ತರಾದ, ವಿಷ್ಣುವನ್ನು ಬಿಟ್ಟು ಸರ್ವವೇದಪ್ರತಿಪಾದ್ಯರಾದ ಅತ ಏವ ಜೀವೋತ್ತಮರಾದ) ನಿಮ್ಮಲ್ಲಿಯೂ (ಎಂದರೆ ವಾಯುದೇವರಲ್ಲಿಯೂ); (ಇಲ್ಲಿಂದ ಮುಂದೆ ಅರ್ಥಭೇದವಿಲ್ಲ) ; ಊರ್ಜಿತಾಂ–(ಕಕ. ವಿ.) ಪ್ರವೃದ್ಧವಾದ ಎಂದರೆ ಮಿಕ್ಕ ಎಲ್ಲರಲ್ಲಿ ಮಾಡುವ ಭಕ್ತಿಗಿಂತ ಅನೇಕ ಪಟ್ಟು ಹೆಚ್ಚಾದ ; (ಭ.) ಉತ್ಕೃಷ್ಟ-

---

ವಿಶೇಷವಾಗಿ ತಿಳಿದುಕೊಳ್ಳುವುದಕ್ಕೆ 'ವಿಜ್ಞಾನ'ವೆಂದು ಹೆಸರು. 'ಗೀತಾಭಾಷ್ಯ'ದಲ್ಲಿ ಉದಹರಿಸಿರುವ ಅಲ್ಲೇ (೬ ೮) 'ಶ್ರವಣಾನ್ಮನನಾಚ್ಚೈವ ಯದ್ ಜ್ಞಾನಮುಪಜಾಯತೇ । ತದ್‌ಜ್ಞಾನಂ, ದರ್ಶನಂ ವಿಷ್ಣೋ–ರ್ವಿಜ್ಞಾನಂ ಶಂಭುರಬ್ರವೀತ್' ಎಂಬ ಪ್ರಮಾಣದಂತೆ ಶ್ರವಣ-ಮನನ-ಶಾಸ್ತ್ರಾಧ್ಯಯನಗಳಿಂದ ಉಂಟಾಗುವ ತಿಳಿವಳಿಕೆಗೆ 'ಜ್ಞಾನ'ವೆಂದೂ, ಈ ಜ್ಞಾನದಿಂದ ದೊರಕುವ ವಿಷ್ಣುವಿನ ಸಾಕ್ಷಾತ್ಕಾರಕ್ಕೆ (ಅಪರೋಕ್ಷಜ್ಞಾನಕ್ಕೆ) 'ವಿಜ್ಞಾನ'ವೆಂದೂ ಹೆಸರು. ಅಥವಾ ಅಲ್ಲೇ ಹೇಳಿರುವ 'ಸಾಮಾನ್ಯೈರ್ಯೇತ್ತ್ವವಿಜ್ಞೇಯಾ ವಿಶೇಷಾ ಮಮ ಗೋಚರಾಃ। ದೇವಾದೀನಾಂತು ತದ್‌ಜ್ಞಾನಂ ವಿಜ್ಞಾನಮಿತಿ ಕೀರ್ತಿತಮ್' ಎಂಬ ಪ್ರಮಾಣಾನುಸಾರ ಸಾಮಾನ್ಯಜನಗಳ ತಿಳುವಳಿಕೆಗೆ ಗೊತ್ತೇ ಆಗದಂಥಾ, ಆದರೆ ನನಗೆ (ಭಗವಂತನಿಗೆ) ಗೊತ್ತಿರುವಂಥಾ ದೇವತೆಗಳಲ್ಲಿರುವ ವಿಶಿಷ್ಟಜ್ಞಾನಕ್ಕೆ 'ವಿಜಾನ'ವೆಂದು ಹೆಸರು.

ವಾದ, (ಪುರಾ.) ದಿನಕ್ರಮದಿಂದ ಅಭಿವೃದ್ಧವಾದ (ಅವರ ಮಹಿಮೆ-ಯನ್ನು ದಿನೇದಿನೇ ಹೆಚ್ಚು ಹೆಚ್ಚು ತಿಳಿದುಕೊಂಡಹಾಗೆ ಹೆಚ್ಚಾಗಿ ಬೆಳೆಯುವ ಎಂದರ್ಥ) ; ನಿರ್ನಿಮಿತ್ತಾಂ-(ಕಕ.) ನಿರುಪಾಧಿಕವಾದ (ಎಂದರೆ ತಂದೆ ತಾಯಿ ಇತ್ಯಾದಿ ಯಾವ ನಿಮಿತ್ತವೂ ಇಲ್ಲದ) (ವಿ.) ಹೆಂಡತಿ ಮಕ್ಕಳ ಇತ್ಯಾದಿ ಬೆಳಸಿದ ಅನುಸಂಧಾನರಹಿತವಾದ, (ಛ. ಪುರಾ) ಫಲಕಾಮನಾ-ರಹಿತವಾದ ; (ವಿ.) ಅಡಾಂಭಿಕವಾದ (ಛ. ಪುರಾ.)–ಇಲ್ಲದ ಹೆಚ್ಚುಗಾರಿಕೆ ಯನ್ನು ತೋರಿಸೋಣ ಮೊದಲಾದ ಡಂಭಾಚಾರವಿಲ್ಲದ; ನಿಶ್ಚಲಾಂ–(ಕಕ.) ಸುಸ್ಥಿರವಾದ ಎಂದರೆ ಇತರರು ಹಾಸ್ಯಮಾಡಿದರೂ ಬೈದರೂ ಹ್ರಾಸವಾಗದಂಥಾ ; (ಪುರಾ.) ಸಹಸ್ರವಿಘ್ನಗಳು ಬಂದರೂ ಚಲಿಸದಿರುವ (ಎಂದರೆ ಟೀಕಾರಾಯರು ಸುಧಾದಲ್ಲಿ ಹೇಳಿದ ಪ್ರಕಾರ 'ಅಂತರಾಯಸಹ-ಸ್ರೇಣಾ' ಪ್ರತಿಬದ್ಧಪ್ಯವಾದ) ; ಸತ್-ಗುಣ-ಗಣ-ಬೃಹತೀಂ-(ಕಕ. ಪುರಾ.) ಮಾಹಾತ್ಮ್ಯಜ್ಞಾನಪೂರ್ವಕವಾದ (ವಿ.) ವೈರಾಗ್ಯಶಮದಮಾದಿಗುಣಗಳಿಂದ ಕೂಡಿದ ; ಶಾಶ್ವತೀಂ–(ಕಕ. ವಿ.) ನಿತ್ಯವಾದ (ಎಂದೆಂದಿಗೂ ನಾಶವಾಗ-ದಂಥಾ ಎಂದರ್ಥ), (ಛ. ಪುರಾ.) ಶಶ್ವದೇಕಪ್ರಕಾರವಾದ (ಪುರಾ.) ಎಂದರೆ ನಶ್ವರವಲ್ಲದ ; ಭಕ್ತಿಂ–ಭಕ್ತಿಯನ್ನು (ಪುರಾ.) ವಿಶ್ವಾಸವನ್ನು ; ಮೇ–ನನಗೆ ಆಶು–ಶೀಘ್ರವಾಗಿ (ಕಕ. ವಿ.) ತಡಮಾಡದೆ ; ದೇಹಿ–ಕೊಡಿ.

**170. ನಿಶ್ಚಲಭಕ್ತಿಗಾಗಿ ಬೇಡಿಕೆ**—(ಶ್ಲೋಕದ ಭಾವಾರ್ಥ.) ಮಹಾಭಾರತತಾತ್ಪರ್ಯನಿರ್ಣಯದಲ್ಲಿ (೧ ಅ. ೮೬ ಶ್ಲೋ.) 'ಮಾಹಾತ್ಮ್ಯ-ಜ್ಞಾನಪೂರ್ವಸ್ತು ಸುದೃಢಃ ಸರ್ವತೋಽಧಿಕಃ । ಸ್ನೇಹೋಭಕ್ತಿರಿತಿ ಪ್ರೋಕ್ತಃ ತಯಾ ಮುಕ್ತಿರ್ನ ಚಾನ್ಯಥಾ ॥' ಎಂದು ಹೇಳಿರುವ ಪ್ರಮಾಣದಂತೆ ಶ್ರೀಹರಿಯಲ್ಲಾಗಲಿ ಬ್ರಹ್ಮವಾಯ್ವಾದಿಗಳಲ್ಲಾಗಲಿ ಅವರ ಮಹಿಮೆಯನ್ನು ತಿಳಿದುಕೊಂಡು ಅದರಿಂದ ಉಂಟಾದ, ಸುದೃಢವಾದ ಮಿಕ್ಕ ಎಲ್ಲರಲ್ಲಿ ಮಾಡುವುದಕ್ಕಿಂತ ಅನೇಕ ಪಟ್ಟು ಹೆಚ್ಚಾದ ಸ್ನೇಹಕ್ಕೇ (ಪ್ರೀತಿಗೇ) ಭಕ್ತಿ-ಯೆಂದು ಹೆಸರು. ಈ ಭಕ್ತಿಯಿಂದಲೇ ಮೋಕ್ಷವಾದೀತೆ ಹೊರತು ಬೇರೆ ಯಾವುದರಿಂದಲೂ ಆಗುವುದಿಲ್ಲವೆಂದೂ ಹೇಳಿದ್ದಾರೆ. ಪಾದ್ಮಪುರಾಣದಲ್ಲಿ 'ಮಹತ್ವಬುದ್ಧಿರ್ಭಕ್ತಿಸ್ತು ಸ್ನೇಹಪೂರ್ವಾಭಿಧೀಯತೇ' ಎಂದು ಹೇಳಿದ

ಪ್ರಕಾರ 'ಸ್ನೇಹಪೂರ್ವಕವಾದ ಮಾಹಾತ್ಮ್ಯಜ್ಞಾನಕ್ಕೇ ಭಕ್ತಿಯೆಂದು ಹೆಸರು' ಎಂದು ಸೂತ್ರಭಾಷ್ಯದಲ್ಲಿ (೩/೨/೧೯) ಹೇಳಿದೆ. ತಾತ್ಪರ್ಯ-ನಿರ್ಣಯದಲ್ಲಿ ಹೇಳಿರುವ (೧/೯೭) 'ಅಚಿದ್ರಸೇವನಾಚ್ಚೈವ ನಿಷ್ಕಾಮ-ತ್ವಾಚ್ಚ ಯೋಗ್ಯತಃ । ದ್ರಷ್ಟುಂ ಶಕ್ಯೋಽಹ ಹರಿಸ್ಸರ್ವೈ–ರ್ನಾನ್ಯಥಾ ತು ಕಥಂಚನ' ಎಂಬ ಭವಿಷ್ಯತ್ಪರ್ವವಚನವು ಮಧ್ಯೆಮಧ್ಯೆ ವಿಚ್ಛೇದವಿಲ್ಲದೆ ತೈಲಧಾರೆಯಂತೆ ಅಚ್ಛಿದ್ರ ಧ್ಯಾನದಿಂದಲೂ, ತಾನು ಮಾಡುವ ಸಂಧ್ಯಾ-ವಂದನ ಯಜ್ಞದಾನಾದಿಗಳೆಲ್ಲವೂ ಫಲೇಚ್ಛಾರಹಿತವಾಗಿದ್ದು ಕೇವಲ ವಿಷ್ಣು-ಪ್ರೀತ್ಯರ್ಥವಾಗಿಯೇ ತನ್ನತನ್ನ ಯೋಗ್ಯತಾನುಸಾರ ಮಾಡಲ್ಪಟ್ಟರೆ ಮಾತ್ರವೇ ಅಪರೋಕ್ಷಜ್ಞಾನಕ್ಕೆ ಸಾಧನವಾಗುತ್ತವೆ, ಇಲ್ಲದಿದ್ದರೆ ಸಾಧ್ಯ-ವಾಗುವುದಿಲ್ಲವೆಂದು ತಿಳಿಸಿಕೊಡುತ್ತದೆ. ಇದನ್ನು ತಿಳಿಸುವುದಕ್ಕಾಗಿಯೇ ಪಂಡಿತಾಚಾರ್ಯರು 'ನಿರ್ನಿಮಿತ್ತಾಂ ನಿಶ್ಚಲಾಂ ಸದ್ಗುಣಗಣಬೃಹತೀಂ' ಎಂಬ ವಿಶೇಷಣಗಳನ್ನು ಭಕ್ತಿಗೆ ಕೊಟ್ಟಿದ್ದಾರೆ.

ಭಾಗವತದಲ್ಲಿ 'ಪ್ರಾಣಬುದ್ಧಿಮನಃಖಾತ್ಮ—ದೇಹಾಪತ್ಯಧನಾದಯಃ। ಯತ್ಸಂಪರ್ಕಾತ್ ಪ್ರಿಯಾ ಆಸನ್ ತತಃ ಕೋ ನ್ವಪರಃ ಪ್ರಿಯಃ ॥' ಎಂದರೆ ಯಾವ ಭಗವಂತನ ಸಂಪರ್ಕದಿಂದ (ಅವನು ಅನುಗ್ರಹಿಸಿದ್ದರಿಂದಲೇ ಎಂದರ್ಥ) ನಮಗೆ ನಾವು ಬದುಕುವುದಕ್ಕೆ ಮುಖ್ಯವಾದ ಉಸಿರಾಟ (ಪ್ರಾಣ), ಜ್ಞಾನ (ಬುದ್ಧಿ), ಅಂತಃಕರಣ (ಮನಃ), ಚಕ್ಷುರಾದಿ ಇಂದ್ರಿಯಗಳು (ಖ), ಜೀವ (ಆತ್ಮ), ದೇಹ, ಹೆಂಡತಿ-ಮಕ್ಕಳು, ದುಡ್ಡುಮನೆ-ಮಠ ಇತ್ಯಾದಿಗಳೆಲ್ಲವೂ ಪ್ರಿಯವಾದುವೋ ಅವನಿಗಿಂತಲೂ ಪ್ರಿಯನಾದವನು ಬೇರೆ ಯಾವನಿದ್ದಾನೆ? ಎಂದು ನಿರೂಪಣೆ ಮಾಡಿದ ಪ್ರಕಾರ ಆ ಪರಮಾತ್ಮನೇ ವಸ್ತುತಃ ಇವೆಲ್ಲಕ್ಕಿಂತಲೂ ಅತ್ಯಂತ ಪ್ರಿಯನು. ಇದನ್ನೇ ಬೃಹದಾರಣ್ಯಕ ಶ್ರುತಿಯು (೩/೫/೨) 'ತದೇತತ್ ಪ್ರೇಯಃ ಪುತ್ರಾತ್, ಪ್ರೇಯೋ ವಿತ್ತಾತ್, ಪ್ರೇಯೋಽನ್ಯಸ್ಮಾತ್ ಸರ್ವಸ್ಮಾತ್' ಎಂದರೆ ಈ ಭಗವಂತನೇ ಹೆಂಡತಿ-ಮಕ್ಕಳುಗಳಿಗಿಂತಲೂ ಅತ್ಯಂತ ಪ್ರಿಯನು; ದುಡ್ಡಿಗಿಂತಲೂ ಹೆಚ್ಚು ಪ್ರಿಯನು, ತನ್ನ ದೇಹ, ತನ್ನ ಆತ್ಮ ಮೊದಲಾದ ಸಮಸ್ತಕ್ಕಿತಲೂ ಹೆಚ್ಚು ಪ್ರಿಯ-ನೆಂದು ಉಪಾಸನೆ ಮಾಡಬೇಕೆಂದು ತಿಳಿಸುತ್ತದೆ. ಈ ಅಂಶಗಳೆಲ್ಲವನ್ನೂ

ಸಂಗ್ರಹಿಸಿ ಸ್ಪಷ್ಟವಾಗಿ ತಿಳಿಯುವಂತೆ ಶ್ರೀ ಟೀಕಾಕೃತ್ಪಾದರು ಪರಮಾತ್ಮ ನಲ್ಲಿ ಭಕ್ತಿ ಎಂದರೇನು? ಎಂಬುದನ್ನು ಸುಧಾದಲ್ಲಿ 'ತತ್ಪ್ರಸಾದಾದೇವ-ಮುಚ್ಯತೇ' (ಜಿಜ್ಞಾಸಾಧಿ, ೧೨ ಶ್ಲೋ) ಎಂಬ ಶ್ಲೋಕಕ್ಕೆ ವ್ಯಾಖ್ಯಾನ ಮಾಡುವ ಸಂದರ್ಭದಲ್ಲಿ ನ್ಯಾಯಸುಧಾದಲ್ಲಿ ಹೀಗೆ ಅಪ್ಪಣೆಕೊಡಿಸಿದ್ದಾರೆ— **'ಪರಮೇಶ್ವರಭಕ್ತಿರ್ನಾಮ ನಿರವಧಿಕಾನಂತಾನವದ್ಯಕಲ್ಯಾಣಗುಣತ್ವ-ಜ್ಞಾನಪೂರ್ವಕಃ ಸ್ವಾತ್ಮಾತ್ಮೀಯ ಸಮಸ್ತವಸ್ತುಭ್ಯೋಽನೇಕ-ಗುಣಾಧಿಕಃ ಅಂತರಾಯಸಹಸ್ರೇಣಾಪ್ಯಪ್ರತಿಬದ್ಧೋ ನಿರಂತರ-ಪ್ರೇಮಪ್ರವಾಹಃ**–ಎಂದಿದ್ದಾರೆ. ನಿರವಧಿಕ–ಅವಧಿಯೇ ಇಲ್ಲದ, ಅಪರಿಮಿತ ವಾದ, ಅನಂತ–ಕೊನೆಯಿಲ್ಲದ, ನಿರವಧಿಕಾನಂತ–ಅನಂತಾನಂತವಾದ, ಅನವದ್ಯ–ದೋಷರಹಿತವಾದ, ಕಲ್ಯಾಣಗುಣತ್ವಜ್ಞಾನಾನಂದಾದಿ ಶುಭಗುಣ-ಗಳೇ ಸ್ವರೂಪಭೂತವಾಗಿರುವ (ದೇಹವಾಗಿರುವ)ವನು ಎಂಬ, ಜ್ಞಾನ-ಪೂರ್ವಕಃ–ಜ್ಞಾನದಿಂದ ಹುಟ್ಟಿದಂಥಾ. ಸ್ವ–ಆತ್ಮ–ತಾನು ತನ್ನದೇಹ, ಆತ್ಮೀಯ-ತನಗೆ ಸಂಬಂಧಿಸಿದ ಹೆಂಡತಿ ಮಕ್ಕಳು ಮನೆ-ಮಠ, ದುಡ್ಡು ದುಕಾಣಿ ಮೊದಲಾದ, ಸಮಸ್ತವಸ್ತುಭ್ಯಃ–ಸಮಸ್ತ ಪದಾರ್ಥಗಳಿಗಿಂತಲೂ, ಅನೇಕಗುಣಾಧಿಕಃ–ಅನೇಕ ಪಟ್ಟು ಹೆಚ್ಚಾದ, ಅಂತರಾಯ (–ವಿಘ್ನ) ಸಹಸ್ರೇಣ ಅಪಿ–ಸಾವಿರಾರು ಅಡಚಣೆಗಳು ಬಂದರೂ, ಅಪ್ರತಿಬದ್ಧಃ– ತಡೆಯಲ್ಪಡದ (ಎಂದರೆ ನಿಲ್ಲದೇ ಹರಿಯುತ್ತಿರುವ), ಪ್ರೇಮಪ್ರವಾಹಃ– ಸ್ನೇಹದ (ಪ್ರೇಮದ) ದೊಡ್ಡ ಪ್ರವಾಹಕ್ಕೇ ಭಕ್ತಿಯೆಂದು ಹೆಸರು. ಟೀಕಾರಾಯರ ಈ ವಾಕ್ಯವೇ ಇಡೀ ಶ್ಲೋಕದ ಸಾರವನ್ನು ತಿಳಿಸುತ್ತದೆ.

ಇಷ್ಟು ವಿಚಾರವನ್ನು ಮನಸ್ಸಿನಲ್ಲಿಟ್ಟುಕೊಂಡು ಪಂಡಿತಾಚಾರ್ಯರು ಶ್ರೀಹರಿ-ವಾಯುಗಳಲ್ಲಿ ಇಂಥಾ ಭಕ್ತಿಯನ್ನು ಕೊಡಿ ಎಂದು ಕೇಳುತ್ತಾರೆ— ಹೇ ಶ್ರೀಹರಿಯೇ! ಹೇ ವಾಯುದೇವರೇ! ನೀವೇ ನನಗೆ ತಂದೆ-ತಾಯಿ ಬಂಧು–ಬಳಗ ಇಷ್ಟ-ಮಿತ್ರ ಸರ್ವಸ್ವವೂ ಆಗಿದ್ದೀರಿ ನಿಮ್ಮ ಅನುಗ್ರಹ-ದಿಂದಲೇ ನನಗೆ ಅವರೆಲ್ಲರೂ ಪ್ರಿಯರಾದರು. 'ತ್ವಮೇವ ಮಾತಾ ಚ ಪಿತಾ ತ್ವಮೇವ; ತ್ವಮೇವ ಬಂಧುರ್ ದ್ರವಿಣಂ ತ್ವಮೇವ, ತ್ವಮೇವ ವಿದ್ಯಾ, ದ್ರವಿಣಂ ತ್ವಮೇವ; ತ್ವಮೇವ ಸರ್ವಂ ಮಮ ದೇವದೇವ ॥'

ಈ ಭಾಗ್ಯವೆಲ್ಲವನ್ನೂ ಕರುಣಿಸಿದ ಮಹಾನುಭಾವರು ನೀವೇ ಆದ್ದರಿಂದ ನೀವು ಈ ಸಮಸ್ತಕ್ಕಿಂತಲ್ಲೂ ಅನೇಕ ಪಟ್ಟು ಹೆಚ್ಚಾಗಿ ಪ್ರಿಯರಾದವರು. ನೀವು ಅನಂತವೇದಪ್ರತಿಪಾದ್ಯವಾದ ಅನಂತಗುಣಗಳುಳ್ಳವರು. (ವಾಯು-ದೇವರು ಅಸ್ಮದಪೇಕ್ಷಯಾ ಅನಂತ ಗುಣಗಳುಳ್ಳವರೆಂದೂ ಶ್ರೀಹರಿಯು ನಿರವಧಿಕವಾಗಿ ಅನಂತಗುಣಪರಿಪೂರ್ಣನೆಂದೂ ಅನ್ವಯಮಾಡಬೇಕು.) ನನಗೆ ಮಾತ್ರವಲ್ಲ, ಸಕಲ ಜಗತ್ತಿಗೂ ನೀವುಗಳು ಒಡೆಯರೂ ಆಗಿದ್ದೀರಿ. ಚರಾಚರಾತ್ಮಕ ಸಮಸ್ತಕ್ಕೂ ನಿಯಾಮಕರಾಗಿ ಅವುಗಳಲ್ಲಿ ಅಂತರ್ಯಾಮಿ-ಗಳಾಗಿ ಸಕಲ ಕಾರ್ಯಗಳನ್ನೂ ನಡೆಸುತ್ತೀರಿ. ನಿಮ್ಮ ಧ್ಯಾನಾರಾಧನೆ-ಗಳಿಂದ ಮಾತ್ರವೇ ಜನನ–ಮರಣ, ಮುಪ್ಪು-ರೋಗ, ಕಷ್ಟ-ಕಾರ್ಪಣ್ಯ-ಗಳ ನೆಲೆಬೀಡಾದ ಈ ಸಂಸಾರಕೂಪದಿಂದ ನಾವು ಪಾರಾಗಬಲ್ಲೆವು. (ಇದಿಷ್ಟೂ ಅವರ ಮಾಹಾತ್ಮ್ಯದ ವರ್ಣನೆ.) ನಿಮ್ಮನ್ನು ಬಿಟ್ಟರೆ ನನ್ನನ್ನು ಸಲಹುವವರು ಬೇರೆ ಯಾರೂ ಇಲ್ಲ. ಇಗೋ ಸ್ವಾಮಿ! ನಿಮ್ಮಲ್ಲಿ ಅತ್ಯಂತ ದೈನ್ಯದಿಂದ, ಮೊರೆಹೊಕ್ಕಿದ್ದೇನೆ, ಅಂಗಲಾಚಿ ಬೇಡಿಕೊಳ್ಳು-ತ್ತೇನೆ. ಪ್ರಭುಗಳೇ! ನನಗೆ ಶ್ರೀಹರಿಯಲ್ಲಿ ಸರ್ವೋತ್ತಮತ್ವರೂಪವಾದ ಭಕ್ತಿಯನ್ನೂ ಜೀವೋತ್ತಮರಾದ ವಾಯುದೇವರಲ್ಲಿ ತಾರತಮ್ಯೋಪೇತ-ವಾಗಿ ಅತ್ಯಂತ ಭಕ್ತಿಯನ್ನೂ ಕರುಣಿಸಿರಿ. ಆ ಭಕ್ತಿ ದಿನೇದಿನೇ ಕ್ಷೀಣ-ವಾಗದೆ ಅಭಿವೃದ್ಧಿ ಹೊಂದುವಂತೆಯೂ, ಆತ್ಮಾತ್ಮೀಯಸಮಸ್ತವಸ್ತುಗಳಿ-ಗಿಂತಲೂ ನಿಮ್ಮಲ್ಲಿ ಅತ್ಯಧಿಕವಾಗಿರುವಂತೆಯೂ ನಿರಪೇಕ್ಷವಾಗಿಯೂ ನಿರಾಡಂಬರವಾಗಿಯೂ ಸಾವಿರಾರು ಅಡಚಣೆಗಳು ಅಡ್ಡಾಗಿ ಬಂದರೂ ತಡೆ-ಯಿಲ್ಲದೆ ಏಕಪ್ರಕಾರ ಪ್ರವಹಿಸುತ್ತಿರುವಂತೆಯೂ ವೈರಾಗ್ಯ-ಶಮದಮಾದಿ-ಗಳಿಂದ ಕೂಡಿ ಜ್ಞಾನಪೂರ್ವಕವಾಗಿರುವಂತೆಯೂ ಅಚ್ಚಳಿಯದೆ ಶಾಶ್ವತ-ವಾಗಿರುವಂತೆಯೂ ಬೇಗ, ತಡಮಾಡದೆ ಹೇ ಹರಿವಾಯುಗಳೆ! ನನಗೆ ಅನುಗ್ರಹಿಸಿರಿ—ಎಂದು ಪಂಡಿತಾಚಾರ್ಯರು ಪ್ರಾರ್ಥನೆ ಮಾಡಿದ್ದಾರೆ.

## ಶ್ಲೋಕ ಹದಿನೈದು. ತಾರತಮ್ಯರೀತ್ಯಾ ಭಕ್ತಿಮಾಡಬೇಕು.

**171.** ಅವತಾರಿಕೆ—ಶ್ರೀಕೃಷ್ಣನು ಭಗವದ್ಗೀತೆಯಲ್ಲಿ (೧೧/೫೪) 'ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಂ' ಎಂದು ಹೇಳಿದ್ದಾನೆ. ಅದರಂತೆ

ಭಗವಂತನು ಅಸಾಧಾರಣವಾದ ಭಕ್ತಿಯೊಂದರಿಂದಲೇ ವಶನಾಗುತ್ತಾನೆಂದು ಹೇಳಿದಂತಾಯಿತು. ಆದರೆ ಶ್ವೇತಾಶ್ವತರ ಶ್ರುತಿಯು (೬/೨೩) 'ಯಸ್ಯ ದೇವೇ ಪರಾ ಭಕ್ತಿ—ರ್ಯಥಾ ದೇವೇ ತಥಾ ಗುರೌ । ತಸ್ಯೈತೇ ಕಥಿತಾ ಹ್ಯರ್ಥಾ ಪ್ರಕಾಶಂತೇ ಮಹಾತ್ಮನಃ ॥' ಎಂದು ಹೇಳುತ್ತದೆ. ಎಂದರೆ ಯಾವ ಅಧಿಕಾರಿಗೆ ಶ್ರೀಹರಿಯಲ್ಲಿ ಸರ್ವೋತ್ತಮನೆಂಬ ನಿರವಧಿಕವಾದ ನಿಶ್ಚಲ ಭಕ್ತಿಯೂ, ರಮಾಬ್ರಹ್ಮಾದಿ ಇತರ ದೇವತೆಗಳಲ್ಲಿ ಅವರವರ ಯೋಗ್ಯತಾನುಸಾರ (ಯಥಾ) ಭಕ್ತಿಯೂ ಅದೇರೀತಿ (ತಥಾ) ತದಿತರರಾದ ಸ್ವೋತ್ತಮರಾದ ವಿದ್ಯಾಗುರುಗಳೇ ಮೊದಲಾದ ಸಕಲ ಹಿರಿಯರಲ್ಲೂ (ಗುರೌ) ಅವರವರ ಯೋಗ್ಯತಾನುಸಾರ (ಯಥಾ) ಭಕ್ತಿಯೂ ಇರುತ್ತದೋ ಅವನಿಗೇ ಶ್ರುತ್ಯುಕ್ತವಾದ ಪರಾಪರತತ್ವರೂಪವಾದ ಅರ್ಥಗಳು ಪ್ರಕಟವಾಗುತ್ತವೆ ಎಂದು ತಿಳಿಸುತ್ತದೆ. ಆದಕಾರಣ ಕೇವಲ ವಿಷ್ಣುವಿನಲ್ಲಿ ಮಾತ್ರವೇ ಭಕ್ತಿಮಾಡಿದರೆ ಸಾಲದು, ಸಕಲ ವಿಷ್ಣುಭಕ್ತರಲ್ಲೂ ವಿಷ್ಣುಭಕ್ತತ್ವೇನ ಅಥವಾ ವಿಷ್ಣುಪರಿವಾರವೆಂಬ ಭಾವನೆಯಿಂದಲೇ ಅವರವರ ಯೋಗ್ಯತಾನುಸಾರ ಅಧಿಕಾಧಿಕ ಭಕ್ತಿಮಾಡಬೇಕು. ಇಲ್ಲದಿದ್ದರೆ ಅನರ್ಥವೇ ಆಗುತ್ತದೆ. ಏಕೆಂದರೆ ಗೀತಾಭಾಷ್ಯೋದಾಹೃತ (೬/೯) ಪದ್ಮಪುರಾಣವಾಕ್ಯವು ಹೇಳುವಂತೆ—

ಸಮಾನಾಂ ವಿಷಮಾ ಪೂಜಾ  ವಿಷಮಾಣಾಂ ಸಮಾ ತಥಾ ।
ಕ್ರಿಯತೇ ಯೇನ ದೇವೋಽಪಿ  ಸ್ವಪದಾದ್ ಭ್ರಶ್ಯತೇ ಪುಮಾನ್ ॥

ಸಮಾನ ಕಕ್ಷೆಯಲ್ಲಿರುವವರಿಗೆ ಭಿನ್ನ ಭಿನ್ನವಾದ ಪೂಜೆಯನ್ನೂ ಬೇರೆಬೇರೆ ಮಟ್ಟದಲ್ಲಿರುವವರಿಗೆ ಒಂದೇ ರೀತಿಯ ಪೂಜೆಯನ್ನೂ ಮಾಡುವ ಮನುಷ್ಯನು ದೇವತೆಯೇ ಆಗಿದ್ದರೂ ತನ್ನ ಸ್ಥಾನದಿಂದ ಭ್ರಷ್ಟನಾಗುತ್ತಾನೆ (ಪದಚ್ಯುತನಾಗಿ ಕೆಳಗೆ ಬೀಳುತ್ತಾನೆ).

ಆದಕಾರಣ, ಶ್ರೀಹರಿಯನ್ನು ಸರ್ವೋತ್ತಮನೆಂದೂ ರಮಾಬ್ರಹ್ಮಾದಿಗಳು ಅವನಿಗಿಂತ ಕ್ರಮವಾಗಿ ಅವರರಾಗಿ(ಕಡಿಮೆಯಾಗಿ)ರುವುದಲ್ಲದೆ ಅವನ ಪರಿವಾರವೆಂದು ತಿಳಿದು ಧ್ಯಾನಮಾಡಬೇಕೆಂದು ಭಾಗವತ ತಾತ್ಪರ್ಯೋದಾಹೃತವಾದ (೧೧/೫/೪೩)

ಪ್ರಾಧಾನ್ಯೇನ ಹರಿರ್ಧ್ಯೇಯಃ ತತ್ಸಂಬಂಧಾತ್ ಸುರಾದಯಃ ।
ಧ್ಯೇಯಾ, ನಾನ್ಯತ್ ಕ್ವಚಿತ್ ಧ್ಯಾಯೇದ್
ಹರಾವನುಪಯೋಗಿ ಯತ್ ॥

ಎಂದರೆ ಶ್ರೀಹರಿಯನ್ನು ಸರ್ವೋತ್ತಮನೆಂದೂ ಮಿಕ್ಕ ರಮಾದಿಗಳೆಲ್ಲರೂ ಅವನಿಗೆ ಸಂಬಂಧಿಸಿದ ಪರಿವಾರದವರು ಎಂದೂ ಚಿಂತನೆ ಮಾಡಬೇಕೇ ವಿನಾ ಶ್ರೀಹರಿಗೆ ಸಂಬಂಧಪಡದ ಏನನ್ನೂ ಧ್ಯಾನಮಾಡಬಾರದೆಂದು **ಹರಿಸಂಹಿತಾ** ವಾಕ್ಯ ಹೇಳುತ್ತದೆ. ಈ ರೀತಿ ದೇವತಾತಾರತಮ್ಯಜ್ಞಾನಪೂರ್ವಕವಾಗಿ ವಿಷ್ಣುಸರ್ವೋತ್ತಮತ್ವಜ್ಞಾನವನ್ನು ತಿಳಿದುಕೊಂಡವರೇ ಏಕಾಂತಿಗಳೆಂದೂ ಅವರಿಗೇ ವಿಷ್ಣು ಒಲಿಯುತ್ತಾನೆಂದೂ ಛಾಂದೋಗ್ಯಭಾಷ್ಯದಲ್ಲಿ (೧/೧/೧) ಹೇಳಿದ್ದಾರೆ—

ದೇವತಾನುಕ್ರಮಜ್ಞಾಶ್ಚ ವಿಷ್ಣೋಃ ಪರಮತಾವಿದಃ ।
ಏಕಾಂತಿನಸ್ತೇ ವಿಜ್ಞೇಯಾ ಯಥಾಕ್ರಮಪರಾಸ್ತಥಾ ।
ಅಸ್ಮಾದಸಾವುಚ್ಚ ಇತಿ ಕ್ರಮಸ್ಯಾಂತಗತಂ ಹರಿಮ್ ।
ಏಕಮೇವ ತು ಯೋ ವಿದ್ಯಾ—ತ್ತೇ ಹ್ಯೇಕಾಂತಿನ ಈರಿತಾಃ ॥

ದೇವತೆಗಳ ಕ್ರಮ(ತಾರತಮ್ಯ)ವನ್ನೂ ವಿಷ್ಣುಸರ್ವೋತ್ತಮತ್ವವನ್ನೂ ತಿಳಿದವರಿಗೆ ಏಕಾಂತಿಗಳೆಂದು ಹೆಸರು. (ಈ ಎರಡನ್ನೂ ಬೇರೆ ಬೇರೆಯಾಗಿ ತಿಳಿದರೆ ಸಾಲದು, ಎರಡನ್ನೂ ಹೊಂದಿಸಿಕೊಳ್ಳಬೇಕೆಂದು ವಿವರಿಸುತ್ತಾರೆ) ಇವನಿಗಿಂತ ಇವನು ಉತ್ತಮ ಎಂದು ಕ್ರಮವಾಗಿ ತಿಳಿಯುತ್ತಾ ಅವರೆಲ್ಲರಿಗಿಂತ, ಶ್ರೀಹರಿಯೊಬ್ಬನೇ ಮುಖ್ಯ ಎಂಬುದನ್ನು ತಿಳಿದವನಿಗೇ ಏಕಾಂತಿಯೆಂದು ಹೇಳುತ್ತಾರೆ. ಈ ಜ್ಞಾನದ ಫಲವೇನೆಂದರೆ ಹೇಳುತ್ತಾರೆ—

ಏವಂ ಯಥಾಕ್ರಮಜ್ಞಾಶ್ಚ ಸದೈಕಾಂತಪರಾಯಣಾಃ ।
ಪ್ರವಿಶಂತಿ ಪರಂ ದೇವಂ ನಾರಾಯಣಮನಾಮಯಮ್ ॥

ಹೀಗೆ ತಾರತಮ್ಯಾನುಸಾರ ಶ್ರೀಹರಿಯೇ ಸರ್ವೋತ್ತಮನೆಂದು ತಿಳಿದು ಅವನನ್ನೇ ಉಪಾಸನೆಮಾಡುತ್ತಾರೋ ಅವರೇ (ಆ ಏಕಾಂತಿಗಳೇ) ದೋಷದೂರನಾದ ವಿಷ್ಣುವನ್ನು ಹೊಂದುತ್ತಾರೆ.

ಈ ರೀತಿ ತಾರತಮ್ಯಜ್ಞಾನವುಳ್ಳವರೇ ಭಾಗವತರು, ಅವರು ರಮಾ-ಬ್ರಹ್ಮಾದಿಗಳಾರನ್ನೂ ಸ್ವತಂತ್ರಬುದ್ಧಿಯಿಂದ ಪೂಜಿಸುವುದಿಲ್ಲವೆಂದೂ ಹೇಳುತ್ತಾರೆ—

ಉಪಕ್ರಮಾಂತಗತ್ವೇನ ಕುರ್ಯುಃ ಪೂಜಾಂ ಹರೇಃ ಸದಾ ।
ಲಕ್ಷ್ಮ್ಯಾದೇಃ ಕ್ರಮಶಃ ಪೂಜಾಂ ಜ್ಞಾತ್ವಾ ಭಾಗವತಾ ಇತಿ ॥
ಸ್ವತಂತ್ರಪೂಜ್ಯತಾ ಬುದ್ಧ್ಯಾ ನ ದದ್ಯುಃ ಕಿಂಚ ಕಸ್ಯಚಿತ್ ॥

ತಾರತಮ್ಯದಲ್ಲಿ ಸರ್ವೋಚ್ಚಸ್ಥಾನದಲ್ಲಿರುವವನೇ ಶ್ರೀಹರಿ, ಅವನಿಗಿಂತ ಕೆಳಕೆಳವಮಟ್ಟದಲ್ಲಿ ರಮಾ-ಬ್ರಹ್ಮಾದಿಗಳಿದ್ದಾರೆ ಎಂದು ತಿಳಿದು ಶ್ರೀಹರಿಪೂಜೆ ಮಾಡುವವರೇ ಭಾಗವತರು. ಅವರು ಲಕ್ಷ್ಮಿಗಾಗಲಿ, ಬ್ರಹ್ಮ, ಶಿವ, ಆದಿತ್ಯ, ಗಣಪತಿ ಮೊದಲಾದ ಯಾವ ದೇವತೆಗೂ ಸ್ವತಂತ್ರರು—ಪೂಜನೀಯರು ಎಂಬ ಬುದ್ಧಿಯಿಂದ (ಎಂದರೆ ವಿಷ್ಣುಪರಿವಾರವೆಂದು ಅನುಸಂಧಾನ ಮಾಡದೆ) ಎಂದಿಗೂ ಪೂಜಿಸುವುದೂ ಇಲ್ಲ, ನೈವೇದ್ಯ ಧೂಪ ದೀಪ ಪೂಜೆ ಯಾವುದೊಂದನ್ನೂ ಅರ್ಪಿಸುವುದಿಲ್ಲ. ಕದಾಚಿತ್ ಅಜ್ಞಾನದಿಂದ ಯಾರಾದರೂ ಬ್ರಹ್ಮಾದಿಗಳಿಗೆ ಸ್ವತಂತ್ರರೆಂಬ ಬುದ್ಧಿಯಿಂದ-ಹರಿಭಕ್ತರೆಂಬ ಅನುಸಂಧಾನವಿಲ್ಲದೆ—ಪೂಜಾದಿಗಳನ್ನು ಮಾಡಿದರೂ ಸಹ ಆ ದೇವತೆಗಳೇ ಅದನ್ನು ಸ್ವೀಕರಿಸುವುದಿಲ್ಲ, ಕಂಗಾಳಿಗಳಂತಿರುವ ಆಯಾ ಹೆಸರಿನ, ದೀನರಾದ ಕಾರಣ ದೇವತೆಗಳೆಂದು ಕರೆಯಿಸಿಕೊಳ್ಳುವ (ದೇವಃಸಂಜ್ಞಾಶ್ಚ ದೀನತ್ವಾತ್), ದೈತ್ಯರೇ ಆ ಪೂಜಾದಿಗಳನ್ನು ಸ್ವೀಕರಿಸುತ್ತಾರೆಂಬ ಪ್ರಮೇಯವಿಶೇಷವನ್ನೂ ಉಪನಿಷದ್ಭಾಷ್ಯ ತಿಳಿಸುತ್ತದೆ—

ಯದ್ಭಾಗವತಬುದ್ಧ್ಯೈವ ದತ್ತಂ ಬ್ರಹ್ಮಾದಯಃ ಸುರಾಃ ।
ವೈದಿಕಾಃ ಪ್ರತಿಗೃಹ್ಣೀಯು-ರಪಭ್ರಷ್ಟಾಸ್ತಥೇತರತ್ ॥

ಭಗವಂತನ ಪರಿವಾರಕ್ಕೆ ಸೇರಿದ ವಿಷ್ಣುಭಕ್ತರು (ಮನುನಾಮಕರು) ಎಂಬ ಬುದ್ಧಿಯಿಂದ ಕೊಟ್ಟರೆ ಮಾತ್ರವೇ ವೇದಶಾಸ್ತ್ರದಲ್ಲಿ ಆದರವುಳ್ಳ ಆ ಬ್ರಹ್ಮಾದಿ ದೇವತೆಗಳು ಸ್ವೀಕರಿಸುವರೇ ಹೊರತು, ಸ್ವತಂತ್ರಬುದ್ಧಿಯಿಂದ ಕೊಟ್ಟರೆ ಸ್ವೀಕರಿಸುವುದಿಲ್ಲ. ಅದಕ್ಕೆ ಪ್ರತಿಯಾಗಿ ಅವರ ಹೆಸರಿನ ಅಪಭ್ರಷ್ಟರಾದ ದೈತ್ಯರೇ ಆ ಪೂಜಾದಿಗಳನ್ನು ಅಪಹರಿಸುವರು. ಒಟ್ಟಿನಲ್ಲಿ ಏನು ಹೇಳಿದ ಹಾಗಾಯಿತೆಂದರೆ—.

ವಿಷ್ಣೌ ಭಕ್ತಿರ್ವಿಶೇಷೇಣ ಮೋಕ್ಷಪ್ರಾಪ್ತೌ ಹಿ ಕಾರಣಮ್ ।
ತದ್ಭಕ್ತೇಷು ಕ್ರಮೇಣೈವ ರಮಾದ್ಯೇಷು ತ್ವನಂತರಮ್ ॥

ವಿಷ್ಣುಸರ್ವೋತ್ತಮತ್ವಜ್ಞಾನಪೂರ್ವಕ ವಿಷ್ಣುವಿನಲ್ಲಿ ಅತ್ಯಂತ ಅಧಿಕ-ಭಕ್ತಿಯನ್ನೂ ಅವನ ಪರಿವಾರಕ್ಕೆ ಸೇರಿದ ರಮಾಬ್ರಹ್ಮಾದಿಗಳಲ್ಲಿಯೂ ಸಹ ಅವರವರ ತಾರತಮ್ಯವನ್ನು ತಿಳಿದು ಅದಕ್ಕೆ ಅನುಗುಣವಾಗಿ ಭಕ್ತಿ-ಯನ್ನು ಮಾಡುವುದೇ ಮೋಕ್ಷಪ್ರಾಪ್ತಿಗೆ ಕಾರಣವೆಂದು ಹೇಳಿದಂತಾಯಿತು. ಆ ಶ್ರೀಹರಿಗೆ ಮುಖ್ಯಪ್ರಾಣನು 'ವಿಶಿಷ್ಟಪ್ರತಿಮೆ'ಯೆಂಬುದು 'ವಾಯೌ ಮುಖ್ಯಧಿಯೇತಿ ಚ' ಎಂಬ ಭಗವದ್ವಚನದಿಂದಲೇ ಸ್ಪಷ್ಟವಾಗುವುದರಿಂದ 'ವಾಯೋರ್ಮುಖ್ಯತಯಾಽಖಿಲಾತ್' ಶ್ರೀಹರಿಯು ಬಳಿಕ ವಾಯುವಿನಲ್ಲೂ ಭಕ್ತಿಮಾಡಬೇಕೆಂದು ಹೇಳಿದಂತಾಯಿತು. ಈ ವಿಚಾರವನ್ನೇ ಪಂಡಿತಾ-ಚಾರ್ಯರು 'ವಿಷ್ಣೋರತ್ಯುತ್ತಮತ್ವಾತ್—' ಎಂಬ ಶ್ಲೋಕದಲ್ಲಿ ತಿಳಿಸಿ ಹೇಳುತ್ತಾರೆ. (ಕಕ. ವಿ.) ಗುರುದೇವತಾಭಕ್ತಿಯು ಸಕಲ ಪುರುಷಾರ್ಥ-ಸಾಧನವೆಂದು ಹೇಳಿದಂತಾಯಿತು. ಅದನ್ನು ಹೇಗೆ ಮಾಡಬೇಕು ? ಅದರ ಫಲವೇನು ? ಎಂಬುದನ್ನು ಈ ಶ್ಲೋಕದಿಂದ ಹೇಳುತ್ತಾರೆ. (ಛ. ಪುರಾ.) ಶ್ರೀಹರಿವಾಯುಗಳಲ್ಲಿ ಭಕ್ತಿಮಾಡುವ ಕ್ರಮವನ್ನೂ ಅದರ ಫಲವನ್ನೂ ಹೇಳುತ್ತಾರೆ—

**ವಿಷ್ಣೋರತ್ಯುತ್ತಮತ್ವಾ-ದಖಿಲಗುಣಗಣೈ-**
**ಸ್ತತ್ರಭಕ್ತಿಂ ಗರಿಷ್ಠಾಂ**
**ಸಂಶ್ಲಿಷ್ಟೇ ಶ್ರೀ-ಧರಾಭ್ಯಾ-ಮನುಮುಥ ಪರಿವಾ-**
**ರಾತ್ಮನಾ ಸೇವಕೇಷು ।**
**ಯಃ ಸಂಧತ್ತೇ ವಿರಿಂ(ಚಿ)ಚ-ಶ್ವಸನ-ವಿಹಗಪಾ-**
**ಽಽನಂತ-ರುದ್ರೇಂದ್ರ-ಪೂರ್ವೇ-**
**ಷ್ವಾಧ್ಯಾಯಂಸ್ತಾರತಮ್ಯಂ ಸ್ಫುಟಮವತಿ ಸದಾ**
**ವಾಯುರಸ್ಮದ್ಗುರುಸ್ತಮ್ ॥ ೧೫ ॥**

**ಪದವಿಭಾಗ—** 'ವಿಷ್ಣೋರತ್ಯುತ್ತಮತ್ವಾತ್' ಎಂಬಲ್ಲಿ ಮಾತ್ರ ಹರಿಪರವಾಗಿ—ವಿಷ್ಣೋಃ, ರತ್ಯುತ್ತಮತ್ವಾತ್ ಎಂದೂ, ವಾಯುಪರವಾಗಿ

ವಿಷ್ಣೋಃ, ಅತ್ಯುತ್ತಮತ್ವಾತ್ ಎಂದೂ ಎರಡು ವಿಧ ಪದಚ್ಛೇದ. ಮಿಕ್ಕ ಭಾಗಕ್ಕೆ ಒಂದೇ ರೀತಿ ಪದಚ್ಛೇದ–ಅಖಿಲಗುಣಗಣೈಃ, ತತ್ರ, ಭಕ್ತಿಂ ಗರಿಷ್ಠಾಂ, ಸಂಶ್ಲಿಷ್ಟೇ, ಶ್ರೀಧರಾಭ್ಯಾಂ, ಅಮುಂ, ಅಥ, ಪರಿವಾರಾತ್ಮನಾ, ಸೇವಕೇಷು, ಯಃ, ಸಂಧತ್ತೇ, ವಿರಿಂ(ಚ)ಚಿ....ಪೂರ್ವೇಷು, ಆಧ್ಯಾಯನ್ ತಾರತಮ್ಯಂ, ಸ್ಫುಟಂ, ಅವತಿ, ಸದಾ, ವಾಯುಃ, ಅಸ್ಮದ್ಗುರುಃ, ತಮ್ ||

**172. ಶ್ಲೋಕದ ವಿಶ್ಲೇಷಣೆ**—ಈ ಶ್ಲೋಕದಲ್ಲಿ ಹರಿಪರವಾಗಿ ಅರ್ಥ ಹೇಳುವಾಗ ಕೇವಲ ನಾಲ್ಕೈದು ಪದಗಳ ಅನ್ವಯಕ್ರಮ ವ್ಯತ್ಯಾಸ್ತ-ವಾಗುವುದಾದರೂ ಅರ್ಥದಲ್ಲಿಯಾಗಲಿ ಒಟ್ಟು ಭಾವದಲ್ಲಿಯಾಗಲಿ ಯಾವ ಭೇದವೂ ಇಲ್ಲ. ಕಡೆಯ ಚರಣದಲ್ಲಿರುವ—ವಾಯುಃ ತಂ ಸದಾ ಸ್ಫುಟಂ ಅವತಿ ಎಂಬುದೇ ಪ್ರಧಾನವಾಕ್ಯ. ಇಲ್ಲಿ ವಾಯುಃ ಎಂಬುದಕ್ಕೇ ಹರಿಪರವಾಗಿ ವಿಷ್ಣುವೆಂದೂ, ವಾಯುಪರವಾಗಿ ಮುಖ್ಯಪ್ರಾಣನೆಂದೂ ಅರ್ಥವಾಗುತ್ತದೆ; ಮಿಕ್ಕದ್ದೆಲ್ಲಾ ಒಂದೇ ಅರ್ಥ. ವಾಯುನಿಯಾಮಕನಾದ ಶ್ರೀಹರಿಯೂ ಬಲಜ್ಞಾನಸ್ವರೂಪರಾದ ಮುಖ್ಯಪ್ರಾಣನೂ ಅವನನ್ನು ಸದಾಕಾಲದಲ್ಲೂ ನಿಸ್ಸಂದೇಹವಾಗಿ ಕಾಪಾಡುತ್ತಾರೆ—ಎಂಬುದೇ ಪ್ರಧಾನ ವಾಕ್ಯದ ಅರ್ಥ. ಇಲ್ಲಿರುವ 'ತಂ'–ಅವನನ್ನು ಎಂಬ ಕರ್ಮಪದಕ್ಕೆ 'ಯಃ ತಾರ-ತಮ್ಯಂ ಆಧ್ಯಾಯನ್ ಭಕ್ತಿಂ ಸಂಧತ್ತೇ' ಎಂಬ ಅಪೂರ್ಣವಾಕ್ಯವೇ ದೊಡ್ಡ ವಿಶೇಷಣ; ಈ ವಿಶೇಷಣವಾಕ್ಯಕ್ಕೆ 'ಯಾರು ತಾರತಮ್ಯವನ್ನು ಚೆನ್ನಾಗಿ ಅನುಸಂಧಾನ ಮಾಡಿಕೊಂಡು ಭಕ್ತಿಯನ್ನು ಮಾಡುತ್ತಾನೋ' ಎಂದರ್ಥ. ತಾರತಮ್ಯವನ್ನು ಯಾರು ಯಾರಲ್ಲಿ ಮಾಡಬೇಕು! ಹೇಗೆ ಮಾಡಬೇಕು? ಎಂಬ ಅಂಶವನ್ನು ಮಿಕ್ಕಭಾಗ ತಿಳಿಸಿಕೊಡುತ್ತದೆ. ತಾರತಮ್ಯದಲ್ಲೂ ಮುಖ್ಯವಾದ ಎರಡು ವಿಭಾಗವಿದೆಯೆಂದೂ ಆ ಎರಡು ಭಾಗಗಳಲ್ಲೂ ಪುನಃ ತಾರತಮ್ಯವಿದೆಯೆಂಬುದನ್ನೂ ಪದಗಳ ಜೋಡಣೆಯಲ್ಲೇ ತೋರಿಸಿ ಮನ-ದಟ್ಟು ಮಾಡಿಕೊಟ್ಟಿದ್ದಾರೆ. ಹೇಗೆಂದರೆ ಶ್ರೀವಿಷ್ಣು ಮತ್ತು ಲಕ್ಷ್ಮೀ ಈ ಇಬ್ಬರೂ ಈಶಕೋಟಿಗೆ ಸೇರಿದವರು. ಇವರಿಬ್ಬರೂ ಅನಾದಿನಿತ್ಯರು, ಮತ್ತು ಸಂಸಾರದ ಬಂಧನಕ್ಕೆ ಒಳಪಡದವರು. ಇವರಿಬ್ಬರ ವಿಚಾರ-ವನ್ನೂ ಪೂರ್ವಾರ್ಧದಲ್ಲಿಯೇ ಹೇಳಿ ಮುಗಿಸಿದ್ದಾರೆ. ಈಶಕೋಟಿಗೆ ಸೇರಿದ

ಈ ಇಬ್ಬರಲ್ಲೂ ವಿಷ್ಣುವೇ ಸರ್ವತಂತ್ರಸ್ವತಂತ್ರ ; ಆದ್ದರಿಂದ ಅವನೇ ಸರ್ವೋತ್ತಮ ಎಂಬುದನ್ನು 'ವಿಷ್ಣೋಃ ಅತ್ಯುತ್ತಮತ್ವಾತ್' ಎಂಬುದ-ರಿಂದ ಸ್ಪಷ್ಟವಾಗಿ ಹೇಳಿದರು. ವಿಷ್ಣುವಿಗೆ ಹೋಲಿಸಿದರೆ ಲಕ್ಷ್ಮೀ ಅವರಳು ಎಂಬುದನ್ನು ಸೂಚಿಸಲು ಶ್ರೀ-ಧರಾಭ್ಯಾಂ (ಶ್ರೀದೇವಿ ಭೂದೇವಿಯರಿಂದ) ಎಂದು ವಿಷ್ಣುವಿನಬಳಿಕ ಹೇಳಿದರು. ಲಕ್ಷ್ಮೀದೇವಿ ಸ್ವತಂತ್ರಳಲ್ಲ, ನಿತ್ಯ-ದಲ್ಲೂ ಪರಮಾತ್ಮನ ಅಧೀನಳೆಂಬುದನ್ನೂ ಆದಕಾರಣ ಅವಳೊಬ್ಬಳನ್ನೇ ಸ್ವತಂತ್ರವಾಗಿ ಉಪಾಸನೆಮಾಡಬಾರದೆಂಬುದನ್ನೂ ಭಗವದುಪಸರ್ಜತ-ಯೈವ ಧ್ಯಾನಮಾಡಬೇಕೆಂಬ ಪ್ರಮೇಯವನ್ನೂ ಸೂಚಿಸುತ್ತಾ 'ಶ್ರೀಧ-ರಾಭ್ಯಾಂ ಸಂಶ್ಲಿಷ್ಟೇ ತತ್ರ'–ಶ್ರೀದೇವಿ-ಭೂದೇವಿಯರಿಂದ ಆಲಿಂಗಿತನಾದ ಶ್ರೀಹರಿಯಲ್ಲಿ—ಎಂದು ಹೇಳಿದರು.

ಬ್ರಹ್ಮಾದಿ ಸಕಲ ದೇವತೆಗಳೂ ಜೀವಕೋಟಿಗೆ ಸೇರಿದವರೆಂಬುದನ್ನೂ ಇವರು ಯಾರೂ ನಿತ್ಯಮುಕ್ತರಲ್ಲವೆಂಬುದನ್ನೂ ಸ್ಪಷ್ಟಪಡಿಸುವುದಕ್ಕಾಗಿ ಅವರೆಲ್ಲರನ್ನೂ ಉತ್ತರಾರ್ಧದಲ್ಲಿಯೇ ಸೇರಿಸಿ ಹೇಳಿದರು; ಅವರ ಹೆಸರು ಹೇಳುವಾಗಲೇ ತಾರತಮ್ಯವನ್ನು ಸೂಚಿಸುತ್ತಾ ಅವರೋಹಣಕ್ರಮದಲ್ಲಿಯೇ ಹೇಳಿದ್ದಾರೆ. ಈ ಬ್ರಹ್ಮಾದಿದೇವತೆಗಳು ಯಾರೇ ಆಗಲಿ ಎಲ್ಲರೂ ಶ್ರೀಹರಿಯ ದಾಸರು. ಅವನ ಅನಂತಪರಿವಾರಕ್ಕೆ ಸೇರಿದವರು ; ಅವರನ್ನು ಈ ಭಾವನೆಯಿಂದಲೇ ನೋಡಬೇಕು. ಹಾಗೆ ತಿಳಿಯದೆ ಅವರನ್ನು ಸ್ವತಂತ್ರ-ತ್ವೇನ ತಿಳಿದರಾಗಲಿ ಪೂಜಿಸಿದರಾಗಲಿ ಆ ಪೂಜೆ—ಆ ಭಕ್ತಿ ಯಾವುದನ್ನೂ ಆ ದೇವತೆಗಳೇ ಸ್ವೀಕರಿಸುವುದಿಲ್ಲ—ಎಲ್ಲವೂ ಅದೇ ಹೆಸರಿನ ದೈತ್ಯರ ಪಾಲಾಗುತ್ತವೆ ಎಂದು ಛಾಂದೋಗ್ಯಭಾಷ್ಯದಲ್ಲಿ ಹೇಳಿದ ಅಂಶವನ್ನೂ (ಖಂಡ 171 ನೋಡಿ) ಸಹ ಸೂಚಿಸುತ್ತಾ ಲಕ್ಷ್ಮೀನಾರಾಯಣರಿಗೂ ಅವರಿಗೂ (ಬ್ರಹ್ಮಾದಿಗಳಿಗೂ) ಇರುವ ಸೇವ್ಯ–ಸೇವಕಭಾವವನ್ನೇ 'ಪರಿ-ವಾರಾತ್ಮನಾ ಸೇವಕೇಷು' ಎಂದು ಸ್ಪಷ್ಟವಾಗಿಯೇ ಹೇಳಿದ್ದರ ಜೊತೆಗೆ ಪೂರ್ವಾರ್ಧದೊಡನೆ ಸಂಬಂಧವನ್ನೂ ಹಚ್ಚಿ ತೋರಿಸಿದ್ದಾರೆ.

ಕಡೆಯದಾಗಿ ಯಾರು ಯಾರಲ್ಲಿ ಎಷ್ಟೆಷ್ಟು ಭಕ್ತಿಮಾಡಬೇಕೆಂಬು-ದನ್ನು ಹೀಗೆ ಸೂಚಿಸಿದ್ದಾರೆ—ಶ್ರೀಧರಾಭ್ಯಾಂ ಸಂಶ್ಲಿಷ್ಟೇ ತತ್ರ ಗರಿಷ್ಠಾಂ

ಭಕ್ತಿಂ– ಶ್ರೀಭೂದೇವಿಯರಿಂದ ಆಲಿಂಗಿತನಾದ ಶ್ರೀಹರಿಯಲ್ಲಿ ಅತ್ಯಂತ ಅಧಿಕವಾದ ಭಕ್ತಿಯನ್ನೂ ; ವಿರಿಂ(ಚ)ಚಿ....ಪೂರ್ವೇಷು ತಾರತಮ್ಯಂ ಆಧ್ಯಾಯಿನ್ ಭಕ್ತಿಂ ಸಂಧತ್ತೇ–ಬ್ರಹ್ಮವಾಯುಗರುಡರುದ್ರೇಂದ್ರಾದಿಗಳಲ್ಲಿ ತಾರತಮ್ಯಾನುಗುಣವಾಗಿ ಭಕ್ತಿ ಮಾಡಬೇಕು ಎಂದು ಹೇಳುತ್ತಾರೆ. ಇಲ್ಲಿಯೂ ಪುನಃ ಸ್ವತಂತ್ರತ್ವೇನ (ಸ್ವತಂತ್ರರೆಂದು ತಿಳಿದು) ಮಾಡಬಾರದು. ಅದನ್ನು ಅವರು ಸ್ವೀಕರಿಸುವುದೂ ಇಲ್ಲ, ಜೊತೆಗೆ ದೈತ್ಯರ ಪಾಲಾಗುತ್ತದೆ ಎಂಬುದನ್ನು 'ಅಮುಂ ಪರಿವಾರಾತ್ಮನಾ ಸೇವಕೇಷು ವಿರಿಂಚಿ....ಪೂರ್ವೇಷು' ಎಂಬ ವಿಶೇಷಣದಿಂದ ಸ್ಪಷ್ಟಪಡಿಸಿದ್ದಾರೆ.

ಕಡೆಯದಾಗಿ ಈ ಲಕ್ಷ್ಮೀನಾರಾಯಣರಿಗೂ ಬ್ರಹ್ಮರುದ್ರಾದಿಗಳಿಗೂ ಇರುವ ಸರ್ವಥಾ ವೈಷಮ್ಯ (ಭೇದ)ವನ್ನು–ಲಕ್ಷ್ಮೀನಾರಾಯಣರು ಈಶ-ಕೋಟಿಗೆ ಸೇರಿದವರು, ಸಂಸಾರಬಂಧರಹಿತರು, ಅನಾದಿನಿತ್ಯರು, ಅಪ್ರಾಕೃತ ಶರೀರವುಳ್ಳವರು ; ಇವರೋ ಬದ್ಧರು, ತ್ರಿಗುಣವಿಕಾರಕ್ಕೆ ಒಳಪಟ್ಟವರು. ಜೀವಕೋಟಿಗೆ ಸೇರಿದವರು ಇತ್ಯಾದಿಗಳನ್ನು–ಮಧ್ಯದಲ್ಲಿರುವ **ಅಥ** ಶಬ್ದ ಸೂಚಿಸುತ್ತದೆ. ಅದೇ ರೀತಿ 'ವಿಷ್ಣೋರತ್ಯುತ್ತಮತ್ವಾತ್' ಎಂದೇ ಶ್ಲೋಕ ಆರಂಭವಾಗುವುದರಿಂದ ಆ ವಿಷ್ಣು ರಮಾಬ್ರಹ್ಮಾದಿ ಸಕಲರಿಕ್ಕಿಂತಲೂ ಅತ್ಯಂತ ಭಿನ್ನ, ಅವನ ಉತ್ತಮಕ್ಕೆ ಎಣೆಯೇ ಇಲ್ಲ—ಅನಂತಪಟ್ಟು ಉತ್ತಮ ಎಂದು 'ರಸೋ ಯೋಷ್ಟಮಃ' ಎಂಬ ಸಂದರ್ಭದಲ್ಲಿ ನಖಸ್ತುತಿಯಲ್ಲಿ (ಪುಟ ೯೧) ಹೇಳಿದ ಪ್ರಮೇಯವನ್ನೇ ನೆನಪು ಮಾಡಿಕೊಡುತ್ತದೆ.

ಒಟ್ಟಿನಲ್ಲಿ ಈ ಶ್ಲೋಕ ಕ್ರಮವಾಗಿ ಇಷ್ಟು ವಿಚಾರಗಳನ್ನು ತಿಳಿಸಿಕೊಡುತ್ತದೆ—೧. ಶ್ರೀವಿಷ್ಣುವೇ ಸರ್ವೋತ್ತಮ ; ಅವನು ರಮಾಬ್ರಹ್ಮಾದಿ ಸಕಲರಿಕ್ಕಿಂತಲೂ ಅತ್ಯಂತ ಭಿನ್ನನೂ ಆಗಿರುವನಲ್ಲದೆ ಅವರೆಲ್ಲರಿಗಿಂತ ಅನಂತಗುಣ ಉತ್ತಮೋತ್ತಮ. ೨. ಆದಕಾರಣ ಅವನಲ್ಲಿ ನಿರವಧಿಕವಾದ ನಿಶ್ಚಲ ಭಕ್ತಿಯನ್ನೇ ಮಾಡಬೇಕು. ೩. ಲಕ್ಷ್ಮೀದೇವಿಯೂ ನಿತ್ಯಮುಕ್ತಳಾದರೂ ವಿಷ್ಣ್ವಧೀನಳು. ಅವಳನ್ನು ಶ್ರೀಹರಿಯೊಡನೆಯೇ ಉಪಾಸನೆ ಮಾಡಬೇಕು. (ಇಲ್ಲದಿದ್ದರೆ ಕ್ಲೇಶದಾಯಕವಾಗುತ್ತದೆ. ಗೀತೆ ೧೨/೫) ೪. ಬ್ರಹ್ಮ-ವಾಯುಗಳೇ ಮೊದಲಾದ ಸಕಲ ದೇವತೆಗಳೂ ಜೀವಕೋಟಿಗೆ ಸೇರಿದವರು,

ವಿಷ್ಣುವಿನ ಪರಿವಾರಕ್ಕೆ ಸೇರಿದವರು, ಅವನ ಸೇವಕರು. ೫. ಅದರಲ್ಲಿ ಭಕ್ತಿಯನ್ನು ಅವರ ತಾರತಮ್ಯಾನುಗುಣವಾಗಿ ಮಾಡಬೇಕು. ೬. ಅವರು ವಿಷ್ಣುಭಕ್ತರೆಂಬ ಭಾವನೆಯಿಲ್ಲದೆ ಸ್ವತಂತ್ರರೆಂಬ ಬುದ್ಧಿಯಿಂದ ಭಕ್ತಿಯನ್ನೂ ಪೂಜಾದಿಗಳನ್ನೂ ಮಾಡಲೂ ಬಾರದು, ಮಾಡಿದರೂ ಅವರು ಸ್ವೀಕರಿಸುವುದೇ ಇಲ್ಲ—ಅದೆಲ್ಲ ದೈತ್ಯರ ಪಾಲಾಗುತ್ತದೆ. ೭. ಯಾರು ಈ ರೀತಿ ವಿಧಿಪ್ರಕಾರವಾಗಿ ಭಕ್ತಿಮಾಡುವನೋ ಅವನನ್ನೂ ಶ್ರೀಹರಿವಾಯು-ಗಳು ನಿಸ್ಸಂದೇಹವಾಗಿ ಸಲಹುತ್ತಾರೆ.

**ತಾರತಮ್ಯ**—ಅನ್ವಯ-ಅನ್ವಯಾರ್ಥಗಳಿಗೆ ಹೋಗುವುದಕ್ಕೆ ಮೊದಲು ಪ್ರಸಂಗವಶಾತ್ ತಾರತಮ್ಯ ಎಂದರೇನು ಎಂಬುದನ್ನು ಸ್ವಲ್ಪ ಸ್ಪಷ್ಟವಾಗಿ ತಿಳಿದುಕೊಳ್ಳುವುದು ಉತ್ತಮ ; ತಾರತಮ್ಯವೇ ಮಧ್ವಸಿದ್ಧಾಂತಕ್ಕೆ ಒಂದು ಅಡಿಗಲ್ಲು. ಸಂಸ್ಕೃತದಲ್ಲಿ ತರಪ್ ತಮಪ್ ಎಂಬುವು ಎರಡು ವ್ಯಾಕರಣದಲ್ಲಿ ಬರುವ ಪ್ರತ್ಯಯಗಳು; ಇವುಗಳ ಕಡೆಯಲ್ಲಿರುವ ಪಕಾರವು ಸಾಂಕೇತಿಕಾಕ್ಷರ; ಪಾಣಿನಿ ಪ್ರಕಾರ ಅವಕ್ಕೆ ಇತ್ ಎಂದು ಹೆಸರು, ಅವು ಲೋಪವಾಗಿ ಹೋಗು-ತ್ತವೆ. 'ಅತಿಶಾಯನೇ ತಮಬಿಷ್ಠನೌ' (ಪಾ ೫/೩/೫೫) ಎಂಬ ಸೂತ್ರದ ಪ್ರಕಾರ 'ಅತ್ಯಂತ ಹೆಚ್ಚಾದ್ದು' ಎಂಬ ಅರ್ಥವನ್ನು ತೋರಿಸುವುದಕ್ಕೆ ತಮಪ್ ಮತ್ತು ಇಷ್ಠನ್ ಪ್ರತ್ಯಯಗಳು ಬರುತ್ತವೆ. 'ದ್ವಿವಚನ-ವಿಭ-ಜ್ಯೋಪಪದೇ ತರಬೀಯಸುನೌ' (ಪಾ. ೫/೩/೫೭) ಎಂಬ ಸೂತ್ರದಂತೆ ಎರಡು ವಸ್ತುಗಳ ಪೈಕಿ ವಸ್ತುವನ್ನು ಯಾವುದಾದರೂ ವಿಶೇಷಗುಣದ ನಿಮಿತ್ತ ಬೇರ್ಪಡಿಸುವಾಗ ಆ ಅರ್ಥದಲ್ಲಿ ತರಪ್ ಮತ್ತು ಈಯಸುನ್ ಪ್ರತ್ಯಯಗಳು ಬರುತ್ತವೆ. ಎರಡು ಹಗುರವಾದ ಪದಾರ್ಥಗಳಿದ್ದರೆ ಹೆಚ್ಚು ಹಗುರವನ್ನು ತೋರಿಸಲು ಲಘು-ತರ ಅಥ ಲಘೀಯಸ್ ಎಂದು ಹೇಳುವರು. ಉದಾಹರಣೆಗೆ ಕಾರ್ಪಾಸಃ ಪರ್ಣಾತ್ ಲಘುತರಂ (ಲಘೀಯಃ)-ಹತ್ತಿ ಎಲೆಗಿಂತ ಹಗುರ. ಅನೇಕ ವಸ್ತುಗಳಲ್ಲಿ ಎಲ್ಲಕ್ಕಿಂತ ಹೆಚ್ಚು ಹಗುರ (ಮೊದಲಾದ ಅರ್ಥ)ವನ್ನು ತೋರಿಸಲು ಲಘುತಮ ಅಥವಾ ಲಘಿಷ್ಠ ಎಂದು ಹೇಳುತ್ತಾನೆ. ಇದನ್ನು ಇಂಗ್ಲೀಷಿನಲ್ಲಿ **degrees of comparison** ಎಂದೂ ತರ-ತಮಗಳನ್ನು **er** ಮತ್ತು **est** ಎಂದೂ ಹೇಳುವರು.

ಒಟ್ಟಿನಲ್ಲಿ ತರ-ತಮಗಳು ಭಿನ್ನಮಟ್ಟಗಳನ್ನು ತಿಳಿಸುತ್ತವೆ ಎಂದು ಹೇಳಿದಂತಾಯಿತು. ತರತಮಾನಾಂ ಭಾವಃ ತಾರತಮ್ಯಂ, ಪಾ. ೫/೧/೧೨೪ ಪ್ರಕಾರ ಗುಣವಚನವಾದ್ದರಿಂದ ಷ್ಯಞ್ ಪ್ರತ್ಯಯ ಬಂದಿದೆ. ಹೀಗೆ ಭಿನ್ನ ಭಿನ್ನ ಮಟ್ಟಗಳಲ್ಲಿ ಇರುವುದಕ್ಕೇ ತಾರತಮ್ಯವೆಂದು ಹೆಸರು. ಸಂಸ್ಕೃತ ಮಟ್ಟಗಳನ್ನು 'ಕಕ್ಷ್ಯ' ಎಂದು ಕರೆಯುತ್ತಾರೆ.

**173. ಅನ್ವಯಕ್ರಮ**—ಹರಿಪರವಾಗಿ—ವಿಷ್ಣೋ ! ಅಖಿಲಗುಣ-ಗಣೈಃ (ತವ) ರತ್ಯುತ್ತಮತ್ವಾತ್ ಸದಾ ಶ್ರೀಧರಾಭ್ಯಾಂ ಸಂಶ್ಲಿಷ್ಟೇ ತತ್ರ ಗರಿಷ್ಠಾಂ ಭಕ್ತಿಂ; ಅಥ ಅಮುಂ (ಪ್ರತಿ) ಪರಿವಾರಾತ್ಮನಾ ಸೇವಕೇಷು ವಿರಿಂ(ಚಿ)ಚ....ಪೂರ್ವೇಷು ತಾರತಮ್ಯಂ ಆಧ್ಯಾಯನ್ (ಭಕ್ತಿಂ) ಸಂಧತ್ತೇ ತಂ ಅಸ್ಮದ್‌ಗುರುಃ ವಾಯುಃ (ಭವಾನ್) ಸದಾ ಸ್ಫುಟಂ ಅವತಿ ॥ ಇನ್ನು ವಾಯುಪರವಾಗಿ—ವಿಷ್ಣೋಃ ಅಖಿಲಗುಣಗಣೈಃ ಅತ್ಯುತ್ತಮತ್ವಾತ್ (ಸದಾ) ಶ್ರೀ-ಧರಾಭ್ಯಾಂ ಸಂಶ್ಲಿಷ್ಟೇ ತತ್ರ ಸದಾ ಗರಿಷ್ಠಾಂ ಭಕ್ತಿಂ (ಮಿಕ್ಕದ್ದೆಲ್ಲ ಹರಿಪರದಂತೆಯೇ)....ತಂ ಅಸ್ಮದ್ಗುರುಃ ವಾಯುಃ ಸದಾ ಸ್ಫುಟಂ ಅವತಿ ॥

**ಅನ್ವಯಾರ್ಥ—(ಹರಿಪರವಾಗಿ)** ವಿಷ್ಣೋ–ಸರ್ವವ್ಯಾಪಕನಾದ ಹೇ ವಿಷ್ಣುವೇ ! ಅಖಿಲ–ಸಮಸ್ತರಾದ, ಗುಣ–ಗೌಣರಾದ ಎಂದರೆ ಅಪ್ರ-ಧಾನರಾದ ಬ್ರಹ್ಮಾದಿಗಳ, ಗಣೈಃ–ಸಮೂಹಗಳಿಂದ ; (ತವ–ನಿನ್ನ), ರತಿ+ ಉತ್ತಮತ್ವಾತ್'–ಜ್ಞಾನಾದಿ ಗುಣಗಳು ಅನಂತಪಟ್ಟು ಉತ್ತಮವಾದ ಕಾರಣ ; ಸದಾ–ಯಾವಾಗಲೂ (ಅನಾದಿನಿತ್ಯಕಾಲದಲ್ಲೂ ವಿಯೋಗವಿಲ್ಲದೆ ಎಂದರ್ಥ), ಶ್ರೀಧರಾಭ್ಯಾಂ–ಶ್ರೀದೇವಿ-ಭೂದೇವಿಯರಿಂದ ; ಸಂಶ್ಲಿಷ್ಟೇ–ಆಲಿಂಗಿತನಾದ, ತತ್ರ–ಆ ನಿನ್ನಲ್ಲಿ ; ಗರಿಷ್ಠಾಂ ಭಕ್ತಿಂ–ಅತ್ಯಂತ (ಎಲ್ಲ-ರಲ್ಲಿ ಮಾಡುವ ಭಕ್ತಿಗಿಂತ ಅತ್ಯಂತ ಹೆಚ್ಚಾದ ಭಕ್ತಿಯನ್ನೂ, (ಮಿಕ್ಕ ಭಾಗದ ಅರ್ಥ ಎರಡಕ್ಕೂ ಒಂದೇ ಆದ್ದರಿಂದ ಮುಂದೆ, ಒಟ್ಟಿಗೆ ಸೇರಿಸಿಯೇ ಬರೆದಿದೆ)

**(ವಾಯುಪರವಾಗಿ)** ವಿಷ್ಣೋಃ–ಶ್ರೀವಿಷ್ಣುವಿಗೆ, ಅಖಿಲಗುಣಗಣೈಃ–(ಕಕ.) ಸಮಸ್ತವಾದ ಜ್ಞಾನಾನಂದಾದಿ ಅನಂತಕಲ್ಯಾಣಗುಣಗಳ ಸಮೂಹ-

ಗಳಿಂದಲೂ (ಒಂದೊಂದು ಗುಣವೂ ಅನಂತವಾಗಿದೆ, ಅಂತಹ ಗುಣಗಳೂ ಅನಂತವಾಗಿವೆ–ಆದಕಾರಣ) ; ಅತ್ಯುತ್ತಮತ್ವಾತ್–ಸರ್ವೋತ್ತಮತ್ವ ಸಿದ್ಧನಾಗುವುದರಿಂದ ; ಸದಾ–ಅನಾದಿಕಾಲದಿಂದಲೇ ; ಶ್ರೀಧರಾಭ್ಯಾಂ ಸಂಶ್ಲಿಷ್ಟೇ–ಶ್ರೀದೇವಿ ಭೂದೇವಿಯರಿಂದ ಆಲಿಂಗಿತನಾದ ; ತತ್ರ–ಆ ಶ್ರೀಹರಿಯಲ್ಲಿ ; ಸದಾ–ಯಾವಾಗಲೂ (ನಿತ್ಯದಲ್ಲೂ) ; ಗರಿಷ್ಠಾಂ ಭಕ್ತಿಂ–ನಿರವಧಿಕವಾಗಿ ಹೆಚ್ಚಾದ ಅತ್ಯಂತ ಉತ್ಕೃಷ್ಟವಾದ ಭಕ್ತಿಯನ್ನೂ ;

(**ಉಭಯಪರ**) ಅಥ–ಅನಂತರ (ಎಂದರೆ ಅಷ್ಟು ಉತ್ತಮವುಟ್ಟಕ್ಕೆ ಸೇರಿದ್ದಲ್ಲ ಎಂಬ ವ್ಯತ್ಯಾಸವನ್ನು ಎತ್ತಿತೋರಿಸುವುದಕ್ಕೆ ಈ ಶಬ್ದವನ್ನು ಪ್ರಯೋಗಿಸಿದ್ದಾರೆ), ಅಮುಂ (ಪ್ರತಿ) * ಪೂರ್ವಪ್ರಸ್ತುತನಾದ ವಿಷ್ಣುವಿನ ಬಗ್ಗೆ, ಪರಿವಾರಾತ್ಮನಾ–ಪರಿವಾರರೂಪದಿಂದ, ಸೇವಕೇಷು–ಸೇವಕರಾದ (ಭೃತ್ಯರಾದ ಅಥವಾ ಪೋಷ್ಯವರ್ಗಕ್ಕೆ ಸೇರಿದವರಾದ) ; ವಿರಿಂ(ಚಿ)ಚ†.... ಪೂರ್ವೇಷು—ವಿರಿಂಚಿ (ವಿರಿಂಚ)–ಬ್ರಹ್ಮದೇವರು, ಶ್ವಸನ–ವಾಯು

---

*'ಪ್ರತಿ' ಅಧ್ಯಾಹಾರ ಮಾಡಿಕೊಂಡು ಸೇರಿಸಿದರೆ ಮಾತ್ರವೇ ದ್ವಿತೀಯಾ ವಿಭಕ್ತಿ ಹೊಂದುತ್ತದೆ. ಏಕೆಂದರೆ 'ಅಭಿತ–ಪರಿತಃಸಮಯಾನಿಕಷಾಹಾ ಪ್ರತಿಯೋಗೇಪಿ ದ್ವಿತೀಯಾ ವಕ್ತವ್ಯಾ' ಎಂಬ ವಾರ್ತಿಕೆಯ ಪ್ರಕಾರ ದ್ವಿತೀಯಾ ಕೂಡುತ್ತದೆ. ಇಲ್ಲದಿದ್ದರೆ 'ಕರ್ತೃಕರ್ಮಣೋಃಕೃತಿ' (ಪಾ. ೨ ೩ ೬೫) ಎಂಬ ಸೂತ್ರದಂತೆ ಷಷ್ಠೀ ಬರಬೇಕಾಗುತ್ತದೆ (ಶ.ಕ.)

†ಸಂಸ್ಕೃತದಲ್ಲಿ ವಿರಿಂಚಿ—ಇಕಾರಾಂತ, ವಿರಿಂಚ-ಅಕಾರಾಂತ, ಎರಡು ಪದಗಳೂ ಇವೆ. 'ವಿರಿಂಚಿಃ ಕಮಲಾಸನಃ' ಎಂದೂ 'ವಿರಿಂಚೋಽಜೋ ವಿರಿಂಚನಃ' ಎಂದು ಎರಡೂ ಅಮರಪಾಠದಲ್ಲಿವೆ. ವಿರಚಯತಿ ವಿಃದಂ, ವಿವಿಧಂ ವಾ ರಚಯತಿ ಸೃಜತೀತಿ ವಿರಿಂಚಃ, ವಿರಿಂಚಿರ್ವಾ । ವಿ ಉಪಸರ್ಗ, 'ರಚ ಪ್ರತಿಯತ್ನೇ' (ಚುರಾದಿ. ಉಭ.) ಎಂಬ ಧಾತುವಿನ ಮೇಲೆ, ಸ್ವಾರ್ಥದಲ್ಲಿ ಣಿಚ್ ಪ್ರತ್ಯಯ ಸೇರಿದಾಗ 'ಅಚ ಇಃ' (೪ ೧೩೯) ಎಂಬ ಉಣಾದಿ ಸೂತ್ರದಂತೆ ಇ ಪ್ರತ್ಯಯವು ಬರಲು ಪೃಷೋದರಾದಿತ್ವಾತ್ ನಕಾರಾಗಮವೂ ಧಾತುವಿನ ಅಕಾರಕ್ಕೆ ಇಕಾರಾಗಮವೂ ಬಂದು ವಿರಿಂಚಿಃ ಎಂದಾಗುತ್ತದೆ : ಪ್ರತ್ಯಯದ ಇಕಾರಕ್ಕೂ ವ್ಯತ್ಯಯೇನ ಅಕಾರ ಬಂದು ವಿರಿಂಚಃ ಎಂದಾಗುತ್ತದೆ. (ವಿರಿಂಚಿ ಎಂಬುದಕ್ಕೆ ಪ್ರತಿಯಾಗಿ ವಿರಂಚಿಃ, ವಿರಂಚಃ ಎಂಬ ರೂಪಗಳೂ ಇವೆ ಎಂಬುದು ಕೋಶಾಂತರಗಳಿಂದ ಲಭ್ಯವಾಗುವುವು) ವಿರಿಂಚಿ ಅಥವಾ ವಿರಿಂಚ ಎಂದರೆ ಸೃಷ್ಟಿಕರ್ತನಾದ ಬ್ರಹ್ಮಾ ಎಂದರ್ಥ.

ದೇವರು ಅಥವಾ ಮುಖ್ಯಪ್ರಾಣ, ವಿಹಗಪ (ವಿಹ-ಆಕಾಶದಲ್ಲಿ, ಗ-ಹೋಗುವ ವಿಹಗ-ಪಕ್ಷಿಗಳ, ಪ-ಒಡೆಯ)-ಗರುಡ, ಅನಂತ-ಶೇಷ, ರುದ್ರ-ರುದ್ರ-ದೇವರು, ಇಂದ್ರ-ದೇವೇಂದ್ರ, ಪೂರ್ವೇಷು-ಮೊದಲಾದ ದೇವತೆಗಳಲ್ಲಿ ; ತಾರತಮ್ಯಂ-ಉಚ್ಚ-ನೀಚತ್ವವನ್ನು (ಕಕ. ವಿ.), ನೀಚೋಚ್ಚಭಾವವನ್ನು (ಪುರಾ.) ಉಚ್ಚ-ನೀಚರೆಂಬ ಕ್ರಮವನ್ನು (ಭ.) ; ಅಧ್ಯಾಯನ್-ಚೆನ್ನಾಗಿ ತಿಳಿದು (ಅದಕ್ಕೆ ಅನುಗುಣವಾಗಿ ಉಚ್ಚರಲ್ಲಿ ಅಧಿಕಭಕ್ತಿಯನ್ನೂ ಕನಿಷ್ಠರಲ್ಲಿ ಕಡಿಮೆ ಭಕ್ತಿಯನ್ನೂ ಮಾಡಬೇಕೆಂದು ತಿಳಿದುಕೊಂಡು ಅದೇ ಪ್ರಕಾರ), ಭಕ್ತಿಂ-ನ್ಯೂನಾಧಿಕವಾದ ಭಕ್ತಿಯನ್ನು, ಯಃ-ಯಾವ ಅಧಿಕಾರಿಯು; ಸಂಧತ್ತೇ-ತಾರತಮ್ಯಾನುಗುಣವಾಗಿ ಮಾಡುತ್ತಾನೋ ; ತಂ-ಅವನನ್ನು ; (ಹರಿಪರವಾಗಿ) ಅಸ್ಮದ್ಗುರುಃ-ನಮಗೆಲ್ಲರಿಗೂ ವೇದಾದಿಶಾಸ್ತ್ರೋಪದೇಶಕನೂ (ಗೃಣಾತಿ-ವೇದಾದಿಶಾಸ್ತ್ರಾನುಪದಿಶತಿ ಎಂಬ ವ್ಯುತ್ಪತ್ತಿಯಿಂದ) (ಅಥವಾ ಗೀರ್ಯತೇ-ಕೀರ್ತ್ಯತೆ ಸಕಲೈರ್ವೇದೈರಿತಿ ವಾ ಗುರುಃ ಎಂಬ ವ್ಯುತ್ಪತ್ತಿಯಿಂದ —'ಕೃಗ್ರೋರುಚ್ಚ' [ಉ ೧/೨೪] ಎಂದು ಉ ಪ್ರತ್ಯಯ) ಸಕಲವೇದ ಪ್ರತಿಪಾದ್ಯನೂ ಆದ; ವಾಯುಃ-(ಪುರಾ.) ಬಲಜ್ಞಾನಾದಿಸಮಾಹಾರದಿಂದ ವಾಯುಶಬ್ದವಾಚ್ಯನಾದ ಶ್ರೀಹರಿಯು (ನೀನೂ, (ವಾಯುಪರವಾಗಿ) ಅಸ್ಮ-ದ್ಗುರುಃ-ಗರುಡಶೇಷಾದಿಗಳೇ ಮೊದಲಾದ ನಮ್ಮೆಲ್ಲರಿಗೂ ಆದಿಗುರುಗಳೂ ಮೂಲಗುರುಗಳೂ ಆದ; ವಾಯುಃ-ಮುಖ್ಯಪ್ರಾಣನು, (ಉಭಯಪರ) ಸದಾ-ಸರ್ವಕಾಲದಲ್ಲಿಯೂ ; ಸ್ಫುಟಂ-(ಕಕ. ವಿ.) ವ್ಯಕ್ತವಾಗಿ, (ಪುರಾ.) ನಿಶ್ಸಂಶಯವಾಗಿ, ಅವತಿ-ರಕ್ಷಿಸುತ್ತಾ(ರೆ)ನೆ.

**174. ಭಾವಾರ್ಥ**—'ಮಾತರ್ಮೇ ಮಾತರಿಶ್ವನ್' ಎಂಬ ಹಿಂದಿನ ಶ್ಲೋಕದಲ್ಲಿ ಹರಿವಾಯುಗಳನ್ನು 'ಹರಿ-ವಾಯುಗಳಲ್ಲಿ ನಿಶ್ಚಲವಾದ ಭಕ್ತಿ-ಯನ್ನು ಕೊಡಿ' ಎಂದು ಕೇಳಿಕೊಂಡರು. ಅದರಿಂದ ಇವರಿಬ್ಬರಲ್ಲಿ ಮಾತ್ರವೇ ಭಕ್ತಿ ಮಾಡಿದರೆ ಸಾಕು ಎಂಬ ತಪ್ಪು ಕಲ್ಪನೆ ಬರುವ ಸಂಭವವಿದೆಯೆಂದು ತಿಳಿದು ಶ್ರೀ ಪಂಡಿತಾಚಾರ್ಯರು ಹಿಂದೆ ಕೇಳಿದ ಭಕ್ತಿಯ ವಿಷಯವನ್ನೇ ಹೆಚ್ಚು ಪರಿಷ್ಕಾರಮಾಡಿ ಈ ಶ್ಲೋಕದಲ್ಲಿ ವಿವರಿಸಿದ್ದಾರೆ.

ಉಪನಿಷತ್ತುಗಳಲ್ಲಿ 'ಮಾತೃದೇವೋ ಭವ, ಪಿತೃದೇವೋ ಭವ, ಆಚಾರ್ಯ ದೇವೋ ಭವ, ಎಂದು ಮಾತೃಭಕ್ತಿಯನ್ನೂ ಪಿತೃಭಕ್ತಿಯನ್ನೂ ಗುರುಭಕ್ತಿ-

ಯನ್ನೂ ಮಾಡಬೇಕೆಂದು ಉಪದೇಶಿಸಿರುವುದರಿಂದ ಕೇವಲ ಹರಿಯಲ್ಲೂ ಮತ್ತು ವಾಯುವಿನಲ್ಲೂ ಮಾತ್ರವೇ ಭಕ್ತಿಯನ್ನು ಮಾಡಿದರೆ ಸಾಲದೆಂದು ಸ್ವಯಂ ಸಿದ್ಧವಾಗುತ್ತದೆ. ಹಾಗಾದರೆ ಎಷ್ಟು ಜನರಲ್ಲಿ ಭಕ್ತಿ ಮಾಡಬೇಕು? ಎಲ್ಲರಲ್ಲೂ ಒಂದೇ ರೀತಿಯಾಗಿ ಭಕ್ತಿಮಾಡಬೇಕೇ ? ಅಥವಾ ಹೇಗೆ ಭಕ್ತಿ ಮಾಡಬೇಕು ? ಎಂಬ ವಿಷಯಗಳು ಉದಯಿಸುವುದು ಸಹಜವಾದ್ದರಿಂದ ಅವೆಲ್ಲಕ್ಕೂ ಈ ಶ್ಲೋಕದಿಂದ ಸಮಾಧಾನ ಹೇಳುತ್ತಾರೆ.

ಹಿಂದಿನ ಶ್ಲೋಕದಲ್ಲಿ ಕೇಳಿಕೊಂಡಂತೆ ವಿಷ್ಣುವಿನಲ್ಲಿ ಭಕ್ತಿ ಮಾಡಲೇ ಬೇಕು—ಯಾವ ಸಂದೇಹವೂ ಇಲ್ಲ. ಆದರೆ ಆ ವಿಷ್ಣುಭಕ್ತಿ ಹೇಗಿರ-ಬೇಕೆಂದರೆ **ತತ್ರ ಭಕ್ತಿಂ ಗರಿಷ್ಠಾಂ** ಎಂದು ಹೇಳಿದರು. ವಿಷ್ಣುವಿನಲ್ಲಿ ಎಲ್ಲರಿಗಿಂತಲೂ ಅತ್ಯಧಿಕವಾಗಿ—ಅಳತೆಯಿಲ್ಲದಷ್ಟು ಹೆಚ್ಚಾಗಿ—ಭಕ್ತಿಮಾಡ-ಬೇಕು ಎಂದರು. ಹಾಗೇಕೆ ಮಾಡಬೇಕೆಂದರೆ, ಕಾರಣ ತೋರಿಸಿಕೊಡು-ತ್ತಾರೆ—**ವಿಷ್ಣೋಃ ಅತ್ಯುತ್ತಮತ್ವಾತ್**–ಶ್ರೀವಿಷ್ಣುವೇ ಸರ್ವೋತ್ತಮನಾದ ಕಾರಣ ಅವನಲ್ಲಿ ಮಿಕ್ಕ ಎಲ್ಲರಲ್ಲಿ ಮಾಡುವ ಭಕ್ತಿಗಿಂತ ಅನಂತಗುಣ ಅಧಿಕವಾಗಿ ಭಕ್ತಿ ಮಾಡಬೇಕು ಎಂದರು ವಿಷ್ಣುವೇ ಸರ್ವೋತ್ತಮನೆಂಬುದು. ಹೇಗೆ ? ರುದ್ರಾದಿಗಳೂ ಸರ್ವಶ್ರೇಷ್ಠರಲ್ಲವೇ ? ಅವರಲ್ಲೇ ಏಕೆ ಅತ್ಯಧಿಕ ಭಕ್ತಿ ಮಾಡಬಾರದು ? ಎಂದರೆ **ಅಖಿಲಗುಣಗಣೈಃ ಅತ್ಯುತ್ತಮತ್ವಾತ್** ಎಂದು ಹೇಳಿದರು. ಈ ವಿಷ್ಣುವೊಬ್ಬನೇ ಅನಂತಕಲ್ಯಾಣ ಗುಣಪರಿಪೂರ್ಣ, ಅವನು ಗುಣತಃ ಮಾತ್ರವಲ್ಲ—ದೇಶತಃ ಕಾಲತಃ ಕೂಡ ವ್ಯಾಪ್ತನು ಎಂದು ತೋರಿಸುವುದಕ್ಕಾಗಿಯೇ ವ್ಯಾಪ್ತಿಸೂಚಕವಾದ **ವಿಷ್ಣು** ಎಂದೇ ಹೇಳಿದರು. ಬ್ರಹ್ಮರುದ್ರಾದಿಗಳು ಯಾರಿಗೂ ಈ ವ್ಯಾಪ್ತಿಯೇ ಇಲ್ಲ. ಅಷ್ಟೇ ಅಲ್ಲದೆ ಅವರೆಲ್ಲರೂ ಅಜ್ಞಾನಾದಿದೋಷದೂಷಿತರೆಂದು ಐತರೇಯೋಪನಿಷದ್ಭಾಷ್ಯ ದಲ್ಲಿ (ಐ.ಭಾ. ೨/೨/೨) ಹೇಳಿದೆ.—

> ದ್ವಾವಾತ್ಮಾನೌ ಹಿ ವೇದೇಷು ದ್ವೌ ಪ್ರಾಣೌ ದ್ವೌ ಚ ಚೇತನೌ ।
> ಅಜ್ಞಾನಾಭಿಭವಾಸ್ಪೃಷ್ಟೌ ವಾಯುರ್ನಾರಾಯಣಶ್ಚ ತೌ ॥
> ತದನ್ಯೇ ಚೇತನಾಸ್ಸರ್ವೇ.........
> ಅಜ್ಞಾನಾಭಿಭವಸ್ಪೃಷ್ಟಾ—ಸ್ತಸ್ಮಾತ್ ತೇ ಹ್ಯಧಮಾಃ ಶ್ರುತಾಃ ।
> ಮಧ್ಯಮೋ ವಾಯುರೇವೈಕ ಉತ್ತಮಃ ಕೇವಲೋ ಹರಿಃ ॥

(ಅರ್ಥ) ವೇದಗಳಲ್ಲಿ ಹೇಳಲ್ಪಟ್ಟ ಚೇತನರುಗಳಲ್ಲಿ ಇಬ್ಬರು—ಕೇವಲ ಇಬ ರು ಮಾತ್ರವೇ ಅಜ್ಞಾನಾದಿ ದೋಷರಹಿತರೆಂದು ಪ್ರಸಿದ್ಧರಾಗಿದ್ದಾರೆ. ವಾಯು ಮತ್ತು ನಾರಾಯಣರೇ ಆ ಇಬ್ಬರು. ಮಿಕ್ಕ ಎಲ್ಲರೂ ಅಜ್ಞಾನಾದಿ ದೋಷ-ದಿಂದ ಕಲುಷಿತರು. ಆದಕಾರಣ ಅವರೆಲ್ಲರನ್ನೂ ಅಧಮರೆನ್ನುತ್ತಾರೆ. ವಾಯು-ದೇವರು ಒಬ್ಬರೇ ಮಧ್ಯಮ ವರ್ಗಕ್ಕೆ ಸೇರಿದವರು. ಶ್ರೀಹರಿ ಒಬ್ಬ ಮಾತ್ರ ಉತ್ತಮನು—ಎಂದು ಹೇಳಿದೆ. ಈ ವಿಚಾರವನ್ನೂ 'ಅಖಿಲಗುಣ-ಗಣೈಃ' ಎಂಬ ಪದ ತೋರಿಸುತ್ತದೆ. ಗುಣ–ಅಮುಖ್ಯವಾದ (ಗೌಣ–ಅಮುಖ್ಯ), ಗಣ–ಗುಂಪಿಗೆ ಸೇರಿದ, ಅಖಿಲ–ಬ್ರಹ್ಮರುದ್ರೇಂದ್ರಾದಿ ಎಲ್ಲರಿಗಿಂತಲೂ (ಅತ್ಯುತ್ತಮತ್ವಾತ್–ಬಹಳ ಶ್ರೇಷ್ಠನಾದ್ದರಿಂದ.)

ಆ ವಿಷ್ಣುವು ಶ್ರೀದೇವಿ-ಭೂದೇವಿಯರಿಂದ ಸದಾ ಆಲಿಂಗಿತನಾಗಿರುವ-ನೆಂದೂ (**ಸಂಶ್ಲಿಷ್ಟೇ ಶ್ರೀಧರಾಭ್ಯಾಂ**) ತಿಳಿದರೆ ಭಾಗ್ಯದೇವಿಯ ಅನುಗ್ರಹವೂ ದೊರಕುವುದೆಂದು ಹೇಳಿದರು.(ಅವಳನ್ನೇ ಪೃಥಕ್ಕಾಗಿ ಉಪಾಸನೆ ಮಾಡುವುದು ಅಧಿಕ ಕ್ಲೇಶಕರವೆಂದು ಭಗವದ್ಗೀತೆಯಲ್ಲಿ (೧೨/೫) ನಿರೂಪಿಸಲ್ಪಟ್ಟಿದೆಯಾದ ಕಾರಣ ಹಾಗೆ ಮಾಡಬಾರದೆಂದೂ ಸೂಚಿಸಿದ್ದಾರೆ).

ಇನ್ನು ವಿಷ್ಣುವೊಬ್ಬನನ್ನೇ ಧ್ಯಾನಮಾಡಿದರೆ ಆ ವಿಷ್ಣುವೇ ಒಪ್ಪುವು-ದಿಲ್ಲ, ಅವನ ಭಕ್ತರಲ್ಲೂ ಭಕ್ತಿಮಾಡಿದರೆ ಮಾತ್ರವೇ ಒಲಿಯುತ್ತಾನೆಂದು ಭಾರತದಲ್ಲಿ ಹೇಳಿದೆ (ಐ.ಭಾಷ್ಯ. ೩/೧/೪ರಲ್ಲಿ ಉದ್ಧೃತ)—

ತದ್ಭಕ್ತ–ಭಕ್ತೇಷ್ವಪಿ ಯೋ ನ ಕುರ್ಯಾತ್ ಪ್ರೀತಿಮಂಜಸಾ ।
ವಿಷ್ಣುರ್ಜಹಾತಿ ತಂ ಪಾಪ—ಮಿಹ ಚಾಮುತ್ರ ಚ ಪ್ರಭುಃ ॥

(ಅರ್ಥ) ವಿಷ್ಣುಭಕ್ತರ ಭಕ್ತರಲ್ಲೂ ಸಹ ಯಾವನು ಪ್ರೀತಿ (ಭಕ್ತಿ) ಯನ್ನು ಮಾಡುವುದಿಲ್ಲವೋ ಅಂಥಾ ಪಾಪಿಷ್ಠನನ್ನು ಶ್ರೀಹರಿ ತ್ಯಜಿಸಿಬಿಡು-ತ್ತಾನೆ—ಆ ಪಾಪಿಗೆ ಇಹದಲ್ಲೂ ಸೌಖ್ಯವಿಲ್ಲ, ಪರದಲ್ಲೂ ಸೌಖ್ಯವಿಲ್ಲ. ಆದ್ದರಿಂದ ವಿಷ್ಣುವಿಗೆ ನೇರವಾಗಿ ಭಕ್ತರಾದ ಬ್ರಹ್ಮರುದ್ರಾದಿ ದೇವತೆಗಳಲ್ಲೂ ಅವರ ಭಕ್ತರಾದ ಧ್ರುವ–ಪ್ರಹ್ಲಾದಾದಿಗಳಲ್ಲೂ ಕ್ರಮವಾಗಿ ಭಕ್ತಿ ಮಾಡ-ಬೇಕೆಂದು ಅರ್ಥವಾಯಿತು.

ಯಾರು ಯಾರಲ್ಲಿ ಎಷ್ಟೆಷ್ಟು ಭಕ್ತಿ ಮಾಡಬೇಕೆಂದರೆ **ಆ-ಧ್ಯಾಯನ್ ತಾರತಮ್ಯಂ** ಎಂದು ಹೇಳಿದರು. ಅವರವರ ಕಕ್ಷೆಗೆ (ಮೆಟ್ಟಿಲಿಗೆ) ತಕ್ಕಂತೆ ನ್ಯೂನಾಧಿಕವಾಗಿ–ಹೆಚ್ಚಿದ್ದರೆ ಹೆಚ್ಚಾಗಿ, ಕಡಿಮೆಯಿದ್ದರೆ ಸ್ವಲ್ಪವಾಗಿ–ಮಾಡಬೇಕೆಂದು ಹೇಳಿದರು. ಮೇಲೆ ಹೇಳಿದ ಭಾರತವಾಕ್ಯದಲ್ಲಿ **ತದ್ಭಕ್ತ-ಭಕ್ತೇಷ್ವಪಿ** ಎಂದು ಹೇಳಿದ್ದನ್ನೇ ಪಂಡಿತಾಚಾರ್ಯರು **ಪರಿವಾರಾತ್ಮನಾ-ಸೇವಕೇಷು** ಎಂದು ಪರ್ಯಾಯದಿಂದ ಹೇಳಿದರು. ಬ್ರಹ್ಮರುದ್ರಾದಿ-ಗಳೆಲ್ಲರೂ ವಿಷ್ಣುಭಕ್ತರು—ವಿಷ್ಣುಪರಿವಾರಕ್ಕೆ ಸೇರಿದವರು ಎಂದು ತಿಳಿದೇ ಭಕ್ತಿ ಮಾಡಬೇಕು. (ಹಾಗೆ ವಿಷ್ಣುಭಕ್ತರೆಂಬ ಭಾವನೆಯಿಲ್ಲದೆ ಮಾಡಿದರೆ ಆ ಬ್ರಹ್ಮಾದಿಗಳೇ ಆ ಸೇವೆಯನ್ನು—ಆ ಭಕ್ತಿಯನ್ನು ಸ್ವೀಕರಿಸುವುದಿಲ್ಲ ಎಂಬ ವಿಷಯವನ್ನು ಮೇಲೆ ಖಂಡ 172ರಲ್ಲಿ ಹೇಳಿದೆ, ಅದೂ ನೆನಪಿರಲಿ.)

**ತಾರತಮ್ಯಂ** ಎಂದು ಹೇಳಿದ್ದನ್ನೇ ಕಿಂಚಿತ್ ತೋರಿಸಿಕೊಡುತ್ತಾರೆ. ಬ್ರಹ್ಮ-ವಾಯುಗಳು ಲಕ್ಷ್ಮೀ-ನಾರಾಯಣರಿಗಿಂತ ಕಡಿಮೆ; ಲಕ್ಷ್ಮೀಗಿಂತ ಕೋಟಿಗುಣ ಅಧಮರು, ನಾರಾಯಣನಿಗಿಂತ ಅನಂತಗುಣ (ಎಣಿಕೆಯೇ ಇಲ್ಲದಷ್ಟು) ಅಧಮರು. ಹೀಗೆ ಇವರಿಬ್ಬರೂ ಸಮಾನಸ್ಕಂಧರಾದರೂ ಬ್ರಹ್ಮನು ವಾಯುವಿಗಿಂತ ಕಿಂಚಿದಧಿಕ. ಗರುಡಶೇಷರುದ್ರರು ಮೂವರೂ ಸಮಾನಸ್ಕಂಧರು. ಅವರಿಗಿಂತ ಕೆಳಗಿನ ಕಕ್ಷೆಗೆ ಇಂದ್ರ (ದೇವೇಂದ್ರ) ಸೇರಿದ್ದಾನೆ. ಇಂದ್ರ-ಕಾಮರಿಬ್ಬರೂ ಸರಿಸಮಾನರು. ಇಂದ್ರಾದಿ ದೇವತೆ-ಗಳಿಗಿಂತ ಋಷಿಗಳು ಕಡಿಮೆ. ಅವರಿಗಿಂತ ಮನುಷ್ಯೋತ್ತಮರು ಕಡಿಮೆ—ಇತ್ಯಾದಿ ತಿಳುವಳಿಕೆಗೇ ತಾರತಮ್ಯವೆಂದು ಹೆಸರು. (ಈ ತಾರತಮ್ಯವು ಆನಂದತಾರತಮ್ಯ ಹೇಳುವಾಗ ತೈತ್ತಿರೀಯಾದಿ ಉಪನಿಷದ್ಭಾಷ್ಯಗಳಲ್ಲೂ ಋಗ್ಭಾಷ್ಯದಲ್ಲೂ ಬ್ರಹ್ಮಸೂತ್ರಭಾಷ್ಯಾದಿಗಳಲ್ಲೂ ಹೇಳಲ್ಪಟ್ಟಿದೆ. ಅದನ್ನೆಲ್ಲಾ ಸಂಗ್ರಹಿಸಿ ಶ್ರೀಮಜ್ಜಗನ್ನಾಥದಾಸರು ಹರಿಕಥಾಮೃತಸಾರದಲ್ಲಿ ಎಂಟು ಸಂಧಿಗಳಲ್ಲಿ (೨೦ ರಿಂದ ೩೦ರವರೆಗೆ, ೨೨, ೨೪, ೨೮ ಬಿಟ್ಟು,) ಹೇಳಿದ್ದಾರೆ. ಅದರಿಂದ ಸುಲಭವಾಗಿ ತಿಳಿದುಕೊಳ್ಳಬಹುದು.) ಇದರಿಂದ ಏನು ಹೇಳಿ-ದಂತಾಯಿತೆಂದರೆ ಮಿಕ್ಕ ಹಿರಿಯರಲ್ಲಿ ಮಾಡುವ ಭಕ್ತಿಗಿಂತ ಮಾತಾಪಿತೃಗಳ

ಭಕ್ತಿ ಹೆಚ್ಚಿನದು. ಅದಕ್ಕಿಂತ ಗುರುಭಕ್ತಿ ಹೆಚ್ಚಿನದು. ಗುರುಭಕ್ತಿಯಲ್ಲೂ ರಾಯರು, ವ್ಯಾಸರಾಯರು, ಟೀಕಾರಾಯರು ಮೊದಲಾದವರಲ್ಲಿ ಕ್ರಮವಾಗಿ ಹೆಚ್ಚು ಭಕ್ತಿ ಮಾಡಬೇಕು. ಗುರುಭಕ್ತಿಗಿಂತ ದೇವತಾಭಕ್ತಿ ಹೆಚ್ಚಿನದು. ದೇವತೆಗಳಲ್ಲೂ ವಾಯುದೇವರಲ್ಲಿ ಅತ್ಯಧಿಕ ಭಕ್ತಿ ಮಾಡಬೇಕು. ವಾಯು-ದೇವರಲ್ಲಿ ಮಾಡುವ ಭಕ್ತಿಯೇ ಬ್ರಹ್ಮದೇವರಲ್ಲೂ ಮಾಡಿದ ಪ್ರಾಯವೇ. ಎಲ್ಲಕ್ಕಿಂತಲೂ ನಿರವಧಿಕವಾದ ನಿಶ್ಚಲ ಭಕ್ತಿಯನ್ನು ಶ್ರೀಪತಿಯಾದ ಶ್ರೀ-ವಿಷ್ಣುವಿನಲ್ಲಿ ಮಾಡಬೇಕು. ಯಾರು ಈ ರೀತಿ ತಾರತಮ್ಯವನ್ನು ತಿಳಿದು ತನ್ನ ಹಿರಿಯರಿಂದ ಆರಂಭಿಸಿ ಶ್ರೀವಿಷ್ಣುವಿನವರೆಗೆ ಎಲ್ಲರಲ್ಲೂ ಶ್ರೀವಿಷ್ಣು-ಪರಿವಾರವೆಂಬ ಬುದ್ಧಿಯಿಂದ ಹೆಚ್ಚು ಹೆಚ್ಚು ಭಕ್ತಿಮಾಡುತ್ತಾನೋ ಅಂತಹ ಅಧಿಕಾರಿಯನ್ನು ಶ್ರೀಹರಿವಾಯುಗಳು ತಪ್ಪದೇ ಸಲಹುತ್ತಾರೆ ಎಂಬುದೇ ಪಂಡಿತಾಚಾರ್ಯರ ಮುಖ್ಯಾಭಿಪ್ರಾಯ.

**175. ಸಮಾನಕಕ್ಷ್ಯದ ದೇವತೆಗಳು**—ತಾರತಮ್ಯಜ್ಞಾನದ ಜೊತೆಯೇ ಒಂದೇ ಅಂತಸ್ತಿನಲ್ಲಿರುವ ದೇವತೆಗಳ ಹೆಸರನ್ನು (ಸಮಾನಕಕ್ಷ್ಯದ ದೇವತೆಗಳು ಯಾರೆಂಬುದನ್ನು) ತಿಳಿದುಕೊಳ್ಳುವುದೂ ಅತ್ಯಾವಶ್ಯಕ. ಈ ವಿಚಾರ ಎಲ್ಲೋ ಕ್ವಚಿತ್ ಬರುವುದರಿಂದ 'ವಿರಿಂಚಿ-ಶ್ವಸನ, ವಿಹಗಪಾನಂತ-ರುದ್ರೇಷೇ' ಎಂದು ಪ್ರಸಕ್ತಿ ಬಂದಿರುವುದರಿಂದ ಈ ಬಗ್ಗೆಯೂ ಎರಡು ಮಾತು ಹೇಳುವುದು ಉಚಿತವಾಗಿದೆ.

ಲಕ್ಷ್ಮೀದೇವಿಯು ಶ್ರೀ-ಭೂ-ದುರ್ಗಾ ಎಂಬ ಮೂರು ರೂಪವುಳ್ಳವಳು; ಈ ಮೂರು ರೂಪಗಳಿಂದಲೇ ಕ್ರಮವಾಗಿ ಸತ್ವ-ರಜಸ್-ತಮೋಗುಣಗಳಿಗೆ ಅಭಿಮಾನಿಯಾಗಿರುತ್ತಾಳಾದಕಾರಣ ಈ ಮೂರು ರೂಪಗಳಲ್ಲೂ ಶ್ರೀದೇವಿಯೇ ಹೆಚ್ಚಿನವಳು, ಭೂದೇವಿ ಅವಳಿಗಿಂತ ಕಡಿಮೆ. ಈ ಸೂಕ್ಷ್ಮ ವ್ಯತ್ಯಾಸವನ್ನು ತೋರಿಸುವುದಕ್ಕಾಗಿಯೇ 'ಸಂಶ್ಲಿಷ್ಟೇ **ಶ್ರೀ-ಧರಾಭ್ಯಾಂ**' ಎಂದು ಹೇಳಿದರು.

ಇನ್ನು ಬ್ರಹ್ಮ-ವಾಯ್ವಾದಿಗಳಿಗೆ ಇರುವ ಸಾಮ್ಯವನ್ನು ತತ್ವಸಾರ-ವೆಂಬ ಗ್ರಂಥದಲ್ಲಿ ಹೀಗೆ ಹೇಳಿದೆ. (ಐತರೇಯ ಭಾಷ್ಯ ೨/೪/೩)—
"ನ ವಿಶೇಷೋ ಬ್ರಹ್ಮವಾಯ್ವೋಃ ಅಧಿಕಾರಾವಿಭೇದತಃ"

ಬ್ರಹ್ಮ-ವಾಯುಗಳಿಗೆ ಅಧಿಕಾರಭೇದದಿಂದ ಇರುವ ಭೇದವನ್ನು ಬಿಟ್ಟರೆ ಬೇರೆ ಯಾವ ವಿಶೇಷವೂ ಇಲ್ಲ. ಬ್ರಹ್ಮದೇವರು ಸತ್ಯಲೋಕಾಧಿಪತ್ಯ ಮಾಡುತ್ತಿರುವುದರಿಂದ ಕಿಂಚಿತ್ ಶ್ರೇಷ್ಠರು.

'ಅನ್ಯೋನ್ಯಗುಣ-ದಾತೃತ್ವಾತ್ ಸಮಾನೌ ಬ್ರಹ್ಮ-ಮಾರುತೌ ||'

ಬ್ರಹ್ಮ-ವಾಯುಗಳಿಬ್ಬರೂ ಪರಸ್ಪರಾವಲಂಬಿಗಳು ಎಂದರೆ ಬ್ರಹ್ಮನು ಬದುಕಲು ವಾಯುವಿನ ಆಶ್ರಯ ಬೇಕು, ವಾಯುವಿಗೆ ಬ್ರಹ್ಮನ ಆಶ್ರಯ ಬೇಕು. ಆದ್ದರಿಂದಲೇ ಅವರಿಬ್ಬರೂ ಸಮಾನರು, ಸಮಬಲವುಳ್ಳವರು.

ನ ಶೇಷ-ಶಿವಯೋಶ್ಚೈವ ತತ್ಪತ್ನೀನಾಂ ಚ ಸರ್ವಶಃ ।

ಶಿವನಿಗೂ ಆದಿಶೇಷನಿಗೂ ಭೇದವಿಲ್ಲ—ಇಬ್ಬರೂ ಸಮಾನರೇ. ಹೀಗೆಯೇ ಗರುಡ-ಶೇಷರಿಬ್ಬರೂ ಎಲ್ಲಾ ಗುಣಗಳಲ್ಲಿಯೂ ಸಮಾನರೇ. (ರುದ್ರದೇವರಿಗೆ ರುದ್ರರೂಪದಿಂದಲೇ ಮುಕ್ತಿಯಿಲ್ಲ, ಅವರು ಶೇಷನಾಗಿಯೇ ಮುಕ್ತರಾಗುವರು. ಆದಕಾರಣ 'ಶೇಷ-ಶಿವಯೋಃ' ಎಂದು ಬೇರೆ ಹೇಳಿದರು.) ಬ್ರಹ್ಮವಾಯುಗಳಂತೆ ಅವರ ಪತ್ನಿಯರೂ ಎಂದರೆ ಸರಸ್ವತೀ-ಭಾರತಿಯರೂ ಸಮಾನರೇ. ಮತ್ತು ಗರುಡಶೇಷರುದ್ರರ ಪತ್ನಿಯರೂ ಎಂದರೆ ಕ್ರಮವಾಗಿ ಸೌಪರ್ಣೀ (ಗರುಡಪತ್ನಿ) ವಾರುಣೀ (ಶೇಷಪತ್ನೀ) ಮತ್ತು ಉಮಾ (ಪಾರ್ವತೀ-ರುದ್ರಪತ್ನೀ) ಈ ಮೂವರೂ ಸಮಾನರು.

ಸಾಮ್ಯಮೇವೈತಯೋಃ ಪತ್ನ್ಯೋಃ ಸಾಮ್ಯಂ ಶಕ್ರ-ಮನೋಜಯೋಃ||

ಗರುಡ-ಶೇಷರ ಪತ್ನಿಯರಲ್ಲೂ ಸಾಮ್ಯವೇ-ವ್ಯತ್ಯಾಸವಿಲ್ಲ. ಅದೇ ರೀತಿ ದೇವೇಂದ್ರನೂ (ಶಕ್ರ) ಮನ್ಮಥನೂ (ಮನೋಜ) (ಇಂದ್ರ-ಕಾಮರೂ) ಸಮರು ಎಂದು ತತ್ವಸಾರವೆಂಬ ಗ್ರಂಥದಲ್ಲಿ ಹೇಳಿದೆ. ಈ ವಿಷಯವನ್ನೇ,

ನ ಭೇದಃ ಶೇಷ-ಶಿವಯೋಃ ಸುಪರ್ಣಃ ಶೇಷಸಮ್ಮಿತಃ ।
ಕಾಮಃ ಶಕ್ರಸಮೋ ನಿತ್ಯಂ ಪ್ರತಿಬಿಂಬಾಶ್ಚ ತೇ ಕ್ರಮಾತ್ ||

ಎಂಬ ಮಹಾಸಂಹಿತಾವಾಕ್ಯವೂ (ಐ.ಭಾ. ೨/೨/೧) ಹೇಳುತ್ತದೆ.

ಆದಿಶೇಷನಿಗೂ ರುದ್ರನಿಗೂ ಭೇದವಿಲ್ಲ. ಹೀಗೆಯೇ ಗರುಡನು ಶೇಷನಿಗೆ ಸಮಾನ. ಹೀಗೆಯೇ ಕಾಮನು ದೇವೇಂದ್ರನಿಗೆ ಸಮಾನ ಎಂದು ಹೇಳಿದೆ. ಇವೇ ಮೊದಲಾದ ಸಮಾನಕಕ್ಷ್ಯದವರ ತಾರತಮ್ಯವನ್ನು

ಶ್ರೀ ಜಗನ್ನಾಥದಾಸರು ಹರಿಕಥಾಮೃತಸಾರದ 'ಕಕ್ಷ್ಯತಾರತಮ್ಯಸಂಧಿ' (೩೨ನೇ ಸಂಧಿ) ಯಲ್ಲಿ ವಿಸ್ತಾರವಾಗಿ ಹೇಳಿದ್ದಾರೆ. ಹೆಚ್ಚು ವಿಸ್ತಾರಕ್ಕೆ ಅದನ್ನು ನೋಡಬಹುದು.

**ತಾರತಮ್ಯಜ್ಞಾನದ ಮಹತ್ವ**—ತಾರತಮ್ಯದ ಬಗ್ಗೆ ಇಷ್ಟೆಲ್ಲಾ ಏಕೆ ತಲೆಕೆಡಿಸಿಕೊಳ್ಳಬೇಕು ? ಏನೋ ಸುಮಾರಾಗಿ ತಿಳಿದುಕೊಂಡರೆ ಸಾಲದೇ ? ಎಂದು ಪ್ರಶ್ನಿಸುವವರಿಗೆ **ಮಾಹಾತ್ಮ್ಯ** ಎಂಬ ಗ್ರಂಥವು (ಭಾಗವತ ತಾತ್ಪರ್ಯ ೧೧ ಸ್ಕಂ, ೧೧ ಅಧ್ಯಾ., ೪೩-೪೪ ಶ್ಲೋ.) ಉತ್ತರ ಹೇಳುತ್ತದೆ—

ಸರ್ವದೇವೋತ್ತಮೋ ವಾಯು—ರಿತಿ ಜ್ಞಾನಾನ್ನ ಚಾಪರಮ್ ।
ಪ್ರಿಯಮಸ್ತಿ ಹರೇಃ ಕಿಂಚಿತ್ ತಥಾ ವಾಯೋರ್ಹರೇರ್ವಿದಃ ॥೧॥

ಮೂವತ್ತಮೂರು ಕೋಟಿ ದೇವತೆಗಳಲ್ಲೂ ವಾಯುದೇವರೇ ಸರ್ವೋತ್ತಮರು ಎಂಬ ಜ್ಞಾನಕ್ಕಿಂತ (ಎಂದು ತಿಳಿದುಕೊಳ್ಳುವುದಕ್ಕಿಂತ) ಬೇರೆ ಯಾವುದೂ (ಯಾವ ಜ್ಞಾನವೂ-ಕೇವಲ ವೇದಾಧ್ಯಯನ ಶಾಸ್ತ್ರಾಧ್ಯಯನ ಯಾವುದೂ) ಶ್ರೀಹರಿಗೆ ಅಷ್ಟು ಪ್ರಿಯವಲ್ಲ. ಇದೇ ರೀತಿ ಆ ವಾಯುಗಿಂತಲೂ ಶ್ರೀವಿಷ್ಣುವೇ ಸರ್ವೋತ್ತಮನೆಂಬ ಜ್ಞಾನವನ್ನು ದೃಢವಾಗಿ ತಿಳಿದುಕೊಳ್ಳುವುದಕ್ಕಿಂತ ಬೇರೆ ಯಾವುದೂ ಹೆಚ್ಚು ಪ್ರಿಯವಾಗುವುದಿಲ್ಲ.

ಭಾರತೀ-ವಾಯು-ಲಕ್ಷ್ಮೀಣಾ—ಮಾತ್ಮನಶ್ಚ ಯಥಾಕ್ರಮಮ್ ।
ಆಧಿಕ್ಯಜ್ಞಾನತೋ ವಿಷ್ಣುಃ ಸರ್ವತಃ ಸಂಪ್ರಸೀದತಿ ॥ ೨ ॥

(ರುದ್ರಾದಿ ಸಕಲದೇವತೆಗಳಿಗಿಂತ ಭಾರತೀ-ಸರಸ್ವತಿಯರು ಶ್ರೇಷ್ಠರು) ಆ ಭಾರತೀ-ಸರಸ್ವತಿಯರಿಗಿಂತ ಬ್ರಹ್ಮ-ವಾಯುಗಳು ಶ್ರೇಷ್ಠರು. ಅವರಿಗಿಂತ ಲಕ್ಷ್ಮೀದೇವಿ ಮತ್ತಷ್ಟು ಶ್ರೇಷ್ಠಳು. (ಈ ಮೂವರನ್ನೇ ಪರಶುಕ್ಲತ್ರಯವೆಂದು ಕರೆಯುತ್ತಾರೆ.) ಲಕ್ಷ್ಮಿಗಿಂತಲೂ ನಾರಾಯಣನು ಅನಂತಪಟ್ಟು ಶ್ರೇಷ್ಠ ಎಂದು ಈ ಕ್ರಮದಲ್ಲಿ ಆಧಿಕ್ಯವನ್ನು ತಿಳಿದುಕೊಳ್ಳುವುದರಿಂದ ವಿಷ್ಣು ಎಲ್ಲಾ ರೀತಿಯಿಂದಲೂ ಪ್ರಸನ್ನನಾಗುತ್ತಾನೆ. ಹೀಗೆ ಈ ತಾರತಮ್ಯಜ್ಞಾನ ವಿಷ್ಣುಪ್ರೀತಿಕರವಾದ್ದರಿಂದಲೇ ಇಷ್ಟು ಒತ್ತಿ ಹೇಳಿದ್ದಾರೆ. (ಈ ಸಂದರ್ಭದಲ್ಲೇ ಮುಂದಿನ ಕೆಲವು ವಿಚಾರಗಳನ್ನು ನೆನಪಿಟ್ಟುಕೊಳ್ಳಬಹುದು.)

೧) ಗೀತಾಕಲ್ಪದಲ್ಲಿ (ಭಾಗ. ತಾ. ೧೧/೧೬/೧೩)

ಋತೇ ರುದ್ರಾದಿಕಾನಿಂದ್ರಃ ಸರ್ವದೇವಾಧಿಕಃ ಸ್ಮೃತಃ ।

ಎಂದರೆ ರುದ್ರಾದಿಗಳನ್ನು ಬಿಟ್ಟರೆ ದೇವೇಂದ್ರನು ಮಿಕ್ಕ ಎಲ್ಲ ದೇವತೆ-ಗಳಿಗಿಂತ ಅಧಿಕ(ಶ್ರೇಷ್ಠ)ನೆಂದು ಹೇಳಿದೆ.

೨) ರುದ್ರಂ ಸಮಾಶ್ರಿತಾ ದೇವಾ ರುದ್ರೋ ಬ್ರಹ್ಮಾಣಮಾಶ್ರಿತಃ ।
ಬ್ರಹ್ಮಾ ಮಾಮಾಶ್ರಿತೋ ನಿತ್ಯಂ ನಾಹಂ ಕಂಚಿದುಪಾಶ್ರಿತಃ ॥

ದೇವತೆಗಳ ರಾಜನೆನಿಸಿದ ದೇವೇಂದ್ರನೇ ಮೊದಲಾದ ಸಕಲ ದೇವತೆಗಳೂ ರುದ್ರದೇವರನ್ನು ಆಶ್ರಯಿಸಿರುವರು. ಆ ರುದ್ರದೇವನು ಚತುರ್ಮುಖ ಬ್ರಹ್ಮನನ್ನು ಆಶ್ರಯಿಸಿದ್ದಾನೆ. ಆ ಬ್ರಹ್ಮನೂ ನನ್ನನ್ನು (ಶ್ರೀವಿಷ್ಣುವನ್ನು) ಆಶ್ರಯಿಸಿದ್ದಾನೆ. ನಾನು (ವಿಷ್ಣು) ಮಾತ್ರ ಯಾರನ್ನೂ ಆಶ್ರಯಿಸಿಲ್ಲ, ನಾನೊಬ್ಬ ಸರ್ವತಂತ್ರ ಸ್ವತಂತ್ರ. ಇವೇ ಮೊದಲಾದ ವಾಕ್ಯಗಳಿಂದ ತಾರತಮ್ಯಾನುಸಂಧಾನ ಮಾಡಿಕೊಂಡು ಹರಿಸರ್ವೋತ್ತಮತ್ವಜ್ಞಾನವನ್ನು ದೃಢಪಡಿಸಿಕೊಳ್ಳಬೇಕು. ಇದನ್ನೇ ದಾಸರಾಯರೂ ಸಹ 'ಹರಿ–ಸರ್ವೋ-ತ್ತಮನಹುದೆಂಬ ಜ್ಞಾನವ । ತಾರತಮ್ಯದಿಂದ ತಿಳಿಸೋ ಮಾರ್ಗವ । ಬಿಡಬೇಡಿ ಬಿಟ್ಟುಕೆಡಬೇಡಿ' ಎಂದು ಡಂಗುರ ಹೊಡೆದಿದ್ದಾರೆ.

## ಶ್ಲೋಕ ಹದಿನಾರು. ಪೀಠಿಕೆಯ ಉಪಸಂಹಾರ ತ್ರಿವಿಧಜೀವರಿಗೆ ತ್ರಿವಿಧಫಲ.

**176. ಅವತಾರಿಕೆ**—ಪೀಠಿಕೆಯ ಪೂರ್ವಭಾಗದ ಎಂಟು ಶ್ಲೋಕ-ಗಳ ಪೈಕಿ ಮೊದಲ ನಾಲ್ಕು ಶ್ಲೋಕಗಳಲ್ಲಿ ಶ್ರೀಮದಾಚಾರ್ಯರನ್ನು ಸ್ತುತಿ-ಸಲು ತಾವು ಅಶಕ್ತರೆಂದು ಹೇಳಿಕೊಂಡು ಮುಂದಿನ ನಾಲ್ಕು ಶ್ಲೋಕಗಳಲ್ಲಿ ಅವರಲ್ಲಿ ಭಕ್ತಿಯನ್ನೂ ಜ್ಞಾನವನ್ನೂ ಕೊಡಬೇಕೆಂದು ಪ್ರಾರ್ಥಿಸಿಕೊಂಡರು. ಈ ಭಕ್ತಿಯಿಂದೇನು ಫಲ ; ಭಕ್ತಿಯಿಲ್ಲದಿದ್ದರೇನು ಗತಿಯಾಗುವುದೆಂಬುದನ್ನು ಒಂಬತ್ತರಿಂದ ಹದಿನೈದರವರೆಗೆ ಏಳು ಶ್ಲೋಕದಲ್ಲಿ ವರ್ಣಿಸಿದರು. ಹೀಗೆ ಏಳು ಶ್ಲೋಕಗಳಲ್ಲಿ ವಿಕ್ಷಿಪ್ತವಾಗಿ (ಬಿಡಿಬಿಡಿಯಾಗಿ) ಹೇಳಿದ್ದನ್ನೇ ಸಂಗ್ರಹಿಸಿ ಹೇಳಿ ಪೀಠಿಕಾಭಾಗವನ್ನು ಈ ಶ್ಲೋಕದಿಂದ ಉಪಸಂಹಾರಮಾಡುತ್ತಾರೆ

(ಕ.ಕ., ವಿ.). ತ್ರಿವಿಧಜೀವಸಂಘಗಳಿಗೂ ಯಥಾಕ್ರಮವಾಗಿ ಮೋಕ್ಷವನ್ನೂ ಸ್ವರ್ಗನರಕಗಳನ್ನೂ ಅಂಧಂತಮಸ್ಸನ್ನೂ ಕೊಡುವವರು ನೀವೇ ಎಂದು ಹರಿವಾಯುಗಳನ್ನೂ ಸ್ತುತಿಸುತ್ತಾರೆ (ಫ. ಪುರಾ.) ತ್ರಿವಿಧಜೀವರಿಗೂ ಗತಿಪ್ರದರು ನೀವೇ ಎಂತ ಸ್ತುತಿಸುತ್ತಾರೆ.

**ತತ್ವಜ್ಞಾನ್ ಮುಕ್ತಿಭಾಜಃ ಸುಖಯಸಿ ಹಿ ಗುರೋ**
**ಯೋಗ್ಯತಾ-ತಾರತಮ್ಯಾ-**
**ದಾಧತ್ಸೇ ಮಿಶ್ರಬುದ್ಧೀಂ-ಸ್ತ್ರಿದಿವ-ನಿರಯ-ಭೂ**
**ಗೋಚರಾನ್ ನಿತ್ಯಬದ್ಧಾನ್ ।**
**ತಾಮಿಸ್ರಾಂಧಾಧಿ(ಧಿ)ಕಾಖ್ಯೇ ತಮಸಿ ಸುಬಹುಲಂ**
**ದುಃಖಯ-ಸ್ಯನ್ಯಥಾಜ್ಞಾನ್**
**ವಿಷ್ಣೋೇರಾಜ್ಞಾಭಿರಿತ್ಥಂ ಶ್ರುತಿ-ಶತಮಿತಿಹಾ-**
**ಸಾದಿ ಚಾಕರ್ಣಯಾಮಃ ॥ ೧೬ ॥**

ಸೂಚನೆ—ಮೂರನೇ ಚರಣದಲ್ಲಿ 'ತಾಮಿಸ್ರಾಂಧಾದಿಕಾಖ್ಯೇ' ಎಂದೂ 'ತಾಮಿಸ್ರಾಂಧಾಧಿಕಾಖ್ಯೇ' ಎಂದೂ ಎರಡು ಪಾಠಗಳಿವೆಯೆಂದು ಹೇಳಿ ಛಲಾರೀಯ ಟೀಕಾದಲ್ಲಿ ಎರಡು ಪಾಠಗಳಿಗೂ ಅರ್ಥ ಹೇಳಿದ್ದಾರೆ. ಕ.ಕ., ವಿ. ಎರಡೂ—'ಆದಿಕಾಖ್ಯೇ' ಎಂಬ ಪಾಠವನ್ನೂ, ಪುರಾ. 'ಅಂಧ+ಅಧಿಕ+ ಆಖ್ಯೇ ಎಂಬ ಪಾಠವನ್ನೂ ಗ್ರಹಣಮಾಡಿದ್ದಾರೆ.

**ಪದವಿಭಾಗ**—ತತ್ವಜ್ಞಾನ್, ಮುಕ್ತಿಭಾಜಃ, ಸುಖಯಸಿ, ಹಿ, ಗುರೋ, ಯೋಗ್ಯತಾ-ತಾರತಮ್ಯಾತ್, ಆಧತ್ಸೇ, ಮಿಶ್ರಬುದ್ಧೀನ್, ತ್ರಿದಿವ-....ಗೋಚರಾನ್, ನಿತ್ಯಬದ್ಧಾನ್, ತಾಮಿಸ್ರಾಂಧಾ(ದಿ)ಧಿಕಾಖ್ಯೇ, ತಮಸಿ, ಸುಬಹುಲಂ, ದುಃಖಯಸಿ, ಅನ್ಯಥಾಜ್ಞಾನ್, (ಹರಿಪರವಾಗಿ—ವಿಷ್ಣೋಃ,ರ, ಆಜ್ಞಾಭಿಃ, ವಾಯುಪರವಾಗಿ—ವಿಷ್ಣೋಃ ಆಜ್ಞಾಭಿಃ,) ಇತ್ಥಂ ಶ್ರುತಿಶತಂ, ಇತಿಹಾ-ಸಾದಿ, ಚ. ಆಕರ್ಣಯಾಮಃ॥ (ವಿಷ್ಣೋೇರಾಜ್ಞಾಭಿಃ ಎಂಬಲ್ಲಿ ಮಾತ್ರ ಮೇಲೆ ತೋರಿಸಿದಂತೆ ಪದವಿಭಾಗದಲ್ಲಿ ವ್ಯತ್ಯಾಸವಿರುವಂತೆ, ಅರ್ಥದಲ್ಲೂ ಭೇದವಿದೆ. ಮಿಕ್ಕ ಎಲ್ಲಾ ಅರ್ಥವೂ ಎರಡಕ್ಕೂ ಒಂದೇ.

**177. ಶ್ಲೋಕದ ವಿಶ್ಲೇಷಣೆ**—ಈ ಶ್ಲೋಕದಲ್ಲಿ ತ್ರಿವಿಧ ಜೀವರನ್ನು ಕುರಿತು ಹೇಳುತ್ತಿರುವುದರಿಂದ ಮೂರು ಬೇರೆ ಬೇರೆ ವಾಕ್ಯಗಳು ಇವೆ. ಕೊನೆಯಲ್ಲಿ 'ಹೀಗೆ ತಿಳಿದು ಬರುತ್ತದೆ' ಎಂದು ನಾಲ್ಕನೇ ವಾಕ್ಯವೂ ಸೇರಿ ಒಟ್ಟು ನಾಲ್ಕು ಚಿಕ್ಕ ವಾಕ್ಯಗಳಿವೆ. 'ಯೋಗ್ಯತಾ-ತಾರತಮ್ಯಾತ್' 'ವಿಷ್ಣೋಃ ಆಜ್ಞಾಭಿಃ' ಎಂಬುದೂ ಆವೃತ್ತಿಯಿಂದ ಮೊದಲ ಮೂರು ವಾಕ್ಯಗಳಲ್ಲೂ ಅನ್ವಯಿಸುತ್ತದೆ. ಪುರಾ. ಪ್ರಕಾರ ಮೊದಲನೆಯ ವಾಕ್ಯದ 'ಸುಖಯಸಿ' ಎಂಬುದೂ, ಮೂರನೇ ವಾಕ್ಯದ 'ದುಃಖಯಸಿ' ಎಂಬುದೂ ಎರಡನೇ ವಾಕ್ಯದಲ್ಲಿ ಅನ್ವಯಿಸುತ್ತದೆ. ಹೇಗೆಂದರೆ—

೧. ತತ್ವಜ್ಞಾನ್ ವಿಷ್ಣೋಃ ಆಜ್ಞಾಭಿಃ (ಕೃತ್ವಾ) ಯೋಗ್ಯತಾ–ತಾರತಮ್ಯಾತ್ ಸುಖಯಸಿ । ೨. ಮಿಶ್ರಬುದ್ಧೀನ್ ವಿಷ್ಣೋಃ ಆಜ್ಞಾಭಿಃ ನಿತ್ಯಬದ್ಧಾನ್(ಕೃತ್ವಾ) ತ್ರಿದಿವ....ಗೋಚರಾನ್ ಆಧತ್ಸೇ, ಯೋಗ್ಯತಾತಾರತಮ್ಯಾತ್ ಸುಖಯಸಿ,ದುಃಖಯಸಿ (ಚ) । ೩. ಅನ್ಯಥಾಜ್ಞಾನ್ ವಿಷ್ಣೋಃ ಆಜ್ಞಯಾ ಯೋಗ್ಯತಾತಾರತಮ್ಯಾತ್ ತಮಸಿ ಸುಬಹುಲಂ ದುಃಖಯಸಿ । ೪. ಇತ್ಥಂ ಶ್ರುತಿಶತಂ ಇತಿಹಾಸಾದಿ ಚ ಆಕರ್ಣಯಾಮಃ ॥ ಈ ನಾಲ್ಕು ವಾಕ್ಯಗಳ ಅರ್ಥವೂ ಸುಲಭವೇ ಆಗಿದೆ, ಆದರೂ ಬರೆಯುತ್ತಿದ್ದೇನೆ. ೧. ತತ್ವವನ್ನು ತಿಳಿದವರನ್ನು ಶ್ರೀಹರಿಯ ಆಜ್ಞಾನುಸಾರವಾಗಿ ಮುಕ್ತಿಭಾಗಿಗಳನ್ನಾಗಿ (ಮಾಡಿ) ಅವರವರ ಯೋಗ್ಯತಾನುಸಾರ ಸುಖಬಡಿಸುವಿರಿ. ೨. ಮಿಶ್ರಬುದ್ಧಿಯುಳ್ಳವರನ್ನು ಶ್ರೀಹರಿಯ ಆಜ್ಞಾನುಸಾರ ಸ್ವರ್ಗ-ನರಕ-ಭೂಮಿಗಳಲ್ಲಿ ಇರುವರನ್ನಾಗಿ ಮಾಡುವಿರಿ. ಮತ್ತು ಅಲ್ಲೇ ಅವರವರ ಯೋಗ್ಯತಾನುಸಾರ ಸುಖವನ್ನು ಪಡಿಸುವಿರಿ, ದುಃಖಕ್ಕೂ ಒಳಗಾಗುವಂತೆ ಮಾಡುವಿರಿ. ೩. ಅನ್ಯಥಾಜ್ಞಾನಿಗಳನ್ನು ಶ್ರೀಹರಿಯ ಆಜ್ಞಾ ಪ್ರಕಾರ ಅವರವರ ಯೋಗ್ಯತಾನುಸಾರ ಅಂಧಂತಮಸ್ಸಿನಲ್ಲಿ ಬಹಳ ದುಃಖಪಡಿಸುವಿರಿ. ೪. ಹೀಗೆಂದು ನೂರಾರು ಶ್ರುತಿಗಳಿಂದಲೂ ಇತಿಹಾಸಾದಿಗಳಿಂದಲೂ ನಾವು ಕೇಳುತ್ತೇವೆ— ಇದೇ ಈ ಶ್ಲೋಕದ ಮುಖ್ಯ ಆಶಯ.

ಪ್ರಥಮ ಚರಣದಲ್ಲಿರುವ 'ಗುರೋ' ಎಂಬುದು ಸಂಬೋಧನೆಯಾದ್ದರಿಂದ ಎಲ್ಲಕ್ಕೂ ಮೊದಲೇ ಅನ್ವಯವಾಗುತ್ತದೆ. ಅದರ ಹಿಂದಿರುವ

ಹಿಕಾರವು ಪ್ರಮಾಣ ಸಿದ್ಧಿಯನ್ನು ತೋರಿಸುತ್ತದೆ. ವಾಯುಪರವಾಗಿ ಅರ್ಥ ಹೇಳುವಾಗ 'ವಿಷ್ಣೋಃ ಆಜ್ಞಾಭಿಃ' ಎಂಬುದು ಮೂರು ವಾಕ್ಯಗಳಲ್ಲಿರುವ ಮೂರೂ ಕ್ರಿಯಾಪದಗಳೊಡನೆಯೂ ಯೋಗ್ಯತಾತಾರತಮ್ಯಾತ್ ಎಂಬುದರ ಜೊತೆ ಅನ್ವಯವಾಗುತ್ತದೆ. ಶ್ರೀಹರಿಪರವಾಗಿ ಅರ್ಥ ಹೇಳುವಾಗ 'ವಿಷ್ಣೋ, ರ' ಎಂಬ ಎರಡೂ ಸಂಬೋಧನೆಯಾದ್ದರಿಂದ ಪ್ರಥಮ ಚರಣದ 'ಗುರೋ' ಜೊತೆ ಸೇರುತ್ತವೆ. ಆಜ್ಞಾಭಿಃ ಎಂಬುದು ಮಾತ್ರ 'ವಿಷ್ಣೋಃ ಆಜ್ಞಾಭಿಃ' ಸೇರಿದಂತೆ ಮೂರು ವಾಕ್ಯಗಳಲ್ಲೂ ಸೇರುತ್ತದೆ. ಕಡೆಯದಾಗಿ ಮೂರನೆಯ ವಾಕ್ಯದಲ್ಲಿರುವ ತಮಸಿ ಎಂಬುದಕ್ಕೆ 'ತಾಮಿಸ್ರಾಂಧಾ (ದಿ) ಧಿಕಾಖ್ಯೇ' ಎಂದು ವಿಶೇಷಣ. ಹರಿಪರವಾಗಿ ಅರ್ಥ ಹೇಳುವುದನ್ನು ಪುರಾ. ಸ್ವಲ್ಪ ತೊಡಕಾಗಿ ತೋರಿಸಿರುವುದರಿಂದ ಮೊದಲು ವಾಯುಪರವಾಗಿಯೇ ಅರ್ಥ ಹೇಳುತ್ತಾ, ಹರಿಪರವಾಗಿ ವ್ಯತ್ಯಾಸ ಬರುವುದನ್ನು ಸಂಕ್ಷೇಪವಾಗಿ ತೋರಿ-ಸಿದ್ದೇವೆ.

**178. ಅನ್ವಯಾರ್ಥ (ಹರಿವಾಯು ಉಭಯ ಪರ)**—(ಹರಿ-ಪರ)–ಹೇ ರ–ಸುಖಸ್ವರೂಪನಾದ ಕಾರಣ ರಕಾರ ವಾಚ್ಯನಾದ, ಗುರೋ–ಹಿತೋಪದೇಶನಾದ ಕಾರಣ ಜಗತ್ತಿಗೇ ಮುಖ್ಯಗುರುವಾದ, ವಿಷ್ಣೋ–ಎಲೈ ವಿಷ್ಣುವೇ ! ಆಜ್ಞಾಭಿಃ–ನಿಮ್ಮ ಆಜ್ಞಾರೂಪವಾದ ಶ್ರುತಿಸ್ಮೃತಿಗಳಿಂದ (ಎಂದರೆ ಅವುಗಳಲ್ಲಿ ಹೇಳಿದ ಪ್ರಕಾರ) (ವಾಯುಪರವಾಗಿ) ಗುರೋ–ಎಲೈ ಮೂಲಗುರುಗಳಾದ ವಾಯುದೇವರೇ, (ತ್ವಂ–ನೀನು), ತತ್ವಜ್ಞಾನ್–ವೇದಾದಿ ಶಾಸ್ತ್ರಗಳಲ್ಲಿ ನಿರೂಪಣೆ ಮಾಡಿದ ಪ್ರಮೇಯಗಳನ್ನು ಶ್ರವಣ ಮನನಾದಿರೂಪ ಅಭ್ಯಾಸದಿಂದ ಸಾಧನೆ ಸಂಪೂರ್ತಿ ಮಾಡಿಕೊಂಡ ಸುಜೀವಿ-ಗಳನ್ನು ; ವಿಷ್ಣೋಃ ಆಜ್ಞಾಭಿಃ–ಶ್ರೀಹರಿಯ ಆಜ್ಞಾನುಸಾರವಾಗಿ, ಮುಕ್ತಿ-ಭಾಜಃ (ಕೃತ್ವಾ)–ಮುಕ್ತಿಗೆ ಭಾಗಿಗಳನ್ನಾಗಿ ಮಾಡಿ ; ಯೋಗ್ಯತಾತಾರ-ತಮ್ಯಾತ್–ಅವರವರ ಯೋಗ್ಯತೆಗೂ ಮತ್ತು ಸಾಧನೆಗೂ ಅನುಗುಣವಾಗಿ, ಸುಖಯಸಿ–ಸುಖಪಡಿಸುವಿರಿ ಎಂದರೆ ಸ್ವರೂಪಾನಂದವನ್ನು ಅನುಭವಿಸುವಂತೆ ಅನುಗ್ರಹಿಸುವಿರಿ. (೨) ಮಿಶ್ರಬುದ್ಧೀನ್–ಮಿಶ್ರಜ್ಞಾನವುಳ್ಳ ನಿತ್ಯಸಂಸಾರಿ-ಗಳನ್ನು, ವಿಷ್ಣೋಃ ಆಜ್ಞಾಭಿಃ–ಶ್ರೀಹರಿಯ ಆಜ್ಞಾನುಸಾರವಾಗಿ, ನಿತ್ಯ-

ಬದ್ಧಾನ್ (ಕೃತ್ವಾ)–ಸುಖದುಃಖಗಳಿಗೆ ನಿತ್ಯದಲ್ಲೂ ಬದ್ಧರಾಗಿರುವಂತೆ ಮಾಡಿ, ತ್ರಿದಿವ....ಗೋಚರಾನ್—ತ್ರಿದಿವ–ಸ್ವರ್ಗ, ನಿರಯ–ನರಕ, ಭೂ–ಭೂಮಿ ಇವುಗಳಲ್ಲಿ, ಗೋಚರಾನ್–ಇರುವಂತೆ (ಎಂದರೆ ಸ್ವರ್ಗ-ನರಕ-ಭೂಮಿಗಳಲ್ಲಿಯೇ ಸುತ್ತಾಡುತ್ತಿರುವಂತೆ) ; ಆಧತ್ಸೇ–ವಿಧಾನಮಾಡುವಿರಿ. (ಮತ್ತು ಆ ಲೋಕಗಳಲ್ಲಿ ಇದ್ದಾಗ) ಯೋಗ್ಯತಾತಾರತಮ್ಯಾತ್–ಆವರು ಮಾಡಿದ ಪುಣ್ಯ ಪಾಪಗಳ ಆಧಿಕ್ಯಕ್ಕೆ ಅನುಗುಣವಾಗಿಯೂ ಆಯಾ ಜೀವನ ಯೋಗ್ಯತಾನುಸಾರವಾಗಿಯೂ, ಸುಖಯಸಿ–ಪುಣ್ಯವು ಹೆಚ್ಚಾಗಿದ್ದಾಗ ಸುಖಪಡುವಂತೆ ಮಾಡುವಿರಿ, ದುಃಖಯಸಿ–ಪಾಪವು ಹೆಚ್ಚಾಗಿದ್ದರೆ ದುಃಖಕ್ಕೆ ಗುರಿಯಾಗುವಂತೆಯೂ ಮಾಡುವಿರಿ ಅಥವಾ ಸುಖ-ದುಃಖಗಳು ಮಿಶ್ರಿತವಾಗಿರುವಂತೆಯೂ ಮಾಡುವಿರಿ. (೩) ಅನ್ಯಥಾಜ್ಞಾನ್–ವೇದಾದಿ ಸಕಲ ಸಚ್ಛಾಸ್ತ್ರಗಳ ಬಗ್ಗೆಯೂ ವಿಷ್ಣು-ವೈಷ್ಣವರ ಮಹಿಮೆಯ ವಿಚಾರ-ವಾಗಿಯೂ ಮಿಥ್ಯಾಜ್ಞಾನವುಳ್ಳ ತಾಮಸಜೀವಿಗಳನ್ನು, ವಿಷ್ಣೋಃ ಆಜ್ಞಾಭಿಃ –ಶ್ರೀಹರಿಯ ಆಜ್ಞಾನುಸಾರವಾಗಿ, ಯೋಗ್ಯತಾತಾರತಮ್ಯಾತ್–ಅವರವರು ಮಾಡಿದ ದ್ವೇಷಸಾಧನೆಯ ಮಟ್ಟವನ್ನು ಅನುಸರಿಸಿ, ತಾಮಿಸ್ರಾಂಧಾ (ದಿ) ಧಿಕಾಖ್ಯೇ–(೧ನೆಯ ಪಾಠದ ಅರ್ಥ) ತಾಮಿಸ್ರ–ತಾಮಿಸ್ರವೆಂದೂ, ಅಂಧ-ಆದಿಕ–ಅಂಧತಾಮಿಸ್ರವೆಂದೂ ಇವೇ ಮೊದಲಾದ, ಆಖ್ಯೇ–ಹೆಸರುಳ್ಳ, (೨ನೇ ಪಾಠದ ಅರ್ಥ), ತಾಮಿಸ್ರ–ತಾಮಿಸ್ರವೆಂದೂ, ಅಂಧ–ಅಧಿಕ–ಅಂಧ-ವೆಂಬುದು ಹೆಚ್ಚಾಗಿ ಉಳ್ಳ ಎಂದರೆ ಅಂಧತಾಮಿಸ್ರವೆಂದೂ, ಆಖ್ಯೇ–ಹೆಸರುಳ್ಳ (ಅರ್ಥಾತ್ ತಾಮಿಸ್ರ, ಅಂಧತಾಮಿಸ್ರ ಎಂದು ಹೆಸರುಗಳುಳ್ಳ), ತಮಸಿ–ನಿತ್ಯ-ನರಕದಲ್ಲಿ ; ಸುಬಹುಲಂ–ಬಹಳ ಘೋರವಾಗಿ (ಎಂದರೆ ೧೩ನೇ ಶ್ಲೋಕದಲ್ಲಿ ವಿವರಿಸಿದ ಪ್ರಕಾರ ಬೇರೆ ಎಲ್ಲಾ ಕಡೆಯೂ ದುಃಖವು ಸುಖದೊಡನೆ ಮಿಶ್ರಿತ-ವಾಗಿಯೇ ಇರುತ್ತವೆ, ಪಂಚಕಷ್ಟದಲ್ಲಿ ಮಾತ್ರ ಕೇವಲ ದುಃಖ ಮಾತ್ರವೇ ಇರುತ್ತದೆ, ಸುಖದ ಗಂಧವೂ ಇರುವುದಿಲ್ಲ ಎಂದು ಹೇಳಿದ ಪ್ರಕಾರ—ಘೋರವಾಗಿ) ; ದುಃಖಯಸಿ–ದುಃಖಕ್ಕೆ ಗುರಿಮಾಡುತ್ತೀರಿ. ೪: ಇತ್ಥಂ–ಈ ಪ್ರಕಾರ ; ಶ್ರುತಿಶತಂ–ನೂರಾರು ಶ್ರುತಿಗಳನ್ನೂ ; ಇತಿಹಾಸಾದಿ ಚ—ಮಹಾಭಾರತ, ಪಂಚರಾತ್ರ, ಪುರಾಣ, ಧರ್ಮಶಾಸ್ತ್ರಗ್ರಂಥಗಳನ್ನೂ (ಆ

ಗ್ರಂಥಗಳು ನಿರೂಪಣೆಮಾಡುತ್ತಿರುವುದನ್ನು) ; ಆಕರ್ಣಯಾಮಃ-ಕೇಳು-ತ್ತೇವೆ. ಹಿ-ಇದು ಬ್ರಹ್ಮಸೂತ್ರಾದಿ ನಿರ್ಣಯಶಾಸ್ತ್ರಗಳಿಂದ ನಿರ್ಣಯಿಸಲ್ಪಟ್ಟ-ವಿಚಾರ.

**(ಪುರಾ. ಪ್ರಕಾರ ಹರಿಪರವಾದ ಅರ್ಥ.)** ವಿಶೇಷ-ತತ್ತ್ವಜ್ಞಾನ್ ಇತ್ಯಾದಿ ಪದಗಳನ್ನು ಅರ್ಥಕ್ಕೆ ಅನುಗುಣವಾಗಿ ಪುನಃ ಪುನಃ ಆವೃತ್ತಿಮಾಡಿ-ಕೊಳ್ಳಲಾಗಿದೆ 'ಮಹಾತಮಸ್ತ್ರಿಧಾ ಪ್ರೋಕ್ತ-ಮೂರ್ಧ್ವಂ ಮಧ್ಯಂ ತಥಾಽಧರಮ್' ಎಂಬ ವಚನಾನುಸಾರ 'ತ್ರಿದಿವ'-ಮೂರು ಅಂತಸ್ತು ಅಥವಾ ತಳಗಳುಳ್ಳ ಎಂಬ ಯೋಗಾರ್ಥವು ತಮಸ್ಸಿಗೂ ಕೂಡುವುದರಿಂದ ತ್ರಿದಿವ-ನಿರಯ-ಭೂ-ಗೋಚರಾನ್ ಎಂಬುದನ್ನು ಅನ್ಯಥಾಜ್ಞಾನ್ ಎಂಬು-ದರ ಜೊತೆಯೂ ಹೊಂದಿಸಿದೆ. ಇಲ್ಲೂ ಮೂರು ವಾಕ್ಯಗಳನ್ನು ಬೇರೆಬೇರೆ-ಯಾಗಿಯೇ ೧-೨-೩ ಎಂದು ತೋರಿಸಿದೆ.

೧. **ಕ**-ಸುಖಸ್ವರೂಪನಾದ, ಗುರೋ-ಹಿತೋಪದೇಶಕನಾದ, **ವಿಷ್ಣೋ**-ಎಲೈ ಶ್ರೀಹರಿಯೇ ! (ತ್ವಂ-ನೀನು) ; (ಕ) ಮುಕ್ತಿಭಾಜಃ ಮೋಕ್ಷವನ್ನು ಹೊಂದುವ ಜನರನ್ನು ; ಆಜ್ಞಾಭಿಃ-ನಿನ್ನ ಆಜ್ಞಾರೂಪವಾದ ಶ್ರುತಿಸ್ಮೃತಿಗಳಿಂದ, (ಕ) ತತ್ತ್ವಜ್ಞಾನ್-ಶ್ರವಣ-ಮನನ-ನಿಧಿಧ್ಯಾಸನಗಳ-ದ್ವಾರಾ ತತ್ತ್ವವನ್ನು ತಿಳಿದುಕೊಂಡ ಜನರನ್ನು, (ಪರೋಕ್ಷಜ್ಞಾನವುಳ್ಳವರಾದ ಬಳಿಕ), (ಖ) ತತ್ತ್ವಜ್ಞಾನ್-ಅಪರೋಕ್ಷಜ್ಞಾನವುಳ್ಳವರನ್ನಾಗಿ ಮಾಡಿ ; (ಅಪರೋಕ್ಷಜ್ಞಾನಾನಂತರ) (ಖ) ಮುಕ್ತಿಭಾಜಃ-(ಮುಕ್ತಿಯನ್ನು ಹೊಂದಲು ಮುಖ್ಯಸಾಧನವಾದ) ಅತ್ಯರ್ಥ-(ಪರಮ) ಪ್ರಸಾದವನ್ನು ಹೊಂದಿ ದವರನ್ನಾಗಿ ಮಾಡಿದ ನಂತರದಲ್ಲಿ); (ಗ) ಮುಕ್ತಿಭಾಜಃ ಕೃತ್ವಾ-ಮುಕ್ತಿಗೆ ಭಾಗಿಗಳನ್ನಾಗಿ ಮಾಡಿ, ತಾರತಮ್ಯಾತ್-ತಾರತಮ್ಯಕ್ಕೆ ಅನುಗುಣವಾಗಿ (ಆನಂದತಾರತಮ್ಯಶ್ರುತಿ ಹೇಳಿದ ಪ್ರಕಾರ ನೂರು-ನೂರುಪಟ್ಟು ಅಧಿಕವಾದ ಪ್ರಮಾಣದಲ್ಲಿ) ; ಸುಬಹುಲಂ-ಬ್ರಹ್ಮನ ಪರ್ಯಂತ ಹೆಚ್ಚು ಹೆಚ್ಚಾಗುವಂತೆ ; ಸುಖಯಸಿ-ಸುಖಪಡಿಸುವಿ. ಹಿ-ಇದು 'ಸೈಷಾನಂದಸ ಮೀಮಾಂಸಾ ಭವತಿ' (ತೈ.ಉ. ೧/೧೭) ಇತ್ಯಾದಿ ಪ್ರಮಾಣಸಿದ್ಧವು.

೨. ನಿತ್ಯಬದ್ಧಾನ್–ನಿತ್ಯಸಂಸಾರಿಗಳನ್ನು, ಮಿಶ್ರಬುದ್ಧೀನ್–ಕೃತ್ವಾ)–(ಸದಸದುಭಯ ವಿಷಯದಲ್ಲೂ ನಿಶ್ಚಯಾತ್ಮಕವಲ್ಲದ ಕಾರಣ) ಡೋಲಾಯಮಾನವಾದ ಬುದ್ಧಿಯುಳ್ಳವರನ್ನು ಮಾಡಿ ; ತ್ರಿದಿವ....ಗೋಚರಾನ್-ಸ್ವರ್ಗ-ನರಕಭೂಮಿಗಳಿಗೆ ವಿಷಯರನ್ನಾಗಿ (ಅಂದರೆ ಈ ಸ್ಥಳಗಳಲ್ಲಿ ಸುತ್ತಾಡುವವರನ್ನಾಗಿ); ಆಧತ್ಸೇ—ಮಾಡುವಿ. (ಅಂಡುವಿ. ಸುಖಯಸಿ-ದುಃಖಯಸಿ (ಚ)–ಸ್ವರ್ಗದಲ್ಲಿರುವಾಗ ಸುಖಪಡಿಸುವಿ ; ನರಕದಲ್ಲಿರುವಾಗ ದುಃಖಪಡಿಸುತ್ತೀಯೆ, ಮತ್ತು ಭೂಮಿಯಲ್ಲಿರುವಾಗ ಸುಖದುಃಖ ಉಭಯಯುಕ್ತರನ್ನಾಗಿ ಮಾಡುವಿ.

೩. (ಪುನಃ) ತ್ರಿದಿವ-ನಿರಯ-ಭೂ-ಗೋಚರಾನ್–ಊರ್ಧ್ವ, ಮಧ್ಯ, ಅಧರ ಎಂದು ಮೂರು ಅಂತಸ್ತುಗಳುಳ್ಳ ಮಹಾತಮಸ್ಸಿಗೆ ವಿಷಯರಾದ ತಮೋಯೋಗ್ಯರನ್ನು ; ಅನ್ಯಥಾಜ್ಞಾನ್ (ಕೃತ್ವಾ)–ವಿಪರೀತಜ್ಞಾನಿಗಳನ್ನಾಗಿ ಮಾಡಿ ; ತಾಮಿಸ್ರ-ಅಂಧ-ಅಧಿಕಾಖ್ಯೇ–ತಾಮಿಸ್ರವೆಂದೂ ಅಂಧವೆಂಬುದು ಹೆಚ್ಚಾಗಿರುವ ಅಂಧತಾಮಿಸ್ರವೆಂದೂ ಎರಡು ಪ್ರಕಾರ ಹೆಸರುಳ್ಳ (ಅರ್ಥಾತ್ ತಾಮಿಸ್ರ–ಅಂಧತಾಮಿಸ್ರಗಳೆಂಬ), ತಮಸಿ–ನಿತ್ಯನರಕದಲ್ಲಿ, ಯೋಗ್ಯತಾ-ತಾರತಮ್ಯಾತ್–ಆಯಾ ಜೀವರ ದ್ವೇಷಸಾಧನೆಯ ಮಟ್ಟಕ್ಕೆ ತಕ್ಕಂತೆ, ಸುಬಹುಲಂ–ಹೆಚ್ಚುಹೆಚ್ಚಾಗಿ, ದುಃಖಯಸಿ–ದುಃಖಪಡಿಸುತ್ತೀ.

೪) ಇತ್ಥಂ–ಈ ಪ್ರಕಾರವಾಗಿ, ಶ್ರುತಿಶತಂ–'ಶ್ರೃಣ್ವೇ ವೀರಂ' ಇತ್ಯಾದಿ ನೂರಾರು ಶ್ರುತಿಗಳನ್ನೂ, ಇತಿಹಾಸಾದಿ ಚ–ಇತಿಹಾಸ ಮೊದಲಾದುವುಗಳನ್ನೂ, (ವಯಂ ನಾವು) ಆಕರ್ಣಯಾಮಃ–ಕೇಳುತ್ತಿದ್ದೇವೆ.

## ಕೆಲವು ವಿಶೇಷ ವಿಚಾರಗಳು

**179. ತತ್ವವನ್ನು ಕುರಿತು—ಈ ಶ್ಲೋಕವು 'ತತ್ವಜ್ಞಾನ್'** ಎಂದೇ ಆರಂಭವಾಗುವುದಲ್ಲದೆ ಮುಂದೆ ಆ 'ತತ್ವವನ್ನು ತಿಳಿದವರು ಮುಕ್ತಿಭಾಗಿಗಳಾಗುವರೆಂದೂ ಸುಖಪಡುವ'ರೆಂದೂ ಹೇಳಿದೆ. ಇದರಿಂದ ತತ್ವಜ್ಞಾನವು ಮೋಕ್ಷಪ್ರದವಾಗುವುದೆಂದು ಪ್ರಕಾರಾಂತರದಿಂದ ಹೇಳಿದಂತಾಯಿತು. ಆದಕಾರಣ ಆ ತತ್ವದ ಬಗ್ಗೆಯೇ ನಾಲ್ಕು ಮಾತುಗಳನ್ನು ಹೇಳುವುದು ಅಗತ್ಯವಾಗಿದೆ. ಈ ತತ್ವದ ವಿಚಾರವನ್ನು ಶ್ರೀಮನ್ಮಧ್ವಾಚಾರ್ಯರು

**ತತ್ವಸಂಖ್ಯಾನ** ಮತ್ತು **ತತ್ವವಿವೇಕಗಳೆಂಬ** ಎರಡು ಪ್ರಕರಣಗ್ರಂಥಗಳಲ್ಲಿ ನಿರೂಪಣೆ ಮಾಡಿದ್ದಾರೆ. ಸಂಖ್ಯಾನ ಎಂದರೆ (ಸಂಖ್ಯೆ)ಗಣನೆ ಅಥವಾ ಎಣಿಕೆ ಎಂದರ್ಥ. ಅದರಂತೆ ತತ್ವಗಳು ಎಷ್ಟಿವೆ ? ಆದರ ಪ್ರಭೇದಗಳು ಮತ್ತು ಉಪಪ್ರಭೇದಗಳು ಎಷ್ಟು ? ಎಂಬುದನ್ನು ತತ್ವಸಂಖ್ಯಾನದಲ್ಲಿ ತೋರಿಸಿ-ಕೊಟ್ಟಿದ್ದಾರೆ. ಇದರಲ್ಲಿ ಹೇಳಿದ ಪ್ರಮೇಯಗಳನ್ನು ಪುಷ್ಟೀಕರಿಸುವುದ ಕ್ಕಾಗಿ, ಭಗವದ್ರಚಿತ ತತ್ವವಿವೇಕ ಎಂಬ ಬೃಹದ್ಗ್ರಂಥದಿಂದ ಆರಿಸಿ ತತ್ವ-ವಿವೇಕದಲ್ಲಿ ಕೊಟ್ಟಿದ್ದಾರೆ. ಈ ಎರಡು ಪ್ರಕರಣಗಳಿಗೂ ಶ್ರೀಮಜ್ಜಯ-ತೀರ್ಥರು ಟೀಕೆಗಳನ್ನು ಬರೆದಿದ್ದಾರೆ, ಆ ಎರಡು ಟೀಕೆಗಳಿಗೂ ಅನೇಕ ಮಹನೀಯರು ಅನೇಕ ಟಿಪ್ಪಣಿಗಳನ್ನು ಬರೆದಿದ್ದಾರೆ. ಇವುಗಳನ್ನೆಲ್ಲಾ ಓದಿದರೆ ತತ್ವಕ್ಕೆ ಸಂಬಂಧಿಸಿದ ಮೂಲಭೂತವಿಚಾರಗಳು ತಿಳಿಯುತ್ತವೆ. ಅಷ್ಟೆಲ್ಲ ವಿಷಯಗಳು ನಮಗೆ ಪ್ರಸಕ್ತವೂ ಅಲ್ಲ; ಇಲ್ಲಿ ಹೇಳಲು ಸಾಧ್ಯವೂ ಅಲ್ಲ. ಪ್ರಕೃತ ನಮಗೆ ಪ್ರಸಕ್ತವಾದ ಅತಿಮುಖ್ಯವಾದ ಕೆಲವು ವಿಷಯ-ಗಳನ್ನು ಮಾತ್ರ ಇಲ್ಲಿ ಸಂಗ್ರಹಿಸಿ ಹೇಳಿದೆ.

**180. ತತ್ವಗಳಲ್ಲಿ ಜೀವರಾಶಿಗಳು**—ತತ್ವಸಂಖ್ಯಾನ ಟೀಕೆಯಲ್ಲಿ ಶ್ರೀಮಜ್ಜಯತೀರ್ಥರು (ಶ್ರೀ ಟೀಕಾರಾಯರು) ತತ್ವಶಬ್ದಾರ್ಥವನ್ನು ಹೇಳುತ್ತಾ 'ತತ್ವಮನಾರೋಪಿತಮ್ । ಪ್ರಮಿತಿವಿಷಯ ಇತಿ ಯಾವತ್' ಎಂದು ಅಪ್ಪಣೆ ಕೊಡಿಸಿದ್ದಾರೆ. ಅದರಂತೆ ಇದ್ದ ವಿಚಾರವನ್ನು ಇದ್ದಂತೆಯೇ ತಿಳಿಯುವುದೇ ತತ್ವ ಎಂದು ಹೇಳಿದಂತಾಯಿತು. ಅಥವಾ ಯಥಾರ್ಥದ ಶುದ್ಧ ತಿಳಿವಳಿಕೆಗೇ ತತ್ವವೆಂದು ಹೆಸರು. ತತ್ವಸಂಖ್ಯಾನದಲ್ಲಿ ಶ್ರೀಮದಾಚಾರ್ಯರು

ಸ್ವತಂತ್ರಮಸ್ವತಂತ್ರಂ ಚ ದ್ವಿವಿಧಂ ತತ್ವಮಿಷ್ಯತೇ ।
ಸ್ವತಂತ್ರೋ ಭಗವಾನ್ ವಿಷ್ಣುಃ....

ಎಂದು ತೋರಿಸಿರುವಂತೆ ತತ್ವವು ಸ್ವತಂತ್ರವೆಂದೂ ಅಸ್ವತಂತ್ರವೆಂದೂ ಎರಡು ಪ್ರಕಾರವಾಗಿದೆ. ಅದರಲ್ಲಿ ಸ್ವತಂತ್ರತತ್ವವು ಭಗವಂತ ವಿಷ್ಣು-ವೊಬ್ಬನೇ, ಮಿಕ್ಕದ್ದೆಲ್ಲವೂ ಅಸ್ವತಂತ್ರ ಈ ಅಸ್ವತಂತ್ರವು ಪುನಃ ಭಾವಾ-ಭಾವವೆಂದೂ ಚೇತನಾಚೇತನವೆಂದೂ ಎರಡೆರಡು ವಿಧವಾಗಿದೆ. ಚೇತನ-

ವರ್ಗವು ಪುನಃ ದುಃಖಾಸ್ಪೃಷ್ಟವೆಂದೂ ದುಃಖಸ್ಪೃಷ್ಟವೆಂದೂ ಎರಡು ಪ್ರಕಾರವಾಗಿದೆ. ಸ್ವತಂತ್ರತತ್ವವು ಒಂದೇ ಆಗಿರುವಂತೆಯೇ ದುಃಖಾ-ಸ್ಪೃಷ್ಟವು ರಮಾದೇವಿ ಒಬ್ಬಳೇ; ಅವಳೊಬ್ಬಳಿಗೆ ಯಾವ ಕಾಲಕ್ಕೂ ಕಿಂಚಿತ್ತೂ ಸಹ ದುಃಖದ ಸ್ಪರ್ಶವೇ ಇಲ್ಲ. ಲಕ್ಷ್ಮಿಯೊಬ್ಬಳನ್ನು ಬಿಟ್ಟುಮಿಕ್ಕ ಸಮಸ್ತ ಚೇತನವರ್ಗದವರೆಲ್ಲರೂ ದುಃಖಸ್ಪೃಷ್ಟರು, ಎಂದರೆ ಇವರೆಲ್ಲರಿಗೂ ಕಿಂಚಿತ್ ದುಃಖದ ಸ್ಪರ್ಶವಾದರೂ ಇದ್ದೇ ಇರುತ್ತದೆ. ಹೀಗೆ ದುಃಖದ ಸ್ಪರ್ಶವುಳ್ಳ ಚೇತನವರ್ಗವನ್ನೇ **ಜೀವರಾಶಿ** ಎಂದೂ ಕರೆಯುವುದುಂಟು. ಲಕ್ಷ್ಮೀ-ನಾರಾಯಣರಿಬ್ಬರನ್ನು ಮಾತ್ರ **ಈಶಕೋಟಿ**ಗೆ ಸೇರಿದವರೆಂದೂ ಅವರಿಬ್ಬರೂ ಅನಾದಿ-ನಿತ್ಯರೆಂದೂ ಇವರಿಬ್ಬರಿಗೂ ಕರ್ಮಬಂಧನವಾಗಲಿ ಜನನ-ಮರಣಗಳ ಬಾಧಾದಿಗಳಾಗಲಿ ಇಲ್ಲವೆಂದೂ ಶಾಸ್ತ್ರಗಳು ಹೇಳುತ್ತವೆ. ಈ ಎಲ್ಲಾ ವಿಷಯಗಳಲ್ಲೂ ಜೀವರಾಶಿಗಳು ತದ್ವಿರುದ್ಧವಾಗಿರುತ್ತವೆ—ಎಂದರೆ ಸಕಲ ಜೀವರಿಗೂ ಬಂಧ-ಮೋಕ್ಷಗಳೆರಡೂ ಉಂಟು. ಎಲ್ಲರೂ ಒಂದಲ್ಲ ಒಂದು ಸಮಯದಲ್ಲಿ ಸಂಸಾರಸಾಗರದಲ್ಲಿ ಬಿದ್ದು ಈಜಲೇ ಬೇಕು. ಕರ್ಮಗಳನ್ನು ಮಾಡಲೇಬೇಕು. ಕಿಂಚಿತ್ತಾದರೂ ಸುಖ-ದುಃಖಗಳಿಗೆ ಗುರಿಯಾಗಲೇಬೇಕು. ಇದೆಲ್ಲ ಜೀವರಾಶಿಗಳ ಲಕ್ಷಣ.

**181. ಜೀವರಾಶಿಗಳು ಅನಂತ**—ಸ್ವತಂತ್ರತತ್ವವೂ (ಶ್ರೀವಿಷ್ಣು) ದುಃಖಾಸ್ಪೃಷ್ಟವೂ (ಲಕ್ಷ್ಮೀದೇವಿ) ಒಂದೊಂದೇ ಆಗಿದ್ದರೆ ಜೀವರಾಶಿಗಳು ಎಣಿಕೆಗೇ ಸಿಗದಂತೆ ಅನಂತಾನಂತ ಕೋಟಿಸಂಖ್ಯಾಕವಾಗಿವೆ. ವಿಷ್ಣುತತ್ವ ನಿರ್ಣಯದಲ್ಲಿ ಇದಕ್ಕೆ ಒಂದು ಸಾದೃಶ್ಯಕೊಟ್ಟು ಈ ವಿಚಾರವನ್ನು ತಿಳಿಸಿಕೊಟ್ಟಿದ್ದಾರೆ—

> ಅನಾಗತಾ ಅತೀತಾಶ್ಚ ಯಾವಂತಃ ಸಹಿತಾಃ ಕ್ಷಣಾಃ ।
> ಅತೀತಾನಾಗತಾಶ್ಚೈವ ಯಾವಂತಃ ಪರಮಾಣವಃ ।
> ತತೋಽಪ್ಯನಂತಗುಣಿತಾ ಜೀವಾನಾಂ ರಾಶಯಃ ಸ್ಮೃತಾಃ ॥

(ಅರ್ಥ) ಹಿಂದೆ ಕಳೆದುಹೋದ ಮತ್ತು ಮುಂದೆ ಬರುವ ಕ್ಷಣಗಳು (ಕಾಲವಿಭಾಗಗಳು–ಸೆಕೆಂಡುಗಳು ಅಥವಾ ನಿಮಿಷಗಳು) ಹೇಗೆ ಅನಂತ-ವಾಗಿವೆಯೋ, ಅದೇ ರೀತಿ ಹಿಂದೆ ಕಳೆದುಹೋದ ಮತ್ತು ಮುಂದೆ ಬರಲಿ-

ಲಿರುವ ಪರಮಾಣುಗಳು ಹೇಗೆ ಎಣಿಸುವುದಕ್ಕೆ ಸಾಧ್ಯವಿಲ್ಲದಷ್ಟು ಅನಂತ-ವಾಗಿವೆಯೋ ಜೀವರಾಶಿಗಳು ಸಹ ಅದಕ್ಕೂ ಹೆಚ್ಚಾಗಿಲಾಗಿ ಎಣಿಸುವುದಿರಲಿ ಕಲ್ಪನೆಮಾಡಿಕೊಳ್ಳುವುದಕ್ಕೂ ಸಾಧ್ಯವಿಲ್ಲದಷ್ಟು ಅನಂತವಾಗಿ—ಅಪಾರ-ವಾಗಿವೆ. ಹೀಗೆ ಅನಂತಕೋಟಿಕೋಟಿಯಾಗಿ ಬಿದ್ದಿರುವ ಜೀವರಾಶಿಗಳಲ್ಲಿ ಒಂದೊಂದು ಬ್ರಹ್ಮಕಲ್ಪದಲ್ಲೂ ಎಂಭತ್ತನಾಲ್ಕುಲಕ್ಷ ಜೀವರಾಶಿಗಳು ಸೃಜ್ಯರಾಶಿಗೆ ಬಂದು ಆ ಬ್ರಹ್ಮದೇವರು ಆಳುವವರೆಗೆ ಸಂಸಾರದಲ್ಲಿ ಬಿದ್ದು ಕರ್ಮಗಳನ್ನು ಮಾಡಿ ಸಾಧನ ಪೂರ್ತಿಮಾಡಿಕೊಂಡು ತಮ್ಮ ತಮ್ಮ ಸಾಧನಗಳಿಗೆ ತಕ್ಕಂತೆ ತಮ್ಮ ತಮ್ಮ ಗತಿಯನ್ನು ಕಾಣುತ್ತಾರೆ. ಈ ರೀತಿ ಗತಿ ಕಾಣುವುದೇ ಪ್ರಸ್ತುತ ಶ್ಲೋಕದ (೧೬ನೇ ಶ್ಲೋಕದ) ಮುಖ್ಯ ವಿಚಾರ.

**182. ಜೀವತ್ರೈವಿಧ್ಯ**—ಹೀಗೆ ಪ್ರತಿಯೊಂದು ಬ್ರಹ್ಮಕಲ್ಪ-ದಲ್ಲೂ ಸೃಜ್ಯರಾಶಿಗೆ ಬಂದ ಜೀವರು ಎಂಭತ್ತನಾಲ್ಕುಲಕ್ಷ ರಾಶಿಗಳಷ್ಟಿದ್ದರೂ ಜೀವರು ಮೂಲತಃ ಅವರ ಹುಟ್ಟುಗುಣವಾದ ಸ್ವಭಾವಕ್ಕೆ ಅನುಸಾರವಾಗಿ ಕೇವಲ **ಮೂರೇ ಗುಂಪಿಗೆ** ಸೇರಿದವರಾಗಿರುತ್ತಾರೆ; ಇದನ್ನೇ ಶಾಸ್ತ್ರದಲ್ಲಿ **ಜೀವತ್ರೈವಿಧ್ಯ** ಎನ್ನುತ್ತಾರೆ. ಇವರಲ್ಲಿರುವ ಈ ಭೇದವು ಸ್ವಾಭಾವಿಕ-ವಾದುದರಿಂದ ಅನಾದಿನಿತ್ಯವಾದುದು, ಯಾರೂ ಮಾಡಿದ್ದಲ್ಲ. ಆದ್ದರಿಂದಲೇ ಅದನ್ನು ಹೋಗಲಾಡಿಸಲು ಅಥವಾ ವ್ಯತ್ಯಾಸ ಮಾಡಿಸಲು ಯಾರಿಂದಲೂ ಸಾಧ್ಯವಿಲ್ಲದ್ದೆಂದೂ ಅನೇಕ ಪ್ರಮಾಣಗಳು ಸಾರುತ್ತವೆ. ಬೆಂಕಿಗೆ ಸುಡುವ ಶಕ್ತಿ ಹೇಗೆ ಸ್ವಾಭಾವಿಕವೋ, ದ್ರವಗಳಿಗೆ ಹರಿಯುವ (ಪ್ರವಹಿಸುವ) ಶಕ್ತಿ ಹೇಗೆ ಸ್ವಾಭಾವಿಕವೋ, ಬೇವಿನಗಿಡಕ್ಕೆ ಕಹಿಯೂ, ಹುಣಸೇ ಅಥವಾ ನಿಂಬೇ-ಗಿಡಕ್ಕೆ ಹುಳಿಯೂ ಹೇಗೆ ಸಹಜಗುಣಗಳೋ ಅದೇ ರೀತಿ ಈ ಮೂರು ವಿಧ ಜೀವರ ಗುಣಗಳೂ ಸಹಜ ಸ್ವಭಾವಗಳೆಂದು ತಿಳಿಯಬೇಕು. (ಮಧ್ವ-ಸಿದ್ಧಾಂತದ ಅತಿಮಹತ್ತರ ರಹಸ್ಯಗಳಲ್ಲಿ ಇದೂ ಒಂದು. ಈ ರಹಸ್ಯವನ್ನು ಅರಿತುಕೊಳ್ಳದೇಹೋದ್ದರಿಂದ ಡಾಕ್ಟರ್ ಸರ್ ಸರ್ವೇಪಲ್ಲಿ ರಾಧಾ-ಕೃಷ್ಣನ್‌ರಂತಹ ಘನ ವಿದ್ವಾಂಸರೂ ಸಹ ಹೇಗೆ ಮಧ್ವಸಿದ್ಧಾಂತದ ಮೇಲೆ ವೃಥಾ ದೋಷಾರೋಪಣೆ ಮಾಡಿದ್ದಾರೆಂಬುದನ್ನು ಸ್ವರ್ಗೀಯ

ಶ್ರೀ ಸಿ. ಎನ್. ಕೃಷ್ಣರಾವ್ ಅವರು ಉಡುಪಿಯ ಸರ್ವಮೂಲಗ್ರಂಥಗಳಿಗೆ ಬರೆದ ಇಂಗ್ಲೀಷ್ ಭೂಮಿಕೆಯಲ್ಲಿ ತೋರಿಸಿದ್ದಾರೆ.)

ಜೀವರು ಮೂರೇ ವಿಧವಾಗಿದ್ದಾರೆಂಬುದನ್ನು ಶ್ರೀಮನ್ಮಹಾಭಾರತ-ತಾತ್ಪರ್ಯನಿರ್ಣಯದಲ್ಲಿ (೧ ಅಧ್ಯಾ. ೮೬–೮೮ಶ್ಲೋ) ಉದಹರಿಸಿದ ಪ್ರಮಾಣವು ಹೀಗೆ ವರ್ಣಿಸುತ್ತದೆ—

ತ್ರಿವಿಧಾ ಜೀವಸಂಘಾಸ್ತು ದೇವ-ಮಾನುಷ-ದಾನವಾಃ ।
ತತ್ರದೇವಾ ಮುಕ್ತಿಯೋಗ್ಯಾ ಮಾನುಷೇ-ಷೂತ್ತಮಾಸ್ತಥಾ ॥
ಮಧ್ಯಮಾ ಮಾನುಷಾ ಯೇ ತು ಸೃತಿಯೋಗ್ಯಾಃ ಸದೈವ ಹಿ ।
ಅಧಮಾ ನಿರಯಾಯೈವ ದಾನವಾಸ್ತು ತಮೋಲಯಾಃ ॥

(ಅರ್ಥ) ದೇವತೆಗಳು, ಮನುಷ್ಯರು ಮತ್ತು ದಾನವರು ಎಂದು ಜೀವರಾಶಿಗಳು ಮೂರು ವಿಧವಾಗಿದ್ದಾರೆ, (ಮನುಷ್ಯರಲ್ಲಿ ಪುನಃ ಉತ್ತಮರು, ಮಧ್ಯಮರು, ಅಧಮರು ಎಂದು ಮೂರು ವಿಧ ) ಈ ಮೂರರ ಪೈಕಿ ದೇವತೆಗಳೂ ಮನು-ಷ್ಯೋತ್ತಮರೂ ಮುಕ್ತಿಯೋಗ್ಯರೆನಿಸಿಕೊಳುತ್ತಾರೆ. (ಏಕೆಂದರೆ ಅವರು ಸ್ವಾಭಾವಿಕವಾಗಿಯೇ ಮುಕ್ತಿಗೆ ಬೇಕಾದ ಸಾಧನಗಳನ್ನು ಮಾಡಿಕೊಳ್ಳು-ತ್ತಲೇ ಹೋಗುತ್ತಿರುತ್ತಾರೆ.) ಮನುಷ್ಯರಲ್ಲಿಯೇ ಮಧ್ಯಮವರ್ಗಕ್ಕೆ ಸೇರಿದ ಜನಗಳು ನಿತ್ಯವಾಗಿ ಸಂಸಾರದಲ್ಲೇ ಬಿದ್ದು ತೊಳಲಾಡುತ್ತಿರುವುದರಿಂದ ಅವರನ್ನು ನಿತ್ಯಸಂಸಾರಿಗಳೆಂದು ಕರೆಯುವರು. ಕಡೆಯದಾಗಿ ದಾನವರೂ ಮನುಷ್ಯಾಧಮರೂ (ಶ್ರೀಹರಿಗುರುಗಳಲ್ಲೂ ವಿಷ್ಣು-ವೈಷ್ಣವರಲ್ಲೂ ದ್ವೇಷ-ಸಾಧಿಸುತ್ತಾ ವೇದನಿಂದಾದಿಗಳನ್ನೇ ಮಾಡುತ್ತಾ ಹೋಗುವುದರಿಂದ ಅವರು) ತಮೋಯೋಗ್ಯರೆನಿಸಿಕೊಳ್ಳುವರು, ಅವರಿಗೆ ನಿತ್ಯನರಕವೇ ಗತಿ.

ಮನುಷ್ಯರಲ್ಲೇ ಉತ್ತಮಾಧಮಮಧ್ಯಮವೆಂಬ ತ್ರೈವಿಧ್ಯ-ವುಂಟೆಂಬುದು ಅಲ್ಲೇ (ತಾ.ನಿ. ೧, ೧೧೯–೨೦) ಹೇಳಿರುವ ಈ ಪ್ರಮಾಣ-ದಿಂದ ಗೊತ್ತಾಗುತ್ತದೆ—

ಮಾನುಷೇಷ್ವಧಮಾಃ ಕಿಂಚಿದ್ ದ್ವೇಷಯುಕ್ತಾಃ ಸದಾ ಹರೌ ।
ದುಃಖನಿಷ್ಠಾಸ್ತತಸ್ತೇಽಪಿ ನಿತ್ಯಮೇವ ನ ಸಂಶಯಃ ॥

ಮಧ್ಯಮಾ ಮಿಶ್ರಭೂತತ್ವಾತ್ ನಿತ್ಯಂ ಮಿಶ್ರಫಲಾಃ ಸ್ಮೃತಾಃ ।
ಕಿಂಚಿದ್ಭಕ್ತಿಯುತಾ ನಿತ್ಯಂ ಉತ್ತಮಾಸ್ತೇನ ಮೋಕ್ಷಿಣಃ ॥

(ಅರ್ಥ) (ಮನುಷ್ಯರಲ್ಲೇ ಉತ್ತಮ ಮಧ್ಯಮ ಅಧಮರೆಂದು ಮೂರು ಪಂಗಡದವರಿದ್ದಾರೆ.) ಮನುಷ್ಯರಲ್ಲಿ ಅಧಮರಾದವರು ಶ್ರೀಹರಿಯಲ್ಲಿ ಸದಾ ಸ್ವಲ್ಪ ದ್ವೇಷವನ್ನು ಸಾಧಿಸುವುದರಿಂದ ಅವರೂ ನಿತ್ಯವಾಗಿ ದುಃಖಭಾಗಿಗಳೇ ಆಗುವರು, ಇದರಲ್ಲಿ ಯಾವ ಸಂದೇಹವೂ ಇಲ್ಲ. ಮಧ್ಯಮ-ವರ್ಗದವರು ವಿಷ್ಣುವಿನಲ್ಲಿ ಅತ್ತ ದ್ವೇಷವನ್ನೂ ಮಾಡುವುದಿಲ್ಲ, ಇತ್ತ ನಿಶ್ಚಲಭಕ್ತಿಯನ್ನೂ ಮಾಡುವುದಿಲ್ಲ. ಹೀಗೆ ಅವರ ಸಾಧನೆ ಮಿಶ್ರವಾಗಿ-ರುವುದರಿಂದ ಅವರಿಗೆ ಸುಖ-ದುಃಖಗಳು ಸದಾ ಮಿಶ್ರವಾಗಿಯೇ ಲಭಿಸುತ್ತವೆ. ಕಡೆಯದಾಗಿ ಮನುಷ್ಯೋತ್ತಮರು (ದೇವತೆಗಳ ಭಕ್ತಿಗೆ ಹೋಲಿಸಿದರೆ) ಸ್ವಲ್ಪ ಭಕ್ತಿ ಮಾಡುವುದರಿಂದ ಉತ್ತಮರೆನಿಸಿಕೊಳ್ಳುತ್ತಾರೆ, ಅಲ್ಲದೆ ಅವರೂ ಮೋಕ್ಷಾಧಿಕಾರಿಗಳಾಗುತ್ತಾರೆ.

**ಗೀತಾತಾತ್ಪರ್ಯನಿರ್ಣಯ**ದಲ್ಲಿ (೨/೨೭) ಉದಹರಿಸಿರುವ ಪ್ರಕಾಶ-ಸಂಹಿತಾವಾಕ್ಯಗಳು ಜೀವತ್ರೈವಿಧ್ಯವನ್ನು ಮತ್ತಷ್ಟು ಸ್ಫುಟವಾಗಿ ವರ್ಣಿಸುತ್ತವೆ—

ಸ್ವಭಾವತಸ್ತ್ರಿಧಾ ಜೀವಾ ಉತ್ತಮಾಧಮ-ಮಧ್ಯಮಾಃ ।
ಉತ್ತಮಾಸ್ತತ್ರ ದೇವಾದ್ಯ ಮರ್ತ್ಯಮಧ್ಯಾಸ್ತು ಮಧ್ಯಮಾಃ ॥
ಅಧಮಾ ಅಸುರಾದ್ಯಾಶ್ಚ ನೈಷಾಮಸ್ತ್ಯನ್ಯಥಾ ಭವಃ ।....

(ಅರ್ಥ) ಜೀವರು **ಸ್ವಭಾವದಿಂದಲೇ** ಉತ್ತಮರು ಮಧ್ಯಮರು ಅಧಮರೆಂದು ಮೂರು ವಿಧವಾಗಿದ್ದಾರೆ. ಅವರ ಪೈಕಿ ದೇವತೆಗಳೂ ಮನುಷ್ಯೋತ್ತಮರೂ ಉತ್ತಮವರ್ಗಕ್ಕೆ ಸೇರಿದವರು. ಮನುಷ್ಯರ ಪೈಕಿ ಮಧ್ಯಮಸ್ವಭಾವದವರು ಮಧ್ಯಮವರ್ಗಕ್ಕೆ ಸೇರುತ್ತಾರೆ. ಅಸುರರೂ ಮನುಷ್ಯಾಧಮರೂ ಅಧಮವರ್ಗಕ್ಕೆ ಸೇರಿದವರು. ಇವರೆಲ್ಲರ ಈ ಗುಣಗಳೂ ಸ್ವಭಾವಜನ್ಯವಾದ್ದರಿಂದ ಇವು ಏನಾದರೂ ಅನ್ಯಥಾ ಆಗಿ ವ್ಯತ್ಯಾಸ ಹೊಂದುವುದಿಲ್ಲ. (ಎಂದರೆ ಉತ್ತಮರು ಅಧಮರೂ ಆಗಲಾರರು. ಅಧಮರು ಉತ್ತಮರೂ ಆಗಲಾರರು. ಮಂಜಿನಗಡ್ಡೆಗೆ ಸುಡುವ ಗುಣ

ಬರುವುದಾಗಲಿ, ಬೆಂಕಿಗೆ ತಣ್ಣಗೆ ಕೊರೆ-ಯುವ ಗುಣವಾಗಲಿ ಬರುವುದಾಗಲಿ, ಬೇವಿನ ಸಸಿಯನ್ನು ಸಕ್ಕರೆಪಾತಿಯಲ್ಲಿ ಬೆಳೆಸಿದರೂ ಅದರ ಕಹಿಗುಣ ಹೇಗೆ ಹೋಗುವುದಿಲ್ಲವೋ, ನಿಂಬೇಹಣ್ಣಿಗೆ ಮಾವಿನಹಣ್ಣಿನ ರುಚಿ ಬರುವುದು ಹೇಗೆ ಅಸಾಧ್ಯವೋ ಹಾಗೆಯೇ ಈ ಜೀವರ ಹುಟ್ಟುಗುಣಗಳು ಏನಾದರೂ ಬದಲಾಯಿಸುವುದಿಲ್ಲವೆಂದು ಭಾವ.)....

ಉತ್ತಮಾ ಮುಕ್ತಿಯೋಗ್ಯಾಸ್ತು ಸೃತಿಯೋಗ್ಯಾಸ್ತು ಮಧ್ಯಮಾಃ।
ಅಪರೇಂಧತಮೋಯೋಗ್ಯಾಃ ಪ್ರಾಪ್ತಿಃ ಸಾಧನಪೂರ್ತಿತಃ ॥....

ಮೂರು ವರ್ಗದವರೂ ತಮ್ಮ ತಮ್ಮ ಸಾಧನಗಳನ್ನು ಪೂರ್ತಿ ಮಾಡಿಕೊಂಡು ತಮ್ಮ ಸಾಧನಕ್ಕೆ ತಕ್ಕ ಗತಿಯನ್ನು ಪಡೆಯುತ್ತಾರೆ. ಉತ್ತಮರು ಹರಿಭಕ್ತ್ಯಾದಿ ಸಾಧನೆಗಳನ್ನು ಮಾಡಿಕೊಂಡು ಮುಕ್ತಿಗೆ ಅರ್ಹತೆಯನ್ನು ಪಡೆಯುತ್ತಾರೆ. ಮಧ್ಯಮರು ಹರಿಭಕ್ತಿ ಮಾಡಿದರೂ ಸ್ಥಿರವಾಗಿ ಮಾಡದೆ ಅಥವಾ ರುದ್ರಾದಿಗಳಲ್ಲೂ ಅದೇ ಭಕ್ತಿ ಮಾಡುವುದರಿಂದಲೂ ಆದರೆ ಹರಿದ್ವೇಷವನ್ನು ಸಾಧಿಸದಿರುವುದರಿಂದಲೂ ಅವರು ಸಂಸಾರದಲ್ಲಿಯೇ ನಿರಂತರವಾಗಿ ಇದ್ದು ಸುಖ-ದುಃಖಗಳೆರಡಕ್ಕೂ ಭಾಗಿಗಳಾಗುವರು. ಅಧಮವರ್ಗದವರು ಹರಿದ್ವೇಷಾದಿಗಳನ್ನು ಸಾಧನೆ ಮಾಡಿ ಅದು ಪರಿಪಕ್ವವಾದ ಬಳಿಕ ಅಂಧಂತಮಸ್ಸಿಗೆ ಹೋಗಲು ಯೋಗ್ಯರಾಗುತ್ತಾರೆ....(ಹೀಗೆ ಮೂವರೂ ತಮ್ಮ ತಮ್ಮ ಸ್ವಭಾವಕ್ಕೆ ಅನುಗುಣವಾದ ಸಾಧನೆಗಳನ್ನೇ ಮಾಡಿಕೊಳ್ಳುತ್ತಾರೆಂಬುದನ್ನು ಸ್ಮೃತಿಯು ಸ್ಪಷ್ಟಪಡಿಸುತ್ತದೆ—)

ಅತೋಽಧಮಾನಾಂ ಜೀವಾನಾಂ ಮಿಥ್ಯಾಜ್ಞಾನಾದಯೋಽಖಿಲಾಃ ॥
ಸ್ವಾಭಾವಿಕ ಗುಣಾ ಜ್ಞೇಯಾ ಮರ್ತ್ಯಮಧ್ಯೇಷು ಮಿಶ್ರಿತಾಃ ॥
ತತ್ವಜ್ಞಾನಂ ವಿಷ್ಣು ಭಕ್ತಿ—ರಿತ್ಯಾದ್ಯಾ ದೇವತಾದಿಷು ।
ಕಾರ್ಯತೇ ಹ್ಯವಶಃ ಕರ್ಮ ಸರ್ವೈಸ್ತೈಃ ಪ್ರಕೃತೈರ್ಗುಣೈಃ ॥

ಆದಕಾರಣ ಮಿಥ್ಯಾಜ್ಞಾನ (ಒಂದನ್ನು ಇನ್ನೊಂದು ವಿಧವಾಗಿಯೇ ತಿಳಿದುಕೊಳ್ಳುವುದು) ಹರಿದ್ವೇಷ ವೇದಾದಿ ಶಾಸ್ತ್ರಗಳಲ್ಲಿ ತಿರಸ್ಕಾರಬುದ್ಧಿ ಮೊದಲಾದ ಪ್ರವೃತ್ತಿಗಳೆಲ್ಲಾ ಅಧಮರಿಗೆ ಸ್ವಾಭಾವಿಕವಾಗಿಯೇ (ಸಹಜವಾಗಿಯೇ) ಬರುವ ಗುಣಗಳೆಂದು ತಿಳಿಯಬೇಕು. ಹೀಗೆಯೇ ಮನುಷ್ಯ-

ರಲ್ಲಿ ಮಧ್ಯಮವರ್ಗಕ್ಕೆ ಸೇರಿದ ಜನರಿಗೆ ಮಿಶ್ರಿತ ಗುಣಗಳು ಪ್ರಕೃತಿಜನ್ಯ-ವಾಗಿಯೇ ಅಭಿವ್ಯಕ್ತವಾಗುತ್ತವೆ. ಅದೇ ರೀತಿಯೇ ಉತ್ತಮಜೀವರಲ್ಲಿ ತತ್ವಜ್ಞಾನ (ತತ್ವವನ್ನು ತಿಳಿದುಕೊಳ್ಳಬೇಕೆಂಬ ಆಸಕ್ತಿ) ಹರಿಭಕ್ತಿ ಮೊದಲಾದ ಗುಣಗಳು ತಮಗೆ ತಾವೇ ಪ್ರಕಟವಾಗಿ ಕಾಣಿಸಿಕೊಳ್ಳುತ್ತವೆ. ಮೂರೂ ವರ್ಗದವರಲ್ಲೂ ಅವರವರ ಈ ಸಹಜಗುಣಗಳು ತಮ್ಮ ಪ್ರಯತ್ನ-ವಿಲ್ಲದೆಯೇ (ಅವಶಃ) ತಮಗೆ ತಾವೇ ಕಾರ್ಯ ಮಾಡಿಸುತ್ತವೆ. (ಇಲ್ಲಿಗೆ ಪ್ರಕಾಶಸಂಹಿತಾ ವಾಕ್ಯ ಮುಗಿಯಿತು.)

**183. ತ್ರೈವಿಧ್ಯಕ್ಕೆ ಪ್ರತ್ಯಕ್ಷಪ್ರಮಾಣ**—ಹೀಗೆ ಜೀವರು ತ್ರಿವಿಧರಾಗಿದ್ದಾರೆಂಬುದೂ ಅವರ ಆ ಗುಣಗಳು ಸಹಜವಾಗಿಯೇ ಅವರವರಿಂದ ಆಯಾ ಸಾಧನೆಗಳನ್ನು ಮಾಡಿಸುತ್ತವೆಯೆಂಬುದೂ ಶಾಸ್ತ್ರಗಳಲ್ಲಿ ಹೇಳಿದ್ದ-ರಿಂದ ಸತ್ಯಾಂಶ ಎಂಬುದು ಮಾತ್ರವಲ್ಲ, ಅದಕ್ಕೆ ಪ್ರತ್ಯಕ್ಷ ಪ್ರಮಾಣವೂ ಸಾಕ್ಷಿಯಾಗಿದೆಯೆಂದು ಬ್ರಹ್ಮಸೂತ್ರಗಳು (೩/೧/೨೧) ಹೇಳುತ್ತವೆ. ತ್ರಿವಿಧ-ಜೀವರು ತಮ್ಮ ತಮ್ಮ ಸ್ವಭಾವಕ್ಕೆ ಅನುಗುಣವಾಗಿಯೇ ಮೂರು ಭಿನ್ನ ಭಿನ್ನ ಪ್ರವೃತ್ತಿಯುಳ್ಳವರಾಗಿದ್ದಾರೆಂಬ ಪ್ರಮೇಯವನ್ನು ಬ್ರಹ್ಮದೇವರು ಭಗವಂತ ಶ್ರೀಮನ್ನಾರಾಯಣನ ವಿಶೇಷಾನುಗ್ರಹದಿಂದ ಸಾಕ್ಷಾತ್ತಾಗಿಯೇ ಕಂಡರು—

ಅಪಶ್ಯತ್ ತ್ರಿವಿಧಾನ್ ಬ್ರಹ್ಮಾ **ಸಾಕ್ಷಾದೇವ** ಚತುರ್ಮುಖಃ ।

ಎಂದು ಪದ್ಮಪುರಾಣದಲ್ಲಿ ಹೇಳಿದೆ. ಹೀಗೆ ಈ ಪ್ರಮೇಯಕ್ಕೆ ಪ್ರತ್ಯಕ್ಷಪ್ರಮಾಣವೂ ಸಾಕ್ಷಿಯಾಗಿರುವುದರಿಂದ (ಓಂ ದರ್ಶನಾತ್ ಓಂ) ಇದು ಸರ್ವಥಾ ಪ್ರಾಮಾಣಿಕವೆಂದು ಸಿದ್ಧವಾಯಿತು.

**184. ಈ ಗುಣಗಳು ಸರ್ವಥಾ ಅನುಲ್ಲಂಘ್ಯ**—ತ್ರಿವಿಧ ಜೀವರ ಆಯಾ ಪ್ರವೃತ್ತಿಗಳು ಸ್ವಾಭಾವಿಕವೇ ಆಗಿರುವುದರಿಂದ ಅದನ್ನು ಬೇರೆ ಯಾರೂ ಯಾವ ರೀತಿಯಿಂದಲೂ ವ್ಯತ್ಯಾಸಗೊಳಿಸಲಾರರು—ಅವು ಅನು-ಲ್ಲಂಘನೀಯಗುಣಗಳೆಂದು ಪುರಾಣಗಳು ಸಾರಿಸಾರಿ ಹೇಳುತ್ತವೆ. ಸೂತ್ರ-ಭಾಷ್ಯೋದಾಹೃತ (೩/೪/೩೫) ಸ್ಕಾಂದಪುರಾಣವು ಹೇಳುವಂತೆ—

ಅಸುರಾ ಆಸುರೇಣೈವ ಸ್ವಭಾವೇನ ಚ ಕರ್ಮಣಾ ।
ಜ್ಞಾನೇನ ವಿಪರೀತೇನ ತಮೋ ಯಾಂತಿ ವಿನಿಶ್ಚಯಾತ್ ॥

ಅಸುರರು ತಮ್ಮ ಆಸುರೀಸ್ವಭಾವದ ಬಲದಿಂದಲೇ ಪ್ರೇರಿತರಾಗಿ ವಿಪರೀತ (ಅನ್ಯಥಾ) ಜ್ಞಾನದಿಂದಲೂ (ಒಂದನ್ನು ಅದಕ್ಕೆ ವ್ಯತಿರಿಕ್ತವಾದ ರೀತಿಯಲ್ಲೇ ತಿಳಿದುಕೊಂಡು) ವೇದನಿಷಿದ್ಧಕರ್ಮಗಳನ್ನೇ ಮಾಡುವುದರಿಂದಲೂ ತಪ್ಪದೆ ತಮಸ್ಸಿಗೇ ಹೋಗುತ್ತಾರೆ.

ದೇವಾ ದೇವಸ್ವಭಾವೇನ ಕರ್ಮಣಾ ಚಾಪ್ಯಸಂಶಯಮ್ ।
ಸಮ್ಯಕ್ ಜ್ಞಾನೇನ ಪರಮಾಂ ಗತಿಂ ಗಚ್ಛಂತಿ ವೈಷ್ಣವೀಮ್ ॥

(ಅಸುರರಿಗೆ ಪ್ರತಿಯಾಗಿ) ದೇವತೆಗಳು ತಮ್ಮ ದೈವೀಸ್ವಭಾವದ ಬಲದಿಂದ ವೇದೋಕ್ತವಿಧಿಗಳಲ್ಲಿ ಸಂಶಯಪಡದೆ ವೇದಾದಿ ಶಾಸ್ತ್ರಗಳು ಪ್ರಮಾಣವೆಂದು ತಿಳಿದು ವೇದೋಕ್ತಕರ್ಮಗಳನ್ನು ಮಾಡಿ ಆ ಕರ್ಮದಿಂದಲೂ ಜ್ಞಾನದಿಂದಲೂ ಉತ್ತಮವಾದ ವಿಷ್ಣುಲೋಕವೆಂಬ ಸದ್ಗತಿಯನ್ನು ಹೊಂದುತ್ತಾರೆ.

ನಾನಯೋರನ್ಯಥಾಭಾವಃ ಕದಾಚಿತ್ ಕ್ವಾಪಿ ವಿದ್ಯತೇ ।

ಇವರಿಬ್ಬರ ಈ ಎರಡು ಸ್ವಭಾವಗಳೂ **ಎಂದೆಂದಿಗೂ ಯಾವ ಸಂದರ್ಭದಲ್ಲೂ ವ್ಯತ್ಯಾಸಹೊಂದಲಾರದು.**

ಮಾನುಷಾ ಮಿಶ್ರಮತಯೋ ವಿಮಿಶ್ರಗತಯೋಽಪಿ ಚ ॥

ಚಂಚಲವಾದ (ಹಾಗೂ–ಹೀಗೂ ತೂಗಾಡುವ) ಬುದ್ಧಿಯುಳ್ಳವರಾದಕಾರಣ ಮಧ್ಯಮವರ್ಗಕ್ಕೆ ಸೇರಿದ ಮನುಷ್ಯರು ಕ್ಷಣಿಕ ಸುಖವನ್ನು ಕೊಡುವ ಸ್ವರ್ಗಾದಿ ನಶ್ವರಲೋಕಗಳಿಗೂ ದುಃಖಕ್ಕೆ ಕಾರಣೀಭೂತವಾದ ನರಕಗಳಿಗೂ ಅಡ್ಡಾಡುತ್ತಾ ಮಿಶ್ರಿತವಾದ ಸುಖದುಃಖಗಳೆರಡಕ್ಕೂ ಭಾಗಿಗಳಾಗುತ್ತಾರೆ. (ಇಲ್ಲಿಗೆ ಸ್ಕಾಂದಪುರಾಣದ ವಾಕ್ಯ ಮುಗಿಯಿತು.)

ಗೀತಾಭಾಷ್ಯದಲ್ಲಿ (೬/೯) ಉದಹರಿಸಿದ ಬ್ರಾಹ್ಮಪುರಾಣವು ಹೀಗೆ ನಿರೂಪಣೆ ಮಾಡುತ್ತದೆ—

ಅಸುರಾದೇಸ್ತಥಾ ದೋಷಾ ನಿತ್ಯಾಃ ಸ್ವಾಭಾವಿಕಾಸ್ತಥಾ ।
ಗುಣದೋಷೌ ಮನುಷ್ಯಾಣಾಂ ನಿತ್ಯೌಃ ಸ್ವಾಭಾವಿಕೌ ಮತೌ ॥

ಗುಣೈಕಮಾತ್ರರೂಪಾಸ್ತು ದೇವಾ ಏವ ಸದಾ ಮತಾಃ ॥

(ಅರ್ಥ) ಕಲ್ಯಾದಿ ಅಸುರರಿಗೂ ಮನುಷ್ಯಾಧಮರಿಗೂ (ವೇದಾದಿ ಶಾಸ್ತ್ರಗಳಲ್ಲಿ ಅವಿಶ್ವಾಸ, ಹರಿದ್ವೇಷ, ಗರ್ವ, ಅಹಂಕಾರ, ಪರಹಿಂಸೆ ಮೊದಲಾದ) ದೋಷಗಳು ನಿತ್ಯವಾಗಿಯೇ ಇರತಕ್ಕ ಸ್ವಾಭಾವಿಕವಾದ ಸಹಜ

ಗುಣಗಳು ; ಆದಕಾರಣ ಅವು ಎಂದಿಗೂ ನಾಶವಾಗತಕ್ಕವುಗಳಲ್ಲ. ಇದೇ ರೀತಿ ಮಧ್ಯಮವರ್ಗಕ್ಕೆ ಸೇರಿದ ಮನುಷ್ಯರಿಗೆ ಗುಣದೋಷಗಳೆರಡೂ ಸ್ವಾಭಾವಿಕವಾಗಿ ಸದಾ ಇದ್ದೇ ಇರುವುವು ; ಅವೂ ಎಂದಿಗೂ ನಾಶವಾಗ-ತಕ್ಕವುಗಳಲ್ಲ. ಇವರೆಲ್ಲರಿಗೆ ಪ್ರತಿಯಾಗಿ ದೇವತೆಗಳು ಮಾತ್ರ ನಿತ್ಯದಲ್ಲೂ ಕೇವಲ ಗುಣಸ್ವರೂಪರೇ ಆಗಿರುತ್ತಾರೆ. ಅವರ ಈ ಸಹಜಗಳು (ಮಧ್ಯೆ ಕಾರಣಾಂತರಗಳಿಂದ ಸ್ವಲ್ಪಕಾಲ ಕಾಣಿಸದಂತೆ ಮರೆಯಾದರೂ) ಅವರನ್ನು ಬಿಟ್ಟುಹೋಗುವುದಿಲ್ಲ. (ಎಂದರೆ ದೇವತೆಗಳಿಗೆ ದೈತ್ಯಾವೇಶದಿಂದ ಕ್ವಚಿತ್ ಯಾವಾಗಲಾದರೂ ಹರಿದ್ವೇಷ, ಅಜ್ಞಾನ, ಅಹಂಕಾರಾದಿ ದೋಷಗಳು ಬರುವುದುಂಟು. ಆದರೆ ಅದು ಸ್ವಲ್ಪಹೊತ್ತು ಮಾತ್ರವೇ ಇರುತ್ತದೆ. ಆಮೇಲೆ ಅವರ ಸಹಜಗುಣಗಳಾದ ಜ್ಞಾನ-ಭಕ್ತ್ಯಾದಿ ಗುಣಗಳೇ ಸ್ಫುಟಿಸು-ವುದರಿಂದ ಅವರು ಪುನಃ ಎಚ್ಚೆತ್ತು ತಮ್ಮ ತಪ್ಪನ್ನು ತಿದ್ದಿಕೊಳ್ಳುತ್ತಾರೆ, ಅಲ್ಲದೆ ಅದನ್ನು ತಪ್ಪೆಂದು ಒಪ್ಪಿಕೊಳ್ಳುತ್ತಾರೆಕೂಡ'*) ಎಂದು ಬ್ರಾಹ್ಮ ಪುರಾಣದಲ್ಲಿ ಹೇಳಿದೆ. ಅದೇ ತಾತ್ಪರ್ಯದಲ್ಲೇ(೧೦/೨೨/೨೧) ಉದಹರಿಸಿದ ತಂತ್ರಭಾಗವತವಾಕ್ಯವು—

---

*ದೇವತೆಗಳಿಗೆ ಅಜ್ಞಾನ ಅಹಂಕಾರಾದಿ ದೋಷಗಳು ಸ್ವತಃ ಇಲ್ಲವಾದರೂ ಕ್ವಚಿತ್ ದೈತ್ಯಾವೇಶದಿಂದ ಬರುವುದುಂಟು. ಭಾಗವತತಾತ್ಪರ್ಯದಲ್ಲಿ (೧೧-೨೪೯) ಉದಹರಿಸಿರುವ ವೇದತತ್ತ್ವವೆಂಬ ಗ್ರಂಥದಲ್ಲಿ—

> ಜ್ಞಾನರೂಪಾನಪಿ ಸುರಾನ್ ವಿನಾ ಪ್ರಾಣಂ ಕ್ವಚಿತ್ ಪರೇ ।
> ಆವಿಶಂತಿ ಹ್ಯತಸ್ತೇಷಾ—ಮಜ್ಞಾನಾದಿ ನ ತು ಸ್ವತಃ ॥

'ಜ್ಞಾನರೂಪರಾಗಿದ್ದರೂ ಸಹ, ಮುಖ್ಯಪ್ರಾಣನನ್ನು ಬಿಟ್ಟು ಮಿಕ್ಕ ಎಲ್ಲಾ ದೇವತೆ-ಗಳನ್ನೂ ದೈತ್ಯರು (ಪರೇ) ಪ್ರವೇಶಿಸುತ್ತಾರೆ. ಆದ್ದರಿಂದ ಅವರಿಗೆ ಅಜ್ಞಾನಾದಿ-ದೋಷಗಳು ಕ್ವಚಿತ್ ಬರುತ್ತದೆ. ಆದರೆ ಸ್ವತಃ, ಅಸುರಾವೇಶವಿಲ್ಲದೆ, ಬರುವುದಿಲ್ಲ' ಎಂದು ಹೇಳಿದೆ, ಮತ್ತು ಈ ಅಂಶವನ್ನೇ 'ಓಂ ಅನಭಿಭವಂ ಚ ದರ್ಶಯತಿ ಓಂ' ಎಂಬ ಬ್ರಹ್ಮಸೂತ್ರವೂ (೩/೪ ೩೫) ನಿರ್ಣಯಿಸಿ ಹೇಳುತ್ತದೆ. 'ಅಭಿಭವಃ' ಎಂದರೆ ಸೋಲು, ಅಪಾಯ ಎಂದರ್ಥ ; ಅದಕ್ಕೆ ವಿರುದ್ಧವಾದುದೇ ಅನಭಿಭವ. ಇದಕ್ಕೆ ಸೋಲದಿರುವಿಕೆ, ಅಪಾಯವಿಲ್ಲದಿರೋಣ ಎಂದರ್ಥ. ಆದಕಾರಣ 'ಅನಭಿಭವಂ'.

ಅತ್ಯಲ್ಪಸ್ತ್ವಸುರಾವೇಶೋ ದೇವಾನಾಂ ಚ ಭವಿಷ್ಯತಿ ।
ಪ್ರಾಣಮೇಕಮಸೌಹಿತ್ವಾ ಆಖಣಾಶ್ಮಸಮಃ ಸ್ಮೃತಃ ॥
ತಸ್ಮಿನ್ನಪ್ಯಸುರಾವೇಶೇ ಗತೇ ಪ್ರಕೃತಿರೇವ ತು ॥

ಮುಖ್ಯಪ್ರಾಣನೊಬ್ಬನನ್ನು ಬಿಟ್ಟು ಮಿಕ್ಕ ಎಲ್ಲಾ ದೇವತೆಗಳಿಗೂ ಅತ್ಯಲ್ಪವಾದ ಅಸುರಾವೇಶ ಬಂದೇ ಬರುತ್ತದೆ. ಈ ಪ್ರಾಣದೇವರು ಕಲ್ಲುಬಂಡೆ ಇದ್ದಹಾಗೆ ಬಹಳ ಬಲಿಷ್ಠರಾದ್ದರಿಂದ ಅವರನ್ನು ಯಾವ ಅಸುರನೂ ಪ್ರವೇಶಿಸಲಾರ. ದೇವತೆಗಳಿಗೆ ಅಸುರಾವೇಶ ಹೋದಕೂಡಲೇ ಅವರ ಜ್ಞಾನಭಕ್ತ್ಯಾದಿ ಗುಣಗಳು ತಮಗೆ ತಾವೇ ಹೊರಬೀಳುತ್ತವೆ— ಎಂದು ತಿಳಿಸುತ್ತದೆ.

ಈ ರೀತಿ, ಪ್ರಾಣದೇವರನ್ನು ಬಿಟ್ಟು ಮಿಕ್ಕ ಎಲ್ಲ ದೇವತೆಗಳಿಗೂ ಅಸುರಾವೇಶವುಂಟೆಂಬುದನ್ನು ಆಚಾರ್ಯರು ತಾತ್ಪರ್ಯನಿರ್ಣಯದಲ್ಲೂ ಭಾಗವತತಾತ್ಪರ್ಯದಲ್ಲೂ ಅನೇಕ ಕಡೆ ತೋರಿಸಿಕೊಟ್ಟಿದ್ದಾರೆ. ಕೆಲವು ಪ್ರಸಂಗಗಳನ್ನು ಮಾತ್ರ ಇಲ್ಲಿ ಸೂಚಿಸಬಹುದು. ೧. ಕೃಷ್ಣನು ಇಂದ್ರನಿಗೆ ಸಲ್ಲಬೇಕಾದ ಪೂಜೆಯನ್ನು ಗೋವರ್ಧನಗಿರಿಗೇ ಸಲ್ಲಿಸಿಬಿಡಲು ಇಂದ್ರನಿಗೆ ಅಸುರಾವೇಶ ಬಂದು ಅಹಂಕಾರದಿಂದ ಕೃಷ್ಣನನ್ನು ಎದುರಿಸಿ ಮಳೆ ಸುರಿಸಿದನು. ೨. ಗರುಡನಿಗೆ ಕೃಷ್ಣ ಬೇರೆ ವಿಷ್ಣು ಬೇರೆ ಎಂಬ ಅಜ್ಞಾನ ಬಂತು. ಆದರಿಂದ ಕೃಷ್ಣನಿಗೆ ಬಲಿಚಕ್ರವರ್ತಿಯಿಂದ ತಂದಿದ್ದ ಕಿರೀಟ ಹಾಕಲು ಹಿಂಜರಿದನು. ೩. ಬಲರಾಮನಿಗೆ ಕೃಷ್ಣನನ್ನು ಕಂಡರೆ ತಿರಸ್ಕಾರ ಬುದ್ಧಿಯಿತ್ತು. ೪. ಅರ್ಜುನನು ಕೃಷ್ಣನನ್ನು ಎಷ್ಟೋ ಸಂದರ್ಭದಲ್ಲಿ ಮನುಷ್ಯನೆಂದೇ ಭಾವಿಸುತ್ತಿದ್ದನು. ೫. ರಾವಣನ ಸಂಹಾರವಾದ ಬಳಿಕ ರುದ್ರದೇವರು ರಾಮದೇವರನ್ನು ಪ್ರತಿಭಟಿಸಿ ನಿಂದಿಸಿದರು. (ತಾ.ನಿ. ೮ ಅಧ್ಯಾ ೨೧೯–೨೧). ಇತ್ಯಾದಿ.

**ಚ** ಎಂದರೆ (ದೇವತೆಗಳ ಅಥವಾ ದೈತ್ಯರ ಸ್ವಭಾವಕ್ಕೆ) ಎಂದಿಗೂ ಅಪಾಯ ಅಥವಾ ಸೋಲು ಬರುವುದಿಲ್ಲ—ಅವರಿಗೆ ಸಹಜವಾಗಿ ಇರುವ ಸ್ವಭಾವವು ಎಂದೆಂದಿಗೂ ವ್ಯತ್ಯಾಸವಾಗುವುದಿಲ್ಲ—ಎಂಬುದನ್ನು 'ದೈವೀಯೇವ—' ಎಂಬ ಶ್ರುತಿಯು, **ದರ್ಶಯತಿ**–ತೋರಿಸುತ್ತದೆ. ಪ್ರಸಕ್ತವಾದ ಆ ಶ್ರುತಿಗೆ 'ದೇವತೆಗಳು ದೈವೀಸಂಪತ್ತನ್ನೇ ಹೊಂದಿರುತ್ತಾರೆ.

ಅಸುರರು ಆಸುರೀಸಂಪತ್ತನ್ನೇ ಹೊಂದಿರುತ್ತಾರೆ. ಇವರಿಬ್ಬರ ಎರಡು ಸ್ವಭಾವಗಳೂ(ಸಹಜಗುಣಗಳಾದ್ದರಿಂದ) ಎಂದೆಂದಿಗೂ ಬದಲಾಯಿಸುವುದಿಲ್ಲ. ಅವರವರ ಸ್ವಭಾವಗಳು ಅದೇ ರೀತಿಯೇ ಇರುತ್ತವೆ' ಎಂದು ಅರ್ಥ. ಒಟ್ಟಿನಲ್ಲಿ ಉತ್ತಮ ಮಧ್ಯಮ ಅಧಮ ವರ್ಗದ ಜೀವರ ಸ್ವಭಾವಗಳು ತಮ್ಮ ತಮ್ಮ ಸ್ವಭಾವಕ್ಕೆ ಅನುಗುಣವಾಗಿಯೇ ವರ್ತಿಸುತ್ತವೆ. ಶ್ರೀಹರಿ-ವಾಯುಗಳು ಅವರವರ ಸ್ವಭಾವಕ್ಕೆ ಅನುಗುಣವಾಗಿಯೇ ಅವರವರನ್ನು ಆಯಾ ವರ್ಗದಲ್ಲೇ ಪ್ರೇರಿಸುತ್ತಾರೆ.

**185. ಇಬ್ಬರ ಪ್ರೇರಣಾಶಕ್ತಿಯಲ್ಲೇ ವ್ಯತ್ಯಾಸ**—ಶ್ರೀಹರಿ-ವಾಯುಗಳಿಬ್ಬರೂ ತ್ರಿವಿಧ ಜೀವರನ್ನು ಪ್ರೇರಿಸುತ್ತಾರೆ ಎಂಬುದು ಸಾಮಾನ್ಯವಾದ ಹೇಳಿಕೆಯಾದರೂ ಇಬ್ಬರ ಪ್ರೇರಣಾಶಕ್ತಿಯಲ್ಲೂ ಮಹದಂತರವಿದೆಯೆಂಬುದನ್ನು ನಾವು ಮರೆಯಬಾರದು. ಇಲ್ಲದಿದ್ದರೆ ಹರಿಯ ಸ್ವಾತಂತ್ರ್ಯಕ್ಕೂ ಸರ್ವೋತ್ತಮತ್ವಕ್ಕೂ ಧಕ್ಕೆಬರುತ್ತದೆ. ಆದಕಾರಣ ಈ ವ್ಯತ್ಯಾಸವನ್ನು ಸ್ಪಷ್ಟವಾಗಿಯೇ ಅರಿತುಕೊಳ್ಳಬೇಕು.

ಸಕಲ ಜಗತ್ತಿನ ಸೃಷ್ಟಿ-ಸಂಹಾರಾದಿ ಎಂಟು ಕಾರ್ಯಗಳನ್ನೂ ವಿಷ್ಣು ಒಬ್ಬನೇ ನಿರ್ವಹಿಸುತ್ತಾನೆ, ಈ ಶಕ್ತಿ (ಈ ಲಕ್ಷಣಗಳು) ಬೇರೆ ಯಾರಲ್ಲೂ ಇಲ್ಲ ಎಂಬುದೇ ಜನ್ಮಾಧಿಕರಣದ (ಬ್ರ.ಸೂ. ೧/೧/೨ ಅಧಿ) ಮುಖ್ಯ ಪ್ರಮೇಯ. ಹೀಗೆ ಈ ಎಂಟು ಕಾರ್ಯಗಳೂ ವಿಷ್ಣುವಿನಿಂದಲೇ ನಡೆಯುತ್ತವೆ ಎಂದು ಉಪಾಸನೆ ಮಾಡಿದವರಿಗೆ ಮಾತ್ರವೇ ಮೋಕ್ಷವಾಗುವುದೆಂದೂ ಅನ್ಯಥಾ ಆಗಲಾರದೆಂದೂ ತಾತ್ಪರ್ಯನಿರ್ಣಯೋದಾಹೃತವಾದ (೧/೧೧೯–೨೦) ಈ ಪ್ರಮಾಣ ಹೇಳುತ್ತದೆ.

ಸೃಷ್ಟಿ-ರಕ್ಷಾ-ಹೃತಿ-ಜ್ಞಾನ—ನಿಯತ್ಯ-ಜ್ಞಾನ-ಬಂಧನಾನ್ ।
ಮೋಕ್ಷಂ ಚ ವಿಷ್ಣುತಸ್ತ್ವೇವ ಜ್ಞಾತ್ವಾ ಮುಕ್ತಿರ್ನ ಚಾನ್ಯಥ ॥

(ಈ ಪ್ರಮಾಣವನ್ನು ಕಕ. ಛ. ಎರಡೂ ಉದಹರಿಸುತ್ತವೆ) ೧. ಸೃಷ್ಟಿ ೨. ರಕ್ಷಣೆ (ಸ್ಥಿತಿ ಅಥವಾ ಪಾಲನೆ), ೩. ಸಂಹಾರ (ಲಯ), ೪. ಜ್ಞಾನ, ೫. ನಿಯಮನ, ೬. ಅಜ್ಞಾನ, ೭. ಬಂಧ, ೮. ಮೋಕ್ಷ ಈ ಎಂಟೂ ಕೇವಲ ವಿಷ್ಣುವೊಬ್ಬನಿಂದಲೇ ನಡೆಯುತ್ತದೆ. (ಬೇರೆ ಯಾರಿಂದಲೂ ಅಲ್ಲ)

ಎಂದು ತಿಳಿದುಕೊಂಡು ಅದರಂತೆ ಉಪಾಸನೆ ಮಾಡಿದವರಿಗೆ ಮಾತ್ರ ಮೋಕ್ಷಲಭ್ಯವಾಗುತ್ತದೆ, ಇಲ್ಲದಿದ್ದರೆ ಇಲ್ಲ—ಎಂದು ಹೇಳಿರುವುದರಿಂದ ಸೃಷ್ಟ್ಯಾದಿ ಅಷ್ಟಕಕ್ಕೂ **ಶ್ರೀವಿಷ್ಣುವೇ ಮುಖ್ಯಕರ್ತ-ಸ್ವತಂತ್ರಕರ್ತ** ನೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಅದನ್ನು ಹಾಗೆಯೇ ತಿಳಿಯಬೇಕು, ಗತ್ಯಂತರವಿಲ್ಲ.

ಆದರೆ ರಾಜನು ತಾನು ಮಾಡುವ ಕಾರ್ಯಗಳೆಲ್ಲವನ್ನೂ ಮಂತ್ರಿಗಳ ಮೂಲಕವೇ ಮಾಡಿಸುವ ಹಾಗೆ ವಿಷ್ಣುವೂ ಕೂಡ ಸೃಷ್ಟ್ಯಾದಿ ಎಲ್ಲಾ ಕಾರ್ಯಗಳನ್ನೂ ತನಗೆ ಮುಖ್ಯಮಂತ್ರಿಯಾದ **ಮುಖ್ಯಪ್ರಾಣನ ಮುಖಾಂತರನೇ** ಮಾಡಿಸುತ್ತಾನೆ. ಈ ರಹಸ್ಯವನ್ನು ಅರಿತುಕೊಂಡ ವಿಜಯದಾಸರೇ ಮೊದಲಾದ ಸಕಲ ಅಪರೋಕ್ಷ ಜ್ಞಾನಿಗಳೂ ವಾಯು-ದೇವರನ್ನು ಸ್ತುತಿಸುವಾಗ '**ಚರಾಚರದಲ್ಲಿಯ** । ತಂತ್ರವನು ನಡೆಸುವ **ಮಂತ್ರಿ** ಈತನು ಕಾಣೋ ಸ್ವಾ । ತಂತ್ರಪುರುಷ ವಿಜಯವಿಠಲನ್ನ ನಿಜಭಕ್ತ' (ಯಂತ್ರೋದ್ಧಾರಕ ಸುಳಾದಿ) 'ಇದು ಏನೋ ಚರಿತ ಯಂತ್ರೋದ್ಧಾರ....ಗೋಪಾಲವಿಠಲಗೆ **ನೀ ಪ್ರೀತಿ ಮಂತ್ರಿಯು**' ಎಂದು ಹಾಡಿದ್ದಾರೆ. ಅಷ್ಟೇ ಅಲ್ಲ. ಈ ವಿಚಾರವು (ಎಂದರೆ ಶ್ರೀಹರಿಯು ಎಲ್ಲ ಕಾರ್ಯಗಳನ್ನೂ ಮುಖ್ಯಪ್ರಾಣನು ಮಾಡಿಸುತ್ತಾನೆಂಬ ವಿಷಯವು) ಭಾಗವತದಲ್ಲೂ (೧೦೧/೧೪/೫೦) 'ಸ್ಥಾತುಶ್ಚ ತೇ ಕರ್ಮಪರೀಪ್ಸಯೇಹತಃ' ಎಂಬ ವಾಕ್ಯದಲ್ಲೂ ಸ್ಪಷ್ಟವಾಗಿ ಉಕ್ತವಾಗಿದೆ. (ವಾಕ್ಯದ ಅರ್ಥ) **ಕರ್ಮಪರೀಪ್ಸಯಾ**—ಕರ್ಮವನ್ನು ಪ್ರೇರಿಸುವುದಕ್ಕೆ (ನಡೆಸುವುದಕ್ಕೆ), **ಸ್ಥಾತುಃ**—ಸರ್ವರ ಶರೀರಗಳಲ್ಲಿಯೂ ನೆಲೆಸಿರುವ, **ಈಹತಃ**—ಪ್ರಾಣದೇವನ ಮುಖಾಂತರವಾಗಿಯೇ ಶ್ರೀಹರಿ ಕರ್ಮಪ್ರವೃತ್ತಿಯನ್ನು ಇಚ್ಛಿಸುತ್ತಾನೆ. ಶ್ವಾಸೋಚ್ಛ್ವಾಸಾದಿ ಸಕಲ ಕಾರ್ಯಗಳನ್ನೂ ಮುಖ್ಯಪ್ರಾಣನ ಮುಖಾಂತರವೇ ಮಾಡಿಸುತ್ತಾನೆ ಎಂದು ತಾತ್ಪರ್ಯ. ಈ ವಾಕ್ಯದ ಅಭಿಪ್ರಾಯವನ್ನು—

ವಾಯೋಃ ಸಕಾಶಾಜ್ಜಗತಃ ಪ್ರವೃತ್ತಿಂ ಕಾರಯತ್ಯಜಃ ।
ಪ್ರಾಣಪ್ರಾಣಮತಃ ಪ್ರಾಹು—ರ್ವಿಷ್ಣುಂ ವಾಯೋರಪಿ ಪ್ರಭುಮ್ ॥

ಎಂಬ **ಷಾಡ್ಗುಣ್ಯವೆಂಬ** ಗ್ರಂಥದ ವಾಕ್ಯವು ಸ್ಪಷ್ಟಪಡಿಸಿ ತೋರಿಸಿ

ಕೊಡುತ್ತದೆ. (ಆ ವಾಕ್ಯದ ಅರ್ಥ) ಅನಾದಿನಿತ್ಯನಾದ ಶ್ರೀಹರಿಯು ಜಗತ್ತಿನ ಸಕಲ ಪ್ರವೃತ್ತಿಗಳನ್ನೂ (ಕಾರ್ಯಕಲಾಪಗಳನ್ನೂ) ವಾಯು-ದೇವರ ಮುಖಾಂತರವಾಗಿಯೇ ಮಾಡಿಸುತ್ತಾನೆ. ಹೀಗೆ ಆ ವಿಷ್ಣು ಮುಖ್ಯಪ್ರಾಣನಿಗೂ ಪ್ರಾಣ (–ಚೇಷ್ಟಾಪ್ರದ) ನಾದ್ದರಿಂದ ಅವನನ್ನು ಪ್ರಾಣನಿಗೂ ಪ್ರಾಣ ಅಥವಾ ಪ್ರಾಣಪ್ರಾಣ ಎಂದು ಹೇಳುತ್ತಾರೆ. ಇದ-ರಿಂದ ಶ್ರೀಹರಿಯು ಮುಖ್ಯಪ್ರಾಣನಿಗೂ ಒಡೆಯ ಎಂದು ಹೇಳಿದಂತಾ-ಯಿತು. ಬೃಹದ್ಭಾಷ್ಯದಲ್ಲಿ (೩/೬/೨೮) ಹೇಳಿರುವ **ಸರ್ವಪ್ರವರ್ತಕೋ-ವಾಯುಃ ಜ್ಞಾನ-ಮೋಕ್ಷಪ್ರದಶ್ಚ ಸಃ** ಎಂಬ ನಾರಾಯಣ ಶ್ರುತಿಯೂ ತಾತ್ಪರ್ಯ ನಿರ್ಣಯದಲ್ಲಿ (೧/೭೮) ಹೇಳಿರುವ–

ವಿಷ್ಣುರ್ಹಿ ದಾತಾ ಮೋಕ್ಷಸ್ಯ ವಾಯುಶ್ಚ ತದನುಜ್ಞಯಾ ।

ಎಂಬ ಪ್ರಮಾಣವೂ (ಈ ವಾಕ್ಯವನ್ನು ಕ.ಕ., ಛ. ಗಳೂ ಉದಹರಿಸಿವೆ) ಅದನ್ನು ವಿಶದಪಡಿಸುತ್ತವೆ. ವಾಯು-ಬ್ರಹ್ಮರುಗಳು ಅನ್ಯೋನ್ಯಪ್ರೇರಕರು. (ಇದಕ್ಕೆ 'ಬ್ರಹ್ಮಣಃ ಪ್ರೇರಕೋ ವಾಯುಃ ಪ್ರಾಣಸ್ಯ ಪ್ರೇರಕೋ ವಿಧಿಃ । ಪರಸ್ಪರಪ್ರೇರಕೌ ತೌ ತತ್ಪತ್ನ್ಯೌ ಚ ತಥೈವ ಚ॥' ಎಂಬ ವಾಯುಪುರಾಣದ ವಾಕ್ಯವೇ ಪ್ರಮಾಣ. ವಾಯುವು ಬ್ರಹ್ಮದೇವರ ಉಸಿರಾಟ ಮೊದಲಾದ ಕಾರ್ಯಗಳಿಗೆ ಪ್ರೇರಕನಾಗಿದ್ದಾನೆ. ಬ್ರಹ್ಮನು [ವಿಧಿಃ] ವಾಯುದೇವರ ಉಸಿರಾಟ ಮೊದಲಾದ ಕ್ರಿಯೆಗಳಿಗೆ ಪ್ರೇರಕನಾಗಿ-ದ್ದಾನೆ. ಹೀಗೆ ಇವರಿಬ್ಬರೂ ಪರಸ್ಪರ ಪ್ರೇರಕರಾಗಿದ್ದಾರೆ. ಅವರ ಪತ್ನಿಯ-ರಾದ ಸರಸ್ವತೀ-ಭಾರತಿಯರೂ ಇದೇ ರೀತಿ ಅನ್ಯೋನ್ಯವಾಗಿ ಪ್ರೇರಕರಾಗಿದ್ದಾರೆ ಎಂಬ ವಾಯುಪುರಾಣವಾಕ್ಯದ ಅರ್ಥ.) ಬ್ರಹ್ಮದೇವರನ್ನು ಬಿಟ್ಟು ಮಿಕ್ಕ ಗರುಡ-ಶೇಷ-ರುದ್ರಾದಿ ಇತರ ಸಮಸ್ತಜೀವರಾಶಿಗಳಿಗೂ ಉಸಿರಾಟದಿಂದ ಹಿಡಿದು ಸಮಸ್ತಕಾರ್ಯಕಲಾಪಗಳಿಗೂ ವಾಯುದೇವರೇ ಪ್ರೇರಕರಾಗಿದ್ದಾರೆ. (ಹೇಗೆಂದರೆ ಪ್ರಾಣದೇವರು ದೇಹದಲ್ಲಿರುವವರೆಗೂ ಏಳು ಕೂಡು ನೋಡು-ಕೇಳು ಎಲ್ಲ ಕಾರ್ಯಗಳೂ ನಡೆಯುತ್ತವೆ. ಅವರು ದೇಹವನ್ನು ಬಿಟ್ಟ ಕೂಡಲೇ ಉಸಿರಾಟದಿಂದ ಹಿಡಿದು ಎಲ್ಲ ಕಾರ್ಯಗಳೂ ಏಕಾಏಕಿ ನಿಂತು ಹೋಗುತ್ತವೆ, ಹೀಗೆ ಪ್ರಾಣದೇವರೇ ಸಕಲೇಂದ್ರಿಯಗಳಿಗೂ ಪ್ರೇರಕರಾಗಿರುವ-ರಲ್ಲದೆ ಸಕಲರಿಗೂ ರುದ್ರಾದಿಗಳಿಗೂ ಸಹ ಜ್ಞಾನಪ್ರದರಾಗಿ ಕೊನೆಗೆ ವಿಷ್ಣುವಿ

ನಲ್ಲಿ ಶಿಫಾರಸು ಮಾಡಿಸುವವರೂ ಅವರೇ ಆಗಿದ್ದಾರೆ–ಎಂಬುದು ನಾರಾಯಣ-ಶ್ರುತಿಯ ಅರ್ಥ. ಮೋಕ್ಷವನ್ನು ನೇರವಾಗಿ ಕೊಡುವ ಮುಖ್ಯದಾತ ವಿಷ್ಣುವಾದರೆ ವಾಯುದೇವರು ಶ್ರೀಹರಿಯಲ್ಲಿ ಪ್ರಾರ್ಥನೆ ಮಾಡಿಕೊಂಡು ಅವನ ಆಜ್ಞೆಯಿಂದ ಲಿಂಗಶರೀರವನ್ನು ಭಂಗಮಾಡಿ ಮೋಕ್ಷಕ್ಕೆ ಕರೆದೊಯ್ಯು-ವವರಾದ್ದರಿಂದ ಅಮುಖ್ಯದಾತರಾಗಿದ್ದಾರೆ. ವಿಷ್ಣುವು ಸ್ವತಂತ್ರದಾತನಾದ್ದ-ರಿಂದ ಅವನೇ ಶ್ರೇಷ್ಠನೆಂಬುದನ್ನು ಹಿ ಶಬ್ದ ತೋರಿಸುತ್ತದೆ. (ಯಾವು-ದಾದರೂ ಪ್ರಶಸ್ತಿಯನ್ನಾಗಲಿ ಸಂಭಾವನೆ ಅಥವಾ ಉದ್ಯೋಗವನ್ನು ಮುಖ್ಯ ವಾದ ಮೂಲ ಅಧಿಕಾರ ರಾಜನಿಗೇ ಸೇರಿದ್ದಾದರೂ ಇಂಥವನಿಗೆ ಈ ಪ್ರಶಸ್ತಿ, ಈ ಸಂಭಾವನೆ ಇತ್ಯಾದಿಗಳನ್ನು ಕೊಡಬೇಕೆಂದು ಶಿಫಾರಸುಮಾಡುವ ಮಂತ್ರಿಯೂ ಹೇಗೆ ಆ ಪ್ರಶಸ್ತಿ ಮೊದಲಾದುವನ್ನು ಕೊಡಿಸಲು ಹೇಗೆ ಕಾರಣೀಭೂತನಾಗಿರುತ್ತಾನೋ) ಹಾಗೆಯೇ ಮೋಕ್ಷವನ್ನು ಕೊಡುವ ಮುಖ್ಯ-ವಾದ ಸ್ವತಂತ್ರ ಅಧಿಕಾರ ವಿಷ್ಣುವಿಗೆ ಇದ್ದರೂ, ವಾಯುದೇವರೇ ಆಯಾ ಜೀವರಲ್ಲಿ ನಿಂತು ಮೋಕ್ಷಪ್ರಾಪ್ತಿಗೆ ಬೇಕಾದ ಸಾಧನಸಂಪೂರ್ತಿಯನ್ನು ಮಾಡಿಸುವವರೂ, ಅವರ ಕರ್ಮಗಳನ್ನೆಲ್ಲಾ ಶುದ್ಧಮಾಡಿ ಅದಕ್ಕೆ ಸಿದ್ಧಿ-ಕೊಡುವವರೂ ಸಾಧನಸಂಪೂರ್ತಿಯಾದುದನ್ನು ತಿಳಿದು ಭಗವಂತನ ಮುಂದೆ ಆ ಜೀವನನ್ನು ಒಯ್ದು 'ಶರಣಾಗತನಾದ ಇವನನ್ನು ಉದ್ಧಾರಮಾಡು, ಇವನು ಮೋಕ್ಷಪಾಪ್ತಿಗೆ ಅರ್ಹನಾಗಿದ್ದಾನೆ, ಇವನಿಗೆ ಮೋಕ್ಷಕೊಡು' ಎಂದು ಭಗವಂತನ ಮುಂದೆ ಶಿಫಾರಸು ಮಾಡಿ ಮೋಕ್ಷಕೊಡಿಸುವವರೂ ಪ್ರಾಣದೇವರೇ ಆದ್ದರಿಂದ ಅವರು ಒಂದು ರೀತಿಯಿಂದ ಮೋಕ್ಷದಾತೃಗಳೇ ಆಗಿದ್ದಾರೆ ಎಂಬುದು ತಾತ್ಪರ್ಯನಿರ್ಣಯದಲ್ಲಿ ಹೇಳಿದ ಪ್ರಮಾಣದ ಅರ್ಥ.

ಮೇಲಿನ ಎರಡು ಪ್ರಮಾಣಗಳಲ್ಲೂ ಮೋಕ್ಷವೆಂದರೆ ಕೇವಲ ಮುಕ್ತಿ-ಯೆಂದೇ ಅರ್ಥವಲ್ಲ. ವಾಯುದೇವರು ತಮೋಯೋಗ್ಯರಿಗೂ ನಿತ್ಯ-ಸಂಸಾರಿಗಳಿಗೂ ಅವರವರ ಸಾಧನಗಳನ್ನು ಮಾಡಿಸಿ ಆ ಸಾಧನ ಸಂಪೂರ್ತಿ-ಯಾದ ಬಳಿಕ ಅವರಿಗೆ ತಕ್ಕುದಾದ ಅಂಧಂತಮಸ್ಸನ್ನೋ ಸ್ವರ್ಗಾದಿವಾಸ-ವನ್ನೋ ಶ್ರೀಹರಿಗೆ ಹೇಳಿ ಕೊಡಿಸುವರಾದ್ದರಿಂದ ತ್ರಿವಿಧಫಲಗಳನ್ನೂ ಕೊಡಿಸುತ್ತಾರೆಂದೇ ಅರ್ಥ ಮಾಡಬೇಕು. ಏಕೆಂದರೆ ಭಾಗವತತಾತ್ಪರ್ಯೋ-ದಾಹೃತವಾದ (೧೧/೨೧/೨೮)—

ವಿಷ್ಣುಭಕ್ತಾನ್ ಸದಾ ವಾಯುಃ ಶಾಸಯೇತ್ ತಮಸಿ ಕ್ಷಿಪನ್ ।
ವಿಷ್ಣುಭಕ್ತಾನ್ ವಿಮೋಕ್ಷಾಯ ಪ್ರಾಪಯಿತ್ವಾ ಸುಖಂ ನಯೇತ್ ॥

ಎಂಬ ಪ್ರಮಾಣವು 'ವಾಯುದೇವರು ಸದಾ ಹರಿದ್ವೇಷ ಮಾಡುವವರನ್ನು ತಮಸ್ಸಿನೊಳಗೆ ಹಾಕಿ ದುಃಖಕ್ಕೆ ಗುರಿಪಡಿಸುತ್ತಾರೆ. ವಿಷ್ಣುಭಕ್ತರನ್ನು ಮೋಕ್ಷಕ್ಕೆ ಒಯ್ದು ಸುಖಪಡುವಂತೆ ಮಾಡುತ್ತಾರೆ'ಂದು ಸ್ಪಷ್ಟವಾಗಿಯೇ ಹೇಳುತ್ತದೆ. ಈ ಪ್ರಕಾರ ಅನೇಕ ಪ್ರಮಾಣಗಳ ಆಧಾರದಿಂದ— ಶ್ರೀಹರಿಯು ಮೋಕ್ಷವನ್ನು ಕೊಡುವ ಸ್ವತಂತ್ರ ಸಾಮರ್ಥ್ಯವುಳ್ಳ ಏಕಮಾತ್ರ ಪ್ರಭುವೆಂದೂ ವಾಯುದೇವರು ಸಕಲ ಜೀವರಿಂದ ಸಾಧನ ಮಾಡಿಸಿ ಅವರವರ ಸಾಧನೆಗೆ ತಕ್ಕಂತೆ ಮೋಕ್ಷವನ್ನೋ ಅಂಧಂತಮಸ್ಸನ್ನೋ ಅಥವಾ ಮಿಶ್ರಗತಿಯನ್ನೋ ಕೊಡಿಸುವ ಅಸ್ವತಂತ್ರರಾದ ಅಮುಖ್ಯದಾತೃಗಳೆಂದೂ ಸಿದ್ಧವಾಗುತ್ತದೆ. ಇವೇ ಮೊದಲಾದ ಬಹು ಪ್ರಮೇಯಗಳನ್ನು ಅನೇಕ ಗ್ರಂಥಗಳಿಂದ ಸಂಗ್ರಹಿಸಿ ಶ್ರೀಮದಾಚಾರ್ಯರ ಸಾಕ್ಷಾತ್ ಕೃಪಾಕಟಾಕ್ಷದ ಬಲದಿಂದ ಹೃದ್ಗತಮಾಡಿಕೊಂಡ ಪಂಡಿತಾಚಾರ್ಯರು **ತತ್ವಜ್ಞಾನ್** ಎಂಬ ಈ ಶ್ಲೋಕದಲ್ಲಿ ಸಂಗ್ರಹಿಸಿದ್ದಾರೆಂದು ತಿಳಿಯಬೇಕು.

**186. ಗುರ್ವನುಗ್ರಹದ ಮಹತ್ವ**—ಹಿಂದೆ ೧೬ನೇ ಶ್ಲೋಕದಲ್ಲಿ 'ಅಸ್ಮಿನ್ನಸ್ಮದ್ಗುರೂಣಾಂ' ಎಂದು ಗುರುಶಬ್ದ ಪ್ರಸಕ್ತವಾಯಿತು. ಪುನಃ ೧೪ನೇ ಶ್ಲೋಕದಲ್ಲಿ 'ಪಿತರತುಲಗುರೋ' ಎಂದು ಗುರುಗಳನ್ನು ಸಂಬೋಧನೆ ಮಾಡಿ ಹೇಳಿದರು. ೧೫ನೇ ಶ್ಲೋಕದಲ್ಲಿ ಮತ್ತೆ 'ವಾಯುರಸ್ಮದ್ಗುರುಸ್ತಮ್' ಎಂದು ಗುರುಗಳ ಪ್ರಸ್ತಾಪ ಮಾಡಿದರು. ಈ ಶ್ಲೋಕದಲ್ಲಿ ಮತ್ತೊಮ್ಮೆ 'ಸುಖಯಸಿ ಹಿ ಗುರೋ !' ಎಂದು ಸಂಬೋಧನೆ ಮಾಡಿದರು. ಹೀಗೆ ಪುನಃ ಪುನಃ ಗುರುಶಬ್ದಗ್ರಹಣ ಮಾಡಲು ಏನೋ ಮಹತ್ವದ ಕಾರಣವಿರಬೇಕಲ್ಲವೇ ? ಗುರ್ವನುಗ್ರಹದ ಮಹತ್ವವನ್ನು ತೋರಿಸುತ್ತಾ ಗುರ್ವನುಗ್ರಹವಿಲ್ಲದೆ ಯಾವ ವಿದ್ಯೆಯೂ ಏನು ಪ್ರಯತ್ನ ಮಾಡಿದರೂ ಸಿದ್ಧಿಸಲಾರದೆಂಬುದನ್ನು ತೋರಿಸುವುದಕ್ಕಾಗಿಯೇ ಹೀಗೆ ನಾಲ್ಕು ಶ್ಲೋಕಗಳಲ್ಲಿ ಉದ್ದಕ್ಕೆ ಗುರುಶಬ್ದ ಪ್ರಯೋಗ ಮಾಡಿದ್ದಾರೆಂದು ತಿಳಿಯಬೇಕು. ಹೀಗೆ ಇಲ್ಲಿ ಪ್ರಸಕ್ತ-

ವಾದ ಈ ಗುರ್ವನುಗ್ರಹದ ಮಹತ್ವವು ಬ್ರಹ್ಮಸೂತ್ರಗಳಲ್ಲಿಯೂ ಶ್ರುತಿ-ಗೀತೆಯಲ್ಲೂ ಉಪನಿಷತ್ತುಗಳಲ್ಲೂ ಅಲ್ಲಲ್ಲೇ ನಿರೂಪಿಸಲ್ಪಟ್ಟಿದೆ. ಇದರ ಪ್ರತಿಧ್ವನಿಯನ್ನೇ ನಾವು ಪುರಂದರದಾಸರ ಈ ಉಕ್ತಿಯಲ್ಲಿ (ವ್ಯಾಸರಾಯರ ಸುಳಾದಿ, ೨ನೇ ತಾಳ) ಕಾಣುವೆವು—

ಗುರು ಉಪದೇಶವಿಲ್ಲದ ಜ್ಞಾನವು
ಗುರು ಉಪದೇಶವಿಲ್ಲದ ಯೋಗ
ಗುರು ಉಪದೇಶವಿಲ್ಲದ ಕ್ರಿಯೆಗಳು
ಗುರು ಉಪದೇಶವಿಲ್ಲದ ಸ್ನಾನವು
ಗುರು ಉಪದೇಶವಿಲ್ಲದ ಧ್ಯಾನವು
ಗುರು ಉಪದೇಶವಿಲ್ಲದ ಜಪವು
ಗುರು ಉಪದೇಶವಿಲ್ಲದ ತಪವು
ಗುರು ಉಪದೇಶವಿಲ್ಲದ ಮಂತ್ರ
ಗುರು ಉಪದೇಶವಿಲ್ಲದ ತಂತ್ರ
ಉರಗನ ಉಪವಾಸದಂತೆ ಕಾಣಿರೋ

[ಉರಗ—ಹಾವು, ಹಾವು ಉಸಿರಾಡುವುದೇ ಹೇಗೆ ವಿಷಮಯವಾಗಿರುತ್ತದೋ ಹಾಗೆ ಗುರು ಉಪದೇಶವಿಲ್ಲದ ಸಕಲವೂ ವಿಷಪ್ರಾಯವಾಗುತ್ತದೆ ಎಂದು ಭಾವ.]

ಬ್ರಹ್ಮಸೂತ್ರಗಳ ತೃತೀಯಾಧ್ಯಾಯದ ತೃತೀಯಪಾದದ ೨೭ನೇ ಅಧಿಕರಣದಲ್ಲಿ ಆ ಮಹತ್ವವನ್ನು ಛಾಂದೋಗ್ಯೋಪನಿಷತ್ತಿನ (೪ ಅಧ್ಯಾ. ೯ನೇ ಖಂಡ) ಒಂದು ಆಖ್ಯಾಯಿಕೆಯ ನಿದರ್ಶನದಿಂದ ಪ್ರತಿಪಾದಿಸಿದ್ದಾರೆ. ಸತ್ಯಕಾಮನೆಂಬ ಬ್ರಹ್ಮಚಾರಿಯು ಗೌತಮಋಷಿಗಳ ಬಳಿಗೆ ಹೋಗಿ ತನಗೆ ವಿದ್ಯೆ ಹೇಳಿಕೊಡಬೇಕೆಂದು ಕೇಳಿದಾಗ ಅವರು ಅವನಿಗೆ ಉಪನಯನ ಸಂಸ್ಕಾರ ಮಾಡಿ ನಾನೂರು ಆಕಳುಗಳನ್ನು ಕೊಟ್ಟು ಅವನ್ನು ನೋಡಿಕೊಳ್ಳುವಂತೆ ಹೇಳಿಕಳುಹಿಸಿದರು. ಸತ್ಯಕಾಮನು ಅವುಗಳನ್ನು ರಕ್ಷಿಸುತ್ತಾ ನಾನೂರು ಇದ್ದ ಆ ಗೋವುಗಳು ಒಂದು ಸಾವಿರ ಸಂಖ್ಯೆ-ಯಾಗುವವರೆಗೂ ಅವನ್ನು ಬೆಳೆಸಿದನು. ಅವನ ಶ್ರದ್ಧಾದರಗಳಿಗೆ ಮೆಚ್ಚಿ

ವಾಯುದೇವರು ಒಂದು ಋಷಭದಲ್ಲಿ (ಎತ್ತಿನಲ್ಲಿ) ಆವಿಷ್ಟರಾಗಿ ಸತ್ಯಕಾಮ-
ನಿಗೆ 'ಏ ಸತ್ಯಕಾಮ, ನಮ್ಮನ್ನು ಸಾವಿರ ಆಗುವವರೆಗೆ ಬೆಳೆಸಿದ್ದೀ, ಇನ್ನು
ಸಾಕು. ನಮ್ಮನ್ನು ಆಚಾರ್ಯರಿಗೆ ಒಪ್ಪಿಸಿ ಬಿಡು' ಎಂದು ಹೇಳಿದ್ದಲ್ಲದೆ
ಅವನಿಗೆ ಬ್ರಹ್ಮೋಪದೇಶವನ್ನೂ ಮಾಡಿದರು. ಆಮೇಲೆ ಸಾಕ್ಷಾತ್
ಅಗ್ನಿಯೂ, ಬಳಿಕ ಹಂಸರೂಪದಿಂದ ಬ್ರಹ್ಮದೇವರೂ, ನೀರುಕೋಳಿಯ
ರೂಪದಿಂದ ವರುಣನೂ ಬೇರೆ ಬೇರೆ ಬ್ರಹ್ಮೋಪದೇಶ ಮಾಡಿದರು.
ಆ ಉಪದೇಶದಿಂದ ಅವನಲ್ಲಿ ಒಂದು ಹೊಸ ತೇಜಸ್ಸೇ ಉದ್ಭವಿಸಿತು. ಅದನ್ನು
ಗುರುತಿಸಿದ ಅವನ ಗುರುಗಳಾದ ಗೌತಮರು 'ಏ ಸೌಮ್ಯ, ಸತ್ಯಕಾಮ,
ನೀನು ಬ್ರಹ್ಮಜ್ಞಾನಿಯಾದಂತೆ ಕಾಣುವಿಯಲ್ಲ, ಏನು ವಿಚಾರ?' ಎಂದು
ಕೇಳಿದರು. ಅದಕ್ಕೆ ಸತ್ಯಕಾಮನು ತನಗೆ ಆ ನಾಲ್ಕು ಜನ ದೇವತೆಗಳೂ
ಬೋಧಿಸಿದ ವಿದ್ಯೆಯ ವಿಚಾರವನ್ನು ತಿಳಿಸಿ 'ಸ್ವಾಮಿ, ಅವರೆಲ್ಲರೂ ದೇವತೆ-
ಗಳೇ ನಿಜ. ಆದರೂ ಅವರು ನನಗೆ ವಿದ್ಯಾಗುರುಗಳಲ್ಲ. **ಆಚಾರ್ಯಾ-
ದ್ಧ್ಯೇವ ವಿದ್ಯಾ ವಿಧಿತಾ ಸಾಧಿಷ್ಠಂ ಪ್ರಾಪಯತಿ**—ವಿದ್ಯಾಗುರುಗಳು
(ಆಚಾರ್ಯರು) ಉಪದೇಶಿಸಿದ **ವಿದ್ಯೆ** ಮಾತ್ರವೇ (ಸಾಧಿಷ್ಠಂ—) **ಅತ್ಯಂತ
ಶುದ್ಧವೂ ಅತ್ಯಂತ ಸ್ಥಿರವೂ ಆಗುತ್ತದೆ.** ಆದಕಾರಣ ತಾವೇ ನನಗೆ
ಈ ವಿದ್ಯೆ ಉಪದೇಶಿಸಬೇಕು' ಎಂದು ಕೇಳಿಕೊಂಡನು. ಅವನ ಗುರುಭಕ್ತಿಗೆ
ಮೆಚ್ಚಿದ ಗೌತಮರು ವಾಯ್ವಾದಿ ನಾಲ್ಕು ದೇವತೆಗಳು ಬೋಧಿಸಿದ ಬ್ರಹ್ಮ-
ವಿದ್ಯೆಯನ್ನೇ ಪುನಃ ಬೋಧಿಸಿದರು. ಅದರಿಂದ ಅವನಿಗೆ ಆ ಬ್ರಹ್ಮವಿದ್ಯೆ
ಸಿದ್ಧಿಯಾಯಿತೆಂದು ಛಾಂದೋಗ್ಯೋಪನಿಷತ್ತಿನ ಆಖ್ಯಾಯಿಕೆ. ಇದನ್ನೇ
ಮನಸ್ಸಿನಲ್ಲಿಟ್ಟುಕೊಂಡು ಶ್ರೀ ಭಗವಾನ್ ಭಾಷ್ಯಕಾರರು (ಶ್ರೀಮಧ್ವಾ-
ಚಾರ್ಯರು) ಸೂತ್ರಭಾಷ್ಯದಲ್ಲಿ (೩/೩ ೪೫) "ಋಷಭಾದಿಭ್ಯೋ ವಿದ್ಯಾಂ
ಜ್ಞಾತ್ವಾಪಿ ಸತ್ಯಕಾಮೇನ 'ಭಗವಾಂಸ್ತ್ವೇವ ಮೇ ಕಾಮಂ ಬ್ರೂಯಾತ್'
....ಇತಿ ವಚನಾತ್....ಗುರುಪ್ರಸಾದ ಏವ ಬಲವಾನ್" (ಎಂದರೆ)
ಸತ್ಯಕಾಮನು ಋಷಭಾದಿಗಳ ದ್ವಾರಾ ವಿದ್ಯೆಯನ್ನು ತಿಳಿದುಕೊಂಡರೂ
ಕೂಡ (ಅಲ್ಲದೆ ಆ ಋಷಭಾದಿಗಳು ಗೌತಮರಿಗಿಂತಲೂ ತಾರತಮ್ಯದಲ್ಲಿ
ಶ್ರೇಷ್ಠರಾಗಿದ್ದರೂ ಕೂಡ) ಸತ್ಯಕಾಮನು ಗೌತಮರನ್ನು 'ಸ್ವಾಮಿ, ನನಗೆ

**ನೀವೇ ಉಪದೇಶ ಮಾಡಿ**; ನೀವು ಮಾಡಿದ ಉಪದೇಶವೇ ಶ್ರೇಷ್ಠವೂ ಸ್ಥಿರವೂ ಆಗುತ್ತದೆ' ಎಂದು ಹೇಳಿದ್ದೇ ಮೊದಲಾದ ಕಾರಣಗಳಿಂದ **ಗುರು-ಪ್ರಸಾದನೇ ಬಹಳ ಬಲವತ್ತರವಾದುದು** ಎಂದು ಹೇಳಿದ್ದಾರೆ. ತಮ್ಮ ಈ ವಾಕ್ಯವನ್ನು ಸಮರ್ಥಿಸುವುದಕ್ಕಾಗಿ, ವರಾಹಪುರಾಣದ ಈ ವಾಕ್ಯ-ವನ್ನು ಪ್ರಮಾಣವಾಗಿ ಉದಹರಿಸಿದ್ದಾರೆ—

ಗುರುಪ್ರಸಾದೋ ಬಲವಾನ್ ನ ತಸ್ಮಾದ್ ಬಲವತ್ತರಃ ।
ತಥಾಪಿ ಶ್ರವಣಾದಿಶ್ಚ ಕರ್ತವ್ಯೋ ಮೋಕ್ಷಸಿದ್ಧಯೇ ॥

(ಅರ್ಥ) ಗುರುಪ್ರಸಾದವು ಬಹಳ ಬಲಿಷ್ಠವಾದುದು, ಅದಕ್ಕಿಂತಲೂ ಹೆಚ್ಚು ಬಲವಾದುದು ಬೇರೆ ಯಾವುದೂ ಇಲ್ಲ. ಆದರೂ ಕೂಡ ಮೋಕ್ಷ-ಸಿದ್ಧಿಗಾಗಿ ಶ್ರವಣ ಮನನಾದಿಗಳನ್ನು ಬೇರೆಯಾಗಿ ಮಾಡಲೇಬೇಕು— ಎಂಬುದು ಆ ಪ್ರಮಾಣವಾಕ್ಯದ ಅರ್ಥ. 'ಯಸ್ಯ ದೇವೇ ಪರಾ ಭಕ್ತಿಃ ಯಥಾ ದೇವೇ ತಥಾ ಗುರೌ ॥ ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ॥' ಎಂಬ ಶ್ವೇತಾಶ್ವತರ ಶ್ರುತಿಯೂ (೬/೨೩) ಈ ಅಂಶವನ್ನೇ ಪುಷ್ಟೀಕರಿಸುತ್ತದೆ. ಯಾರಿಗೆ ವಿಷ್ಣುವಿನಲ್ಲಿ ಸರ್ವಾಧಿಕ ಭಕ್ತಿ ಇರುವಂತೆ ರಮಾಬ್ರಹ್ಮಾದಿ ಇತರ ದೇವತೆಗಳಲ್ಲೂ ತಾರತಮ್ಯಾನುಸಾರ ಭಕ್ತಿಯೂ ಇರುವಂತೆ ಗುರುಗಳಲ್ಲೂ ತಾರತಮ್ಯಾನುಸಾರ ಭಕ್ತಿ ಇರುವುದೋ ಅಂಥಾ ಮಹಾತ್ಮನಿಗೇ ಇಲ್ಲಿ ಹೇಳಿದ ಧರ್ಮ-ಮೋಕ್ಷಾದಿ ಸಕಲ ಪುರುಷಾರ್ಥಗಳೂ ಪರಾಪರ ತತ್ತ್ವಜ್ಞಾನವೂ ಲಭ್ಯವಾಗುತ್ತದೆ—ಎಂಬುದು ಅದರ ಅರ್ಥ.

ಇದರಿಂದ ಗುರ್ವನುಗ್ರಹ ಎಷ್ಟು ಬಲಿಷ್ಟವಾದುದು ಎಂದು ಅರ್ಥ-ವಾಗುತ್ತದೆ. ಇದಕ್ಕೆ ಪ್ರತಿಯಾಗಿ ಗುರುಗಳನ್ನು ಆದರ ಮಾಡದೇ ಹೋದರೆ ಅಥವಾ ಅವರನ್ನು ತಿರಸ್ಕರಿಸಿದರೆ ಯಾವ ವಿದ್ಯೆಯೂ ಸಿದ್ಧಿಸಲಾರದೆಂದು ತಂತ್ರಸಾರದಲ್ಲಿ (೪/೧೧೧) ಹೇಳಿದ—ಅವಜ್ಞಾತಾ ಗುರೂಣಾಂ ಚ ದೇವತಾನಾಂ ನ ಸಿದ್ಧ್ಯತಿ । ಪ್ರಯಾತಿ ಚ ತಮೋ ಘೋರಮ್—ಗುರು-ಗಳನ್ನೂ ದೇವತೆಗಳನ್ನೂ ತಿರಸ್ಕರಿಸುವವನು (ಅವಹೇಳನ ಮಾಡುವವನು) ಯಾವ ಸಿದ್ಧಿಯನ್ನೂ ಪಡೆಯಲಾರ. ಅಲ್ಲದೆ ಅವನು ಘೋರವಾದ ತಮಸ್ಸಿಗೂ ಹೋಗಿ ಬೀಳುತ್ತಾನೆ.

**187. ಗುರುವಿಂದಲೇ ಹರಿ ಪ್ರಾಪ್ಯನು**—ಗುರುಮಹಿಮೆಯನ್ನು ಬ್ರಹ್ಮಸೂತ್ರಗಳು ಹೀಗೆ ವರ್ಣಿಸಿದರೆ ಶ್ರುತಿಗೀತೆಯು ಇನ್ನೊಂದು ವಿಧವಾಗಿ ವರ್ಣಿಸುತ್ತದೆ. 'ಅಪಹಾಯ ಗುರೋಶ್ಚರಣಂ—ತ್ವಯಿ ಹಿ ನ ಸಂತಿ ತಾನಿ । ನೃಣಾಂ ವಿಭವ ಉದ್ಯತಿ ಶ್ರಯತ ಆತ್ಮನಿ' (೧೦ಸ್ಕಂ : ೮೭ಅಧ್ಯಾ. ೩೪-೩೫ ಶ್ಲೋ) (ಪದಶಃ ಅರ್ಥ) ತಾನಿ–ಆ ಸಾಧನೆಗಳು, ಗುರೋಶ್ಚರಣಂ ಅಪಹಾಯ—ಗುರುಚರಣಾನುಗ್ರಹವನ್ನು ಬಿಟ್ಟು ಎಂದರೆ ಗುರ್ವನುಗ್ರಹ-ವಿಲ್ಲದೆ, ನ ಸಂತಿ ಹಿ–ನಿಲ್ಲುವುವಲ್ಲ, ಅಂಗೀಕಾರ್ಯವಲ್ಲ. ಆದರೆ, ವಿಭವೇ–ಜೀವನ್ಮುಕ್ತನಾದ ಗುರುವು, ಉದ್ಯತಿ–ಉಪದೇಶ ಮಾಡಿದರೆ, ಆತ್ಮನಿ ಶ್ರಯತೇ–ಭಗವತ್ಪ್ರೀತಿಗೆ ಸಾಧನವಾಗುತ್ತದೆ. (ತಾತ್ಪರ್ಯ) ಗುರುಶುಶ್ರೂಷೆ ಮಾಡಿ (ಸತ್ಯಕಾಮನು ಗೋವುಗಳನ್ನು ರಕ್ಷಿಸಿ ಸೇವೆ ಮಾಡಿದಂತೆ) ಅವರ ಅನುಗ್ರಹ ಪಡೆಯುವುದೇ ಎಲ್ಲಕ್ಕೂ ಮುಖ್ಯವಾದ ಸಾಧನೆ. ಹಾಗೆ ಗುರ್ವ-ನುಗ್ರಹಪಡೆಯದೆ ಇಂದ್ರಿಯ ನಿಗ್ರಹ–ಶಾಸ್ತ್ರಾಧ್ಯಯನಾದಿ ಸಕಲಸಾಧನ-ಗಳನ್ನು ಮಾಡಿದರೂ ಭಗವಂತ ಅದನ್ನು ಸ್ವೀಕರಿಸುವುದಿಲ್ಲ. ಅದಕ್ಕೆ ಪ್ರತಿಯಾಗಿ ಅವನ ಯೋಗ್ಯತೆಯನ್ನು ತಿಳಿದ ಗುರುಗಳು ಉಪದೇಶಿಸಿದರೆ ಮಾತ್ರವೇ ಮುಂದೆ ಮಾಡುವ ಎಲ್ಲಾ ಸಾಧನಸಮುದಾಯವೂ ಭಗವತ್-ಪ್ರೀತಿಗೆ ಕಾರಣವಾಗುತ್ತದೆ—ಎಂಬುದು ಶ್ರುತಿಗೀತೆಯ ಭಾವ. ಈ ವಿಷಯವನ್ನೇ ತಾತ್ಪರ್ಯನಿರ್ಣಯೋದಾಹೃತ (೧/೧೫೫–೬) ಈ ಪ್ರಮಾಣವೂ ತಿಳಿಸುತ್ತದೆ—

> ಸಮ್ಯಗ್ ಲಕ್ಷಣಸಂಪನ್ನೋ ಯದ್ ದದ್ಯಾತ್ ಸುಪ್ರಸನ್ನಧೀಃ ।
> ಶಿಷ್ಯಾಯ ಸತ್ಯಂ ಭವತಿ ತತ್ಸರ್ವಂ ನಾತ್ರ ಸಂಶಯಃ ॥
> ಅಗಮ್ಯತ್ವಾದ್ಧರಿಸ್ತಸ್ಮಿನ್ನಾವಿಷ್ಟೋ ಮುಕ್ತಿದೋ ಭವೇತ್ ॥

(ಅರ್ಥ) ಗುರುಲಕ್ಷಣಗಳಿಂದ ಚೆನ್ನಾಗಿ ಕೂಡಿದ ಗುರುಗಳು ಬಹಳ ಪ್ರಸನ್ನರಾಗಿ ಶಿಷ್ಯನಿಗೆ ಏನು ಉಪದೇಶ ಮಾಡುವರೋ ಅದೆಲ್ಲವೂ ನಿಸ್ಸಂಶಯವಾಗಿ ಸತ್ಯವೇ ಆಗುತ್ತದೆ—ಅಲ್ಲದೆ ಮೋಕ್ಷಕ್ಕೂ ಕಾರಣವಾಗು-ತ್ತದೆ. (ಮೋಕ್ಷ ಕೊಡುವ ಅಧಿಕಾರ ಶ್ರೀಹರಿಗೇ ಇದೆಯಲ್ಲವೆ, ಗುರುಗಳಿಗೆ ಹೇಗೆ ಬರುತ್ತದೆಯೆಂದರೆ ಸಮಾಧಾನ ಹೇಳುತ್ತಾರೆ—ವಾದಿರಾಜರ ಭಾವ-

ಪ್ರಕಾಶಿಕಾ ಟೀಕಾಪ್ರಕಾರ) ಶ್ರೀಹರಿಯನ್ನು ಸಾಕ್ಷಾತ್ತಾಗಿ ಸೇವಿಸುವುದು ಎಲ್ಲರಿಗೂ ಅಸಾಧ್ಯವಾದ ಕಾರಣ ಶ್ರೀಹರಿಯೇ ನಮ್ಮ ಆಯಾ ವಿದ್ಯಾಗುರು-ಗಳಲ್ಲೇ ನಿಂತು **ಮೋಕ್ಷಪ್ರದನೂ** ಆಗುತ್ತಾನೆ. ಹೀಗೆ ಗುರುಪ್ರಸಾದ ವೆಂದರೆ ಒಂದು ರೀತಿಯಿಂದ ಶ್ರೀಹರಿಯ ಪರಮಾನುಗ್ರಹವೇ ಎಂದು ಹೇಳಿದಂತಾಯಿತು. ಆದಕಾರಣವೇ ಇಂಥಾ ಗುರುಪ್ರಸಾದವಿಲ್ಲದಿದ್ದರೆ ಮನುಷ್ಯರಿಗಿರಲಿ—ದೇವತೆಗಳಿಗೂ ಸಹ ಸಕಲ ಸಾಧನಗಳೂ ಸಿದ್ಧಿಪ್ರದ-ವಾಗಲಾರದೆಂದು ಭಾಗವತತಾತ್ಪರ್ಯೋದಾಹೃತವಾದ **ಗುರುವಿವೇಕ**ವೆಂಬ ಗ್ರಂಥದ ವಾಕ್ಯವೂ ಹೇಳುತ್ತದೆ—

ದೇವಾ ಅಪಿ ಸುಯೋಗಾಢ್ಯಾ ಯತಂತಃ ಸರ್ವಸಾಧನೈಃ ।
ಪುತ್ರದಾರಾದಿಭಿಃ ಸಾರ್ಧಂ ನಾಶ್ವಸಂತೀಹ ಸಂಸೃತೌ ॥
ಗುರೋರನುಗ್ರಹಮೃತೇ ಸಾಧನಂ ನ ಹರೇಃ ಪ್ರಿಯಮ್ ।
ಗುರೂಪದೇಶಾತ್ತು ಪರಂ ಪ್ರಾಪ್ನೋತ್ಯೇವ ನ ಸಂಶಯಃ ॥

(ಅರ್ಥ) ದೇವತೆಗಳೂ ಸಹ ಗುರ್ವನುಗ್ರಹವಿಲ್ಲದೆ ಯೋಗಾದಿ ಸಕಲ-ಸಾಧನಗಳಿಂದ ಪ್ರಯತ್ನಪಟ್ಟಾಗ್ಯೂ ಪತ್ನೀಪುತ್ರಾದಿಗಳೊಡನೆ ಈ ಸಂಸಾರ-ವನ್ನು ದಾಟಲಾರರು. ಏಕೆಂದರೆ ಗುರ್ವನುಗ್ರಹವಿಲ್ಲದೆ ಯಾವ ಸಾಧನವೂ ಶ್ರೀಹರಿಗೆ ಪ್ರಿಯವಾಗಲಾರದು. ಗುರುಗಳು ಅನುಗ್ರಹ ಮಾಡಿದರೆ ಮಾತ್ರ ಶ್ರೀಹರಿಯ (ಪರಂ) ಅನುಗ್ರಹವೂ ಲಭಿಸುತ್ತದೆಯಲ್ಲದೆ ಉತ್ತಮವಾದ (ಪರಂ) ಮೋಕ್ಷಪ್ರಾಪ್ತಿಯೂ ಆಗುತ್ತದೆ.

**188. ಗುರುಗಳ ಲಕ್ಷಣಗಳು**—'ಅಸಂಶಯಃ ಸಂಶಯಚ್ಛಿತ್ ಗುರುರುಕ್ತೋ ಮನೀಷಿಭಿಃ' ಎಂಬ ತಾತ್ಪರ್ಯನಿರ್ಣಯೋದಾಹೃತ (೧/೧೨೩) ಪ್ರಮಾಣವು ಹೇಳುವಂತೆ ತಾನು ಸಂಶಯರಹಿತನಾಗಿ (ಎಲ್ಲವನ್ನೂ ತಿಳಿದುಕೊಂಡು) ಶಿಷ್ಯನಿಗೆ ಬರುವ ಸಂದೇಹಗಳೆಲ್ಲವನ್ನೂ ಪರಿಹರಿಸಿ ವಿದ್ಯೆಯನ್ನು ಬೋಧಿಸಬಲ್ಲವನೇ ಗುರು. ಅಷ್ಟೇ ಸಾಲದು, ಅವನು ವಿಷ್ಣುಭಕ್ತನೂ ಆಗಿರಬೇಕು. ಅಲ್ಲದೆ ದ್ವಾತ್ರಿಂಶಲ್ಲಕ್ಷಣೋಪೇತನೂ ಆಗಿದ್ದರೆ ಸರ್ವಶ್ರೇಷ್ಠಗುರುವಾಗುತ್ತಾನೆಂದು **ಗುರುವಿವೇಕ**ವೆಂಬ ಗ್ರಂಥವು ಹೇಳುತ್ತದೆ—

ವಾಸುದೇವೈಕಶರಣೋ ಗುರುರಿತ್ಯುಚ್ಯತೇ ಬುಧೈಃ ।
ಗುರುಲಕ್ಷಣಸಂಯುಕ್ತಃ ಸಾಕ್ಷಾದೇವ ಚತುರ್ಮುಖಃ ॥
ತತಃ ಶೇಷೇಂದ್ರ-ವೀಂದ್ರಾದ್ಯಾಃ ಕ್ರಮೇಣೈವ ಪ್ರಕೀರ್ತಿತಾಃ ।

ಮುಖ್ಯವಾಗಿ ನಾರಾಯಣನೊಬ್ಬನನ್ನೇ ಶರಣುಹೊಂದಿ ತೊಂಬತ್ತಾರು ಅಂಗುಲ ಎತ್ತರ, ಅದರ ಅರ್ಧದಷ್ಟು ಮೈಯಿನ ಸುತ್ತಳತೆ ಇತ್ಯಾದಿ ಸಲ್ಲಕ್ಷಣಗಳುಳ್ಳವನೇ ಗುರು. ಈ ಸಕಲ ಗುರುಲಕ್ಷಣಗಳೂ ಇರುವುದು ಸಾಕ್ಷಾತ್ ಬ್ರಹ್ಮನೊಬ್ಬನಲ್ಲಿ ಮಾತ್ರ. ಅವನ ಬಳಿಕ ಗರುಡಾದಿ ಕೆಳಗಿನ ಕಕ್ಷೆಯ ದೇವತೆಗಳಲ್ಲಿಯೂ ಆ ಗುರುಲಕ್ಷಣಗಳು ಕ್ರಮವಾಗಿ ಇಳಿಯುತ್ತಾ ಹೋದರೂ ಅವರೆಲ್ಲರೂ ಗುರುಗಳೇ ಆಗಿದ್ದಾರೆಂದು ಪಂಡಿತರು ಹೇಳುತ್ತಾರೆ.

ಆ ಗುರು ತೊಂಬತ್ತಾರು ಅಂಗುಲ ಉದ್ದವುಳ್ಳವನೂ (ಅಂಗುಲ ಎಂದರೆ ಕೈ ಹೆಬ್ಬೆರಳಿನ ಮಧ್ಯರೇಖೆಯ ಉದ್ದ) ನಲವತ್ತೆಂಟು ಅಂಗುಲ ಹೊಟ್ಟೆಯ ಸುತ್ತಳತೆಯುಳ್ಳವನೂ (ನ್ಯಗ್ರೋಧಪರಿಮಂಡಲ), ತನ್ನ ಹೆಜ್ಜೆಯಲ್ಲಿ ಅಳೆದರೆ ಏಳು ಹೆಜ್ಜೆಯಷ್ಟು ಎತ್ತರವುಳ್ಳವನೂ ಮೂವತ್ತೆರಡು ಸಲ್ಲಕ್ಷಣಗಳುಳ್ಳವನೂ ಆಗಿರುವುದಲ್ಲದೆ (ಇದರ ಹೆಚ್ಚಿನ ವಿವರಣೆ ತಾತ್ಪರ್ಯ ನಿರ್ಣಯದ ಟೀಕೆ ಶ್ರೀಮದ್ವಾದಿರಾಜರ ಭಾವಪ್ರಕಾಶದಲ್ಲಿ, ಪುಟ ೩೯ರಲ್ಲಿ ಸಿಗುತ್ತದೆ) ಶ್ರೀಹರಿಯಪ್ರತಿಮೆಗೆ ಇರಬೇಕೆಂದು ಹೇಳಿದ ಸಕಲ ಲಕ್ಷಣಗಳು-ಳ್ಳವನೂ ಆಗಿದ್ದರೆ ಸರ್ವೋತ್ತಮ ಗುರು. ಈ ಸಮಸ್ತ ಲಕ್ಷಣಗಳೂ ಬ್ರಹ್ಮವಾಯುಗಳಲ್ಲೂ ಮುಖ್ಯವಾಗಿ ಶ್ರೀಹರಿಯಲ್ಲೂ ಮಾತ್ರವೇ ದೊರಕು-ವುವು. ಅವರನ್ನು ಬಿಟ್ಟರೆ ರುದ್ರಾದಿಗಳಲ್ಲಿ ಈ ಲಕ್ಷಣಗಳು ತಾರತಮ್ಯಾನು-ಗುಣವಾಗಿ ಕಡಿಮೆಯಾಗುತ್ತಾ ಹೋಗುವುವೆಂಬುದನ್ನು ಬೃಹದ್ಭಾಷ್ಯೋ-ದಾಹೃತ **ಮಹಾಸಂಹಿತಾ** ಪ್ರಮಾಣವು (೩/೩/೨೮) ಹೀಗೆ ತಿಳಿಸುತ್ತದೆ—

ದ್ವಾತ್ರಿಂಶಲ್ಲಕ್ಷಣೈಃ ಸಮ್ಯಗ್ ಯುಕ್ತಾ ವಾಯುತ್ವಯೋಗ್ಯಕಾಃ ।....
ಅಷ್ಟಾವಿಂಶಲ್ಲಕ್ಷಣಾಶ್ಚ ಗಿರೀಶಪದಯೋಗಿನಃ ॥
ಚತುರ್ವಿಂಶತಿಮಾರಭ್ಯ ಷೋಡಶಾದಾ ಸುರಾಃ ಸ್ಮೃತಾಃ ॥
ಅಷ್ಟಕಾದ್ಯಷಯುಶ್ಚೋಕ್ತಾ-ಸ್ತದೂನಾಶ್ಚಕ್ರವರ್ತಿನಃ ॥

(ಅರ್ಥ) ವಾಯುಪದವಿಗೆ ಬರುವ ಸಕಲ ಋಜುಗಣಸ್ಥರಿಗೂ ಸಂಪೂರ್ಣವಾಗಿ ಮೂವತ್ತೆರಡು ಲಕ್ಷಣಗಳೂ ಇರುತ್ತವೆ. (ಈ ಮೂವತ್ತೆರಡೂ ಲಕ್ಷಣಗಳಿಗೂ ಅಧಿಕವಾದ ಶ್ರೀಹರಿಗೇ ಮೀಸಲಾದ **ನಾಲ್ಕು ವಿಶೇಷಲಕ್ಷಣಗಳನ್ನೂ** ಅಲ್ಲೇ ಹೇಳಿದ್ದಾರೆ.) ರುದ್ರದೇವರ ಪದವಿಗೆ ಬರುವವರಿಗೆ (ಗರುಡ-ಶೇಷಾದಿಗಳಿಗೆ) ಇಪ್ಪತ್ತೆಂಟು ಲಕ್ಷಣಗಳಿರುತ್ತವೆ. ಇಂದ್ರಾದಿ ಇನ್ನೂ ಕೆಳಗಿನ ವರ್ಗದ ದೇವತೆಗಳಿಗೆ ಇಪ್ಪತ್ತನಾಲ್ಕರಿಂದ ಆರಂಭಿಸಿ ಹದಿನಾರರವರೆಗೆ ಸಲ್ಲಕ್ಷಣಗಳಿರುತ್ತವೆ. ಋಷಿಗಳಿಗೆ ಎಂಟೇ ಎಂಟು ಸಲ್ಲಕ್ಷಣಗಳಿರುತ್ತವೆ. ಮಾಂಧಾತಾದಿ ಚಕ್ರವರ್ತಿಗಳಿಗೆ ಅದಕ್ಕೂ (ಎಂಟಕ್ಕೂ) ಕಡಿಮೆಯಾದ ಸಲ್ಲಕ್ಷಣಗಳಿರುತ್ತವೆ. (ಇನ್ನು ಮನುಷ್ಯೋತ್ತಮರಲ್ಲಿ ಮೂರೋ ನಾಲ್ಕೋ ಇದ್ದರೆ ಹೆಚ್ಚು) ಇರಲಿ.

**189. ಹೆಚ್ಚು ಲಕ್ಷಣಗಳಿಂದ ಹೆಚ್ಚು ಸಿದ್ಧಿ**—ಅವರಿಗೆ ಅಷ್ಟು ಲಕ್ಷಣಗಳಿದ್ದರೆ ನಿಮಗೇನು ಲಾಭ ? ಎಂದರೆ ತಂತ್ರಸಾರದಲ್ಲಿ (೪/೧೪೧–೨) ಹೇಳುತ್ತಾರೆ—

ಯಾವದ್ಭಕ್ತೋ ಯಥಾಲಬ್ಧೈ—ರ್ಗುಣೈರ್ಯುಕ್ತೋಽಥ ವೈಷ್ಣವಃ ।
ಗುರುಃ ಸತ್ಸಂಪ್ರದಾಯಜ್ಞ—ಸ್ತಾರತಮ್ಯೇನ ಸಿದ್ಧಿದಃ ॥
ಉತ್ತಮಾದುತ್ತಮಾ ಸಿದ್ಧಿ—ರ್ಧರ್ಮಮೋಕ್ಷಾದಿಷು ಸ್ಫುಟಮ್ ।

(ಅರ್ಥ) ಯಾರು ಯಾರಿಗೆ ಎಷ್ಟೆಷ್ಟು ಹೆಚ್ಚೆಚ್ಚು ಲಕ್ಷಣಗಳಿರುತ್ತವೋ ಅಷ್ಟಷ್ಟು ಭಕ್ತಿಯೂ ಹೆಚ್ಚು, ಜ್ಞಾನವೂ ಹೆಚ್ಚು, ಅಷ್ಟಷ್ಟು ವಿಷ್ಣು ಪ್ರೀತಿಗೂ ಹೆಚ್ಚು ಹೆಚ್ಚು ಪಾತ್ರರಾಗಿರುತ್ತಾರೆ. ಹೀಗೆ ತಾರತಮ್ಯಾನುಗುಣವಾಗಿ ಅಧಿಕಲಕ್ಷಣವುಳ್ಳ ಗುರುಗಳು ಅಧಿಕಾಧಿಕವಾಗಿ ಸತ್ಸಂಪ್ರದಾಯವನ್ನು ತಿಳಿದುಕೊಂಡಿರುವರಾದ್ದರಿಂದ ಸ್ಪಷ್ಟವಾಗಿಯೇ ತಾರತಮ್ಯಕ್ಕೆ ತಕ್ಕಂತೆಯೇ ಅವರ ಅನುಗ್ರಹವು ಸಿದ್ಧಿಯನ್ನು ಕೊಡಲು ಸಮರ್ಥವಾಗುತ್ತದೆ. ಆದಕಾರಣ ಅವರವರ ಗುಣಗಳಿಗೆ ಅನುಗುಣವಾಗಿಯೇ ಅವರವರಲ್ಲಿ ಭಕ್ತಿ ಮಾಡಬೇಕು, ಆಗಲೇ ಅವರು ಅನುಗ್ರಹಿಸಿದ ವಿದ್ಯೆಯೂ ಸಿದ್ಧಿಯಾಗುತ್ತದೆ ಎಂದು ತಂತ್ರಸಾರದಲ್ಲಿ (೪/೧೧೫–೧೬) ಹೇಳಿದೆ—

ಬ್ರಹ್ಮಾಂತಾ ಗುರವಶ್ಚೈವ ಸಂಪ್ರದಾಯಪ್ರವರ್ತಕಾಃ ।
ತತ್ತದ್ಗುಣಾನುಸಾರೇಣ ಪೂಜ್ಯಾ ಮಾನ್ಯಾಶ್ಚ ಕೃತ್ಸ್ನಶಃ ॥

ನಮಗೆ ವಿದ್ಯೋಪದೇಶ ಮಾಡಿದ ಸಾಕ್ಷಾತ್ ಗುರುಗಳಿಂದ ಆರಂಭಿಸಿ ಬ್ರಹ್ಮದೇವರವರೆಗೆ **ಸಕಲರೂ ಗುರುಗಳೇ** ಹೌದು. ಅಷ್ಟೇ ಅಲ್ಲ, ಸಂಪ್ರದಾಯಪ್ರವರ್ತಕರಾದ ಸಕಲರೂ ಸಹ ಗುರುಗಳೇ ಆಗಿದ್ದಾರೆ. (ಇದರಿಂದ, ನಮ್ಮದು ವ್ಯಾಸರಾಜ ಮಠ. ಆದ್ದರಿಂದ ರಾಯರ ಮಠದ ಅಥವಾ ಉತ್ತರಾದಿ ಮಠದ ಅಥವಾ ಉಡುಪೀಮಠದ ಗುರುಗಳು ನಮಗೆ ಸಂಬಂಧಿಸಿಯೂ ಇಲ್ಲ, ವಂದ್ಯರೂ ಅಲ್ಲ, ಇತ್ಯಾದಿ ರೀತಿಯಾಗಿ ಮಠಾಭಿಮಾನದಿಂದ ಅನ್ಯಮಠೀಯರನ್ನು ಕೀಳೆಂದು ತಿಳಿಯುವುದಾಗಲಿ, ಅವರಲ್ಲಿ ತಿರಸ್ಕಾರ ಭಾವನೆ ಮಾಡುವುದೇ ಆಗಲಿ ಎಲ್ಲವೂ **ಗುರುದ್ರೋಹವೇ** ಆಗುತ್ತದೆ. ಅಂಥವರಿಗೆ ವಿದ್ಯೆಯು ಸಿದ್ಧಿಸುವುದೂ ಇಲ್ಲ, ದುರ್ಗತಿಯೂ ಆಗುತ್ತದೆ ; ಹಿಂದೆ ಹೇಳಿರುವಂತೆ 'ಪ್ರಯಾತಿ ಚ ತಮೋ ಘೋರಮ್'.) **ಎಲ್ಲರನ್ನೂ** ಅವರವರ ಗುಣಾನುಸಾರವಾಗಿ **ಪೂಜಿಸಲೂ ಬೇಕು, ಗೌರವಿಸಲೂ ಬೇಕು.** 'ತತ್ತದ್ಗುಣಾನುಸಾರೇಣ' ಎಂದು ಹೇಳಿದ್ದನ್ನೇ ಸ್ಪಷ್ಟಪಡಿಸಿ ಹೇಳುತ್ತಾರೆ—

ಸರ್ವೇಭ್ಯೋಽಭ್ಯಧಿಕಾ ಭಕ್ತಿರ್ ವಿಷ್ಣೌ ಸ್ಯಾದತಿನಿಶ್ಚಲಾ ।
ಲಕ್ಷ್ಮೀಬ್ರಹ್ಮಾದಿಷು ತತಃ ಕ್ರಮೇಣ ಸ್ಯಾತ್ ಸುಭಾವಿತಾ ॥
ಏವಂ ವಿದ್ಯಾಃ ಫಲಿಷ್ಯಂತಿ ನಾನ್ಯಥಾ ತು ಕಥಂಚನ ।

ಶ್ರೀವಿಷ್ಣು (ಸರ್ವೋತ್ತಮನಾದ್ದರಿಂದ ಅವ)ನಲ್ಲಿ ಎಲ್ಲರಲ್ಲಿ ಮಾಡುವುದಕ್ಕಿಂತಲೂ ಅತ್ಯಂತ ಅಧಿಕವಾದ ಮತ್ತು ಅತ್ಯಂತ ದೃಢವಾದ ಭಕ್ತಿಯನ್ನು ಮಾಡಬೇಕು. ಅನಂತರ ಲಕ್ಷ್ಮೀ-ಬ್ರಹ್ಮಾದಿಗಳಲ್ಲಿ ಅವರವರ ತಾರತಮ್ಯಾನುಸಾರ ಭಕ್ತಿ ಮಾಡಬೇಕು. ಹೀಗೆ ಕ್ರಮವಾಗಿ ಬ್ರಹ್ಮದೇವರ ವರೆಗೆ ಸಕಲರಲ್ಲಿಯೂ ತಾರತಮ್ಯಾನುಗುಣವಾಗಿ ಭಕ್ತಿ ಮಾಡುವುದಲ್ಲದೆ (ಅವರು ಯಾರಲ್ಲೂ ತಿರಸ್ಕಾರ ಭಾವನೆ ಮಾಡದೆ) ಗೌರವ ಬುದ್ಧಿ (ಸುಭಾವಿತಾ—ಭಾವೋ ಭಕ್ತಿರುದ್ದಿಷ್ಟಃ) ಉಳ್ಳವರಾಗಿದ್ದರೆ ಮಾತ್ರವೇ ಸಕಲ ವಿದ್ಯೆಗಳೂ ಸಿದ್ಧಿಸುತ್ತವೆ. ಇಲ್ಲದಿದ್ದರೆ **ಸರ್ವಥಾ** ಏನು

ಮಾಡಿದರೂ ಸಿದ್ಧಿಸುವುದಿಲ್ಲ. (ಈ ವಿಷಯವನ್ನೇ ಪಂಡಿತಾಚಾರ್ಯರು ನಮಗೆ ೧೫ನೇ ಶ್ಲೋಕದಲ್ಲಿ ತಿಳಿಸಿಕೊಟ್ಟರು.)

**190. ಸ್ವೋತ್ತಮರೆಲ್ಲರೂ ಗುರುಗಳೇ**—'ಬ್ರಹ್ಮಾಂತಾ ಗುರವಃ' ಎಂದು ಹೇಳಿದ್ದರಿಂದ 'ಕೊನೆಯಲ್ಲಿ ಬ್ರಹ್ಮದೇವರು' ಎಂದು ಹೇಳಿದಂತಾಯಿತು. 'ಆರಂಭ' ಎಲ್ಲಿಂದ ಎಂದರೆ—ಭಾರತ ತಾತ್ಪರ್ಯನಿರ್ಣಯದಲ್ಲಿ (೧/೧೨೪) ಹೇಳುತ್ತಾರೆ—

ತಸ್ಮಾದ್ ಬ್ರಹ್ಮಾ ಗುರುರ್ಮುಖ್ಯಃ ಸರ್ವೇಷಾಮೇವ ಸರ್ವದಾ ।
ಅನ್ಯೇಽಪಿ ಸ್ವಾತ್ಮನೋ ಮುಖ್ಯಾಃ ಕ್ರಮಾದ್ ಗುರವ ಈರಿತಾಃ ॥

ಮೂವತ್ತೆರಡೂ ಲಕ್ಷಣಗಳಿಂದ ಕೂಡಿದವರಾದ್ದರಿಂದ ಎಲ್ಲರಿಗೂ ಎಲ್ಲಾ ಕಾಲದಲ್ಲೂ ಬ್ರಹ್ಮದೇವರು ಮುಖ್ಯಗುರುಗಳು. ಅನಂತರ ತನಗಿಂತ ಉತ್ತಮರಾದವರೆಲ್ಲರೂ ಕ್ರಮವಾಗಿ ಮುಖ್ಯರಾದ ಗುರುಗಳು. ಹೀಗೆ ಪ್ರತಿಯೊಬ್ಬನಿಗೂ ಅಸಂಖ್ಯ ಗುರುಗಳಿದ್ದರೂ ವಿದ್ಯಾಭ್ಯಾಸ ಮಾಡುವಾಗಲೂ ಜಪಾದ್ಯನುಷ್ಠಾನಗಳನ್ನು ಮಾಡುವಾಗಲೂ ಮುಖ್ಯವಾಗಿ ಹನ್ನೆರಡು ಗುರುಗಳನ್ನು ನೆನೆಸಿದರೆ ಸಾಕು, ಅಷ್ಟರಿಂದಲೇ ವಿದ್ಯೆ ಸಿದ್ಧಿಸುತ್ತದೆಯೆಂದು ಶ್ರೀಮದಾಚಾರ್ಯರು ತಂತ್ರಸಾರದಲ್ಲಿ (೪/೧೧೪) ಅಪ್ಪಣೆ ಕೊಡಿಸಿದ್ದಾರೆ.

**191. ದ್ವಾದಶಗುರುಗಳು**—ಆ ಹನ್ನೆರಡು ಗುರುಗಳು ಯಾರು ಯಾರೆಂದರೆ—

ಸ್ಮೃತ್ವಾ ಗುರುಂ ಪೂರ್ವಗುರುಂ ಆದಿ-ಮೂಲ-ಗುರುಂ ತಥಾ ।
ದೇವತಾಂ ವಾಸುದೇವಂ ಚ **ವಿದ್ಯಾಭ್ಯಾಸೀ** ತು ಸಿದ್ಧಿಭಾಕ್ ॥

ಯಾವ ವಿದ್ಯೆಯನ್ನಾಗಲಿ ಆರಂಭಿಸುವಾಗ ತನಗೆ ವಿದ್ಯೋಪದೇಶ ಮಾಡಿದ ಸಾಕ್ಷಾದ್ಗುರುವನ್ನೂ ಆ ಗುರುಗಳ ಸಾಕ್ಷಾದ್ಗುರುಗಳನ್ನೂ (ಎಂದರೆ ಪರಮ ಗುರುಗಳನ್ನೂ) ಆದಿಗುರುಗಳನ್ನೂ ಮೂಲಗುರುಗಳನ್ನೂ ಆಯಾ ವಿದ್ಯೆಗೆ ಅಭಿಮಾನಿಯಾದ ದೇವತೆಯನ್ನೂ ಕೊನೆಗೆ ಮುಕ್ತಿಪ್ರದಾಯಕನಾದ ವಾಸುದೇವನನ್ನೂ **ಸ್ಮರಣೆ ಮಾಡಿ** ವಿದ್ಯೆ ಆರಂಭಿಸಿದರೆ ಸಿದ್ಧಿ ಪಡೆಯುತ್ತಾನೆ ಎಂಬುದು ಶ್ಲೋಕಾರ್ಥ. ಇದರಲ್ಲಿ ಸಾಕ್ಷಾದ್ಗುರುಗಳೂ ಪರಮಗುರುಗಳೂ ಪ್ರತಿಯೊಬ್ಬರಿಗೂ ಬೇರೆ-ಬೇರೆಯೇ ಆಗಿರುತ್ತಾರೆ. ಪದ್ಮನಾಭತೀರ್ಥರಿಗೆ

ಸಾಕ್ಷಾದ್ಗುರುಗಳು ಮಧ್ವಾಚಾರ್ಯರಾದರೆ ಟೀಕಾರಾಯರಿಗೆ ಅಕ್ಷೋಭ್ಯ-ತೀರ್ಥರು ಸಾಕ್ಷಾದ್ಗುರುಗಳು, ಪದ್ಮನಾಭತೀರ್ಥರು ಪರಮಗುರುಗಳು. ವ್ಯಾಸರಾಯರಿಗೆ ಬ್ರಹ್ಮಣ್ಯತೀರ್ಥರು ಸಾಕ್ಷಾದ್ಗುರುಗಳಾದರೆ ಪುರುಷೋತ್ತಮ ತೀರ್ಥರು ಪರಮಗುರುಗಳು. ಶ್ರೀ ವಿಜಯೀಂದ್ರತೀರ್ಥರಿಗೂ ಶ್ರೀಮದ್ವಾದಿ-ರಾಜರಿಗೂ ಶ್ರೀವ್ಯಾಸರಾಯರು ಸಾಕ್ಷಾತ್ ವಿದ್ಯಾಗುರುಗಳಾದರೆ ಶ್ರೀಪಾದ-ರಾಯರು ಪರಮಗುರುಗಳು. ಮಂತ್ರಾಲಯದ ರಾಯರಿಗೆ ಶ್ರೀಸುಧೀಂದ್ರರು ಸಾಕ್ಷಾದ್ಗುರುಗಳಾದರೆ ಶ್ರೀವಿಜಯೀಂದ್ರತೀರ್ಥರು ಪರಮಗುರುಗಳು ಇತ್ಯಾದಿ.

ಶ್ರೀಮನ್ಮಧ್ವಾಚಾರ್ಯರು **ಎಲ್ಲರಿಗೂ ಆದಿಗುರುಗಳು.** ಮೂಲ-ಗುರುಗಳು ಏಳು ಮಂದಿ ಇದ್ದಾರೆಂದೂ ಅವರು ಯಾರೆಂಬುದನ್ನೂ (ತಂತ್ರಸಾರ ಛಲಾರಿ ಟೀಕೆಯಲ್ಲಿ ಹೇಳಿರುವ) ಪಂಚರಾತ್ರದ ಈ ವಾಕ್ಯ ತಿಳಿಸುತ್ತದೆ—

ವ್ಯಾಸಂ ಚ ಭಾರತೀಂ ವಾಣೀಂ ವಿಧಿಂ ವಾಯುಂ ರಮಾಂ ತಥಾ ।
ತಥಾ ನಾರಾಯಣಂ ಮೂಲ—ಗುರೂನಾಹುರ್ವಿಪಶ್ಚಿತಃ ॥

[ವಾಣೀಂ–ಸರಸ್ವತಿಯನ್ನು, ವಿಧಿಂ–ಚತುರ್ಮುಖಬ್ರಹ್ಮನನ್ನು, ಆಹುಃ–ಹೇಳುವರು. ವಿಪಶ್ಚಿತಃ–ಪಂಡಿತರು, ಜ್ಞಾನಿಗಳು] ೧. ವೇದ-ವ್ಯಾಸರು, ೨. ಭಾರತೀದೇವಿ, ೩. ಸರಸ್ವತೀ, ೪. ವಾಯುದೇವರು, ೫. ಬ್ರಹ್ಮದೇವರು, ೬. ಶ್ರೀ ಮಹಾಲಕ್ಷ್ಮೀ, ೭. ನಾರಾಯಣ ಈ ಏಳು ಮಂದಿಯನ್ನು ಜ್ಞಾನಿಗಳು ಮೂಲಗುರುಗಳೆಂದು ಹೇಳುತ್ತಾರೆ. ಒಟ್ಟಿನಲ್ಲಿ ೧. ಸಾಕ್ಷಾದ್ಗುರುಗಳು (ನಾವು ಯಾವ ಕೆಲಸ ಮಾಡಿದರೂ ಮೊದಲು 'ಶ್ರೀ ಗುರುಭ್ಯೋ ನಮಃ' ಎಂದು ನಮಿಸುವುದೇ ಈ ಗುರುಗಳನ್ನೇ), ೨. ಪರಮಗುರುಗಳು, ೩. ಆದಿಗುರುಗಳಾದ ಶ್ರೀಮದಾನಂದತೀರ್ಥಭಗವ-ತ್ಪಾದಾಚಾರ್ಯರು (ಶ್ರೀಮನ್ಮಧ್ವಾಚಾರ್ಯರು), ೪. (ಮುಂದೆ ಏಳು ಮಂದಿ ಮೂಲಗುರುಗಳು) ೪. ಶ್ರೀ ವೇದವ್ಯಾಸರು, ೫. ಭಾರತೀದೇವಿ, ೬. ಸರಸ್ವತೀದೇವಿ, ೭. ವಾಯುದೇವರು, ೮. ಬ್ರಹ್ಮದೇವರು, ೯. ಶ್ರೀಮಹಾಲಕ್ಷ್ಮೀ, ೧೦. ಶ್ರೀಮನ್ನಾರಾಯಣ, ೧೧. ಆಯಾ ವಿದ್ಯೆಗೆ

ನಿಯಾಮಕವಾದ ದೇವತೆ ಅಥವಾ ಭಗವದ್ರೂಪ, ೧೨. ಮುಕ್ತಿಪ್ರದಾಯಕನಾದ ವಾಸುದೇವ—ಇವರೇ ದ್ವಾದಶಗುರುಗಳು.

**192. ಎಲ್ಲಿಯುವರೆಗೆ ಸೇವೆ ಮಾಡಬೇಕು**—ಗುರ್ವನುಗ್ರಹದ ಮಹಿಮೆಯನ್ನೂ ಗುರುಲಕ್ಷಣವನ್ನೂ ತಿಳಿಸಿದ ಬಳಿಕ ಆ ಗುರುಸೇವೆಯನ್ನು ಎಲ್ಲಿಯುವರೆಗೆ ಮಾಡಬೇಕು ಎಂಬ ಪ್ರಶ್ನೆ ಸ್ವಾಭಾವಿಕವಾಗಿ ಬರುತ್ತದೆ. ಭಾಗವತವು (೧೧/೧೮ ೩೯-೪೦) ಅದನ್ನು ಹೀಗೆ ತಿಳಿಸಿಕೊಡುತ್ತದೆ—

ಅಜಿಜ್ಞಾಸಿತಮದ್ಧರ್ಮೋ ಗುರುಂ ಮುನಿಮುಪಾವ್ರಜೇತ್ ।
ತಾವತ್ ಪರಿಚರೇದ್ಭಕ್ತಃ ಶ್ರದ್ಧಾವಾನನಸೂಯಕಃ ॥
ಯಾವದ್ಬ್ರಹ್ಮ ವಿಜಾನೀಯಾದ್ ಮಾಮೇವ ಗುರುಮಾದೃತಃ ।

ಭಗವಂತನ ಸ್ವರೂಪವೇನೆಂಬುದನ್ನು ತಿಳಿಯದವನಿಗೆ ತತ್ತ್ವವಿಚಾರವನ್ನು ತಿಳಿದುಕೊಳ್ಳಬೇಕೆಂಬ ಜಿಜ್ಞಾಸೆ ಹುಟ್ಟಿದರೆ ಅವನು ಮನನಶೀಲನಾದ ಗುರುವಿನ ಬಳಿಗೆ ಹೋಗಬೇಕು. ಮತ್ತು ಆ ಗುರುವನ್ನು ಬ್ರಹ್ಮಜ್ಞಾನೋದಯ ಆಗುವವರೆಗೂ ಶುಶ್ರೂಷೆಮಾಡಬೇಕು. ಬ್ರಹ್ಮಜ್ಞಾನೋದಯವಾದಮೇಲೂ ಸಹ ಗುರುಭಕ್ತಿ-ಗುರುಸೇವೆ ಅತ್ಯಾವಶ್ಯಕವೆಂಬುದನ್ನು **ಧರ್ಮತತ್ತ್ವ**ವೆಂಬ ಗ್ರಂಥದ ಈ ಪ್ರಮಾಣ ಹೇಳುತ್ತದೆ—

ಶುಶ್ರೂಷೇತ್ ಸಹಿತಸ್ತಾವದ್ ಯಾವದ್ ಜ್ಞಾನೋದಯೋ ಗುರುಮ್ ।
ತತಃ ಪರಂ ಚ ಶುಶ್ರೂಷೇದ್ ಯಥಾ ತಸ್ಯ ಪ್ರಿಯಂ ಭವೇತ್ ॥

ಎಲ್ಲಿಯುವರೆಗೆ ಜ್ಞಾನೋದಯವಾಗುವುದೋ ಅಲ್ಲಿಯುವರೆಗೂ ನೇರವಾಗಿ ಗುರುಶುಶ್ರೂಷೆ ಮಾಡಲೇಬೇಕು. ಆಮೇಲೆಯೂ ಸಹ (ನೇರವಾಗಿ ಅವರ ಶುಶ್ರೂಷೆ ಮಾಡದಿದ್ದರೂ) ಅವರಿಗೆ ಹಿತವಾದಂಥಹ ಕಾರ್ಯಗಳನ್ನು ಮಾಡುತ್ತಿರಬೇಕು (ಶಿಷ್ಯರಿಗೆ ಪಾಠ-ಪ್ರವಚನಾದಿಗಳನ್ನು ಮಾಡುವುದು, ಸದಾಚಾರನಿರತನಾಗಿರುವುದು ಇತ್ಯಾದಿಗಳನ್ನು ಮಾಡುತ್ತಿರಬೇಕು); ಈ ರೀತಿಯಿಂದ ನಿತ್ಯದಲ್ಲಿ ಗುರುಶುಶ್ರೂಷೆ ಮಾಡುತ್ತಾ ಶ್ರವಣಾದಿಗಳನ್ನು ಮಾಡಿದರೆ ಶಮದಮಾದಿಗುಣಗಳು ವೃದ್ಧಿಯಾಗಿ ಜ್ಞಾನವೂ ಭಕ್ತಿಯೂ ಪರಿಪುಷ್ಟವಾಗಿ ತನ್ಮೂಲಕ ಭಗವದಪರೋಕ್ಷಕ್ಕೆ ಪರಂಪರಯಾ ಕಾರಣ

ಆಗುವುದೆಂದು ಸೂತ್ರಭಾಷ್ಯೋದಾಹೃತ (೩/೩/೫೧) ನಾರಾಯಣತಂತ್ರ-ದಲ್ಲಿ ಹೇಳಿದೆ—

ಭಕ್ತಿರ್ವಿಷ್ಣೌ ಗುರೌ ಚೈವ ಗುರೋರ್ತಿತ್ಯಪ್ರಸನ್ನತಾಮ್ ।
ದದ್ಯಾ-ಚ್ಛಮದಮಾದಿಂ ಚ, ತೇನ ಚೈತೇ ಗುಣಾಃ ಪುನಃ ॥
ತೈಃ ಸರ್ವೈರ್ದರ್ಶನಂ ವಿಷ್ಣೋಃ ಶ್ರವಣಾದಿಕೃತಂ ಭವೇತ್ ॥

ವಿಷ್ಣುಭಕ್ತಿಯೂ ಗುರುಭಕ್ತಿಯೂ ಗುರುಗಳ ಅನುಗ್ರಹಕ್ಕೆ ಕಾರಣ-ವಾಗುತ್ತದೆ. ಗುರ್ವನುಗ್ರಹದಿಂದ ಶಮ-ದಮಾದಿ ಸದ್ಗುಣಗಳೂ ಶಾಸ್ತ್ರ-ಜ್ಞಾನದ ಜೊತೆಯಲ್ಲೇ ಲಭ್ಯವಾಗುತ್ತವೆ. ಅದರಿಂದ ವಿಷ್ಣುಭಕ್ತಿ ಜ್ಞಾನಾದಿ ಗುಣಗಳು ಸುದೃಢವಾಗಿ ಅವುಗಳಿಂದ ಶ್ರವಣಮನನಾದಿ ಸಾಧನಗಳಿಂದ ಮುಖ್ಯವಾಗಿ ಲಭಿಸಬೇಕಾದ ಭಗವದಪರೋಕ್ಷಜ್ಞಾನವೂ ಲಭ್ಯವಾಗುತ್ತದೆ. 'ದೃಷ್ಟ್ವೈವ ತಂ ಮುಚ್ಯತೇ ನಾಪರೇಣ' ಎಂದು ಕೌಶಿಕಶ್ರುತಿ ಹೇಳುವಂತೆ ಈ ಭಗವತ್ಸಾಕ್ಷಾತ್ಕಾರದಿಂದಲೇ (ಬಿಂಬಾಪರೋಕ್ಷದಿಂದಲೇ) ಮುಕ್ತಿಯಾಗು-ತ್ತದೆ. ಹೀಗೆ ಗುರುಭಕ್ತಿಯೇ ಪರಂಪರಯಾ ಮೋಕ್ಷಕ್ಕೆ ಸಾಧನವಾಗಿರುವು-ದೆಂಬುದನ್ನು ಹೃದ್ಗತವಾಗುವಂತೆ ತಿಳಿಸುವುದಕ್ಕಾಗಿಯೇ 'ಗುರು' ಶಬ್ದವನ್ನು ಅನೇಕ ವೇಳೆ ಪ್ರಯೋಗಿಸಿದ್ದಾರೆಂದು ತಿಳಿಯಬೇಕು.

**193. ಹರಿ-ವಾಯುಗಳಲ್ಲಿ ಗುರುತ್ವ**—ಹೀಗೆ ಅನೇಕ ಮಂದಿ ಗುರುಗಳಿದ್ದಾಗ್ಯೂ ಅವರೆಲ್ಲರಲ್ಲಿಯೂ ಭಕ್ತಿ ಕೊಡಿ ಎಂದು ಕೇಳದೆ 'ಭಕ್ತಿ-ಮೇಕಾಂ ಭಗವತ ಉತ ತೇ ಮಾಧವಸ್ಯಾಥ ವಾಯೋಃ' ಎಂದು ಏಳನೇ ಶ್ಲೋಕದಲ್ಲೂ 'ಗೋವಿಂದೇ ದೇಹಿ ಭಕ್ತಿಂ ಭವತಿ ಚ' ಎಂದು ಹದಿನಾಲ್ಕನೇ ಶ್ಲೋಕದಲ್ಲೂ ಹರಿವಾಯುಗಳಲ್ಲಿ ಮಾತ್ರವೇ ಏಕೆ ಭಕ್ತಿ ಕೇಳಿಕೊಂಡರು ? ಎಂದರೆ ಅದಕ್ಕೂ ಪ್ರಬಲಕಾರಣಗಳಿವೆ. ಛಾಂದೋಗ್ಯಭಾಷ್ಯದಲ್ಲಿ (೪/೪/೯) ಉದ್ಧರಿಸಿರುವ **ಆಚಾರ್ಯಸಂಹಿತಾ** ವಾಕ್ಯವು ಹೀಗೆ ಹೇಳುತ್ತದೆ—

ಋಷಿಭ್ಯಸ್ತೂತ್ತಮಾ ದೇವಾ ದೇವೇಭ್ಯೋ ವಾಯುರುತ್ತಮಃ ।
ವಾಯೋಶ್ಚ ಭಗವಾನ್ ವಿಷ್ಣುರ್ ನ ತಸ್ಮಾದುತ್ತಮೋ ಗುರುಃ ॥

(ಮನುಷ್ಯರಿಗಿಂತಲೂ ಋಷಿಗಳು ಉತ್ತಮಗುರುಗಳು.) ಋಷಿಗಳಿಗಿಂತಲೂ ದೇವತೆಗಳು ಶ್ರೇಷ್ಠರಾದ ಗುರುಗಳು. ಮಿಕ್ಕ ಎಲ್ಲಾ ದೇವತೆಗಳಿಗಿಂತಲೂ

ವಾಯುದೇವರು ಅತ್ಯಂತ ಶ್ರೇಷ್ಠಗುರುಗಳು. ವಾಯುದೇವರಿಗಿಂತಲೂ ಅನಂತಪಟ್ಟು ಶ್ರೇಷ್ಠನಾದ—ಸರ್ವೋತ್ತಮನಾದ ಗುರುವೆಂದರೆ ಭಗವಾನ್ ವಿಷ್ಣು ; ಅವನಿಗಿಂತ ಶ್ರೇಷ್ಠರಾದ ಗುರುಗಳು ಬೇರೆ ಯಾರೂ ಇಲ್ಲವೆಂದು ಆಚಾರ್ಯಸಂಹಿತೆ ಹೇಳುತ್ತದೆ. [ಇದನ್ನು ತಿಳಿದವರಾದ್ದರಿಂದಲೇ ಶ್ರೀಮದ್-ವ್ಯಾಸರಾಯರು ಪ್ರಾಣದೇವರನ್ನು ಒಂದು ಕೀರ್ತನೆಯಲ್ಲಿ 'ನೀನೆ ವರಗುರು ಮುಖ್ಯಪ್ರಾಣಾ। ನಿರಂತರವು ನಂಬಿದೆನೊ ನಿಖಿಲಗುಣಪೂರ್ಣ' ಎಂದೂ, ಇನ್ನೊಂದು ಕೀರ್ತನೆಯ ಕೊನೆಯಲ್ಲಿ 'ಪರಮಾನಂದ ಶ್ರೀಕೃಷ್ಣಗೆ ಕಿರಿಯ, ಮಿಕ್ಕ ಜಗಕ್ಹಿರಿಯ' ಎಂದೂ ಸ್ತುತಿಸಿದ್ದಾರೆ. ಶ್ರೀಪಾದರಾಯರು 'ಜಯ ಜಯ ಜಗತ್ ತ್ರಾಣ ಜಗದೊಳಗೆ ಸುತ್ರಾಣ। ಅಖಿಳಗುಣ ಸದ್ಧಾಮ ಮಧ್ವನಾಮಾ' ಎಂದಿದ್ದಾರೆ. ಜಗತ್-ತ್ರಾಣ—ಸಕಲ ಜಗತ್ತಿಗೂ ಪ್ರಾಣ-(ಶ್ವಾಸ) ರೂಪವಾಗಿದ್ದು ರಕ್ಷಿಸುವವರೇ, ಸುತ್ರಾಣ—ಅತ್ಯಂತ ಬಲಿಷ್ಠರೇ, ಅಖಿಳಗುಣ—ಜ್ಞಾನಭಕ್ತಿವೈರಾಗ್ಯಶಮದಮಾದಿ ಸಕಲಗಳಿಗೂ, ಸತ್-ಧಾಮ (ಸತ್—ಉತ್ತಮವಾದ, ಸಚ್ಛಬ್ದ ಉತ್ತಮಂ ಬ್ರೂಯಾತ್ ; ಧಾಮ—ಮನೆ) —ಶ್ರೇಷ್ಠವಾದ ನೆಲೆಮನೆಯಂತೆ ಇರುವ, ಮಧ್ವ-ನಾಮಾ—ಮಧ್ವಾಚಾರ್ಯ-ರೆಂಬ (ನಾಮ—ಹೆಸರು) ಅನ್ವರ್ಥನಾಮವುಳ್ಳ ಹೇ ಗುರುಗಳೇ ನಿಮಗೆ ಜಯವಾಗಲಿ ಜಯವಾಗಲಿ, ಅಥವಾ (ಟೀಕಾರಾಯರು ಮಾಯಾವಾದ ಖಂಡನ ಟೀಕೆಯಲ್ಲಿ ತೋರಿಸಿದಂತೆ, [ನಖಸ್ತುತಿ ಪುಟ ೨೧೧ ನೋಡಿ.]) ನೀವು ರುದ್ರಾದಿ ಸಕಲ ದೇವತೆಗಳಿಗಿಂತಲೂ ಉತ್ಕೃಷ್ಟರಾಗಿದ್ದೀರಿ....ಇನ್ನೂ ಮುಂದೆ 'ಆವವನ ಬಳಿ ಪಿಡಿದು ಹರಿಯ ಸುರರೈದುವರೋ। ಆ ವಾಯು ನಮ್ಮ ಕುಲಗುರುರಾಯನು ॥' ಎಂದರೆ ರುದ್ರೇಂದ್ರಾದಿ ಸಕಲ ದೇವತೆಗಳೂ ಯಾವ ವಾಯುದೇವರ ಬಲವನ್ನೇ ಆಶ್ರಯಿಸಿ ಶ್ರೀಹರಿಯ ಅನುಗ್ರಹಕ್ಕೆ ಪಾತ್ರರಾಗುತ್ತಾರೋ ಅಂಥಾ ವಾಯುದೇವರೇ ನಮ್ಮ ಕುಲಗುರುಗಳು— ಎಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ.]

ಭಾಗವತತಾತ್ಪರ್ಯದಲ್ಲಿ (೧೦/೨೭/೧೧) ಉದ್ಧರಿಸಿರುವ ವಾರಾಹ-ಪುರಾಣದ ವಾಕ್ಯವಂತೂ ಘಂಟಾಘೋಷವಾಗಿ ಹೀಗೆ ಸಾರುತ್ತದೆ—

ಗುರುಃ ಶ್ರೀಬ್ರಹ್ಮಣೋರ್ವಿಷ್ಣುಃ ಸುರಾಣಾಂ ಚ ಗುರೋರ್ಗುರುಃ।
ಮೂಲಭೂತೋ ಗುರುಃ ಸರ್ವ—ಜನಾನಾಂ ಪುರುಷೋತ್ತಮಃ ॥

ಶ್ರೀಮಹಾವಿಷ್ಣುವು ಲಕ್ಷ್ಮೀದೇವಿಗೂ ಬ್ರಹ್ಮದೇವರಿಗೂ ಸಾಕ್ಷಾತ್‌ಗುರುವು (ಅಥವಾ ಪ್ರತ್ಯಕ್ಷಗುರು). ಬ್ರಹ್ಮದೇವರು ರುದ್ರಾದಿ ಸಕಲ ದೇವತೆಗಳಿಗೂ ಗುರುವಾದ್ದರಿಂದ ರುದ್ರಾದಿಗಳಿಗೆ ವಿಷ್ಣು ಪರಮಗುರು (ಗುರುಗಳ ಗುರು) ವಾಗುತ್ತಾನೆ, ಪುರುಷೋತ್ತಮನಾದಕಾರಣ ಸಕಲ ಜಗತ್ತಿಗೂ ಆ ಶ್ರೀವಿಷ್ಣು **ಮೂಲಗುರುವೂ** ಹೌದು.

ಗುರುರ್ಬ್ರಹ್ಮಾಸ್ಯ ಜಗತೋ ದೈವಂ ವಿಷ್ಣುಃ ಸನಾತನಃ ।
ಇತ್ಯೇವೋಪಾಸನಂ ಕಾರ್ಯಂ ನಾನ್ಯಥಾ ತು ಕಥಂಚನ ॥

ಅಥವಾ (ಇನ್ನೊಂದು ದೃಷ್ಟಿಯಿಂದ) ಈ ಸಕಲ ಜಗತ್ತಿಗೂ ಬ್ರಹ್ಮದೇವರೇ ಮುಖ್ಯಗುರು. ಶ್ರೀವಿಷ್ಣುವು ಮುಖ್ಯದೇವತೆ—ಹೀಗೆಂದಾದರೂ ಉಪಾಸನೆ ಮಾಡಬೇಕೇ ವಿನಾ ಬೇರೆ ಯಾವ ರೀತಿಯಲ್ಲೂ (ಮಿಕ್ಕವರೆಲ್ಲ ಮುಖ್ಯ ಗುರು-ಗಳೆಂದಾಗಲಿ ಮುಖ್ಯದೇವತೆಯೆಂದಾಗಲಿ) ಉಪಾಸನೆ ಮಾಡಬಾರದು. ಎಂದು ವರಾಹಪುರಾಣ ಹೇಳುತ್ತದೆ. ಇದಕ್ಕೆ ಅನುಗುಣವಾಗಿಯೇ ಶ್ರೀ ಮಧ್ವಾ-ಚಾರ್ಯರು ಈಶಾವಾಸ್ಯೋಪನಿಷದ್ಭಾಷ್ಯದ ಪ್ರಾರಂಭದಲ್ಲಿ ಶ್ರೀಹರಿಯೇ ದೇವತೆಯೆಂದೂ ಸಕಲ ಜಗತ್ತಿಗೂ, ವಿಶೇಷವಾಗಿ ತಮಗೂ ಗುರುವೆಂದೂ ವಂದಿಸಿದ್ದಾರೆ—'ನಿತ್ಯಾನಿತ್ಯಜಗದ್ಧಾತ್ರೇ ನಿತ್ಯಾಯ ಜ್ಞಾನಮೂರ್ತಯೇ । ಪೂರ್ಣಾನಂದಾಯ ಹರಯೇ ಸರ್ವಯಜ್ಞಭುಜೇ ನಮಃ ॥' ಎಂದು ದೇವತಾ-ತ್ವೇನ ನಮಸ್ಕಾರ ಮಾಡಿ ಗುರುತ್ವೇನ ಈ ರೀತಿ ವಂದಿಸಿದ್ದಾರೆ—

ಯಸ್ಮಾದ್ ಬ್ರಹ್ಮರುದ್ರೇಂದ್ರಾದಿ—ದೇವತಾನಾಂ ಶ್ರಿಯೋಽಪಿ ಚ ।
ಜ್ಞಾನಸ್ಫೂರ್ತಿಃ ಸದಾ ತಸ್ಮೈ **ಹರಯೇ ಗುರವೇ** ನಮಃ ॥

ಯಾವ ಶ್ರೀಹರಿಯಿಂದ ಲಕ್ಷ್ಮೀದೇವಿಗೆ ಅನಾದಿಕಾಲದಿಂದ ನಿತ್ಯವಾಗಿ ನಿರಂತರ ವಾಗಿ ಜ್ಞಾನಸ್ಫೂರ್ತಿಯಾಗುತ್ತಿದೆಯೋ ಮತ್ತು ಬ್ರಹ್ಮ-ರುದ್ರ-ಇಂದ್ರಾದಿ ದೇವತೆಗಳಿಗೂ ಸಹ ಸದಾ ಅವರವರ ಯೋಗ್ಯತಾನುಸಾರ ಜ್ಞಾನಸ್ಫೂರ್ತಿ-ಯಾಗುತ್ತದೋ ಅಂಥಾ ಸಕಲ ಜಗದ್ಗುರುವೂ (ನನಗೆ–ಮಧ್ವಾಚಾರ್ಯರಿಗೆ) ಸಾಕ್ಷಾದ್ಗುರುವೂ ಆದ ಶ್ರೀಹರಿಗೆ ನಮಸ್ಕಾರ.

ಈ ಪ್ರಕಾರ ವಾಯುದೇವರೂ ಶ್ರೀವಿಷ್ಣುವೂ ಎಲ್ಲರಿಗೂ ಮುಖ್ಯ ಗುರುಗಳಾದ್ದರಿಂದಲೂ ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಗೆ ಶ್ರೀ ಮಧ್ವಾ-

ಚಾರ್ಯರೇ ಸಾಕ್ಷಾದ್ಗುರುಗಳಾದ ಕಾರಣ ಶ್ರೀವಿಷ್ಣು ಪರಮಗುರುವೂ ಮೂಲಗುರುವೂ ಆಗುವುದರಿಂದ ವಿಶೇಷವಾಗಿ ಆ ಇಬ್ಬರಲ್ಲೇ ಭಕ್ತಿಯನ್ನು ಕೊಡುವಂತೆ ಕೇಳಿಕೊಂಡದ್ದು ಸೂಕ್ತವಾಗಿಯೇ ಇದೆಯೆಂದು ಹೇಳಿ ಈ ವಿಚಾರವನ್ನು ಮುಗಿಸುವೆವು.

**194. ಯೋಗ್ಯತಾ-ತಾರತಮ್ಯಾತ್ ಎಂಬ ವಿಷಯ**—ಹಿಂದೆ 'ಆನಂದಾನ್—' ಎಂಬ ಹತ್ತನೇ ಶ್ಲೋಕಕ್ಕೆ ತಾತ್ಪರ್ಯಾರ್ಥ ಬರೆಯುವ ಸಂದರ್ಭದಲ್ಲೇ ಮೋಕ್ಷದಲ್ಲೂ ತಾರತಮ್ಯವುಂಟೆಂಬ ವಿಷಯವನ್ನು ಸಾಕಷ್ಟು ವಿಸ್ತಾರವಾಗಿಯೇ ವರ್ಣಿಸಿದ್ದೇವೆ. ಆದರೆ ಈ ಶ್ಲೋಕದಲ್ಲಿರುವ 'ಯೋಗ್ಯತಾ ತಾರತಮ್ಯಾತ್' ಎಂಬುದು ಕೇವಲ ಮುಕ್ತಿಯೋಗ್ಯರಿಗೆ ಮಾತ್ರ ಅನ್ವಯಿಸದೆ ತ್ರಿವಿಧಜೀವರಿಗೂ ಅನ್ವಯಿಸುತ್ತಿರುವುದರಿಂದ ಅದಕ್ಕೆ ಹೆಚ್ಚಿನ ವಿವರಣೆ ಅವಶ್ಯಕವೇ ಆಯಿತು. ಭಾಗವತತಾತ್ಪರ್ಯದಲ್ಲಿ (೧೧/೨/೪೯) ಉದಹರಿಸಿರುವ ಬ್ರಹ್ಮತರ್ಕಪ್ರಮಾಣವು ಹೀಗೆ ಹೇಳುತ್ತದೆ—

ದೇಹೇಂದ್ರಿಯಪ್ರಾಣಧಿಯಾಂ ತ್ರಿಧೈವ ತ್ವಭಿಮಾನಿನಃ ।
ತತ್ರೋತ್ತಮಾ ದೇವತಾಸ್ತಾಃ ಸರ್ವದೋಷವಿವರ್ಜಿತಾಃ ॥
ಗುಣೈಃ ಸರ್ವೈಃ ಸುಸಂಪನ್ನಾ ವಿರಿಂಚಾದೋತ್ತರೋತ್ತರಮ್ ॥

(ಆ ವಿರಿಂಚಾತ್ ಉತ್ತರೋತ್ತರಂ—ಎಂದು ಅನ್ವಯ ಮಾಡಿಕೊಳ್ಳಬೇಕು.)

(ಅರ್ಥ) ದೇಹಕ್ಕೂ ಇಂದ್ರಿಯಗಳಿಗೂ ಪ್ರಾಣಕ್ಕೂ ಬುದ್ಧಿಗೂ ಪ್ರೇರಕರಾದ ಅಭಿಮಾನಿಗಳು ಮೂರು ವಿಧವಾಗಿಯೇ ಇದ್ದಾರೆ. ಅವರಲ್ಲಿ ದೇವತೆಗಳೇ ಉತ್ತಮರು. ಅವರೆಲ್ಲ ದೋಷರಹಿತರೂ ಆಗಿರುವರಲ್ಲದೆ ಬ್ರಹ್ಮನವರೆಗೆ ಹೆಚ್ಚು ಹೆಚ್ಚು ಗುಣಗಳಿಂದ ಅಧಿಕರೂ ಶ್ರೇಷ್ಠರೂ ಆಗಿದ್ದಾರೆ. (ಅವರಲ್ಲೆಲ್ಲಾ ಬ್ರಹ್ಮದೇವರು ಗುಣಜ್ಯೇಷ್ಠರೂ ಹೌದು. ತಾರತಮ್ಯದಲ್ಲೂ ಸರ್ವಶ್ರೇಷ್ಠರು.)

ಮಧ್ಯಮಾ ಗುಣದೋಷೇತಾ ಅಸುರಾ ಅವಮಾ ಮತಾಃ ॥
ತೇ ಸರ್ವೇ ದೋಷಸಂಯುಕ್ತಾ ಆ ಚಿತ್ತಾದುತ್ತರೋತ್ತರಮ್ ।

ಪುರಂಜನ ಪ್ರಭೃತಿಗಳು ಮಧ್ಯಮವರ್ಗದ ಅಭಿಮಾನಿಗಳು, ಅವರಲ್ಲಿ ಗುಣದೋಷಗಳೆರಡೂ ಮಿಶ್ರವಾಗಿರುತ್ತವೆ. (ಮನುಷ್ಯವರ್ಗಕ್ಕೆ ಸೇರಿದವರಲ್ಲಿ ಸರ್ವಶ್ರೇಷ್ಠನಾದವನು ಪುರಂಜನ). ದೇಹೇಂದ್ರಿಯಾದ್ಯಭಿಮಾನಿಗಳಲ್ಲಿ ಅಸುರರು ಅಧಮರು. ಅವರು ಕೇವಲ ದೋಷದಿಂದ ಕೂಡಿರುತ್ತಾರೆ. ಈ ಅಸುರರಲ್ಲಿಯೂ ಹೆಚ್ಚು ಹೆಚ್ಚು ದುರ್ಗುಣ ಏರುತ್ತಾ ಹೋಗಿ ಕಲಿಯಲ್ಲಿ ಮಿಕ್ಕ ಎಲ್ಲರಿಗಿಂತ ಆ ದೋಷಗಳು ಅತ್ಯಧಿಕವಾಗಿರುವುದರಿಂದ ಕಲಿಯೇ ಅಸುರರಲ್ಲೆಲ್ಲಾ ಅಗ್ರಗಣ್ಯ, ಸರ್ವಶ್ರೇಷ್ಠ ಹೀಗೆ ಈ ಬ್ರಹ್ಮತರ್ಕವಾಕ್ಯಗಳಿಂದ ದೇವತೆಗಳಲ್ಲಿ ಹೇಗೆ ತಾರತಮ್ಯವಿದೆಯೋ ಹಾಗೆಯೇ ನಿತ್ಯಸಂಸಾರಿಗಳಲ್ಲಿಯೂ ಅಸುರರಲ್ಲಿಯೂ ತಾರತಮ್ಯವಿದೆಯೆಂದು ಸಿದ್ಧವಾಗುತ್ತದೆ. ಶ್ರೀಮಜ್ಜಗನ್ನಾಥದಾಸರು ಇಡೀ ಒಂದು ಸಂಧಿಯಲ್ಲಿ (೩೦ನೇ ಸಂಧಿ) ದೈತ್ಯತಾರತಮ್ಯವನ್ನೇ ಹೇಳಿದ್ದಾರೆ.

ತಾರತಮ್ಯ ಹೆಚ್ಚಿದಂತೆ ದೇವತೆಗಳು ಹೆಚ್ಚು ಹೆಚ್ಚು ಜ್ಞಾನಭಕ್ತಿ ವೈರಾಗ್ಯಾದಿ ಸಾಧನಗಳನ್ನು ಮಾಡಿಕೊಂಡು ಹೆಚ್ಚು ಹೆಚ್ಚು ಆನಂದಕ್ಕೆ ಹೇಗೆ ಭಾಗಿಗಳಾಗುವರೋ ಅದೇ ರೀತಿ ದೈತ್ಯರೂ ಸಹ ತಮ್ಮ ತಮ್ಮ ಶಕ್ತಿಗೆ ಅನುಗುಣವಾಗಿ ಹೆಚ್ಚು ಹರಿದ್ವೇಷಾದಿಗಳನ್ನು ಸಾಧಿಸಿ ಅದಕ್ಕೆ ತಕ್ಕಂತೆ ಹೆಚ್ಚು-ಹೆಚ್ಚು ದುಃಖಗಳಿಗೆ ಭಾಗಿಗಳಾಗುತ್ತಾರೆ. ಕಲಿಯು ಎಲ್ಲರಿಗಿಂತಲೂ ಹೆಚ್ಚು ವಿಧವಾಗಿ—ಎಷ್ಟು ಬಗೆಯಿಂದ ಹರಿದ್ವೇಷ ಸಾಧಿಸುವುದಕ್ಕೆ ಸಾಧ್ಯವಿದೆಯೋ ಅಷ್ಟು ಪ್ರಕಾರಗಳಿಂದ—ಹರಿದ್ವೇಷ ಸಾಧಿಸುವುದರಿಂದ ಅವನು (ಕಲಿಯು) ಮಿಕ್ಕ ಎಲ್ಲ ದೈತ್ಯರು ಅನುಭವಿಸುವ ದುಃಖಕ್ಕಿಂತಲೂ ಹೆಚ್ಚು ದುಃಖಕ್ಕೆ ಗುರಿಯಾಗುವನು. ಈ ದೃಷ್ಟಿಯಿಂದ ನೋಡಿದರೆ ಬ್ರಹ್ಮದೇವರು ಉತ್ತರಧ್ರುವವಾದರೆ ಕಲಿ ದಕ್ಷಿಣಧ್ರುವ ಎಂದು ಹೇಳಬಹುದು. ಇದೇ ರೀತಿ ನಿತ್ಯಸಂಸಾರಿಗಳಲ್ಲೆಲ್ಲಾ ಪುರಂಜನನು ಮಿಕ್ಕ ಎಲ್ಲ ಮನುಷ್ಯರಿಗಿಂತಲೂ ಹೆಚ್ಚು ಮಿಶ್ರಸುಖದುಃಖಗಳನ್ನು ಅನುಭವಿಸುತ್ತಾನೆ. ಮಿಕ್ಕವರು ತಮ್ಮ ತಮ್ಮ ಯೋಗ್ಯತಾನುಸಾರ ಅಲ್ಪವಾದ ಸುಖ-ದುಃಖಗಳಿಗೆ ಗುರಿಯಾಗುತ್ತಾರೆಂದೂ ತಿಳಿಯಬೇಕು. ಇದನ್ನೇ ಜಗನ್ನಾಥದಾಸರು 'ಸತ್ವಜೀವರಮಾನಿ ಬ್ರಹ್ಮನು। ನಿತ್ಯಬದ್ಧರೊಳಗೆ

ಪುರಂಜನ । ದೈತ್ಯಸಮುದಾಯಾಧಿಪತಿ ಕಲಿ....' (೨೯/೧೪) ಎಂದು 'ದೇವದೈತ್ಯರ ತಾರತಮ್ಯವ । ನೀವಿಧದಿ ತಿಳಿದೆಲ್ಲರೊಳು ಲಕ್ಷ್ಮೀವರನೆ ಸರ್ವೋತ್ತಮನು ಎಂದರಿದು ನಿತ್ಯದಲಿ ॥ ಸೇವಿಸುವ ಭಕ್ತರಿಗೊಲಿದು ಸುಖವೀವ....ಜಗನ್ನಾಥವಿಠಲನು ॥' (೨೯/೧೬) ಎಂದೂ ಹರಿಕಥಾಮೃತ-ಸಾರದಲ್ಲಿ ಹೇಳಿದ್ದಾರೆ. ಹೀಗೆ ತ್ರಿವಿಧಜೀವರಲ್ಲೂ ತಾರತಮ್ಯವನ್ನು ತಿಳಿಯಬೇಕೆಂಬುದೇ ಸರ್ವಶಾಸ್ತ್ರದ ಸಾರ.

ಈ ವಿಷಯವನ್ನೇ ತಾತ್ಪರ್ಯನಿರ್ಣಯದಲ್ಲಿ (೧/೧೩೫) ಹೀಗೆ ಹೇಳಿದ್ದಾರೆ—

ಅಸುರಾಃ ಕಲಿಪರ್ಯಂತಾ ಏವಂ ದುಃಖೋತ್ತರೋತ್ತರಾಃ ॥
ಕಲಿರ್ದುಃಖಾಧಿಕಸ್ತೇಷು....

ದೈತ್ಯರು ಕಲಿಯವರೆಗೆ ಹೆಚ್ಚು ಹೆಚ್ಚು ಬಲಿಷ್ಠರು, ಹೆಚ್ಚು ಹೆಚ್ಚು ದ್ವೇಷಮಾಡುವರು, ಅದಕ್ಕೆ ತಕ್ಕಂತೆ ಹೆಚ್ಚು ಹೆಚ್ಚು ದುಃಖಭಾಗಿ-ಗಳಾಗುತ್ತಾರೆ. ಅವರಲ್ಲಿ ಎಲ್ಲರಿಗಿಂತಲೂ ಹೆಚ್ಚು ದುಃಖವನ್ನೂ ಕಲಿಯು ಅನುಭೋಗಿಸುತ್ತಾನೆ.

**195. ಪೂರ್ಣತ್ವದಲ್ಲೂ ತಾರತಮ್ಯವುಂಟು**—ಇದಕ್ಕೆ ಪ್ರತಿ-ಯಾಗಿ ಮನುಷ್ಯೋತ್ತಮರಿಂದ ಆರಂಭಿಸಿ ಬ್ರಹ್ಮನವರೆಗೆ ಮುಕ್ತಿಯೋಗ್ಯರು ಭಕ್ತಿ ಜ್ಞಾನಾದಿಸಾಧನೆಗಳನ್ನು ಕ್ರಮವಾಗಿ ಬೆಳೆಸಿಕೊಂಡು ಹೇಗೆ ಮೋಕ್ಷಕ್ಕೆ ಹೋಗುವರೆಂಬುದನ್ನು ಬೃಹದ್ಭಾಷ್ಯೋದಾಹೃತ (೩/೫/೪)ವಾದ ಈ ಪೈಂಗಿಶ್ರುತಿಯ ವಾಕ್ಯಗಳು ತಿಳಿಸುತ್ತವೆ—

ಮಾನುಷ್ಯೋತ್ತಮಮಾರಭ್ಯ ಬ್ರಹ್ಮಾಂತಾನಾಂ [ಸಮಸ್ತಶಃ] ।
ಭಕ್ತಿಜ್ಞಾನಾದಿಕಾಃ ಸರ್ವೇ ಸರ್ವೇಷಾಮಪ್ಯನಾದಯಃ ।
ಅನಾದಿಕಾಲಾದಾರಭ್ಯ ವೃದ್ಧಾನಾಮುತ್ತರೋತ್ತರಮ್ ॥
ತತ್ತದ್ಯೋಗ್ಯತಯಾ ಪೂರ್ತೌ ವಿಷ್ಣೋರ್ದೃಷ್ಟಿಃ ಪ್ರಜಾಯತೇ ।

ಮನುಷ್ಯೋತ್ತಮರಿಂದ ಆರಂಭಿಸಿ ಬ್ರಹ್ಮದೇವರವರೆಗೆ ಎಲ್ಲರಿಗೂ ಅವರವರ ಭಕ್ತ್ಯಾದಿಗುಣಗಳು ಅನಾದಿಕಾಲದಿಂದ ಸಹಜವಾಗಿ ಇದ್ದೇ ಇರುತ್ತವೆ. ಆ ಗುಣಗಳೇ ಕ್ರಮವಾಗಿ ಸಾಧನೆ ಮಾಡಿಕೊಂಡಂತೆ ವೃದ್ಧಿಹೊಂದುತ್ತಾ

ಹೋಗಿ ಅವರವರ ಯೋಗ್ಯತಾನುಸಾರ ಪರಿಪಕ್ವವಾದ ಬಳಿಕ ವಿಷ್ಣುವಿನ ಸಾಕ್ಷಾತ್ಕಾರವಾಗುತ್ತದೆ.

ಯಥೋದಂಚನಕುಂಭಾದೇಃ ಸರಿತ್ಸಾಗರಯೋರಪಿ ।
ಅಲ್ಪೇನ ಮಹತಾ ವಾಪಿ ಪೂರ್ತಿರ್ಯೋಗ್ಯತಯಾ ಭವೇತ್ ॥

ಥಾಲಿ, ತಂಬಿಗೆ, ಕೊಡ, ಹಂಡೆ ಹೀಗೆ ಬೇರೆ ಬೇರೆ ಆಳತೆಯುಳ್ಳ ಪಾತ್ರೆಗಳನ್ನು ನದಿಯಲ್ಲಾಗಲಿ ಸಮುದ್ರದಲ್ಲಾಗಲಿ ತುಂಬಿದರೂ ಸಹ ಅವು ತಮ್ಮ ತಮ್ಮ ಆಳತೆಯಷ್ಟೇ ನೀರನ್ನು ತುಂಬಿಕೊಂಡು ಎಲ್ಲ ಪೂರ್ಣವೇ ಆಗಿ ತುಂಬಿಕೊಳ್ಳುವುವೋ ಅದೇ ರೀತಿ ಮೋಕ್ಷದಲ್ಲಿಯೂ ಬೇರೆ ಬೇರೆ ಯೋಗ್ಯತೆಯುಳ್ಳ ಜೀವರು ತಮ್ಮ ತಮ್ಮ ಯೋಗ್ಯತಾನುಸಾರವಾಗಿಯೇ **ಪೂರ್ಣಸುಖ**ವನ್ನು ಹೊಂದುವರು.

ಏವಂ ನರಾದಿ-ಬ್ರಹ್ಮಾಂತ—ಜೀವಾನಾಂ ಸಾಧನೈರಪಿ ।....
ಅಲ್ಪೈಃ ಪೂರ್ತಿಸ್ತಥಾಲ್ಪಾನಾಂ ಮಹದ್ಭಿರ್ಮಹತಾಮಪಿ ॥

ಹೀಗೆಯೇ ಮನುಷ್ಯೋತ್ತಮರಿಂದ ಹಿಡಿದು ಬ್ರಹ್ಮದೇವರವರೆಗೆ ಸರ್ವರಿಗೂ ಅವರವರ ಯೋಗ್ಯತಾನುಸಾರ ಮಾಡಿದ ಜ್ಞಾನಭಕ್ತ್ಯಾದಿ ಸಾಧನೆಗಳಿಂದ ಅವರವರ ಯೋಗ್ಯತೆ ಇದ್ದಷ್ಟೇ ಪೂರ್ಣತ್ವವನ್ನು ಹೊಂದುತ್ತಾರೆ. ಅಲ್ಪಶಕ್ತಿಯುಳ್ಳವರಿಗೆ ಅಲ್ಪಸಾಧನದಿಂದಲೇ ಸಾಧನಸಂಪೂರ್ತಿಯಾಗುತ್ತದೆ ; ಅದಕ್ಕೆ ತಕ್ಕಷ್ಟೇ ಸ್ವಲ್ಪಸುಖದಿಂದಲೇ ಅವನಿಗೆ ಪೂರ್ಣ-ತೃಪ್ತಿಯಾಗುತ್ತದೆ. ಮಹತ್ತರವಾದ ಯೋಗ್ಯತೆಯುಳ್ಳ ದೇವಾದಿಗಳ ಸಾಧನವೂ ಹೆಚ್ಚಾಗಿರುತ್ತದೆ, ಅದಕ್ಕೆ ಅನುಗುಣವಾಗಿ ಅವರ ಸೌಖ್ಯವೂ ಮಹತ್ತರವಾಗಿರುತ್ತದೆ. ಈ ವಿಷಯವನ್ನು ನೆನಪಿಟ್ಟುಕೊಂಡರೆ 'ಯೋಗ್ಯತಾತಾರತಮ್ಯಾತ್ ಸುಖಮಪಿ ದುಃಖಮಪಿ' ಎಂದು ಪಂಡಿತಾ-ಚಾರ್ಯರು ಹೇಳಿದ್ದರ ಪೂರ್ಣಸ್ವಾರಸ್ಯ ಗೊತ್ತಾಗುತ್ತದೆ.

**196. ಶ್ರುತಿಶತಂ ಎಂಬುದರ ವಿವರಣೆ**—ಈ ವಿಚಾರಗಳೆಲ್ಲವನ್ನೂ 'ನೂರಾರು ಶ್ರುತಿಗಳಿಂದಲೂ ಇತಿಹಾಸಾದಿ ಗ್ರಂಥಗಳಿಂದಲೂ ಕೇಳುತ್ತೇವೆ' ಎಂದು ಪಂಡಿತಾಚಾರ್ಯರು ಹೇಳಿದ್ದಾರಷ್ಟೆ. ಕಕ., ವಿ. ಮತ್ತು ಛ. ಗಳಲ್ಲಿ 'ವಾಯುನಾ ಹಿ ಸರ್ವೇ ಲೋಕಾ ನೇನೀಯಂತೇ' ಎಂಬ ಸೂತ್ರಭಾಷ್ಯೋ-

ದಾಹೃತ (೧/೪/೧೮) ಶ್ರುತಿಯನ್ನು ಉದ್ಧರಿಸಿದ್ದಾರೆ. ಆ ಶ್ರುತಿಯ ಅರ್ಥ—ವಾಯುನಾ–ಮುಖ್ಯಪ್ರಾಣದೇವರಿಂದ, ಸರ್ವೇ ಲೋಕಾಃ–ಸಕಲ-ಜನಗಳೂ ತಮ್ಮ ತಮ್ಮ ಯೋಗ್ಯತೆಗೆ ಅನುಸಾರವಾಗಿ, ನೇನೀಯಂತೇ–ಸಾಧನೆಗಳಲ್ಲಿ ಪ್ರೇರಿಸಲ್ಪಡುತ್ತಾರೆ ಮತ್ತು ಅದಕ್ಕೆ ತಕ್ಕಂತೆ ಗತಿಗೂ ಒಯ್ಯಲ್ಪಡುತ್ತಾರೆ. ಎಂದರೆ ಮುಕ್ತಿಯೋಗ್ಯರಿಂದ ಹರಿಭಕ್ತಿ ಜ್ಞಾನಾರ್ಜನಾದಿ ಸಾಧನೆಗಳನ್ನು ಮಾಡಿಸಿ ಅವರನ್ನು ಮೋಕ್ಷಕ್ಕೆ ಕಳುಹಿಸುತ್ತಾರೆ. ಅಸುರರಿಂದ ಹರಿದ್ವೇಷಾದಿಗಳ ಸಾಧನೆ ಮಾಡಿಸಿ ತಮಸ್ಸಿಗೆ ಒಯ್ಯುತ್ತಾರೆ ಎಂದರ್ಥ. ಛ. ದಲ್ಲಿ 'ಪ್ರಾಣ ಏವೇದಂ ಸರ್ವಂ'–ಇದೆಲ್ಲವೂ ಮುಖ್ಯಪ್ರಾಣನ ಅಧೀನವಾಗಿದೆ. 'ಸ ಏತಾನ್ ಬ್ರಹ್ಮ ಗಮಯತಿ'–ವಾಯುದೇವರೇ ಸಾಧನ ಸಂಪೂರ್ತಿಯಾದ ಇವರೆಲ್ಲರನ್ನೂ ವಿಷ್ಣುವಿನ ಬಳಿಗೆ (ಮೋಕ್ಷಕ್ಕೆ) ಒಯ್ಯುತ್ತಾರೆ—ಎಂಬ ಪ್ರಮಾಣಗಳನ್ನು ಉದಹರಿಸಿದ್ದಾರೆ. ಪುರಾ. ದಲ್ಲಿ 'ಶೃಣ್ವೇವೀರ' ಎಂಬ ತಾತ್ಪರ್ಯನಿರ್ಣಯೋದಾಹೃತ (೧/೧೦೧) ಹಾಗೂ ಸೂತ್ರ-ಭಾಷ್ಯೋದಾಹೃತ (೩/೪/೩೮) ಋಙ್ಮಂತ್ರವನ್ನು (ಋ ೬/೪೭/೧೬) ಉದಹರಿಸಿದ್ದಾರೆ. "ಗುರುಸಾರ್ವಭೌಮ ಪತ್ರಿಕೆಯ ವ್ಯಾಖ್ಯಾನ"ದಲ್ಲಿಯೂ ಮ|| ಮ|| ಲ. ನಾ. ಉಪಾಧ್ಯಾಯರೂ ಈ ಮಂತ್ರವನ್ನೇ ಹೇಳಿ ವಿವರಿಸಿದ್ದಾರೆ. ಆ ಋಙ್ಮಂತ್ರದ ಪಾಠವು ಹೀಗಿದೆ—ಶೃಣ್ವೇ ವೀರ ಉಗ್ರಮುಗ್ರಂ ದಮಾಯನ್ನನ್ಯಮನ್ಯಮತಿ ನೇನೀಯಮಾನಃ । ಏಧಮಾನದ್ವಿಳುಭಯಸ್ಯ ರಾಜಾ ಚೋಷ್ಕೂಯತೇ ವಿಶ ಇಂದ್ರೋ ಮನುಷ್ಯಾನ್ ||—ಇದರ ಅರ್ಥ. ವೀರಃ–ಸಮರ್ಥನಾದ ನರಸಿಂಹನು ಅಥವಾ ನಾರಾಯಣನು ; ಉಗ್ರಂ-ಉಗ್ರಂ–ಲೋಕೋಪದ್ರವ ಮಾಡುವುದರಿಂದ ಕ್ರೂರರಾದ ಸಕಲ ದೈತ್ಯ-ರನ್ನೂ, ದಮಾಯನ್–ದಮನಮಾಡುತ್ತಾ ಅಂಧಂತಮಸ್ಸಿನಲ್ಲಿ ಹಾಕುವ-ನೆಂದೂ (ಹಾಗೆ ದಮನ ಮಾಡುವುದು ಬಹುದೀರ್ಘಕಾಲವೆಂದು ಸೂಚಿಸು-ವುದಕ್ಕಾಗಿ ದಮಾಯನ್ ಎಂದು ಸಂಹಿತಾಪಾಠದಲ್ಲಿ ದೀರ್ಘವಾಗಿದೆಯೆಂದು ವಾದಿರಾಜರು ಭಾವಪ್ರಕಾಶಿಕಾದಲ್ಲಿ ತೋರಿಸಿಕೊಡುತ್ತಾರೆ), ಅನ್ಯಂ ಅನ್ಯಂ–ಅದಕ್ಕೆ ವಿರುದ್ಧವಾಗಿ ಶಾಂತರಾದ ದೇವತೆಗಳನ್ನೂ ಸಜ್ಜನರನ್ನೂ ಅತಿ–ಸಂಸಾರವನ್ನು ದಾಟಿಸಿ, ನೇನೀಯಮಾನಃ–ತನ್ನ ಲೋಕಕ್ಕೆ (ವೈಕುಂಠಕ್ಕೆ)

ಒಯ್ಯುತಕ್ಕವನೆಂದೂ, ಶೃಣ್ವೇ–ನಾನು ಕೇಳಿದೆನು (ಅಥ–ಹೀಗೆ ಕೇಳಲ್ಪಡು-ತ್ತದೆ.) ಏಧಮಾನದ್ವಿಟ್–ತನ್ನ ಯೋಗ್ಯತೆ ಮೀರಿ ಮಾಡುವುದನ್ನು ಸಹಿಸದ ಅವನು, ಉಭಯಸ್ಯ–ದೇವ-ದಾನವರಿಬ್ಬರಿಗೂ, ರಾಜಾ–ಒಡೆಯ-ನಾದ, ಇಂದ್ರಃ–ಪರಮೇಶ್ವರನು, ವಿಶಃ–(ಸ್ವೋದರಪೂರಣಮಾರ್ಗಮೇವ ವಿಶಂತೀತಿ, ವಾ ಉಭಯಪಕ್ಷಮಪಿ ವಿಶಂತೀತಿ ವಾ ವಿಶಃ)–ಉದರಂಭರಣದಲ್ಲೇ ಆಸಕ್ತರಾದ ಮತ್ತು ದೇವ-ದಾನವ ಎರಡೂ ಪಕ್ಷಕ್ಕೂ ಸೇರುವ, ಮನುಷ್ಯಾನ್–ಮಧ್ಯಮವರ್ಗದವರನ್ನು, ಚೋಷ್ಕೂಯತೇ (ಚುಕೂ ಪರಿವರ್ತನೇ ಎಂಬ ಧಾತುವಿನ ರೂಪ)–ಸ್ವರೂಪಭೂತವಾದ ಸುಖ-ದುಃಖ-ಗಳ ಮಿಶ್ರಣವೆಂಬ ಸಂಸಾರದಲ್ಲೇ ಸುತ್ತಾಡಿಸುತ್ತಾನೆ. ಭಾವಾರ್ಥ-ವೇನೆಂದರೆ—ಶ್ರೀವಿಷ್ಣು ಮಹಾಸಮರ್ಥ, ಸಕಲಕ್ಕೂ ಒಡೆಯ, ಅವನು ಲೋಕಕಂಟಕರಾದ ದೈತ್ಯರನ್ನು ದಂಡಿಸಿ ಅಂಧಂತಮಸ್ಸಿಗೆ ಹಾಕುತ್ತಾನೆ. ಅದಕ್ಕೆ ಪ್ರತಿಯಾಗಿ ಶಾಂತಸ್ವಭಾವದವರೂ ವಿಷ್ಣುಭಕ್ತರೂ ಆದ ಬ್ರಹ್ಮಾದಿ-ಸಜ್ಜನರನ್ನು ಸಂಸಾರದಿಂದ ಪಾರು ಮಾಡಿ ತನ್ನ ಲೋಕಕ್ಕೆ ಒಯ್ಯುತ್ತಾನೆ. ಯಾರೇ ಆಗಲಿ ತನ್ನ ಯೋಗ್ಯತೆಗೆ ಮೀರಿದ ಕೆಲಸ ಮಾಡಿದರೆ ಇವನು ಸರ್ವಥಾ ಸಹಿಸಲಾರ. (ಅವರು ಭಕ್ತರೇ ಆದರೂ ಅವರಿಗೆ ದಂಡಿಸದೇ ಬಿಡುವುದಿಲ್ಲ. ಬಲಿಚಕ್ರವರ್ತಿ ಯೋಗ್ಯತೆ ಮೀರಿ ಯಾಗ ಮಾಡಿದ್ದರಿಂದ ಅವನನ್ನು ಪಾತಾಳಕ್ಕೆ ತಳ್ಳಿಬಿಟ್ಟನು. ಕಾಳಿಂಗನು ಗರುಡನನ್ನೂ ಎದುರಿಸಿ ನಿಂತಿದ್ದರಿಂದ ಅವನನ್ನು ತುಳಿದು ಆ ಸ್ಥಳದಿಂದ ಓಡಿಸಿಬಿಟ್ಟನು.) ಮಧ್ಯಮ-ವರ್ಗಕ್ಕೆ ಸೇರಿದ ಮನುಷ್ಯರು ದೃಢವಾಗಿ ಯಾವ ಪಕ್ಷವನ್ನೂ ಹಿಡಿಯದೆ ಎರಡೂ ಪಕ್ಷಕ್ಕೆ ಸೇರಿ ಮಧ್ಯಮಮಾರ್ಗವನ್ನೇ ಅನುಸರಿಸುತ್ತಾ ಹೊಟ್ಟೆ ತುಂಬಿಕೊಳ್ಳುವುದರಲ್ಲೇ ಆಸಕ್ತರಾಗಿರುವುದರಿಂದ ಅವರನ್ನು ಸಂಸಾರದಲ್ಲೇ ಸುತ್ತಾಡಿಸುತ್ತಾ ಸುಖ-ದುಃಖಗಳೆರಡಕ್ಕೂ ಭಾಗಿಗಳಾಗುವಂತೆ ಮಾಡು-ತ್ತಾನೆ. ಹೀಗೆ ಈ ಋಙ್ಮಂತ್ರವು ಹರಿವಾಯುಗಳೇ ತ್ರಿವಿಧಜೀವರಿಗೂ ಅವರವರ ಸಾಧನೆಗಳಿಗೆ ತಕ್ಕಂತೆ ಫಲಗಳನ್ನು ಕೊಡುತ್ತಾರೆಂಬುದನ್ನು ಸ್ಪಷ್ಟವಾಗಿ ಸಿದ್ಧಪಡಿಸುತ್ತಾ ಈ ಶ್ಲೋಕದಲ್ಲೇ ನಿರೂಪಿತವಾದ ವಿಷಯಗಳಿಗೆ ಪರಿಪೋಷಕವಾಗಿದೆ.

**197. ಇತಿಹಾಸಾದಿ ಚ ಎಂಬುದರ ವಿವರಣೆ**—ಇತಿಹಾಸ(ಮಹಾಭಾರತ, ಮೂಲರಾಮಾಯಣ) ಪುರಾಣಗಳು ಮೊದಲಾದ ಶಾಸ್ತ್ರಗ್ರಂಥಗಳಲ್ಲೂ ಈ ವಿಷಯ ಹೇಳಲ್ಪಟ್ಟಿದೆ. ಕ.ಕ. ಮತ್ತು ಛ. ಟೀಕಾಗಳು ತಾತ್ಪರ್ಯನಿರ್ಣಯದಲ್ಲಿ (೨/೧೫೭) ಉದಹರಿಸಿರುವ ಮಹಾಭಾರತದ ಈ ವಾಕ್ಯವನ್ನು ಪ್ರಮಾಣವಾಗಿ ಹೇಳಿದ್ದಾರೆ—

ಧರ್ಮಶ್ಚಾರ್ಥಶ್ಚ ಕಾಮಶ್ಚ ಮೋಕ್ಷಶ್ಚೈವ ಯಶೋ ಧ್ರುವಮ್ ।
ತ್ವದಾಯತ್ತಮಿದಂ ಸರ್ವಂ ಸರ್ವಲೋಕಸ್ಯ ಭಾರತ ॥

ಇದು ಧರ್ಮರಾಯ ಭೀಮಸೇನನಿಗೆ ಹೇಳಿದ ಮಾತು. "ಸಕಲ ಜನರ ಸಮಸ್ತವಾದ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷವೆಂಬ ಚತುರ್ವಿಧ ಪುರುಷಾರ್ಥಗಳೂ ಹಾಗೂ ಸ್ಥಿರವಾದ ಯಶಸ್ಸು ಎಲ್ಲವೂ ಹೇ ಭೀಮಸೇನ ! ನಿನ್ನ ಅಧೀನವಾಗಿದೆ" ಎಂದು ಹೇಳಿದ್ದರಿಂದ ಮೋಕ್ಷವೂ ಸಹ ವಾಯುದೇವರ ಅಧೀನವೆಂದು ಭಾರತ ಹೇಳುತ್ತದೆ. 'ಗುರುಸಾರ್ವಭೌಮ' ಪತ್ರಿಕೆಯಲ್ಲಿ ಪ್ರಕಟಿಸಿದ ವ್ಯಾಖ್ಯಾನದಲ್ಲಿ ಸಕಲ ದೇವತೆಗಳೂ ಮುಚುಕುಂದನಿಗೆ ಹೇಳಿದ ಮಾತನ್ನು ಉದಹರಿಸಿದ್ದಾರೆ (ಭಾಗವತ ೧೦ ಸ್ಕಂಧ)—

ವರಂ ವರಯ ಭದ್ರಂ ತೇ ಋತೇ ಕೈವಲ್ಯಮಾತ್ಮನಃ ।
ಏಕ ಏವೇಶ್ವರಸ್ತಸ್ಯ ಭಗವಾನ್ ವಿಷ್ಣುರವ್ಯಯಃ ॥

"ಹೇ ಮುಚುಕುಂದ, ನಿನಗೆ ಏನು ವರ ಬೇಕಾದರೂ ನಾವು ಕೊಡಬಲ್ಲೆವು. ಆದರೆ ಮೋಕ್ಷವೊಂದನ್ನು ಮಾತ್ರ ಕೊಡಲಾರೆವು. ಅದೊಂದನ್ನು ಬಿಟ್ಟು ಬೇರೆ ಏನು ಬೇಕಾದರೂ ಕೇಳಿಕೋ, ಕೊಡುವೆವು. ಮೋಕ್ಷ ಒಂದಕ್ಕೆ ಮಾತ್ರ ಷಡ್ಗುಣಪೂರ್ಣನಾದ ಆ ವಿಷ್ಣು ಒಬ್ಬನೇ ಒಡೆಯ" ಎಂದು ಹೇಳುತ್ತಾರೆ. ಇದರಿಂದ ಮೋಕ್ಷವನ್ನು ಕೊಡುವ ಮುಖ್ಯ ಅಧಿಕಾರ ಶ್ರೀ ವಿಷ್ಣುವೊಬ್ಬನಿಗೇ ಇದೆಯೆಂದೂ, ವಿಷ್ಣುವಿನ ಆಜ್ಞೆಯಿಂದ ವಾಯುದೇವರು ಕೊಡಿಸತಕ್ಕವರೆಂದೂ ಹೇಳಿದಂತಾಯಿತು. ಇವೇ ಮೊದಲಾದ ಅನೇಕ ಪ್ರಮಾಣಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಪಂಡಿತಾಚಾರ್ಯರು **ಶ್ರುತಿಶತಮಿತಿಹಾಸಾದಿ ಚಾಕರ್ಣಯಾಮಃ** ಎಂದು ಹೇಳಿದ್ದಾರೆ.

**198. ಹರಿವಾಯು ಉಭಯಪರವಾಗಿ ಭಾವಾರ್ಥ—** (ತ್ರಿವಿಧ ಜೀವರಿಗೆ ತ್ರಿವಿಧಫಲ–ಉಪಸಂಹಾರ) ಇಡೀ ಜೀವಕೋಟಿಯಲ್ಲಿ, ಬ್ರಹ್ಮದೇವರೊಬ್ಬರನ್ನು ಬಿಟ್ಟರೆ, ದ್ವಾತ್ರಿಂಶಲ್ಲಕ್ಷಣಗಳೂ ಗುರುಗಳಲ್ಲಿರ-ಬೇಕಾದ ಸಮಗ್ರಲಕ್ಷಣಗಳೂ ಒಬ್ಬರಲ್ಲೇ ಇರುವ ಗುರುಗಳೆಂದರೆ ವಾಯು-ದೇವರೊಬ್ಬರೇ. ಆ ವಾಯುದೇವರಿಗೂ ಗುರುವಾದ ಶ್ರೀವಿಷ್ಣುವಂತೂ ಅದಕ್ಕೂ ಹೆಚ್ಚು ಲಕ್ಷಣಗಳಿಂದಲೂ ಭರಿತನಾದ್ದರಿಂದ ಜಗತ್ತಿಗೇ ಆದಿಗುರು. ಈ ಇಬ್ಬರೂ ಅನುಗ್ರಹ ಮಾಡದಿದ್ದರೆ ಯಾರಿಗೂ ಯಾವ ವಿದ್ಯೆಯೂ ಫಲಿಸಲಾರದು. ಆದಕಾರಣ ಶ್ರೀಹರಿ-ವಾಯುಗಳಿಬ್ಬರೂ ಗುರುತ್ವೇನ ಮೊಟ್ಟಮೊದಲು ವಂದ್ಯರೂ ಮಾನ್ಯರೂ ಆಗಿದ್ದಾರೆ.

ಜೀವರು ಸ್ವಭಾವದಿಂದಲೇ ಮೂರು ವಿಧವಾದ ಪ್ರಕೃತಿ (ಗುಣ) ಉಳ್ಳವರಾಗಿದ್ದಾರೆ. ಅವರ ಈ ಸ್ವಭಾವವು ಅನಾದಿನಿತ್ಯವಾದುದಲ್ಲದೆ ಯಾರಿಂದಲೂ ವ್ಯತ್ಯಾಸ ಮಾಡಲು ಸಾಧ್ಯವಿಲ್ಲವಾದ ಕಾರಣ ಶ್ರೀಹರಿ-ವಾಯುಗಳು ಅವರವರ ಸ್ವಭಾವಗಳಿಗೆ ಅನುಗುಣವಾಗಿಯೇ ಅವರಿಂದ ಸಾಧನ ಮಾಡಿಸಿ ಅವರ ಸಾಧನವು ಪರಿಪೂರ್ಣವಾದ ಬಳಿಕ ಅವರವರಿಗೆ ಅವರವರ ಸಾಧನೆಗಳಿಗೆ ತಕ್ಕ ಗತಿಯನ್ನೇ ಕೊಡುತ್ತಾರೆ.

ತ್ರಿವಿಧ ಜೀವರಲ್ಲಿ ಉತ್ತಮ ವರ್ಗಕ್ಕೆ ಸೇರಿದ ಮನುಷ್ಯೋತ್ತಮರೂ ಋಷಿಗಳೂ ದೇವತೆಗಳೂ ವೇದಾದಿಶಾಸ್ತ್ರಗಳಲ್ಲಿ ನಂಬಿಕೆಯುಳ್ಳವರಾಗಿ ಶಾಸ್ತ್ರಾಧ್ಯಯನ ಮಾಡಿ ಶ್ರವಣಮನನನಿಧಿಧ್ಯಾಸನಾದಿಸಾಧನೆಗಳಿಂದ ಹರಿ-ಗುರುಭಕ್ತಿಯನ್ನು ಮಾಡುತ್ತಾ ಸದಾಚಾರಸಂಪನ್ನರಾಗಿ ಶಮ-ದಮಾದಿ ಗುಣಗಳನ್ನು ಅಭ್ಯಾಸಮಾಡಿ ಹೆಚ್ಚಿಸಿಕೊಳ್ಳುವುದರಲ್ಲೇ ನಿರತರಾಗಿರುವರು. ಈ ಪ್ರಕಾರ ಅಧಿಕಾರ ಸಂಪತ್ತನ್ನು ಪಡೆದು ಪರೋಕ್ಷವಾಗಿ ತತ್ತ್ವವನ್ನು ತಿಳಿದುಕೊಂಡ ಜನರಿಗೆ ಶ್ರೀಹರಿವಾಯುಗಳು ಗುರುಮುಖಾಂತರ ಜ್ಞಾನೋ-ಪದೇಶ ಮಾಡಿಸಿ ಅವರ ಜ್ಞಾನ–ಭಕ್ತಿ–ವೈರಾಗ್ಯಗಳು ಹೆಚ್ಚಿ ಪರಿಪಕ್ವವಾಗು-ವಂತೆ ಮಾಡಿ ಅವರಿಗೆ ಅಪರೋಕ್ಷಜ್ಞಾನಲಾಭವಾಗುವಂತೆ ಅನುಗ್ರಹ ಮಾಡುವರು. ಅಪರೋಕ್ಷಜ್ಞಾನವಾದ ಮೇಲೂ ಸಹ ಬಿಂಬಾಪರೋಕ್ಷಕ್ಕೆ

ಬೇಕಾದ ಸಾಧನಗಳನ್ನು (ಜನ್ಮಜನ್ಮಾಂತರಗಳಲ್ಲಿ) ಒದಗಿಸಿ ವಿಷ್ಣುವಿನ ಅತ್ಯರ್ಥಪ್ರಸಾದಕ್ಕೆ ಭಾಗಿಗಳಾಗುವಂತೆ ಮಾಡುವರು. ವಿಷ್ಣುವಿನ ಅತ್ಯರ್ಥ-ಪ್ರಸಾದದ ಫಲವಾಗಿ ಅವರ ಪ್ರಾರಬ್ಧಕರ್ಮವೆಲ್ಲ ಕಳೆದ ಬಳಿಕ ಸಂಸಾರವನ್ನು ದಾಟಿಸಿ ಲಿಂಗಶರೀರ ಭಂಗಮಾಡಿಸಿ ಅವರನ್ನು ಮುಕ್ತಿಗೆ ಒಯ್ಯುವರು. ಆ ಮುಕ್ತಿಯಲ್ಲಿ ಅವರವರ ತಾರತಮ್ಯಾನುಸಾರ ಅವರವರು ಮಾಡಿದ ಸಾಧನ-ಗಳಿಗೆ ಅನುಗುಣವಾಗಿ ಪರಿಪೂರ್ಣವಾದ ಶಾಶ್ವತಸುಖವು ದೊರಕುವಂತೆ ಮಾಡಿ ಅನಂತಕಾಲದಲ್ಲಿ ಸುಖಿಗಳಾಗಿರುವಂತೆ ಮಾಡುವರು.

ಇನ್ನು ಮಿಶ್ರಬುದ್ಧಿಯುಳ್ಳ ನಿತ್ಯಸಂಸಾರಿಗಳಲ್ಲಿ ಪುರಂಜನನೆಂಬುವನೇ ಸರ್ವಶ್ರೇಷ್ಠ, ಮಧ್ಯಮ ಮನುಷ್ಯರು ಆ ವರ್ಗದಲ್ಲಿ ಎಲ್ಲರಿಗಿಂತ ಅಧಮರು. ಇವರೆಲ್ಲರ ಸ್ವರೂಪವೇ ಸುಖ-ದುಃಖ ಮಿಶ್ರಿತವಾಗಿರುತ್ತದೆ. ಅದರಿಂದ ಇವರಿಗೆ ಉತ್ತಮಜೀವಿಗಳಿಗೆ ಬರುವಂತೆ ವೇದಶಾಸ್ತ್ರಾದಿಗಳಲ್ಲಿ ದೃಢ-ವಿಶ್ವಾಸವೂ ಹುಟ್ಟುವುದಿಲ್ಲ; ಅಥವಾ ಅಧಮ ಜೀವಿಗಳಿಗೆ ಬರುವಂತೆ ಅವುಗಳಲ್ಲಿ ದ್ವೇಷಬುದ್ಧಿಯೂ ಹುಟ್ಟುವುದಿಲ್ಲ. ಇದರಿಂದ ಇವರಿಗೆ ಅತ್ತ ಮೋಕ್ಷವೂ ಇಲ್ಲ, ಇತ್ತ ಅಂಧಂತಮಸ್ಸೂ ಇಲ್ಲ, ಇವರು ಸ್ವರ್ಗ-ನರಕ-ಭೂಮಿಗಳಲ್ಲೇ ಸುತ್ತುತ್ತಾ ಸುಖ-ದುಃಖಗಳೆರಡಕ್ಕೂ ಭಾಗಿಗಳಾಗುತ್ತಿರು-ತ್ತಾರೆ ಎಂಬುದು ಸಾಮಾನ್ಯ ವಿಚಾರ. ಅವರಿಗೆ ಲಿಂಗದೇಹಭಂಗವೂ ಇಲ್ಲ, ಪ್ರಸಿದ್ಧವಾದ ಸ್ವರ್ಗ-ನರಕ-ಭೂಮಿಗಳನ್ನು ಬಿಟ್ಟು ಬೇರೆ ಲೋಕವೂ ಇಲ್ಲ, ಎಂಬುದು ಒಂದು ಮತ. ಇದಕ್ಕೆ ವಿರುದ್ಧವಾಗಿ ವಾದಿರಾಜಸ್ವಾಮಿಗಳೇ ಮೊದಲಾದ ಕೆಲವರು ಹೀಗೆ ಹೇಳುವರು—'ನಿತ್ಯಸಂಸಾರಿಣಾಮಂಗಂ ಹುಂಕಾರೇಣ ವಿನಶ್ಯತಿ'—ನಿತ್ಯ ಸಂಸಾರಿಗಳ ಲಿಂಗದೇಹವು ವಾಯುದೇವರ ಹುಂಕಾರ ಗರ್ಜನೆಯಿಂದ ಬಿದ್ದುಹೋಗುವುದೆಂಬ ಪ್ರಮಾಣವಿರುವುದರಿಂದ ಅವರಿಗೂ ಲಿಂಗದೇಹಭಂಗವುಂಟು. ಅನಂತರ ಅವರು (ನಿತ್ಯಸಂಸಾರಿಗಳು) ಸಾಂತಾನಿಕವೆಂಬ ಅವರಿಗೇ ಮೀಸಲಾಗಿರುವ ಲೋಕಕ್ಕೆ ಹೋಗುವರು. ಅಲ್ಲಿಯೇ ಸ್ವರ್ಗ-ನರಕ-ಭೂಮಿಗಳೆಂಬ ಪ್ರತ್ಯೇಕ ಮೂರು ಲೋಕಗಳಿವೆ. ಈ ಲೋಕಗಳಲ್ಲಿ ಅವರಿಗೆ ದುಃಖಮಿಶ್ರಿತವಾದ ಸುಖವು ಯಾವಾಗಲೂ ಬರುತ್ತಿರುತ್ತದೆ. ಸ್ವರ್ಗದಲ್ಲಿದ್ದಾಗ ಅಧಿಕ ಸುಖವೂ ನರಕದಲ್ಲಿದ್ದಾಗ

ಅಧಿಕ ದುಃಖವೂ ಅನುಭವಕ್ಕೆ ಬರುತ್ತಿರುತ್ತದೆ. (ಗುರುಸಾರ್ವಭೌಮ-ವ್ಯಾಖ್ಯಾನದ ಆಧಾರದ ಮೇಲೆ.)

ಕಡೆಯದಾಗಿ ಅಧಮವರ್ಗಕ್ಕೆ ಸೇರಿದ ಜೀವರನ್ನು ತಮೋಯೋಗ್ಯ-ರೆಂದು ಕರೆಯುವುದು ವಾಡಿಕೆ. ಇವರಲ್ಲೆಲ್ಲಾ ಕಲಿಯೇ ಸರ್ವಶ್ರೇಷ್ಠ. ಮನುಷ್ಯಾಧಮರು ಅವರಲ್ಲಿ ಅತ್ಯಂತ ಕೆಳಮಟ್ಟದವರು. ಇವರು ಸ್ವಭಾವ-ದಿಂದಲೇ ಹರಿವಾಯುಗಳ ದ್ವೇಷಿಗಳು. ವೇದಶಾಸ್ತ್ರಗಳಲ್ಲಿ ವಿಶ್ವಾಸ-ವಿಲ್ಲದವರು, ಅಥವಾ ವೇದಶಾಸ್ತ್ರಗಳನ್ನು ಓದಿದರೂ ಅದಕ್ಕೆ ಏನಾದರೊಂದು ರೀತಿಯಿಂದ ಅಯಥಾರ್ಥವೇ ಇವರಿಗೆ ಭಾಸವಾಗುವುದೇ ಹೊರತು ಯಥಾರ್ಥವು ಭಾಸವಾಗುವುದಿಲ್ಲ. ಹೀಗೆ ಇವರು ಉದ್ದಕ್ಕೂ ನಾನಾ ಬಗೆಯಿಂದ ಹರಿ-ಗುರುದ್ವೇಷವನ್ನು ಸಾಧಿಸುವರಲ್ಲದೆ ವಿಷ್ಣು-ವೈಷ್ಣವರಲ್ಲಿ ದ್ವೇಷವನ್ನೂ ಮದ-ಮಾತ್ಸರ್ಯಾದಿಗಳನ್ನೇ ಮಾಡಿ ತಮ್ಮ ಸಾಧನೆಯನ್ನು ಪರಿಪಕ್ವ ಮಾಡಿಕೊಳ್ಳುವರು. ಇವರಲ್ಲೂ ಸಹ ತಾರತಮ್ಯವಿರುವುದರಿಂದ ಅವರವರು ತಮ್ಮ ತಮ್ಮ ಯೋಗ್ಯತಾನುಸಾರ ಹರಿ-ಗುರುದ್ವೇಷ, ವಿಷ್ಣು-ವೈಷ್ಣವರ ನಿಂದೆ, ವೇದಶಾಸ್ತ್ರಗಳಲ್ಲಿ ಅವಿಶ್ವಾಸ ಅಥವಾ ಅಯಥಾರ್ಥ ಕಲ್ಪನೆ ಇತ್ಯಾದಿ ಸಾಧನಗಳನ್ನು ಮಾಡಿಕೊಂಡು ಕೊನೆಗೆ ಲಿಂಗಶರೀರಭಂಗಾ-ನಂತರ ಅಂಧಂತಮಸ್ಸೆಂಬ ನರಕದಲ್ಲಿ ಬಿದ್ದು ತಮ್ಮ ತಮ್ಮ ಸಾಧನೆಗಳಿಗೆ ತಕ್ಕಂತೆ ದುಃಖವನ್ನು ಅನುಭವಿಸುವರು. ಎಲ್ಲರಿಗಿಂತಲೂ ಕಲಿಯು ಅಧಮಾಧಮನಾದ್ದರಿಂದ ಎಲ್ಲರಿಗಿಂತಲೂ ಅತ್ಯಂತ ಉಗ್ರವಾದ ಕಲ್ಪನಾತೀತ-ವಾದ ಮಹದ್ದುಃಖವನ್ನು ಅನುಭವಿಸುವನು, ಮಿಕ್ಕವರು ತಮ್ಮ ಯೋಗ್ಯತೆಗೆ ತಕ್ಕಂತೆ ಕಡುದುಃಖವನ್ನು ಶಾಶ್ವತವಾಗಿ ಅನುಭವಿಸುವರು.

ಈ ಪ್ರಕಾರ ವಾಯುದೇವರು ಶ್ರೀಹರಿಯ ಆಜ್ಞೆಯ ಮೇರೆಗೆ ತ್ರಿವಿಧ ಜೀವರಿಂದ ಅವರವರ ಸ್ವರೂಪಸಹಜವಾದ ಸಾಧನೆಗಳನ್ನು ಮಾಡಿಸಿ ಸಾಧನ ಸಂಪೂರ್ತಿ ಮಾಡಿಸಿ ಅವರವರ ಸಾಧನೆಗಳಿಗೆ ತಕ್ಕಂತೆ ಕೇವಲ ಸುಖವನ್ನೋ ಕೇವಲ ದುಃಖವನ್ನೋ ಅಥವಾ ಸುಖ-ದುಃಖಗಳೆರಡೂ ಮಿಶ್ರಿತವಾದ ಅನುಭವವನ್ನೋ ಆಯಾಯ ಜೀವರಿಗೆ ಕೊಡುತ್ತಾ ಶ್ರೀಹರಿ-ಸೇವೆ ಮಾಡುತ್ತಿರುತ್ತಾ ನಿರ್ಲಿಪ್ತರಾಗಿ ನಿಷ್ಕಳಂಕರಾಗಿರುತ್ತಾರೆಂದು ಭಾವ.

ಇದನ್ನೇ ಜಗನ್ನಾಥದಾಸರು 'ಪ್ರಾಣದೇವನು ತ್ರಿವಿಧರೊಳಗೆ ಪ್ರ । ವೀಣ ತಾನೆಂದೆನಿಸಿ ಅಧಿಕಾ । ರಾನುಸಾರದಿ ಕರ್ಮಗಳ ತಾ ಮಾಡಿಸುವ ॥ ಜ್ಞಾನ-ಭಕ್ತಿ ಸುರರ್ಗೆ, ಮಿಶ್ರ । ಜ್ಞಾನ ಮಧ್ಯಮ ಜೀವರಿಗೆ, ಅ । ಜ್ಞಾನ ಮೋಹ ದ್ವೇಷಗಳ ದೈತ್ಯರಿಗೆ ಕೊಡುತಿಪ್ಪಾ ॥' ಎಂಬ ಹರಿಕಥಾಮೃತಸಾರದ (೨೯/೧೫) ಪದ್ಯದಲ್ಲೂ ಹೇಳಿದ್ದಾರೆ.

ಹಾಗೆಯೇ ಆಯಾ ಜೀವರಿಗೆ ಅವರವರ ಸಾಧನಾನುಸಾರ ಫಲ ಕೊಡುತ್ತಿರುವುದರಿಂದ ಶ್ರೀಹರಿಯಲ್ಲೂ ವೈಷಮ್ಯ-ನೈರ್ಘೃಣ್ಯಾದಿ ಯಾವ ದೋಷಲೇಶವೂ ಇಲ್ಲವೆಂದೂ ತಿಳಿಯಬೇಕು.



ಹರಿವಾಯುಸ್ತುತೇಸ್ತಾವ—ದಾದ್ಯಶ್ಲೋಕಾಷ್ಟಕದ್ವಯಮ್ ।
ತತ್ಪಾದಪಂಕಜರಜೋ—ಮಹಿಮಾಪ್ರತಿಪಾದಕಮ್ ॥ ೧ ॥

ತದ್ಭಕ್ತ–ದ್ವೇಷಿಣಾಂ ನಿತ್ಯಂ ಸುಖದುಃಖಗತಿಪ್ರದಮ್ ।
ವ್ಯಾಖ್ಯಾತಂ ಹರಿಭಕ್ತ್ಯಾದಿ—ದಾರ್ಢ್ಯಾರ್ಥಂ ನಾತಿವಿಸ್ತರಮ್ ॥ ೨ ॥

ವಾಕ್ಪುಷ್ಪೈರ್ಗುಂಫಿತಾ ಮಾಲಾ ಪಾದಯೋರರ್ಪ್ಯತೇ ಭೃಶಮ್ ।
ಮಧ್ವೇಶೋ ನೃಹರಿಃ ಸ್ವಾಮೀ ಪ್ರೀಯತಾಂ ಕಮಲಾಪತಿಃ ॥ ೩ ॥

ಇಲ್ಲಿಗೆ ಪೀಠಿಕಾ ಭಾಗದ ವ್ಯಾಖ್ಯಾನ ಮುಗಿಯಿತು.

—0—

## ವಾಯುಸ್ತುತಿಯ ಎರಡನೇ ವರ್ಗ

೧೭ರಿಂದ ೨೧ರ ಪೂರ್ತಿ ಐದು ಶ್ಲೋಕಗಳು

## ಹನುಮದವತಾರದ ಮಹಿಮೆ

### ಹದಿನೇಳನೇ ಶ್ಲೋಕ. ಹನೂಮದ್ವಂದನೆ

ಮಂಗಳಾಚರಣೆ

ಹರಿಃ ಓಂ ॥ ರಾಮಾಯ ಶಾಶ್ವತಸುವಿಸ್ತೃತಷಡ್ಗುಣಾಯ
ಸರ್ವೇಶ್ವರಾಯ ಹನುಮತ್ಪ್ರಿಯಸತ್ತಮಾಯ ।
ಮಾರೀಚ-ರಾವಣ-ಖರಾಧಿಕ-ದೈತ್ಯಹಂತ್ರೇ
ಸೀತಾಪ್ರಿಯಾಯ ವರದಾಯ ನಮೋ ನಮೋಸ್ತು ॥೧॥

ರಾಮಭಕ್ತಾಗ್ರಣೀರ್ಜ್ಞಾನೀ ಹನುಮಾನ್ ಮಾರುತಾತ್ಮಜಃ ।
ಬುದ್ಧಿಂ ದಿಶತು ಮೇ ದಿವ್ಯಾಂ ಶ್ಲೋಕಾರ್ಥಗ್ರಹಣೇಂಜಸಾ ॥೨॥

ವಾಯುನಾ ವಪುಷೇಽಧಾಯಿ ಪ್ರಥಮಂ ಹನುಮಾನಿತಿ ।
ತಸ್ಯ ರೂಪಸ್ಯ ಮಹಿಮಾ ವರ್ಣ್ಯತೇ ಶ್ಲೋಕಪಂಚಕೇ ॥ ೩ ॥



**199. ಅವತಾರಿಕೆ**—ಹಿಂದೆ 'ಅಸ್ಯಾವಿಷ್ಕರ್ತುಕಾಮಂ' ಎಂಬ ನಾಲ್ಕನೇ ಶ್ಲೋಕದಲ್ಲಿ **ಮಂತ್ರಸಿದ್ಧಂ ಮಾರುತಸ್ಯಾವತಾರಂ ಕೃತವತಃ** ಎಂಬ ಭಾಗಕ್ಕೆ ವ್ಯಾಖ್ಯಾನ ಮಾಡುವ ಸಂದರ್ಭದಲ್ಲಿ ವಾಯುದೇವರು ಭಗವತ್ಕಾರ್ಯಸಾಧನೆಗಾಗಿ ಹನುಮ ಭೀಮ ಮಧ್ವ ಎಂಬ ಮೂರು ಅವತಾರಗಳನ್ನು ವಹಿಸುತ್ತಾರೆಂಬ ಪ್ರಮೇಯವು ಋಗ್ವೇದದ ಬಳಿತ್ಥಾ ಸೂಕ್ತಾದಿ (ಋ. ೧/೧೪೧ ಸೂ.) ಶ್ರುತಿಗಳಲ್ಲಿ ಉಕ್ತವಾಗಿದೆಯೆಂದು

ಪ್ರಸಂಗವಶಾತ್ ತಿಳಿಸಲಾಗಿತ್ತು. ಸಮಯೋಚಿತವಾಗಿ ಆಗ ಪ್ರಸಕ್ತವಾಗಿದ್ದ ಪೀಠಿಕಾಭಾಗವು ಮುಗಿದ ಕಾರಣ ಈಗ ಮುಖ್ಯಗುರಿಯಾದ ಅವತಾರತ್ರಯದ ಮಹಿಮೆಯನ್ನೇ ವಿಸ್ತಾರವಾಗಿ ವರ್ಣಿಸಲು ಉಪಕ್ರಮಿಸಿದ ಶ್ರೀ ಪಂಡಿತಾಚಾರ್ಯರು 'ಪ್ರಥಮೋ ಹನುಮಾನ್ ನಾಮ' ಎಂಬ ಸ್ಮೃತಿವಾಕ್ಯದಂತೆ ಪ್ರಥಮಪ್ರಾಪ್ತವಾದ **ಹನುಮದವತಾರ**ದ ಮಹಿಮೆಯನ್ನು ಐದು ಶ್ಲೋಕಗಳಲ್ಲಿ ವರ್ಣಿಸುವರಾಗಿ ಆ ಅವತಾರದ ಹೆಸರನ್ನು ಕೀರ್ತನೆ ಮಾಡಿ ಭಕ್ತಿಪುರಸ್ಸರವಾಗಿ ಅವರಿಗೆ ವಂದಿಸುತ್ತಾರೆ. ಹಾಗೆಯೇ ವಾಯುದೇವರು ಈ ಹನುಮದವತಾರವನ್ನು ಯಾವ ಭಗವದವತಾರದ ಕಾರ್ಯಸಾಧನೆಗಾಗಿ ತಾಳಿದರೋ ಅಂಥಾ ಶ್ರೀಸೀತಾರಾಮಚಂದ್ರದೇವರ ಮಹಿಮೆಯನ್ನೂ ಕೂಡ ಈ ಶ್ಲೋಕಪಂಚಕದಲ್ಲೇ ಶ್ಲೇಷಾರ್ಥದಿಂದ ವರ್ಣಿಸುತ್ತಾ ಆ ಸ್ವಾಮಿಯನ್ನೂ ಸಹ 'ವಂದೇಽಹಂ—' ಎಂಬ ಶ್ಲೋಕದಿಂದಲೇ ವರ್ಣಿಸುತ್ತಾರೆ. (ಕಕ. ವಿ. ಛ.) ಇಲ್ಲಿಂದ ಮುಂದೆ ವಾಯುದೇವರು ಪ್ರಥಮಾವತಾರದಲ್ಲಿ ಮಾಡಿದ ಅದ್ಭುತ ವ್ಯಾಪಾರಗಳನ್ನು ಐದು ಶ್ಲೋಕಗಳಲ್ಲಿ ವರ್ಣಿಸುತ್ತಾರೆ. (ಪುರಾ.) ಈಗ ವಾಯುದೇವರ ಪ್ರಥಮಾವತಾರ ಹನುಮತ್ಸೇವ್ಯನಾದ ಶ್ರೀರಾಮರೂಪವನ್ನೂ ಹನುಮದವತಾರವನ್ನೂ ಶ್ಲೋಕಪಂಚಕದಿಂದ ವರ್ಣಿಸುತ್ತಾರೆ.

**ವಂದೇಽಹಂ ತಂ ಹನೂಮಾ—ನಿತಿ-ಮಹಿತ-ಮಹಾ-**
**ಪೌರುಷೋ ಬಾಹುಶಾಲೀ**
**ಖ್ಯಾತಸ್ತೇಽಗ್ರ್ಯೋಽವತಾರಃ ಸಹಿತ ಇಹ ಬಹು-**
**ಬ್ರಹ್ಮಚರ್ಯಾದಿಧರ್ಮೈಃ ।**
**ಸಸ್ನೇಹಾನಾಂ ಸಹಸ್ವಾ—ನಹರಹ—ರಹಿತಂ**
**ನಿರ್ದಹನ್ ದೇಹಭಾಜಾ(ಂ)-**
**ಮಂಹೋ (ಅಂಹೋ)ಮೋಹಾಪಹೋ ಯಃ**
**ಸ್ಪೃಹಯತಿ ಮಹತೀಂ ಭಕ್ತಿಮದ್ಯಾಪಿ ರಾಮೇ ॥೧೭॥**

**ಪದವಿಭಾಗ**—(ಉಭಯಪರವಾಗಿಯೂ ಪ್ರಾಯಶಃ ಒಂದೇ ರೀತಿ) ವಂದೇ, ಅಹಂ, ತಂ, ಹನೂಮಾನ್, ಇತಿ, ಮಹಿತಮಹಾಪೌರುಷಃ,

ಬಾಹುಶಾಲೀ, ಖ್ಯಾತಃ, ತೇ, ಅಗ್ರ್ಯಃ, ಅವತಾರಃ, ಸಹಿತಃ, ಇಹ, ಬಹು-ಬ್ರಹ್ಮಚರ್ಯಾದಿಧರ್ಮ್ಯೈಃ, ಸಸ್ನೇಹಾನಾಂ, ಸಹಸ್ವಾನ್, ಅಹರಹಃ, ಅಹಿತಂ, ನಿರ್ದಹನ್, ದೇಹಭಾಜಾಂ, ಅಂಹೋಮೋಹಾಪಹಃ, ಯಃ, ಸ್ಪೃಹಯತಿ, ಮಹತೀಂ, ಭಕ್ತಿಂ, ಅದ್ಯ, ಅಪಿ, ರಾಮೋ ॥

**200. ಶ್ಲೋಕದ ವಿಶ್ಲೇಷಣೆ**—(ರಾಮಪರವಾಗಿ) ಅದ್ಯಾಪಿ ಎಂಬಲ್ಲಿರುವ **ಅದ್ಯ** ಶಬ್ದವು ಅತ್ತುಂ ಯೋಗ್ಯಃ ಅದ್ಯಃ ಎಂಬ ಕೃತ್ಯ(ಕೃದಂತ) ರೂಪದ ಸಂಬೋಧನವೆಂದು ತಿಳಿಯಬೇಕು. 'ಅದ್ಯತೇಽತ್ತಿ ಚ ಭೂತಾನಿ' (ತೈ. ಉ. ೨/೨) ಎಂಬ ತೈತ್ತಿರೀಯೋಪನಿಷದ್ವಾಕ್ಯಕ್ಕೆ ಅರ್ಥ ಹೇಳುತ್ತಾ ಸೂತ್ರಭಾಷ್ಯದಲ್ಲಿ (೧/೧/೧೩ಸೂ.) ಶ್ರೀಮದಾಚಾರ್ಯರು 'ಉಪಜೀವ್ಯತ್ವ-ಮೇವಾದ್ಯತ್ವಂ' ಎಂದು ಹೇಳಿದ್ದಾರೆ. ಅದ್ಯತೇ ಎಂದರೆ ತಿನ್ನಲ್ಪಡು-ತ್ತಾನೆ ಎಂಬುದು ಪದದ ಅರ್ಥವಾದರೂ 'ಎಲ್ಲರಿಗೂ ದೇಹಧಾರಣಾದಿ-ಸಕಲಕ್ರಿಯೆಗಳಿಗೂ ಆಶ್ರಯನಾಗಿದ್ದಾನೆ' ಎಂಬುದೇ ಅದ್ಯ ಶಬ್ದದ ಅರ್ಥ-ವೆಂದು ವಿವರಿಸಿದ್ದಾರೆ. ಅದರಂತೆ ಅದ್ಯಃ ಎಂಬುದಕ್ಕೆ ವ್ಯಾಕರಣರೀತ್ಯಾ ತಿನ್ನಲ್ಪಡಲು ಯೋಗ್ಯನಾದವನು ಎಂದು ಅರ್ಥವಾದರೂ, ಇಲ್ಲಿ 'ಉಪಜೀವ್ಯ'–ಜೀವನಕ್ಕೆ ಆಧಾರಭೂತನಾದ ಎಂದೇ ಅರ್ಥ ಹೇಳಬೇಕು. ಸಂಬೋಧನಾರೂಪವಾದ್ದರಿಂದ **ಅದ್ಯ** ! ಎಂದರೆ ಎಲೈ ಸಕಲ ಪ್ರಾಣಿ-ಗಳಿಗೂ ಜೀವನಾಧಾರಭೂತನಾದ ಭಗವಂತನೇ ಎಂದು ಅರ್ಥವಾಗುತ್ತದೆ.

(ಹೇ) ಅದ್ಯ, ತೇ ಯಃ ಅಗ್ರ್ಯಃ ಅವತಾರಃ, ತಂ ಅಹಂ ವಂದೇ— ಎಂಬುದೇ ಪ್ರಧಾನವಾಕ್ಯ. ಇದಕ್ಕೆ 'ಹೇ ಸಕಲ ಜೀವಾಧಾರಭೂತನಾದ ಭಗವಂತ, ನಿನ್ನ (ಶ್ರೀರಾಮಚಂದ್ರನೆಂಬ) ಯಾವ ಮೊದಲನೆಯ (ಅಥವಾ ಶ್ರೇಷ್ಠವಾದ) ಅವತಾರವಿದೆಯೋ ಅದನ್ನು ನಾನು ವಂದಿಸುತ್ತೇನೆ—ಎಂದು ಅರ್ಥ. ಇದರಲ್ಲಿರುವ ಅಗ್ರ್ಯಃ ಅವತಾರಃ ಎಂಬುದಕ್ಕೆ ಮಿಕ್ಕ ಭಾಗವೆಲ್ಲವೂ ವಿಶೇಷಣಗಳು. ಹೇಗೆಂದರೆ 1. ಹನೂಮಾನ್, 2. ಮಹಿತಮಹಾಪೌರುಷಃ, 3. ಬಾಹುಶಾಲೀ, 4. ಬಹು....ಧರ್ಮ್ಯೈಃ ಸಹಿತಃ, 5. ಸಹಸ್ವಾನ್, 6. ಸಸ್ನೇಹಾನಾಂ ದೇಹಭಾಜಾಂ ಅಹಿತಂ ಅಹರಹಃ ನಿರ್ದಹನ್, 7. ಅಂಹೋಮೋಹಾಪಹಃ ಇತಿ ಇಹ ಖ್ಯಾತಃ, 8. (ದೇಹಭಾಜಾಂ) ರಾಮೋ-

ಮಹತೀಂ ಭಕ್ತಿಂ ಅಪಿ ಸ್ಪೃಹಯತಿ ॥ ಹೀಗೆ ಇಂಥಾ ಗುಣವಿಶಿಷ್ಟವಾದ ನಿಮ್ಮ ಶ್ರೀರಾಮಚಂದ್ರನೆಂಬ ಯಾವ ಅವತಾರವಿದೆಯೋ ಅದನ್ನು ನಾನು ವಂದಿಸುತ್ತೇನೆ ಎಂಬುದೇ ಶ್ಲೋಕಾರ್ಥ.

ಹನುಮತ್ಪರವಾಗಿ ಅರ್ಥಹೇಳುವಾಗ ನಾಲ್ಕೈದು ಪದಗಳ ಅನ್ವಯ ಕ್ರಮ ವ್ಯತ್ಯಾಸವಾಗುತ್ತದೆ. ಮಿಕ್ಕದ್ದೆಲ್ಲವೂ ಹಿಂದಿನಂತೆಯೇ. ಅದ್ಯಾಪಿ ಎಂಬಲ್ಲಿ ಅದ್ಯ ಅಪಿ ಎಂದೇ ಪದಚ್ಛೇದ. ಆದರೆ ಇಲ್ಲಿ **ಅದ್ಯ** ಎಂಬುದು ಅವ್ಯಯ; ಅದಕ್ಕೆ 'ಈಗ' ಎಂದು ಅರ್ಥ. ಈ ಪಕ್ಷದಲ್ಲಿ—ಯಃ ಇಹ ಹನುಮಾನ್ ಇತಿ ಖ್ಯಾತಃ ತೇ ಅಗ್ರ್ಯಃ ಅವತಾರಃ, ತಂ ಅಹಂ ವಂದೇ— ಎಂಬುದು ಪ್ರಧಾನವಾಕ್ಯ. ಅರ್ಥವೂ ಸುಲಭವಾಗಿದೆ:—ಜಗತ್ಪ್ರಸಿದ್ಧವಾದ ಹನುಮಂತನೆಂಬ ನಿಮ್ಮ ಪ್ರಥಮಾವತಾರವು ಯಾವುದಿದೆಯೋ ಅದನ್ನು ನಾನು ವಂದಿಸುತ್ತೇನೆ. ಈ ಅಗ್ರ್ಯಃ ಅವತಾರಃ ಎಂಬುದಕ್ಕೆ• 1. ಮಹಿತ-ಮಹಾಪೌರುಷಃ, 2. ಬಾಹುಶಾಲೀ, 3. ಬಹು....ಧರ್ಮೈಃ ಸಹಿತಃ, 4. ಸಹಸ್ವಾನ್, 5. ಸಸ್ನೇಹಾನಾಂ ದೇಹಭಾಜಾಂ ಅಹಿತಂ ಅಹರಹಃ ನಿರ್ದಹನ್, 6. ಅಂಹೋಮೋಹಾಪಹಃ, 7. (ಯಃ) ರಾಮೇ ಅದ್ಯಾಪಿ ಮಹತೀಂ ಭಕ್ತಿಂ ಸ್ಪೃಹಯತಿ—ಎಂದು ಏಳು ವಿಶೇಷಣಗಳು.

ಕೆಲವು ಪದಗಳಿಗೆ ಮಾತ್ರ ರಾಮಪರವಾಗಿ ಒಂದು ರೀತಿಯಾಗಿಯೂ ಹನುಮತ್ಪರವಾಗಿ ಇನ್ನೊಂದು ರೀತಿಯಾಗಿಯೂ ಅರ್ಥವ್ಯತ್ಯಾಸವಾಗುತ್ತದೆ. ಮಿಕ್ಕಪದಗಳಿಗೆಲ್ಲಾ ಉಭಯಪಕ್ಷದಲ್ಲೂ ಒಂದೇ ಅರ್ಥ. ಆದಕಾರಣ ಮೊದಲು ಅರ್ಥವ್ಯತ್ಯಾಸವಾಗುವ ಪದಗಳ ಅರ್ಥವನ್ನು ವಿವರಿಸಿ ಆಮೇಲೆ ಒಂದೇ ಅರ್ಥವಿರುವ ಪದಗಳನ್ನು ಅಥವಾ ವಿಶೇಷಣಗಳನ್ನು ವಿವರಿಸಿ ಕೊನೆಗೆ ಅನ್ವಯಾರ್ಥಕ್ಕೆ ಹೋಗೋಣ.

**201. ಕೆಲವು ಪದಗಳ ವಿವರಣೆ—೧. ಹನುಮಾನ್**— ಸಾಮಾನ್ಯವಾಗಿ ಹನು ಎಂದರೆ ದವಡೆಯು/ಕೆನ್ನೆಯು ಅಥವಾ ಕಪೋಲದ ಮೇಲ್ಭಾಗ, ಗಲ್ಲ ಎಂದರ್ಥ. 'ತನುಸ್ತನುರ್ಹನೂಶ್ಚೈವ' ಎಂದು ದ್ವಿರೂಪ ಕೋಶವಿರುವುದರಿಂದ ಹನು (ಹ್ರಸ್ವ ಉಕಾರ) ಹನೂ (ದೀರ್ಘ ಊಕಾರ) ಎಂಬ ಎರಡು ರೂಪಗಳೂ ಉಂಟು. ವಾಲ್ಮೀಕಿರಾಮಾಯಣದಲ್ಲಿ

'ಹನುಮಂತನು ಕೂಸಾಗಿದ್ದಾಗ ಸೂರ್ಯೋದಯವಾಗಲು ಸೂರ್ಯಬಿಂಬವನ್ನು ಹಣ್ಣೆಂದು ತಿಳಿದು ಅದನ್ನು ನುಂಗಲು ತೊಡಗಿದನು. ಅದನ್ನು ಕಂಡು ಇಂದ್ರನು ವಜ್ರಾಯುಧದಿಂದ ಆ ಕೂಸಿನ ಗಲ್ಲಕ್ಕೆ ಹೊಡೆದನೆಂದೂ ಅದರಿಂದ ಕೂಸಿನ ಗಲ್ಲಕ್ಕೆ ಪೆಟ್ಟು ಬಿತ್ತೆಂ'ದೂ ಕಥೆಯಿದೆ. ಈ ಕಥೆಯನ್ನೇ ಶ್ರೀಪಾದರಾಯರು 'ಮಧ್ವನಾಮ'ದಲ್ಲಿ ಹೀಗೆ ಸಂಗ್ರಹಿಸಿ ಹೇಳಿದ್ದಾರೆ—'ಪೋತಭಾವದಿ ತರಣಿಬಿಂಬಕ್ಕೆ ಲಂಘಿಸಿದ (ಈತಗೆಣೆಗಾಣೆ ಯಾರು) ಮೂಲೋಕದೊಳಗೆ ||' (ಪೋತಭಾವದಿ–ಹುಡುಗುತನದಿಂದ, ತರಣಿ–ಸೂರ್ಯ). ಈ ಕಥೆಯನ್ನು ಆಧರಿಸಿ ಆ ಮಗುವಿಗೆ ಹನುಃ ಅಸ್ಯಾಸ್ತೀತಿ ಹನುಮಾನ್–(ಏಟು ಬಿದ್ದ) ಗಲ್ಲವುಳ್ಳವನೆಂದು ಕೆಲವರು ವ್ಯುತ್ಪತ್ತಿ ಹೇಳುವರು. ಇದು ಗೌಣಾರ್ಥ.

ಆದರೆ ಅನೇಕ ಉಪನಿಷದ್ಭಾಷ್ಯಗಳಲ್ಲಿ ಶ್ರೀಮದಾಚಾರ್ಯರು ಉದ್ಧರಿಸಿರುವ **ಭಾವವೃತ್ತ**ವೆಂಬ ಗ್ರಂಥದಲ್ಲಿ **ಹನುಶಬ್ದೋ ಜ್ಞಾನವಾಚೀ** ಎಂದು ಹೇಳಿರುವುದರಿಂದ **ಹನು** (ಹನೂ) ಎಂದರೆ ಜ್ಞಾನವೆಂದೇ ಮುಖ್ಯಾರ್ಥ. 'ಹನ ಹಿಂಸಾಗತ್ಯೋಃ' ಎಂದು ಧಾತುಪಾಠವಿರುವುದರಿಂದ ಹನ ಎಂದರೆ (ಕೊಲ್ಲು, ಹೋಗು ಅಥವಾ) ತಿಳಿ ಎಂದರ್ಥವಾಗುತ್ತದೆ. ಅದರ ಮೇಲೆ ಉಣಾದಿ ಉ ಪ್ರತ್ಯಯವು ಬಂದು ಹನು (ದೀರ್ಘವಾದರೆ ಹನೂ) ಎಂದಾಗುತ್ತದೆ, ಹನುಃ (ಅಥವಾ ಹನೂಃ) ಅಸ್ಯಾಸ್ತೀತಿ ಹನು(ನೂ)-ಮಾನ್ ಎಂದಾಗಿದೆ. ಆದಕಾರಣ ಹನೂಮಾನ್ ಎಂದರೆ ಮಹಾಜ್ಞಾನಿ ಎಂದರ್ಥ. ಇದನ್ನೇ 'ಮನೋಜವಂ' ಎಂಬ ಶ್ಲೋಕದ 'ಬುದ್ಧಿಮತಾಂ ವರಿಷ್ಠಂ'–ಬುದ್ಧಿವಂತರಲ್ಲೆಲ್ಲಾ ಅತ್ಯಂತಶ್ರೇಷ್ಠನಾದ ಎಂಬ ವಿಶೇಷಣವೂ ಹೇಳುತ್ತದೆ. ಹನುಮಂತನು ನವವ್ಯಾಕರಣ ಪಂಡಿತನೆಂದು ಪ್ರಸಿದ್ಧನಾಗಿದ್ದಾನೆ. ಅವನು ಸೂರ್ಯನಿಂದ (ಸೂರ್ಯಾಂತರ್ಗತ ನಾರಾಯಣನಿಂದ) ವ್ಯಾಕರಣವಿದ್ಯೆಯನ್ನು ಕಲಿತನಂತೆ. ಈ ವಿಷಯವನ್ನೂ ಶ್ರೀಪಾದರಾಯರು 'ಮಧ್ವನಾಮ'ದಲ್ಲಿ ಉಲ್ಲೇಖಿಸಿದ್ದಾರೆ—

ತರಣಿಗಭಿಮುಖನಾಗಿ ಶಬ್ದಶಾಸ್ತ್ರವ ಪಠಿಸಿ
ಉರವಣಿಸಿ ಹಿಂದುಮುಂದಾಗಿ ನಡೆದ |

ಪರವು ಪವಮಾನಸುತ ಉದಯಾಸ್ತ್ರಶೈಲಗಳ
ಭರದಿ ಐದಿದ–ನೀತಗುಪಮೆಯುಂಟೆ ॥

(ತರಣಿ–ಸೂರ್ಯ, ಅಭಿಮುಖನಾಗಿ–ಎದುರಾಗಿ, ಸಂಮುಖವಾಗಿ, ಶಬ್ದಶಾಸ್ತ್ರ–ವ್ಯಾಕರಣ, ಉರವಣಿಸಿ–ವಿಜೃಂಭಿಸಿ ಅಥವಾ ಪರಾಕ್ರಮವನ್ನು ತೋರಿ, ಭರದಿ–ವೇಗದಿಂದ, ಐದಿದನು–ಸೇರಿದನು, ಉಪಮೆ–ಸರಿಸಮಾನ)

(ಭಾವಾರ್ಥ) ಸೂರ್ಯನಿಂದ ವ್ಯಾಕರಣಶಾಸ್ತ್ರವನ್ನು ಓದುವುದಕ್ಕಾಗಿ ಉದಯಕಾಲದಲ್ಲಿ ಸೂರ್ಯನಿಗೆ ಎದುರಾಗಿ ನಿಂತುಕೊಂಡು ಪಾಠ ಆರಂಭಿಸು-ತ್ತಿದ್ದನು. ಸೂರ್ಯನು ಪಶ್ಚಿಮದ ಕಡೆ ಮುಂದೆ ಬಂದಂತೆ ಹನುಮಂತ ಅದೇ ವೇಗದಲ್ಲಿ ಹಿಂದೆ ಹಿಂದಕ್ಕೇ ಹೆಜ್ಜೆ ಇಡುತ್ತಾ ಮಹಾಕ್ರಮವನ್ನು ತೋರಿ ಸಂಜೆಯ ಹೊತ್ತಿಗೆ ಅಸ್ತಶಿಖರವನ್ನು ತಲುಪುತ್ತಿದ್ದ. ಈ ರೀತಿ-ಯಾಗಿಯೇ ಸೂರ್ಯನಿಂದ ಇಡೀ ವ್ಯಾಕರಣವನ್ನು ಕಲಿತಂಥಾ ಈ ಹನುಮಂತ-ನಿಗೆ ಸಮಾನವಾದ (ಹಿಂದು ಮುಂದಾಗಿ ನಡೆಯಬಲ್ಲ) ಪರಾಕ್ರಮಶಾಲಿಗಳು ಬೇರೆ ಯಾರಿದ್ದಾರೆ? ಎಂದು ಶ್ರೀಪಾದರಾಯರು ಪ್ರಶ್ನಿಸುತ್ತಾರೆ.

ಅಲ್ಲದೆ ಹನುಮಂತನ ಮಾತಿನಲ್ಲಿ ಒಂದು ಅಪಶಬ್ದವೂ ಬರುತ್ತಿರಲಿಲ್ಲ. ರಾಮದೇವರಿಗೂ ಹನುಮಂತನಿಗೂ ಮೊದಲನೆಯ ಸಲ ಭೇಟಿಯಾದಾಗ ರಾಮದೇವರು ಅವನ ಮಾತಿನಲ್ಲಿ ಒಂದು ತಪ್ಪಾಗಲಿ, ಅಪಶಬ್ದವಾಗಲಿ ಇಲ್ಲವೆಂದು ಲಕ್ಷ್ಮಣನ ಮುಂದೆ ಹೇಳಿದನೆಂದು ವಾಲ್ಮೀಕಿರಾಮಾಯಣದಲ್ಲಿ (ಕಿಷ್ಕಿಂಧಾಕಾಂಡ, ೩ಸರ್ಗ, ೨೮–೩೩ಶ್ಲೋ) ಹೇಳಿದೆ—

ನಾನೃಗ್ವೇದವಿನೀತಸ್ಯ ನಾಯಜುರ್ವೇದಧಾರಿಣಃ ।
ನಾಸಾಮವೇದವಿದುಷಃ ಶಕ್ಯಮೇವಂ ಪ್ರಭಾಷಿತುಮ್ ॥ ೨೮ ॥

ಋಗ್ವೇದಾಧ್ಯಯನ ಸಂಪನ್ನನಾಗಿರದವನಿಗಾಗಲಿ ಯಜುರ್ವೇದವನ್ನು ಅಭ್ಯಾಸ ಮಾಡದವನಿಗಾಗಲಿ ಸಾಮವೇದದಲ್ಲಿ ಪಾರಂಗತನಾಗದವನಿಗಾಗಲಿ ಈ ರೀತಿ ಸ್ಪಷ್ಟವಾಗಿ ಶುದ್ಧವಾಗಿ ಮಾತಾಡುವುದಕ್ಕೆ ಶಕ್ಯವಿಲ್ಲ. (ಅರ್ಥಾತ್ ಇವನು ಇಷ್ಟು ಸ್ಫುಟವಾಗಿಯೂ ಶುದ್ಧವಾಗಿಯೂ ಮಾತನಾಡುತ್ತಿರುವುದ-ರಿಂದ ಇವನು ಚತುರ್ವೇದ ಪಾರಂಗತನೇ ಆಗಿರಬೇಕು.)

ನೂನಂ ವ್ಯಾಕರಣಂ ಕೃತ್ಸ್ನ—ಮನೇನ ಬಹುಧಾ ಶ್ರುತಮ್ ।
ಬಹುವ್ಯಾಹರತಾನೇನ **ನ ಕಿಂಚಿದಪಶಬ್ದಿತಮ್** ॥ ೩೦ ॥

ಅಷ್ಟೇ ಅಲ್ಲ, ಇವನು ಸಕಲ ವ್ಯಾಕರಣಶಾಸ್ತ್ರವನ್ನೂ ಚೆನ್ನಾಗಿ ಅಭ್ಯಾಸಮಾಡಿಯೇ ಇರಬೇಕು. ಏಕೆಂದರೆ ಇಷ್ಟು ಮಾತಾಡಿದರೂ ಇವನ ಮಾತಿನಲ್ಲಿ ಒಂದು ಅಪಶಬ್ದವೂ ಹೊರಡಲಿಲ್ಲ.

ಅವಿಸ್ತರಮಸಂದಿಗ್ಧ—ಮವಿಲಂಬಿತ-ಮದ್ರುತವ್ ।
ಉರಃಸ್ಥಂ ಕಂಠಗಂ ವಾಕ್ಯಂ ವರ್ತತೇ ಮಧ್ಯಮೇ ಸ್ವರೇ ॥ ೩೨ ॥

ಮಾತುಗಳು ಬೇಗನೆಯೂ ಬರುವುದಿಲ್ಲ. ಬಹಳ ಸಾವಕಾಶವಾಗಿಯೂ ಹೊರಡುವುದಿಲ್ಲ. ಸಂದೇಹಕ್ಕೂ ಎಡೆಯಿಲ್ಲದಂತೆ ಹೆಚ್ಚು ಬೆಳೆಸದಂತೆ ಅಳತೆಯಾಗಿಯೇ ಮಾತಾಡುತ್ತಾನೆ. ಮನಸ್ಸಿನಲ್ಲಿರುವುದನ್ನೇ ಬಿಚ್ಚಿ ಹೇಳುತ್ತಾನೆ (ಒಳಗೊಂದು, ಹೊರಗೊಂದು ಮಾತಾಡುವುದಿಲ್ಲ.) ತೀರ ಗಟ್ಟಿಯೂ ಅಲ್ಲ, ತೀರ ಮೆಲ್ಲಗೂ ಅಲ್ಲ, ಅಳತೆಯಾಗಿ ಮಧ್ಯಮಸ್ವರದಿಂದ ಮಾತಾಡುತ್ತಾನೆ.

ಸಂಸ್ಕಾರಕ್ರಮಸಂಪನ್ನಾ—ಮದ್ರುತಾಮವಿಲಂಬಿತಾವ್ ।
ಉಚ್ಚಾರಯತಿ ಕಲ್ಯಾಣೀ ವಾಚಂ ಹೃದಯಹಾರಿಣೀವ್ ॥ ೩೩ ॥

ಇವನು ಆಡುವ ಪ್ರತಿಯೊಂದು ಪದವೂ ವ್ಯಾಕರಣಬದ್ಧವಾಗಿದೆ. ಅವನ ಮಾತು ಬಹಳ ಬೇಗನೆಯೂ ಅಲ್ಲ, ಬಹಳ ನಿಧಾನವೂ ಅಲ್ಲ—ಅಳತೆಗೆ ತಕ್ಕ ಧ್ವನಿ. ಈ ಪುಣ್ಯಾತ್ಮನು ಆಡುವ ಮಾತು ಕೇಳುವುದಕ್ಕೇ ಮಧುರವಾಗಿ ಮನೋಹರವಾಗಿಯೂ ಇದೆ. ಇತ್ಯಾದಿ.

ಈ ವಿಚಾರವನ್ನೇ ಶ್ರೀಪಾದರಾಯರು 'ಮಧ್ವನಾಮ'ದಲ್ಲಿ ಹೀಗೆ ಹೇಳಿದ್ದಾರೆ—'ಮುಖದಲ್ಲಿ ಕಿಂಚಿದಪಶಬ್ದ ಇವಗಿಲ್ಲೆಂದು । 'ಮುಖ್ಯ ಪ್ರಾಣನನು ರಾಮನನುಕರಿಸಿದ ॥' ಈ ಪ್ರಸಂಗದಿಂದ ಹನುಮಂತ ಎಂಥಾ ಮಹಾಜ್ಞಾನಿ ಎಂಬುದು ಅರ್ಥವಾಗುತ್ತದೆ.

ರಾಮನ ಪರವಾಗಿ ಅರ್ಥ ಹೇಳುವಾಗ ಹನುಮಾನ್ ಎಂಬುದು ಹೆಸರಾಗುವುದಿಲ್ಲ; ವಿಶೇಷಣವಾಗಿ ಜ್ಞಾನವುಳ್ಳವನು ಜ್ಞಾನಪೂರ್ಣ ಅಥವಾ ಜ್ಞಾನಸ್ವರೂಪ ಎಂದೇ ಅರ್ಥವಾಗುತ್ತದೆ. (ಪಾಣಿನಿಯು 'ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್' (೫/೨/೯೪) ಎಂಬ ಸೂತ್ರದಲ್ಲಿ 'ಅದು ಇವನಿಗಿದೆ ಅಥವಾ ಇವನಲ್ಲುಂಟು ಎಂಬ ಅರ್ಥದಲ್ಲಿ ಮತುಪ್ (ಮತ್) ಪ್ರತ್ಯಯ

ಬರುವುದೆಂದು ಹೇಳಿದ್ದಾನೆ. ಮತ್ ಎಂಬುದು ಪುಲ್ಲಿಂಗ ಪ್ರಥಮೈಕವಚನ-ದಲ್ಲಿ 'ಮಾನ್' ಎಂದಾಗುತ್ತದೆ. ಹೀಗೆ ಹನು-ಮಾನ್ ಎಂದರೆ ಜ್ಞಾನ-ವುಳ್ಳವನು—ಜ್ಞಾನಿ ಎಂದರ್ಥವಾಗುತ್ತದೆ. ಅಲ್ಲದೆ ಆ ಪ್ರತ್ಯಯವು 'ಭೂಮನಿಂದಾ ಪ್ರಶಂಸಾಸು' ಎಂಬ ಕಾರಿಕೆಯಂತೆ ಇಲ್ಲಿ ಭೂಮಾರ್ಥ (ಪೂರ್ಣಾರ್ಥ)ದಲ್ಲಿ ಬಂದಿದೆ. (ಪುರಾ.)

೨. **ಬಹುಬ್ರಹ್ಮಚರ್ಯಾದಿಧರ್ಮೈಃ ಸಹಿತಃ** ಎಂಬುದಕ್ಕೆ ಹನುಮತ್ಪರವಾಗಿ ಬ್ರಹ್ಮಚರ್ಯ, ಇಂದ್ರಿಯನಿಗ್ರಹ, ಜ್ಞಾನ-ಭಕ್ತಿ-ವೈರಾಗ್ಯ ಅಣಿಮಾದ್ಯಷ್ಟಸಿದ್ಧಿ, ಚಿರಂಜೀವಿತ್ವ ಮೊದಲಾದ ಅನೇಕ ಧರ್ಮ (ಗುಣ)ಗಳಿಂದ ಕೂಡಿದವನಾದ ಎಂದರ್ಥ.

**ಆದಿ** ಶಬ್ದದಿಂದ ಬ್ರಹ್ಮಸೂತ್ರಗಳಲ್ಲಿ (೩।೪।೪೮) ಹೇಳಿದ ಇನ್ನೊಂದು ಪ್ರಮೇಯವೂ ಸೂಚಿತವಾಗುತ್ತದೆ. 'ದೇವಾ ಏವ ಬ್ರಹ್ಮಚಾರಿಣೋ ದೇವಾ ಏವ ಗೃಹಸ್ಥಾ ದೇವಾ ಏವ ವನಸ್ಥಾ ಯಥಾ ಹ್ಯೇತೇ ಮುನಯ ಏವಂ ಸರ್ವವರ್ಣಾಃ ಸರ್ವಾಶ್ರಮಾಃ' ಎಂಬ ಕೌಂಠರವ್ಯಶ್ರುತಿ ಹೇಳುವಂತೆ ಹನುಮಂತದೇವರು ಬ್ರಹ್ಮಚಾರಿಗಳಾಗಿದ್ದರೂ ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಯತಿ ನಾಲ್ಕೂ ಆಶ್ರಮಗಳ ವೇದೋಕ್ತ **ಸಕಲ ಧರ್ಮ-ಗಳನ್ನೂ** ಅನುಷ್ಠಾನ ಮಾಡಿಯೇ ಮಾಡುತ್ತಾರೆ. ಆದಕಾರಣವೇ ಅವರು ಯತೀಂದ್ರರಿಂದಲೂ ಪೂಜ್ಯರೂ ಸೇವ್ಯರೂ ಆಗಿದ್ದಾರೆಂಬುದನ್ನು ಈ **ಆದಿ** ಪದ ಸ್ಪಷ್ಟಪಡಿಸುತ್ತದೆ.

ರಾಮನ ಪರವಾಗಿ (ಪುರಾ. ತೋರಿಸಿರುವಂತೆ) ಅನೇಕ ಪ್ರಕಾರ ಅರ್ಥ ಹೇಳಬಹುದು. ಬ್ರಹ್ಮ ಎಂದರೆ ವೇದ ಎಂದು ಅರ್ಥವಾಗುತ್ತದೆ. ಚರ್ಯ ಎಂದರೆ (ವೇದಗಳಲ್ಲಿ) ನಿರೂಪಿತವಾದ ಚರಿತ್ರೆಗಳು. ಧರ್ಮ ಎಂದರೆ ಲಕ್ಷಣ, ಆದಕಾರಣ ಬಹುಬ್ರಹ್ಮಚರ್ಯಾದಿಧರ್ಮೈಃ ಸಹಿತಃ ಎಂದರೆ ಅನೇಕ ವೇದಗಳಲ್ಲಿ ಕೀರ್ತಿತವಾದ ಅಪಾರಚರಿತ್ರೆಗಳೇ ಲಕ್ಷಣಗಳಾಗಿ ಉಳ್ಳ ಎಂಬುದು ೧ನೇ ಅರ್ಥ. (೨ನೇ ಅರ್ಥ) ಅನೇಕ ಜಿತೇಂದ್ರಿಯತ್ವವೇ ಮೊದಲಾದ ಗುಣಗಳಿಂದ ಕೂಡಿದ, ಅಥವಾ (೩ನೇ ಅರ್ಥ) ಅತಿಶಯವಾದ ಬ್ರಹ್ಮಚರ್ಯವೇ ಮೊದಲಾದ ಧರ್ಮಗಳಿಂದ ಕೂಡಿದ ವಸಿಷ್ಠಾದಿ ಮಹರ್ಷಿಗಳಿಂದ ಕೂಡಿದ ಎಂದೂ ಅರ್ಥವಾಗುತ್ತದೆ.

೩. **ಯಃ ದೇಹಭಾಜಾಂ ರಾಮೋ ಮಹತೀಂ ಭಕ್ತಿಂ ಅಪಿ ಸ್ಪೃಹಯತಿ ॥** ರಮು ಕ್ರೀಡಾಯಾಂ (ಭ್ವಾ. ಆತ್ಮ )–ರಮಿಸು, ಆನಂದಿಸು ಎಂಬ ಧಾತುವಿನ ಮೇಲೆ ಭಾವಾರ್ಥದಲ್ಲಿ (ಪಾ. ೩।೩।೧೮) ಘಞ್ ಪ್ರತ್ಯಯ ಬರಲು ರಮ್+ಘಞ್ ಎಂದಿರಲು 'ಅಚೋಽಞ್ಣಿತಿ' (ಪಾ. ೭।೨।೧೧೫) ಎಂಬ ಸೂತ್ರದಂತೆ ಞಿತ್‌ಪ್ರತ್ಯಯವಾದ್ದರಿಂದ ಆದಿವೃದ್ಧಿ ಬರಲು ರಾಮ್+ಅ–ರಾಮ ಎಂದಾಗುವುದರಿಂದ ರಾಮ ಎಂದರೆ ರತಿ ಅಥವಾ ಆನಂದ ಎಂದೇ ಅರ್ಥವಾಗುತ್ತದೆ. ಅಲ್ಲದೆ 'ಹರಿಪಕ್ಷದಲ್ಲಿ ತಾದರ್ಥ್ಯದಲ್ಲಿ ಸಪ್ತಮೀಯೆಂತ' ಭಾವಿಸಬೇಕು (ಪುರಾ.) ಎಂದು ಹೇಳಿರುವುದರಿಂದ **ರಾಮೇ**–ಸ್ವರೂಪಾನಂದರೂಪವಾದ ಮುಕ್ತ್ಯರ್ಥವಾಗಿ ಎಂದು ಅರ್ಥ-ವಾಗುತ್ತದೆ. ಯಃ–ಯಾವ ರಾಮಾವತಾರವು, ದೇಹಭಾಜಾಂ–ಮುಕ್ತಿ-ಯೋಗ್ಯ ಜೀವರಿಗೆ, ರಾಮೇ–ಸ್ವರೂಪಾನಂದಾವಿರ್ಭಾವರೂಪವಾದ ಮುಕ್ತ್ಯರ್ಥವಾಗಿ, ಮಹತೀಂ–(ದೇಹಗೇಹದಾರಾಪುತ್ರಾದಿಗಳಲ್ಲಿ ಮಾಡುವ ಸ್ನೇಹಕ್ಕಿಂತಲೂ) ಸಹಸ್ರಗುಣಾಧಿಕವಾದ, ಭಕ್ತಿಂ ಅಪಿ–ನಿರಂತರ ಸ್ನೇಹರೂಪ-ವಾದ ಭಕ್ತಿಯೊಂದನ್ನೇ (ಅಪಿ ಶಬ್ದ ಏವಕಾರಾರ್ಥದಲ್ಲಿ ಬಂದಿದೆ), ಸ್ಪೃಹಯತಿ–ಅಪೇಕ್ಷಿಸುತ್ತದೋ ಎಂದು ಪದಶಃ ಅರ್ಥ. ಭಾವಾರ್ಥ-ವೇನೆಂದರೆ ಶ್ರೀರಾಮದೇವರ ಅತ್ಯರ್ಥಪ್ರಸಾದವಿಲ್ಲದೆ ಮುಕ್ತಿ ದೊರಕು-ವುದೇ ಇಲ್ಲ. ಆ ರಾಮದೇವರ ಅತ್ಯರ್ಥಪ್ರಸಾದವು ಲಭಿಸಬೇಕಾದರೆ ದೇಹ-ಗೇಹ-ದಾರಾ-ಪುತ್ರಾದಿಗಳಲ್ಲಿ ಮಾಡುವ ಸ್ನೇಹಕ್ಕಿಂತ ಸಹಸ್ರಗುಣ ಅಧಿಕ-ವಾದ ಭಕ್ತಿಯನ್ನು ಮಾಡಿದರೆ ಮಾತ್ರವೇ ಲಭ್ಯವಾಗುತ್ತದೆ. ಹೀಗೆ ಮೋಕ್ಷಾಪೇಕ್ಷಿಗಳಾದ ಜೀವರು ತಮಗೆ ಸ್ವರೂಪಾನಂದಾವಿರ್ಭಾವರೂಪ ಮೋಕ್ಷವು ಬೇಕೆಂದು ಅಪೇಕ್ಷಿಸಿದರೆ ಅವರು ತನ್ನಲ್ಲಿ (ಶ್ರೀರಾಮನಲ್ಲಿ) ಮಿಕ್ಕ ಎಲ್ಲರಲ್ಲೂ ಮಾಡುವ ಸ್ನೇಹಕ್ಕಿಂತಲೂ ಸಾವಿರಾರು ಪಟ್ಟು ಅಧಿಕವಾದ ನಿರಂತರ ಸ್ನೇಹರೂಪವಾದ ಭಕ್ತಿಯನ್ನು ಮಾಡಬೇಕೆಂದು ರಾಮದೇವರು ಅಪೇಕ್ಷಿಸುತ್ತಾರೆಂದು ಭಾವ.

ಹನುಮತ್ಪರವಾಗಿ ಅರ್ಥ ಕಷ್ಟವಿಲ್ಲ, ಸುಲಭ. "ರಮಂತೇ ಯೋಗಿ-ನೋಽನಂತೇ ನಿತ್ಯಾನಂದೇ ಚಿದಾತ್ಮನಿ । ಇತಿ ರಾಮಪದೇನೈತತ್ ಪರಂ-

ಬ್ರಹ್ಮಾಭಿಧೀಯತೇ" ಎಂಬ ಪದ್ಮಪುರಾಣ (ಮತ್ತು ರಾಮತಾಪನೀಯೋಪ-ನಿಷತ್ ೧/೬) ವಾಕ್ಯದಂತೆ—ರಮಂತೇ ಯೋಗಿನೋಽಸ್ಮಿನ್ನಿತಿ ರಾಮಃ ॥ ಯೋಗಿಗಳು (ಮಹಾಜ್ಞಾನಿಗಳು) ಯಾವನಲ್ಲಿ ನಲಿದಾಡುತ್ತಾರೋ ಅವನು ರಾಮ ಎಂದು ರಾಮಶಬ್ದದ ವ್ಯುತ್ಪತ್ತಿ. 'ಅಕರ್ತರಿ ಚ ಕಾರಕೇ ಸಂಜ್ಞಾ-ಯಾಮ್' (ಪಾ. ೩/೩/೧೯) ಎಂಬ ಸೂತ್ರದಂತೆ ಘಞ್ ಪ್ರತ್ಯಯ ಬರುತ್ತದೆ.

ರಮಯತಿ ಸರ್ವಾನ್ ರೂಪೇಣ ವಾ ಗುಣೈರಿತಿ ವಾ ರಾಮಃ। ಸಮಸ್ತ-ಜನರನ್ನೂ ತನ್ನ ರೂಪದಿಂದಲೂ ಗುಣದಿಂದಲೂ ಸಂತೋಷ ಪಡಿಸು-ವವನಾದ್ದರಿಂದಲೂ ರಾಮ. ಯಃ–ಯಾವ ಹನುಮದವತಾರವು, ರಾಮೇ–ಶ್ರೀರಾಮದೇವರಲ್ಲಿ ಅದ್ಯಾಪಿ–ಈಗಲೂಕೂಡ (ಕಲಿಯುಗದಲ್ಲೂ ಸಹ), ಮಹತೀಂ–ಮಿಕ್ಕ ಎಲ್ಲ ಜೀವರೂ ಮಾಡುವುದಕ್ಕಿಂತ ಅತ್ಯಧಿಕವಾದ ; ಅಥವಾ (ಛ.) ಅವಿಚ್ಛಿನ್ನವಾಗಿ ಪ್ರವಹಿಸುವ, ಅಥವಾ (ಛ) ಸರ್ವಸಾಧನ-ಗಳಿಗಿಂತಲೂ ಉತ್ತಮವಾದ; ಭಕ್ತಿಂ–ಭಕ್ತಿಯನ್ನು, ಸ್ಪೃಹಯತಿ-ಅಪೇಕ್ಷಿಸುತ್ತದೋ ಎಂದರ್ಥ. (ಕಕ., ವಿ. ಎರಡು ವ್ಯಾಖ್ಯಾನಗಳೂ 'ಭಕ್ತಿಂ ಸ್ಪೃಹಯತಿ' ಎಂಬಲ್ಲಿ ಒಂದು ವ್ಯಾಕರಣ ವಿಶೇಷವನ್ನು ಸೂಚಿಸುತ್ತವೆ. ಅದೇನೆಂದರೆ.) ಪಾಣಿನಿಯು 'ಸ್ಪೃಹೇರೀಪ್ಸಿತಃ' (೧/೪/೩೬) ಎಂಬ ಸೂತ್ರ-ದಲ್ಲಿ ಸ್ಪೃಹ ಧಾತುವಿನ ಯೋಗವಿದ್ದಾಗ ಬೇಕಾದ ಅಥವಾ ಅಪೇಕ್ಷಿತ-ವಾದ ವಸ್ತುವು 'ಸಂಪ್ರದಾನ'ಸಂಜ್ಞಕವಾಗುತ್ತದೆ ; ಅದಕ್ಕೆ ಚತುರ್ಥೀ ಬರುತ್ತದೆ ಎಂದು ಹೇಳುತ್ತಾರೆ. ಹುಡುಗ ಕಡುಬಿಗಾಗಿ ಅಪೇಕ್ಷೆಪಟ್ಟರೆ, ಕಡುಬು ಅಪೇಕ್ಷಿತವಾದ್ದರಿಂದ ಅದು ಸಂಪ್ರದಾನವಾಗಿ ಅದಕ್ಕೆ ಚತುರ್ಥೀ ಬರುತ್ತದೆ, ಅದರಂತೆ 'ಬಾಲಕಃ ಮೋದಕಾಯ ಸ್ಪೃಹಯತಿ' ಎಂದು ಹೇಳ ಬೇಕು. ಆದರೆ ರಾಮದೇವರಲ್ಲಿ ಹನುಮಂತನಿಗೆ ಬೇಕಾದ ಭಕ್ತಿ ಈ ರೀತಿ ಏನೋ ಆಸೆಪಟ್ಟ ವಸ್ತುವಲ್ಲ, ಅದಕ್ಕೆ ಪ್ರತಿಯಾಗಿ ಭಕ್ತಿಗಾಗಿಯೇ ಶ್ರಮಪಡುವ—ಕಾತುರವಾಗಿರುವ 'ಈಪ್ಸಿತತಮ'ವಾದ ವಸ್ತು. ಆದಕಾರಣ ಭಕ್ತಿಯು ಸಂಪ್ರದಾನವಾಗುವುದಿಲ್ಲ ; 'ಕರ್ತುರೀಪ್ಸಿತತಮಂ ಕರ್ಮ' (ಪಾ. ೧/೪/೪೯) ಎಂಬ ಸೂತ್ರದಂತೆ ಅತ್ಯಂತಾಪೇಕ್ಷಿತವಾದ್ದರಿಂದ ಕರ್ಮ-

ಸಂಜ್ಞಕವೇ ಆಗುವುದರಿಂದ **ಭಕ್ತಿಂ** ಎಂದು ದ್ವಿತೀಯಾವಿಭಕ್ತಿಯೇ ಬಂದಿದೆ-ಯೆಂದು ತೋರಿಸುತ್ತಾರೆ. (ಪು.ರಾ.,) ವಾಯುಪಕ್ಷದಲ್ಲಿ **ರಾಮೇ** ಎಂದು ವಿಷಯಸಪ್ತಮೀ ಎಂತ ತಿಳಿಯುವುದು.

**202. ಅರ್ಥಭೇದವಿಲ್ಲದ ಕಠಿನ ಶಬ್ದಗಳು** (ಎರಡು ಪಕ್ಷದಲ್ಲೂ ಒಂದೇ ರೀತಿ ಅರ್ಥ) **೧. ಮಹಿತ-ಮಹಾಪೌರುಷಃ** ಮಹಿತಂ–ಸಂಭಾವಿತಂ (ಕ.ಕ) ಪೂಜಿತಂ (ವಿ.) ಅಖಿಲೈಃ ಪೂಜಿತಂ (ಛ.), ಮಹಾಪೌರುಷಂ ಮಹಾಪುರುಷಕರ್ಮ (ಕಕ.) ಮಹಾಪರಾಕ್ರಮಃ (ವಿ.) ಸಮುದ್ರತರಣಾದಿ-ಮಹಾಪರಾಕ್ರಮಃ (ಛ.) ಯಸ್ಯ ಸಃ। ಸಕಲ ಜನರಿಂದಲೂ ಪೂಜಿತ-ವಾದ (ಗೌರವಿಸಲ್ಪಟ್ಟ) ಸಮುದ್ರಲಂಘನಾದಿ ಮಹತ್ಕಾರ್ಯಗಳನ್ನು ಮಾಡಿದ (ಎಂಬುದು ಹನುಮತ್ಪರವಾದ ಅರ್ಥ), ರಾಮಪರವಾಗಿ—ಸಕಲ ದೇವತೆ-ಗಳಿಂದಲೂ ಪೂಜಿತವಾದ ರಾವಣಹನನಾದಿರೂಪವಾದ ಮಹಾಪರಾಕ್ರಮ-ವುಳ್ಳ ಎಂದರ್ಥ. ಇಲ್ಲಿ 'ಮಹಿತ'–ಪೂಜಿತ ಎಂದು ಹೇಳಿದ್ದರಿಂದ— ರಾಮದೇವರು ತ್ರಿಲೋಕಕಂಟಕನಾದ ರಾವಣನನ್ನು ಸಂಹಾರಮಾಡಿದ್ದನ್ನು ಕಂಡು ಬ್ರಹ್ಮದೇವರು ಈಶ್ವರನನ್ನೂ ಇಂದ್ರಾದಿದಿಕ್ಪಾಲಕರನ್ನೂ ಕರೆದು-ಕೊಂಡು ಅಲ್ಲಿಗೆ ಬಂದು ರಾಮದೇವರಿಗೆ ವಂದಿಸಿ ಸ್ತುತಿಸಿದರೆಂಬ ತಾತ್ಪರ್ಯ ನಿರ್ಣಯದ (೮ನೇ ಅಧ್ಯಾ. ೨೧೨–೨೨) ಕಥಾಭಾಗವನ್ನೂ ವಾಲ್ಮೀಕಿ ರಾಮಾಯಣದಲ್ಲಿ ಯುದ್ಧಕಾಂಡದಲ್ಲಿ ೧೨೦ನೇ ಅಧ್ಯಾಯದಲ್ಲಿ ವರ್ಣಿಸಿದ ವಿಚಾರವನ್ನೂ ಸಂಗ್ರಹಿಸಿ ಹೇಳಿದ್ದಾರೆಂದು ತಿಳಿಯಬೇಕು. ಅಲ್ಲದೆ "ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ' (ಶ್ವೇತಾಶ್ವತರಶ್ರುತಿ ೬/೮)–ಇವನ ಶಕ್ತಿಯು ಉತ್ಕೃಷ್ಟವೂ ವಿಚಿತ್ರವೂ ಜ್ಞಾನಬಲ ಕ್ರಿಯಾದಿಗಳು ಸ್ವಾಭಾವಿಕವೂ ಆಗಿವೆ ಎಂಬ ಶ್ರುತಿಯನ್ನೂ ಗ್ರಹಣಮಾಡಬೇಕು.

೨. **ಬಾಹುಶಾಲೀ**—ಬಾಹುಭ್ಯಾಂ ಶೀಲತೇ–ಶೋಭತೇ ಇತಿ ಬಾಹುಶಾಲೀ (ಕ.ಕ.,ವಿ.,ಛ.)–ಮಂಡಿಯುವರೆಗೂ ನೀಳವಾದ ಬಾಹುಗಳುಳ್ಳ ಎಂಬುದು ಮಹಾಪುರುಷಲಕ್ಷಣ. 'ಆಜಾನುಲಂಬಿನೌ ಬಾಹೂ ವೃತ್ತಪೀನೌ ಮಹೀಶ್ವರಃ'–ರಾಜರ ಎರಡು ತೋಳುಗಳೂ ಮಂಡಿಯುವರೆಗೆ ಉದ್ದವಾಗಿ

ನೀಳವಾಗಿರಬೇಕು. ಗುಂಡಗೆ ತುಂಬಿಕೊಂಡು ಉದ್ದವಾಗಿರಬೇಕು ಎಂದು ಸಾಮುದ್ರಿಕಲಕ್ಷಣದಲ್ಲಿ ಹೇಳಿದೆ. (ರಾಮಾಯಣದ ಗೋವಿಂದರಾಜೀಯ ವ್ಯಾಖ್ಯಾನ.) ವಾಯುದೇವರ ಅವತಾರವಾದ್ದರಿಂದ ಹನುಮಂತದೇವರಿಗೂ ಆಜಾನುಬಾಹು ಮೊದಲಾದ ದ್ವಾತ್ರಿಂಶಲ್ಲಕ್ಷಣಗಳೂ ಸಂಪೂರ್ಣವಾಗಿಯೇ ಇವೆ. ಅಥವಾ ಅತಿಶಯ ಬಾಹುಬಲ ಪರಾಕ್ರಮಃ ಇತ್ಯರ್ಥಃ (ಕಕ.)– ಅತಿಶಯವಾದ ಬಾಹುಪರಾಕ್ರಮವುಳ್ಳವರೆಂದೂ ಅರ್ಥವಾಗುತ್ತದೆ. ೩. **ಸಸ್ನೇಹಾನಾಂ ದೇಹಭಾಜಾಂ ಅಹಿತಂ ಅಹರಹಃ ನಿರ್ದಹನ್ ।** ಸ್ನೇಹೇನ–ಭಕ್ತ್ಯಾ ಸಹ ವರ್ತಂತ ಇತಿ ಸಸ್ನೇಹಾಸ್ತೇಷಾಂ ಭಕ್ತಿಮತಾ-ಮಿತ್ಯರ್ಥಃ (ವಿ. ಕಕ. ಭ.) ಸ್ನೇಹ ಎಂದರೆ ಭಕ್ತಿ, ಅದರಿಂದ ಕೂಡಿದ ಎಂದರೆ ಭಕ್ತಿಸಂಪನ್ನರಾದ ಎಂದು ಸಸ್ನೇಹಾನಾಂ ಎಂಬುದರ ಅರ್ಥ. ಸಮಾಸದಲ್ಲಿ ಸಹ ಶಬ್ದದ ಸ್ಥಾನದಲ್ಲಿ **ಸ** ಮಾತ್ರ ವಿಕಲ್ಪದಿಂದ ಉಳಿಯು-ತ್ತದೆ ; 'ವೋಪಸರ್ಜನಸ್ಯ' (೬/೩/೮೨). ದೇಹಂ ಭಜಂತೀತಿ ದೇಹಭಾಜ-ಸ್ತೇಷಾಂ–ಪ್ರಾಣಿನಾಮಿತ್ಯರ್ಥಃ (ವಿ. ಭ.,) ದೇಹ-ಶರೀರವನ್ನು, ಭಾಜ್– ಧರಿಸಿದಂಥಾ ಎಂದರೆ ದೇಹಧಾರಿಗಳಾದ ಪ್ರಾಣಿಗಳ, ಅಹಿತಂ–ಅನಿಷ್ಟವನ್ನು (ಕ.ಕ., ವಿ., ಭ., ಪುರಾ.) ಅಹರಹಃ–ದಿನೇದಿನೇ ಅಥವಾ ಪ್ರತಿದಿನವೂ 'ನಿತ್ಯವೀಪ್ಸಯೋಃ' (ಪಾ. ೮/೨/೪) ಎಂಬ ಸೂತ್ರದಂತೆ ವೀಪ್ಸಾರ್ಥದಲ್ಲಿ ದ್ವಿರುಕ್ತಿ ಬಂದಿದೆ (ಕ.ಕ., ವಿ.). ನಿರ್ದಹನ್–ಸುಟ್ಟು ಭಸ್ಮಮಾಡುವಂಥಾ. ಇದನ್ನೇ ಪುರಂದರದಾಸರು 'ಅಂಜಿಕಿನ್ಯಾತಕಯ್ಯ । ಸಜ್ಜನರಿಗೆ' ಎಂಬ ಕೀರ್ತನೆಯಲ್ಲಿ 'ಕನಸೀಲಿ ಮನಸೀಲಿ ಕಳವಳ(ಗೊಳುವಾಗ)ವಾದರೆ ಹನುಮನ ನೆನೆದರೆ ಹಾರಿಹೋಗೋದು ಪಾಪ' ಎಂದು ಹೇಳಿದ್ದಾರೆ. ರಾಮನಾಮದ ಮಹಿಮೆಯನ್ನು ಸ್ತುತಿಸುವ ಇನ್ನೊಂದು ಕೀರ್ತನೆಯಲ್ಲಿ ರಾ ಎಂದು ಉಚ್ಚರಿಸಿದಾಗ ಇದ್ದ ಪಾಪಗಳೆಲ್ಲ ಹೊರಗೆ ಹೋಗುವುದೆಂದೂ ಮ ಎಂದಾಗ ಅವು ಹಿಂದಿರುಗದಂತೆ ತಡೆಯುವುದೆಂದೂ ವರ್ಣಿಸಿದ್ದಾರೆ.

ರಾಗ ಕಾಂಬೋಧಿ ಝಂಪೆತಾಳ

ರಾಮ ಎಂಬುವ ಎರಡು ಅಕ್ಷರದ ಮಹಿಮೆಯನು
ಪಾಮರರು ತಾವೇನು ಬಲ್ಲರಯ್ಯ ॥ ಪ ॥

ರಾಯೆಂದ ಮಾತ್ರದೊಳು ರಕ್ತಮಾಂಸದೊಳಗಿದ್ದ
ಅಯಸ್ಥಿಗತವಾದ ಅತಿಪಾಪವನ್ನು ।
ಮಾಯವನು ಮಾಡಿ ಮಹರಾಯ ಮುಕ್ತಿಯ ಕೊಡುವ ದಾ-
ರಿಯನು ವಾಲ್ಮೀಕಿ ಮುನಿರಾಯ ಬಲ್ಲ ॥೧॥

ಮತ್ತೆ ಮ ಎಂದೆನಲು ಹೊರಬಿದ್ದ ಪಾಪಗಳು
ಒತ್ತಿ ಒಳಪೋಗದಂತೆ ಕವಾಟವಾಗಿ ।
ಚಿತ್ತ-ಕಾಯಗಳ ಪವಿತ್ರ ಮಾಡುವ ಪರಿಯ
ಭಕ್ತವರ ಹನುಮಂತನೊಬ್ಬ ತಾ ಬಲ್ಲ ॥

(ಕಠಿನ ಶಬ್ದಾರ್ಥ: ಪಾಮರರು–ಅಜ್ಞಾನಿಗಳು. ಆಯಸ್ಥಿಗತವಾದ–ಮೂಳೆಗಳಲ್ಲೂ ಸಹ ಸೇರಿಕೊಂಡಿರುವ. ಅಸ್ಥಿ–ಮೂಳೆ. ಒತ್ತಿ–ನುಗ್ಗಿ-ಕೊಂಡು. ಕವಾಟ–ಬಾಗಿಲು. ಚಿತ್ತ–ಮನಸ್ಸನ್ನೂ. ಕಾಯ–ದೇಹವನ್ನೂ ಪರಿಯ–ರೀತಿಯನ್ನು, ಕ್ರಮವನ್ನು).

ರಾ ಎಂದಾಗ ಬಾಯಿ ತೆಗೆಯಲೇ ಬೇಕಲ್ಲವೆ! ಆಗ ದೇಹದಲ್ಲಿದ್ದ ಸಕಲ ಪಾಪಗಳೂ, ಮೂಳೆಯಲ್ಲಿ ಸೇರಿಕೊಂಡಿದ್ದರೂ, ಹೊರಗೆ ಬಂದು ಬಿಡುವವು. ಮಕಾರವು ಓಷ್ಠ್ಯಾಕ್ಷರ; ಅದನ್ನು ಉಚ್ಚರಿಸಲು ಎರಡು ತುಟಿಗಳೂ ಸೇರಲೇಬೇಕು. ಹೀಗೆ ಬಾಯಿ ಮುಚ್ಚುವುದರಿಂದ ಬಾಗಿಲು ಹಾಕಿದಂತಾಯಿತು. ಹೊರಗೆ ಹೋದ ಪಾಪಗಳು ಒಳಗೆ ಬರದಂತೆ ಬಾಗಿಲು ಹಾಕಿದ ಹಾಗಾಯಿತೆಂದು ಪುರಂದರದಾಸರ ಅಭಿಪ್ರಾಯ. ಒಟ್ಟನಲ್ಲಿ ರಾಮ ಎಂದು ಹೇಳುವುದರಿಂದಲೇ ಇದ್ದ ಪಾಪಗಳೆಲ್ಲ ಹೊರಗೆ ಹೋಗಿ ದೇಹ ಶುದ್ಧವಾಗುವುದೆಂದೂ ಹೋದ ಪಾಪಗಳು ಪುನಃ ಬರದಂತೆ ತಡೆ-ಯಾಗುವುದೆಂದೂ ತಿಳಿಯಬೇಕು.

ಹೀಗೆ ರಾಮದೇವರನ್ನೂ, ಹನುಮಂತದೇವರನ್ನೂ ನಿತ್ಯಸ್ಮರಣೆಮಾಡು-ವುದರಿಂದ ಆಯಾದಿನದ ಪಾಪಗಳೆಲ್ಲ ಸುಟ್ಟು ಭಸ್ಮವಾಗಿ ಹೋಗುತ್ತವೆ ಎಂದು ಭಾವ.

ಇಲ್ಲಿ 'ಅನಿಷ್ಟಂ ನಿರ್ದಹನ್' ಎಂದು ಹೇಳದೆ **ಅಹರಹಃ ನಿರ್ದಹನ್** ಎಂದರೆ ದಿನೇ ದಿನೇ ಸುಡುವಂಥಾ ಎಂದು ಹೇಳಿದ್ದರಿಂದ ಸೂತ್ರಭಾಷ್ಯದಲ್ಲೂ

(೩/೧/೮) ಗೀತಾಭಾಷ್ಯದಲ್ಲೂ (೭/೪) ಹೇಳಿದ ಪ್ರಮೇಯವನ್ನು ಸೂಚಿಸಿದ್ದಾರೆ. 'ಆಚತುರ್ದಶವರ್ಷಾತ್ ಕರ್ಮಾಣಿ ನಿಯಮೇನ ತು । ದಶಾವರಾಣಾಂ ದೇಹಾನಾಂ ಕಾರಣಾನಿ ಕರೋತ್ಯಯಮ್ ॥' ಎಂದರೆ ಪ್ರತಿಯೊಬ್ಬನೂ ಹದಿನಾಲ್ಕನೇ ವರ್ಷದಿಂದ ಆರಂಭಿಸಿ ಒಂದೊಂದು ದಿನದಲ್ಲಿ ಹತ್ತು ಜನ್ಮಕ್ಕೆ ಕಡಿಮೆಯಿಲ್ಲದಷ್ಟು ಜನ್ಮ ಎತ್ತಲು ಆಗುವಷ್ಟು ಪಾಪಗಳನ್ನು ಮಾಡುತ್ತಾನೆಂದು ಸ್ಮೃತಿ ಹೇಳುತ್ತದೆ. ರಾಮನ ಮತ್ತು ಹನುಮಂತನ ನಾಮಸ್ಮರಣೆಯನ್ನು ಪ್ರತಿನಿತ್ಯ ಮಾಡುವುದರಿಂದ ಆಯಾ ದಿನ ಸಂಭವಿಸಿದ ಪಾಪಗಳು ನಾಶವಾಗಿ ಹೋಗುತ್ತವೆ ಎಂಬುದನ್ನು **ಅಹರಹಃ** ಪದವು ತಿಳಿಸುತ್ತದೆ.

**೪. ಅಂಹೋಮೋಹಾಪಹಃ**—'ಅಂಹೋ ದುರಿತ-ದುಷ್ಕೃತಂ' ಎಂದು ಅಮರವಿರುವುದರಿಂದ (ಕಕ. ಭ.) ಅಂಹಃ ಎಂದರೆ ದುರಿತಗಳು, ಪಾಪಗಳು. (ಅಂಹಃ ಎಂಬುದು ಸಕಾರಾಂತ ನಪುಂಸಕಲಿಂಗ ಶಬ್ದ.) ಮುಹ್ಯತೇಽನೇನೇತಿ **ಮೋಹಃ** (ಭ.) ಯಾವುದರಿಂದ ಜನಗಳು ಮೋಸ ಹೋಗುವರೋ ಅದು ಮೋಹ, ಹೀಗೆ ಮೋಹ ಎಂದರೆ ಅಜ್ಞಾನ (ಕಕ. ಪುರಾ. ಭ.) ಅಥವಾ ಮಿಥ್ಯಾಜ್ಞಾನ (ವಿ.) ಅವೆರಡನ್ನೂ—ಅಪಹಂತಿ-ನಿವರ್ತಯತೀತಿ **ಅಪಹಃ**—ನಿವಾರಿಸುವಂಥಾ, ನಿವಾರಣೆ ಮಾಡುವಂಥಾ. 'ಆಶಿಷಿ ಹನಃ' (ಪಾ. ೩/೨/೪೯) ಎಂಬ ಸೂತ್ರದಂತೆ ಹನ್–ಧಾತುವಿಗೆ ಡ(–ಅ) ಪ್ರತ್ಯಯ ಬಂದಿದೆ. ಭಕ್ತರ ಪಾಪಗಳನ್ನೂ ಅಜ್ಞಾನವನ್ನೂ ಮಿಥ್ಯಾಜ್ಞಾನವನ್ನೂ ಪರಿಹಾರ ಮಾಡುವಂಥಾ ಎಂದರ್ಥ.

**೫. ಸಹಸ್ವಾನ್**—'ಸಹೋ ಬಲಂ ಸಹಾ ಮಾರ್ಗಃ' ಎಂದು ಅಮರವಿರುವುದರಿಂದ ಸಹಃ ಎಂದರೆ ಬಲವೆಂದರ್ಥ. (ಕಕ. ವಿ. ಭ. ಪುರಾ.) 'ಸಹೋ ಬಲೇ ಜ್ಯೋತಿಷಿ ಮಾರ್ಗಶೀರ್ಷೇ' ಎಂದೂ ಮತ್ತೊಂದು ಅಭಿಧಾನ (ಭ). 'ಪ್ರಾಣಃ ಸ್ಥಾಮ ಬಲಂ ದ್ಯುಮ್ನಮೋಜಃ ಶುಷ್ಮ ತರಃ **ಸಹಃ**' ಹಲಾಯುಧಕೋಶ) ಸಹಃ–ಬಲಂ ಅಸ್ಯಾಸ್ತೀತಿ ಸಹಸ್ವಾನ್–ಬಲಶಾಲಿಯಾದ ಎಂದರ್ಥ. ಅಥವಾ 'ಸಹನಶೀಲವಾನ್' ಸಹನಶೀಲರು, ಕ್ಷಮಾಶೀಲರು ಎಂದೂ ಅರ್ಥವಾಗುತ್ತದೆ. (ಭ.) ರಾಮಪಕ್ಷದಲ್ಲಿ ಸಹಸ್ವಾನ್

ಎಂದದ್ದರಿಂದ ಸರ್ವಶತ್ರುಸಂಹಾರಕನೆಂದೂ 'ಕ್ಷಮಯಾ ಪೃಥಿವೀಸಮಃ' (ವಾಲ್ಮೀಕಿ ರಾಮಾಯಣ) ಎಂದೂ ತಿಳಿಯಬೇಕು.

**203. ರಾಮಪರವಾಗಿ ಅನ್ವಯ-ಅನ್ವಯಾರ್ಥ**—(ಹೇ) ಆದ್ಯ ! ತೇ ಯಃ ಅಗ್ರ್ಯಃ ಅವತಾರಃ (ಸಃ) ೧. ಹನೂಮಾನ್, ೨. ಮಹಿತ ಮಹಾಪೌರುಷಃ, ೩. ಬಾಹುಶಾಲೀ, ೪. ಬಹುಬ್ರಹ್ಮಚರ್ಯಾದಿಧರ್ಮೈಃ ಸಹಿತಃ, ೫. ಸಹಸ್ವಾನ್, ೬. ಸಸ್ನೇಹಾನಾಂ ದೇಹಭಾಜಾಂ ಅಹಿತಂ ಅಹರಹಃ ನಿರ್ದಹನ್, ೭. ಅಂಹೋಮೋಹಾಪಹಃ, ೮. ಇತಿ ಇಹ ಖ್ಯಾತಃ, ೯. ದೇಹಭಾಜಾಂ (ಎಂದು ಆವೃತ್ತಿಮಾಡಿಕೊಳ್ಳಬೇಕು) ರಾಮೇ ಮಹತೀಂ ಭಕ್ತಿಂ ಅಪಿ ಸ್ಪೃಹಯತಿ । ತಂ ಅಹಂ ವಂದೇ—ಎಂದು ದಂಡಾನ್ವಯ.

**ಅನ್ವಯಾರ್ಥ**—ಆದ್ಯ–ಸಮಸ್ತ ಜೀವರುಗಳಿಗೂ ಜೀವಿಸುವುದಕ್ಕೇ ಆಧಾರಭೂತನಾದ (ಉಪಜೀವ್ಯನಾದ) ಹೇ ಭಗವಂತ ! ತೇ–ನಿನ್ನ, ಯಃ–ಯಾವ, ಅಗ್ರ್ಯಃ–(ವಾಯುದೇವರ ಅವತಾರಗಳಿಂದ ಸೇವ್ಯವಾದ ರೂಪಗಳಲ್ಲಿ) ಮೊದಲನೆಯದಾದ ಅಥವಾ ಶ್ರೇಷ್ಠವಾದ, ಅವತಾರಃ–ದಾಶರಥಿ (ಸೀತಾ) ರಾಮನೆಂಬ ಅವತಾರವು ಯಾವುದಿದೆಯೋ ; (ಸಃ–ಅದು ಎಂದು ಯಚ್ಛಬ್ದದ ಬಲದಿಂದ ಸೇರಿಸಿಕೊಳ್ಳಬೇಕು) ೧. ಹನುಮಾನ್–(ಹನು-ಶಬ್ದವು ಜ್ಞಾನವಾಚಕವಾದ ಕಾರಣ) ಜ್ಞಾನಪೂರ್ಣವಾದುದು. ಎಂದರೆ ಅಪರಿಮಿತಾನಂತಜ್ಞಾನಮಯವಾದುದು. ೨. ಮಹಿತ....ಪೌರುಷಃ-ಮಹಿತ–(ಬ್ರಹ್ಮರುದ್ರಾದಿ ಸಕಲ ದೇವತೆಗಳಿಂದಲೂ) ಪೂಜಿತವಾದ, ಮಹಾಪೌರುಷಃ–(ರಾವಣಾದಿ ಅನೇಕ ರಾಕ್ಷಸರನ್ನು ಸಂಹಾರ ಮಾಡಿದ್ದು, ಸಮುದ್ರಕ್ಕೆ ಸೇತುವೆ ಕಟ್ಟಿದ್ದು, ಶರಭಂಗ-ಸುತೀಕ್ಷ್ಣ-ವಿಭೀಷಣಾದಿ ಭಕ್ತೋದ್ಧಾರಮಾಡಿದ್ದೇ ಮೊದಲಾದ) ಅಮಿತಪರಾಕ್ರಮವುಳ್ಳದ್ದು. ೩. ಬಾಹುಶಾಲೀ–ಆಜಾನುವಾದ ಬಾಹುಗಳಿಂದ ಶೋಭಿಸುವಂಥಾದ್ದು ಮತ್ತು ಅಮಿತಭುಜಪರಾಕ್ರಮವುಳ್ಳಂಥಾದ್ದು ೪. (ಅ)ಬಹು-ಅನೇಕಗಳಾದ, ಬ್ರಹ್ಮ–ವೇದಗಳಲ್ಲಿ, ಚರ್ಯಾ–ಪ್ರತಿಪಾದ್ಯಮಾನವಾದ ಚರಿತ್ರೆಗಳು, ಆದಿ–ಮೊದಲಾದ, ಧರ್ಮೈಃ–ಲಕ್ಷಣಗಳಿಂದ ; (ಆ) ಅಥವಾ ಬಹು–ಅನೇಕವಾದ, ಬ್ರಹ್ಮಚರ್ಯ-ಆದಿ–ಜಿತೇಂದ್ರಿ-

ಯತ್ವವೇ ಮೊದಲಾದ, ಧರ್ಮೈಃ–ಕ್ಷತ್ರಿಯಧರ್ಮಗಳಿಂದ ; ಅಥವಾ (ಇ) ಬಹು–ಅನೇಕರಾದ, ಬ್ರಹ್ಮಚರ್ಯ-ಆದಿ–ಬ್ರಹ್ಮಚರ್ಯವೇ ಮೊದಲಾದ, ಧರ್ಮೈಃ–ಧರ್ಮವನ್ನು ಅನುಷ್ಠಾನಮಾಡುವ ವಸಿಷ್ಠಾದಿ ಮಹರ್ಷಿಗಳಿಂದ, ಸಹಿತಃ–ಕೂಡಿದಂಥಾದ್ದು. ೫. ಸಹಸ್ವಾನ್–ಅಪರಿಮಿತ ಬಲವುಳ್ಳಂಥಾದ್ದು ಅಥವಾ ಸಹನಶೀಲವಾದುದು. ೬. ಸಸ್ನೇಹಾನಾಂ–ಸ್ನೇಹವೆಂಬ ಭಕ್ತಿ-ಯುಳ್ಳಂಥಾ ; ದೇಹಭಾಜಾಂ–ಶರೀರಧಾರಿಗಳಾದ ಪ್ರಾಣಿಗಳ, ಅಹಿತಂ–ಅನಿಷ್ಟವನ್ನು ; ಅಹರಹಃ–ಪ್ರತಿನಿತ್ಯವೂ (ಅಥವಾ ದಿನೇದಿನೇ); ನಿರ್ದಹನ್–ಭಸ್ಮಮಾಡಿಬಿಡುವಂಥಾದ್ದು. ೭. ಅಂಹೋಮೋಹಾಪಹಃ–ಅಂಹಃ–ಪಾಪ-ಗಳನ್ನೂ, ಮೋಹ–ಅಜ್ಞಾನವನ್ನೂ ಅಥವಾ ಮಿಥ್ಯಾಜ್ಞಾನವನ್ನೂ, ಅಪಹಃ–ನಿವಾರಣೆಮಾಡುವಂಥಾದ್ದು. ೮. ಇತಿ–ಈ ರೀತಿಯಾಗಿ ; ಇಹ–ಇಲ್ಲಿ ಎಂದರೆ ಈ ಜಗತ್ತಿನಲ್ಲಿ ; ಖ್ಯಾತಃ–ಪ್ರಖ್ಯಾತವಾಗಿದೆ. ೯. ದೇಹಭಾಜಾಂ (ಎಂದು ಆವೃತ್ತಿಮಾಡಿಕೊಳ್ಳಬೇಕು)–ಮುಕ್ತಿಯೋಗ್ಯ ಜೀವರುಗಳಿಗೆ ; ರಾಮೇ–ರಮಣರೂಪವಾದ ಮುಕ್ತ್ಯರ್ಥವಾಗಿ (ತಾದರ್ಥ್ಯದಲ್ಲಿ ಸಪ್ತಮೀ ಎಂದು ತಿಳಿಯಬೇಕು), ಮಹತೀಂ–ಮಹತ್ತರವಾದ (ಎಂದರೆ ದೇಹ-ಗೇಹ-ದಾರಾಪತ್ಯಾದಿ ಎಲ್ಲರಲ್ಲಿ ಮಾಡುವುದಕ್ಕಿಂತಲೂ ಸಾವಿರಾರು ಪಾಲು ಅಧಿಕ-ವಾದ), ಭಕ್ತಿಂ ಅಪಿ–ಭಕ್ತಿಯನ್ನೇ (ಇಲ್ಲಿ ಅಪಿ ಶಬ್ದವು ಏವಕಾರಾರ್ಥಕ), ಸ್ಪೃಹಯತಿ–ಅಪೇಕ್ಷಿಸುತ್ತದೆ. ತಂ–ಅಂಥಾ ರಾಮಚಂದ್ರದೇವರನ್ನು, ಅಹಂ–ನಾನು, ವಂದೇ–ವಂದಿಸುತ್ತೇನೆ (ನಮಸ್ಕಾರವನ್ನೂ ಮಾಡುತ್ತೇನೆ, ಸ್ತೋತ್ರವನ್ನೂ ಮಾಡುತ್ತೇನೆ.)

**204. ಶ್ರೀರಾಮದೇವರ ಪರವಾಗಿ ಭಾವಾರ್ಥ**—ವಾಯು-ದೇವರು ಭಗವತ್ಕಾರ್ಯಸಾಧನೆಗಾಗಿ ತ್ರೇತಾ ದ್ವಾಪರ ಮತ್ತು ಕಲಿಯುಗ-ಗಳಲ್ಲಿ ಕ್ರಮವಾಗಿ ಹನುಮ ಭೀಮ ಮಧ್ವರೆಂಬ ನಾಮಧೇಯಗಳಿಂದ ಅವತಾರ ಮಾಡಿದ್ದಾರೆ. ಅದರ ಪೈಕಿ, ಶ್ರೀಮನ್ನಾರಾಯಣನು ರಾವಣ-ಕುಂಭಕರ್ಣಾದಿ ದೈತ್ಯರ ವಧಾರ್ಥವಾಗಿ ತ್ರೇತಾಯುಗದಲ್ಲಿ ಶ್ರೀರಾಮ-ಚಂದ್ರನಾಗಿ ಅವತಾರ ಮಾಡಿದ ಕಾರಣ ಆ ಸ್ವಾಮಿಯ ಕಾರ್ಯಸಾಧನೆ-ಗಾಗಿಯೇ ವಾಯುದೇವರು ಹನುಮಂತನಾಗಿ ಅವತಾರ ಮಾಡಿದರು.

ಹೀಗೆ ವಾಯುದೇವರ ಪ್ರಥಮಾವತಾರವಾದ ಹನುಮತ್ಸೇವ್ಯವಾದ ಭಗವದ್ರೂಪವೇ ಶ್ರೀ ಸೀತಾರಾಮಚಂದ್ರಮೂರ್ತಿಯು.

ಭಗವಂತನ ಇತರ ಎಲ್ಲಾ ಅವತಾರಗಳಂತೆಯೇ ಈ ರಾಮಾವತಾರವೂ ಹನುಮಚ್ಛಬ್ದವಾಚ್ಯವಾಗಿ ಜ್ಞಾನಾನಂದಾದ್ಯುಪಲಕ್ಷಿತವಾದ ಅನಂತಕಲ್ಯಾಣಗುಣಪರಿಪೂರ್ಣವಾದ ರೂಪ. ಈ ರಾಮಾವತಾರದಲ್ಲಿ ಸುಬಾಹುಮಾರೀಚ–ತಾಟಕಾದಿಗಳಿಂದ ಆರಂಭಿಸಿ ಜನಸ್ಥಾನನಿವಾಸಿಗಳಾದ ಖರತ್ರಿಶಿರದೂಷಣಾದಿ ಹದಿನಾಲ್ಕುಸಾವಿರ ದೈತ್ಯರನ್ನೇ ಅಲ್ಲದೆ ಲಂಕಾನಿವಾಸಿಗಳಾಗಿ ಲೋಕಕಂಟಕರಾಗಿದ್ದ ರಾವಣ–ಕುಂಭಕರ್ಣಾದಿ ಅಸಂಖ್ಯ ದೈತ್ಯರನ್ನು ಸಂಹಾರ ಮಾಡಿ ಅಪರಿಮಿತ ಪರಾಕ್ರಮವನ್ನು ತೋರಿ ಶ್ರೀ ರಾಮದೇವರು ಬ್ರಹ್ಮರುದ್ರೇಂದ್ರಾದಿ ಸಕಲ ದೇವತೆಗಳಿಂದಲೂ ಸ್ತುತ್ಯನಾಗಿದ್ದಾನೆ. ಆಜಾನ-ಬಾಹುತ್ವವೇ ಮೊದಲಾದ ಅಸಾಧಾರಣವಾದ ವೇದೋಕ್ತವಾದ ಚಕ್ರವರ್ತಿಗಳಿಗಿರಬೇಕಾದ ಸಕಲ ಸಲ್ಲಕ್ಷಣಗಳಿಂದಲೂ* ಪರಿಪೂರ್ಣವಾಗಿ ಪರಿಶೋಭಿಸುತ್ತಿದ್ದಾನೆ. ಅಷ್ಟೇ ಅಲ್ಲ, ವೇದಪ್ರತಿಪಾದ್ಯವಾದ ಜಿತೇಂದ್ರಿಯತ್ವ, ಬ್ರಹ್ಮಚರ್ಯ, ನಿರ್ದೋಷತ್ವ ಸ್ವಗತಭೇದವರ್ಜಿತತ್ವಾದಿ ಅನಂತಧರ್ಮಗಳಿಂದಲೂ ವಿಶಿಷ್ಟನಾಗಿದ್ದು ಯೋಗೀಶ್ವರರೆಂದು ಪ್ರಸಿದ್ಧರಾದ ವಸಿಷ್ಠ-ವಿಶ್ವಾಮಿತ್ರಾದಿ ಮಹಾಯೋಗಿಗಳ ಹೃದಯಕಮಲದಲ್ಲಿಯೂ ವಿಹಾರ ಮಾಡತಕ್ಕ ಅಪ್ರಮೇಯಸ್ವರೂಪನಾಗಿದ್ದಾನೆ. ಅನಂತಬಲವುಳ್ಳ ಮಹಾಬಲಿಷ್ಠನಾದರೂ ಕ್ಷಮಾಶೀಲನೂ ದಯಾಮಯನೂ ಆಗಿದ್ದಾನೆ. 'ಆಪದಾಮಪಹರ್ತಾರಂ ದಾತಾರಂ ಸರ್ವಸಂಪದಾಂ' ಎಂಬ ಪ್ರಾಚೀನೋಕ್ತಿಯು ಹೇಳುವಂತೆ ತನ್ನ ಭಕ್ತರು ದಿನೇ ದಿನೇ ಮಾಡುವ ಸಕಲ ಪಾಪಗಳನ್ನೂ ನಾಮೋಚ್ಚಾರಣ ಮಾತ್ರದಿಂದಲೇ ಭಸ್ಮ ಮಾಡಿಬಿಡುವುದಲ್ಲದೆ ಅವರ

---

*ಆ ಕೆಲವು ಲಕ್ಷಣಗಳನ್ನು ವಾಲ್ಮೀಕಿರಾಮಾಯಣದಲ್ಲೂ (ಬಾಲಕಾಂಡ, ೧ ಸರ್ಗ) 'ವಿಪುಲಾಂಸೋ ಮಹಾಬಾಹುಃ ಕಂಬುಗ್ರೀವೋ ಮಹಾಹನುಃ। ಮಹೋರಸ್ಕೋ ಮಹೇಷ್ವಾಸೋ ಗೂಢಜತ್ರುರರಿಂದಮಃ ॥ ಆಜಾನುಬಾಹುಃ ಸುಶಿರಾಃ ಸುಲಲಾಟಃ ಸುವಿಕ್ರಮಃ । ಸಮಃ ಸಮವಿಭಕ್ತಾಂಗಃ ಸ್ನಿಗ್ಧವರ್ಣಃ ಪ್ರತಾಪವಾನ್ ॥ ಪೀನವಕ್ಷೋ ವಿಶಾಲಾಕ್ಷಃ....' ಎಂದು ತೋರಿಸಿದೆ.

ಸಕಲಾಪತ್ತುಗಳನ್ನೂ ಪರಿಹಾರ ಮಾಡಿ ಅಜ್ಞಾನವನ್ನು ಕಳೆದು ಸಮಸ್ತಾ-ಭೀಷ್ಟಾರ್ಥಗಳನ್ನೂ ನೆರವೇರಿಸಿಕೊಡುವ ಆಪದ್ಬಂಧುವೂ ಆಗಿದ್ದಾನೆ; ಅದಕ್ಕೂ ಹೆಚ್ಚಾಗಿ ಜಗನ್ಮೋಹಕರೂಪವುಳ್ಳ ಈ ಮೂರ್ತಿಯಲ್ಲಿ, ತ್ರೇತಾ-ದ್ವಾಪರಗಳಲ್ಲಿ ಮಾತ್ರವೇ ಅಲ್ಲದೆ ಕಲಿಯುಗದಲ್ಲೂ ಸಹ, ಯಾರು ಸ್ವಾತ್ಮಾ-ತ್ಮೀಯ ಸಮಸ್ತ ವಸ್ತುಗಳಿಗಿಂತಲೂ ಅನಂತಗುಣ ಅಧಿಕವಾದ ಸುದೃಢವಾದ ನಿರಂತರ ಪ್ರೇಮಪ್ರವಾಹರೂಪವಾದ ಏಕಾಂತಭಕ್ತಿಯನ್ನು ಮಾಡುವರೋ ಅವರಿಗೆ ಸಾಲೋಕ್ಯಸಾಯುಜ್ಯಾದಿರೂಪವಾದ ಸ್ವರೂಪಾನಂದಾನುಭವ-ರೂಪವಾದ ಮೋಕ್ಷವನ್ನೇ ಕರುಣಿಸುವಂಥಾ ಮಹಾಪ್ರಭು ಇವನು. ಹನುಮತ್ಸೇವ್ಯನಾದ ಇಂಥಾ ಸೀತಾಪತಿ ಶ್ರೀರಾಮಚಂದ್ರನನ್ನು ನಾನು ಭಕ್ತ್ಯಾದರಗಳಿಂದ ಸಾಷ್ಟಾಂಗಪ್ರಣಾಮಪೂರ್ವಕ ನಮಿಸುವೆನಲ್ಲದೆ ಯಥಾಶಕ್ತಿ ಮನದಣಿಯ ಸ್ತೋತ್ರವನ್ನೂ ಮಾಡುತ್ತೇನೆ ಎಂದು ತಾತ್ಪರ್ಯ.

**205. ಹನುಮತ್ಪರವಾಗಿ ಅನ್ವಯ, ಅರ್ಥ**— (ತೇ–ನಿನ್ನ, ತಂ–ಅಂಥಾ ಎಂಬ ಪದಗಳಿರುವುದರಿಂದ ಹೇ ವಾಯೋ, ಎಂಬ ಸಂಬೋ-ಧನೆಯನ್ನು ಅಧ್ಯಾಹಾರ ಮಾಡಿಕೊಳ್ಳಬೇಕು.) (ಹೇ ವಾಯೋ !) ಇಹ. ಹನುಮಾನ್ ಇತಿ ಖ್ಯಾತಃ ಯಃ ತೇ ಅಗ್ರ್ಯಃ ಅವತಾರಃ (ಅಥವಾ) ಯಃ ತೇ ಅಗ್ರ್ಯಃ ಅವತಾರಃ ಹನೂಮಾನ್ ಇತಿ ಇಹ ಖ್ಯಾತಃ—(ಸಃ) ೧. ಮಹಿತಮಹಾಪೌರುಷಃ, ೨. ಬಾಹುಶಾಲೀ, ೩. ಬಹುಬ್ರಹ್ಮಚರ್ಯಾದಿ-ಧರ್ಮೈಃ ಸಹಿತಃ, ೪. ಸಸ್ನೇಹಾನಾಂ ದೇಹಭಾಜಾಂ ಅಹಿತಂ ಅಹರಹಃ ನಿರ್ದಹನ್, ೫. ಸಹಸ್ವಾನ್, ೬. ಅಂಹೋಮೋಹಾಪಹಃ, ೭. ಅದ್ಯಾಪಿ ರಾಮೇ ಮಹತೀಂ ಭಕ್ತಿಂ ಸ್ಪೃಹಯತಿ । ತಂ ಅಹಂ ವಂದೇ ॥ ಅಥವಾ ಹೀಗೂ ಹೇಳಬಹುದು—ಹೇ ವಾಯೋ ! ಯಃ ತೇ ಇಹ ಹನೂಮಾನ್ ಇತಿ ಖ್ಯಾತಃ ಅಗ್ರ್ಯಃ ಅವತಾರಃ, ತಂ ಅಹಂ ವಂದೇ । (ಸಃ) ಮಹಿತ ಮಹಾಪೌರುಷಃ ಇತ್ಯಾದಿ ಏಳು ವಿಶೇಷಣಗಳು. ಮತ್ತೆ ಕೆಲವರು ಮೊದಲೇ ಏಳು ವಿಶೇಷಣಗಳನ್ನು ಹೇಳಿಕೊಂಡು ಇಂಥಾ ನಿಮ್ಮ ಪ್ರಥಮ ಹನುಮದವ-ತಾರವಿದೆಯೋ ಅದನ್ನು ನಾನು ವಂದಿಸುತ್ತೇನೆ (ತಂ ಅಹಂ ವಂದೇ) ಎಂದೂ

ಅನ್ವಯ ಹೇಳುವರು. ಅನ್ವಯ ಹೇಗಾದರೂ ಶ್ಲೋಕದ ಒಟ್ಟು ಭಾವ ಮಾತ್ರ ಒಂದೇ.

**ಅನ್ವಯಾರ್ಥ**—(ಹೇ ವಾಯೋ–ಎಲೈ ವಾಯುದೇವನೇ !) ಇಹ–ಈ ಜಗತ್ತಿನಲ್ಲಿ, ಹನೂಮಾನ್ ಇತಿ ಖ್ಯಾತಃ–ಹನು ಎಂದರೆ ಜ್ಞಾನ; ಜ್ಞಾನವುಳ್ಳವರಾದ್ದರಿಂದ (ಅನುಪಮ ಮಹಾಜ್ಞಾನಿಗಳಾದ್ದರಿಂದ) ಹನುಮಂತನೆಂದು ಪ್ರಖ್ಯಾತವಾದ, ಯಃ ತೇ ಅಗ್ರ್ಯಃ ಅವತಾರಃ–ಯಾವ ನಿಮ್ಮ ಪ್ರಥಮಾವತಾರವಿದೆಯೋ [ತಂ–ಅದನ್ನು ಅಹಂ–ನಾನು, ವಂದೇ–ನಮಸ್ಕರಿಸುತ್ತೇನೆ ಮತ್ತು ಸ್ತುತಿಸುತ್ತೇನೆ.] (ಸಂಸ್ಕೃತದಲ್ಲಿ 'ವದಿ ಅಭಿವಾದನಸ್ತುತ್ಯೋಃ' ಎಂದು ಧಾತುಪಾಠವಿರುವುದರಿಂದ ವಂದೇ ಎಂದರೆ ನಮಸ್ಕರಿಸುತ್ತೇನೆ ಮತ್ತು ಸ್ತೋತ್ರವನ್ನೂ ಮಾಡುತ್ತೇನೆ ಎಂದು ಎರಡರ್ಥಗಳೂ ಆಗುತ್ತವೆ. ಆ ಸ್ತೋತ್ರವೇ ಮುಂದಿನ ಏಳು ವಿಶೇಷಣಗಳೆಂದು ತಿಳಿಯಬೇಕು.) (ಸಃ–ಅದು, ಆ ಹನುಮದವತಾರವು) ೧. ಮಹಿತ–ಸಕಲರಿಂದಲೂ ಸನ್ಮಾನಿತವಾದ, ಮಹಾಪೌರುಷಃ–(ಸಮುದ್ರಲಂಘನ, ಅಶೋಕವನಭಂಗ, ಅನೇಕ ರಾಕ್ಷಸರ ವಧೆ ಮಾಡಿದ್ದು, ಲಂಕಾದಹನವೇ ಮೊದಲಾದ) ಮಹಾಪರಾಕ್ರಮವುಳ್ಳದ್ದಾಗಿಯೂ, ೨. ಬಾಹುಶಾಲೀ–ಆಜಾನುಬಾಹುರೂಪವುಳ್ಳದ್ದೂ ಮಹಾಬಾಹುಪರಾಕ್ರಮವುಳ್ಳದ್ದೂ (ಈ ಬಾಹುಪರಾಕ್ರಮದ ವರ್ಣನೆ ಮುಂದೆ ೨೦ನೇ ಶ್ಲೋಕದಲ್ಲಿ ಬರುವುದು), ೩. ಬಹುಬ್ರಹ್ಮಚರ್ಯಾದಿಧರ್ಮೈಃ ಸಹಿತಃ–ಬ್ರಹ್ಮಚರ್ಯ, ಜಿತೇಂದ್ರಿಯತ್ವ, ಜ್ಞಾನವೈರಾಗ್ಯಾದಿ ಲಕ್ಷಣಗಳಿಂದಲೂ ಅಣಿಮಾದ್ಯಷ್ಟಸಿದ್ಧಿಗಳಿಂದಲೂ, ಚತುರಾಶ್ರಮಧರ್ಮಗಳಿಂದಲೂ ಕೂಡಿದಂಥಾದ್ದೂ, ೪. ಸಸ್ನೇಹಾನಾಂ ಸ್ನೇಹವೆಂಬ ಭಕ್ತಿಯುಳ್ಳ (ಭಕ್ತಿಭರಿತರಾದ), ದೇಹಭಾಜಾಂ–ಶರೀರಿಗಳ (ಪ್ರಾಣಿಗಳ–ಮನುಷ್ಯರ), ಅಹಿತಂ–ಅನಿಷ್ಟವನ್ನು (ಆಪತ್ತುಗಳನ್ನು), ಅಹರಹಃ–ದಿನೇದಿನೇ (ಹಗಲಿರುಳೂ), ನಿರ್ದಹನ್–ಸುಟ್ಟು ಭಸ್ಮಮಾಡುವಂಥಾದ್ದೂ, ೫. ಸಹಸ್ವಾನ್–ಅತ್ಯಂತ ಬಲಶಾಲಿಯಾದುದೂ ಮತ್ತು ಸಹನಶೀಲವಾದುದೂ, ೬. ಅಂಹೋಮೋಹಾಪಹಃ–ಅಂಹಃ–ದುರಿತ(ಪಾಪ)ಗಳನ್ನೂ, ಮೋಹ–ಅಜ್ಞಾನ–ಮಿಥ್ಯಾಜ್ಞಾನಗಳನ್ನೂ, ಅಪಹಃ–ಪರಿಹರಿಸು-

ವಂಥಾದ್ದೂ (ಅಥವಾ ನಾಶಮಾಡುವಂಥಾದ್ದೂ), ೭. ಅದ್ಯಾಪಿ–ಇವತ್ತಿನ-ವರೆಗೂ (ಇಂದಿಗೂ ಸಹ) ರಾಮೇ–ಶ್ರೀರಾಮಚಂದ್ರದೇವರ ವಿಷಯದಲ್ಲಿ (ಇಲ್ಲಿ ರಾಮೇ ಎಂಬುದು ವಿಷಯ ಸಪ್ತಮೀ), ಮಹತೀಂ–(ಅ) ಮಿಕ್ಕ ಎಲ್ಲ ಜೀವರೂ ರುದ್ರಾದಿ ದೇವತೆಗಳೂ ಸಹ ಮಾಡುವುದಕ್ಕಿಂತ ಅಧಿಕವಾದ, (ಆ) ಅಥವಾ (ಛ.) ಅವಿಚ್ಛಿನ್ನವಾಗಿ ಪ್ರವಹಿಸುವ, (ಇ) (ಛ.) ಅಥವಾ ಶಮ-ದಮಾದಿ ಮಿಕ್ಕ ಎಲ್ಲ ಸಾಧನೆಗಳಿಗಿಂತಲೂ ಅತ್ಯುತ್ತಮ ಸಾಧನವಾದ, ಭಕ್ತಿಂ–ಸುದೃಢಸ್ನೇಹರೂಪಪ್ರೇಮಪ್ರವಾಹವನ್ನು, ಸ್ಪೃಹಯತಿ–ಅಪೇಕ್ಷಿಸು-ವಂಥಾದ್ದೂ ಆಗಿದೆ, ತಂ–ಅಂಥಾ ಹನುಮದ್ರೂಪವನ್ನು, ಅಹಂ–ನಾನು ವಂದೇ–ನಮಿಸುತ್ತೇನೆ ಮತ್ತು ಸ್ತುತಿಸುತ್ತೇನೆ. [ವಿಶೇಷ—(ಪುರಾ.) ರಾಮದೇವರು ಪರಂಧಾಮಕ್ಕೆ ಹೋಗುವಾಗ ಹನುಮಂತನನ್ನು ಹತ್ತಿರ ಕರೆದು ಆಲಿಂಗನ ಮಾಡಿಕೊಂಡು 'ತವಾಹಮಕ್ಷಿಗೋಚರಃ ಸದಾ ಭವಾಮಿ-ನಾನ್ಯಥಾ ।–ಹೇ ಹನುಮಂತ ನಾನು ನಿನಗೆ ಸದಾ ಕಣ್ಣಿಗೆ ಕಾಣಿಸುತ್ತಲೇ ಇರುವೆನು, ಮರೆಯಾಗುವುದೇ ಇಲ್ಲ. ನೀನು ಸದಾ (ಕಿಂಪುರುಷಖಂಡ-ದಲ್ಲಿದ್ದುಕೊಂಡು) ಮಹತ್ತರವಾದ ತಪಸ್ಸನ್ನು ಮಾಡುತ್ತೀರು. ಅದೇ ನನಗೆ ಬಹಳ ಪ್ರಿಯವಾದುದು........ನೀನು ಬಯಸಿದ್ದು ಯಾವುದೂ ಎಂದಿಗೂ ಎಳ್ಳಷ್ಟೂ ಹುಸಿಯಾಗುವುದಿಲ್ಲ' ಎಂದು ಹೇಳಿದನು. ಆಗ ಹನುಮಂತನು 'ಸ್ವಾಮಿ, ನಿನ್ನ ಪಾದಕಮಲದಲ್ಲಿ ಅಧಿಕವಾದ ಭಕ್ತಿ ಇರುವಂತೆಯೂ ಅದು **ಸದಾ ಬೆಳೆಯುತ್ತಿರುವಂತೆ**ಯೂ ಅದರಲ್ಲೇ ನಾನು ನಿರತನಾಗಿರುವಂತೆಯೂ ಅನುಗ್ರಹಿಸು.

ವಿಧೇಹಿ ಪಾದಪಂಕಜೇ ತವೇಶ ಭಕ್ತಿಮುತ್ತಮಾಮ್ ।
ಸದಾ ಪ್ರವರ್ಧಮಾನಯಾ ತಯಾ ರಮೇಽಹಮಂಜಸಾ ॥

ಸಮಸ್ತ ಜೀವರು ಮಾಡುವ ಭಕ್ತಿಯೆಲ್ಲಕ್ಕಿಂತಲೂ ನನ್ನ ಭಕ್ತಿ ಹೆಚ್ಚಾ-ಗಿರುವಂತೆ ಅನುಗ್ರಹಿಸು.

ಸಮಸ್ತ ಜೀವಸಂಚಯಾತ್ ಸದಾಽಧಿಕಾ ಹಿ ಮೇಽಸ್ತು ಸಾ ॥

ಎಂದು ಕೇಳಿಕೊಂಡನೆಂದೂ ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದ ರಾಮಕಥಾಭಾಗದಲ್ಲಿ (೯ಅಧ್ಯಾ. ೬೩–೭೧ಶ್ಲೋ.) ಹೇಳಿದೆ. ಅದೇ ಪ್ರಕಾರ

ರಾಮದೇವರು ಕೊಟ್ಟ ವರ ಮತ್ತು ಹನುಮಂತ ಕೇಳಿಕೊಂಡ ವರ ಎರಡರ ಪ್ರಕಾರವೂ ರಾಮದೇವರು ಹನುಮಂತನಿಗೆ ಸದಾ ದೃಷ್ಟಿಗೋಚರನಾಗಿರುವುದರಿಂದ ಹನುಮಂತನ ಭಕ್ತಿ ದಿನೇದಿನೇ ಅಭಿವೃದ್ಧಿಯಾಗುತ್ತಲೇ ಇರುತ್ತದೆ; ಇದನ್ನು ಸೂಚಿಸುವುದಕ್ಕಾಗಿಯೇ ಪಂಡಿತಾಚಾರ್ಯರು 'ಮಹತೀಂ ಭಕ್ತಿಮದ್ಯಾಪಿ ರಾಮೇ' ಎಂದು ಹೇಳಿದ್ದಾರೆಂದು ತಿಳಿಯಬೇಕು.]

2೦6. **ಹನುಮತ್ಪರವಾಗಿ ತಾತ್ಪರ್ಯ**—ಬಳಿತ್ಥಾಸೂಕ್ತಾದಿ ಶ್ರುತಿಪ್ರತಿಪಾದ್ಯವಾದ ವಾಯುದೇವರ ಮೂರು ಅವತಾರಗಳಲ್ಲಿ ಜಗದ್ವಿಖ್ಯಾತವಾದ ಹನುಮಂತನೆಂಬ ವಾನರರೂಪವೇ ಮೊದಲನೆಯದು. ತ್ರೇತಾಯುಗದಲ್ಲಿ ಭೂಭಾರಹರಣಾರ್ಥ ಶ್ರೀಸೀತಾರಾಮಚಂದ್ರನಾಗಿ ಅವತಾರ ಮಾಡಿದ ಶ್ರೀಹರಿಯ ಕಾರ್ಯಸಾಧನೆಗಾಗಿಯೇ ಈ ಹನುಮದವತಾರವಾಯಿತು. ಹನುಮಂತ (ಹನುಮಾನ್ ಅಥವಾ ಹನೂಮಾನ್) ನೆಂಬ ಈತನ ಈ ಹೆಸರು ಕೇವಲ ಸಂಕೇತಾರ್ಥಕವಲ್ಲ. ಅನ್ವರ್ಥವಾದ ನಾಮವೇ ಆಗಿದೆ. (ಆದ್ದರಿಂದ ಪಂಡಿತಾಚಾರ್ಯರು ಆಂಜನೇಯ, ವಾಯುಪುತ್ರ, ಮಾರುತಿ ಮೊದಲಾದ ಹೆಸರುಗಳನ್ನು ಗ್ರಹಣ ಮಾಡದೆ ಹನೂಮಾನ್ ಎಂಬ ಹೆಸರನ್ನೇ ಆರಿಸಿಕೊಂಡಿದ್ದಾರೆ.). **'ಹನುಶಬ್ದೋ ಜ್ಞಾನವಾಚೀ ಹನುಮಾನ್ ಮತಿಶಬ್ದಿತಃ'** ಎಂಬ ಭಾವವೃತ್ತ (ವೆಂಬ ಗ್ರಂಥ)ವಚನವು ಹೇಳುವಂತೆ **ಹನು** (ಹನೂ) ಎಂದರೆ ಜ್ಞಾನ ಎಂದರ್ಥ. ಹನುಃ (ಹನೂಃ) ಅಸ್ಯಾಸ್ತೀತಿ ಹ(ನು)ನೂಮಾನ್ ಎಂಬ ವ್ಯುತ್ಪತ್ತಿಯಿಂದ ಹನುಮಾನ್ ಎಂದರೆ **ಮಹಾಜ್ಞಾನಿ** ಎಂದರ್ಥ. ಈ ಅರ್ಥವನ್ನು ತಿಳಿಸುವುದಕ್ಕಾಗಿಯೇ ಋಗ್ವೇದವು ಹನುಮಂತನ ಹೆಸರನ್ನು 'ಯದೀಮುಪಹ್ವರತೇ ಸಾಧತೇ **ಮತಿಃ**' (೧ಮಂ. ೧೪೧ಸೂ. ೧ಋಕ್) ಎಂದು **ಮತಿ** (ಬುದ್ಧಿಯುಳ್ಳಜ್ಞಾನಿ) ಶಬ್ದದಿಂದ ಪರ್ಯಾಯವಾಗಿ ತಿಳಿಸಿದೆ. ಏಕೆಂದರೆ ಈ ಹನುಮಂತ ಸಾಕ್ಷಾತ್ ಸೂರ್ಯನಾರಾಯಣನಿಂದಲೇ ವ್ಯಾಕರಣಶಾಸ್ತ್ರವನ್ನು ಓದಿ ಕಲಿತ ನವವ್ಯಾಕರಣ ಪಂಡಿತನು. ಇವನ ಮಾತುಗಳಲ್ಲಿ ಕಿಂಚಿದಪಶಬ್ದವೂ ಸುಳಿಯುವುದೂ ಸಹ ಇಲ್ಲ.

ಈ ರೀತಿ ಈ ಪ್ರಥಮಾವತಾರವು ಜ್ಞಾನಾತ್ಮಕವಾಗಿದ್ದರೂ ಪ್ರಧಾನತಯಾ ಇದು 'ಬಳಿತ್ಥಾ' (ಬಟ್-ಬಲಾತ್ಮಕವಾದುದು) ಎಂದು ಶ್ರುತಿಸಾರು-

ವಂತೆ ಬಲಾತ್ಮಕವೇ ಆಗಿದೆ. ಹನುಮಂತನ ಮಹಾಪರಾಕ್ರಮವು ಆತನು ತೋರಿದ ಅನೇಕ ಜಗದ್ವಿಖ್ಯಾತ ಮಹತ್ಕಾರ್ಯಗಳಿಂದಲೇ ಪ್ರತ್ಯಕ್ಷವಾಗಿ ಪ್ರಕಟವಾಗಿದೆ. ಎಳೆಮಗುವಾಗಿದ್ದಾಗಲೇ ಸೂರ್ಯಬಿಂಬಕ್ಕೆ ಹಾರಿದ್ದು, ಶತಯೋಜನ ವಿಸ್ತೀರ್ಣವಾದ ಸಮುದ್ರವನ್ನು 'ಗೋಷ್ಪದಿ'ಯಂತೆ ಲಂಘಿಸಿದ್ದು, ಅಶೋಕವನವನ್ನು ಧ್ವಂಸಮಾಡಿ ಅಶಸ್ತ್ರಪಾಣಿಯಾಗಿ ಒಬ್ಬನೇ ಅಕ್ಷಕುಮಾರಾದಿ ಸಾವಿರಾರು ರಾಕ್ಷಸರನ್ನು ಸಂಹಾರ ಮಾಡಿದ್ದು, ಲಂಕಾದಹನ ಮಾಡಿದ್ದು ಇತ್ಯಾದಿ ಒಂದೊಂದೂ ಅಚಿಂತ್ಯಾದ್ಭುತ ಪರಾಕ್ರಮಗಳು. ಸಂಜೀವನ ಪರ್ವತವನ್ನು ಕಿತ್ತು ತಂದದ್ದರಿಂದಲೂ (ಇದರ ವರ್ಣನೆ ಮುಂದಿನ ಶ್ಲೋಕದಲ್ಲೇ ಬರುವುದು) ಮುಷ್ಟಿಪ್ರಹಾರದಿಂದ ರಾವಣನ ಎದೆಯನ್ನು ಜಜ್ಜಿ ಅಪ್ಪಳಿಸಿದ್ದರಿಂದಲೂ (ಇದರ ವರ್ಣನೆ ಮುಂದೆ ಇಪ್ಪತ್ತನೇ ಶ್ಲೋಕದಲ್ಲಿ ಬರುವುದು) ಕೈಯಿಂದಲೇ ಅಕ್ಷಕುಮಾರಾದಿ ರಾಕ್ಷಸರನ್ನು ಸಂಹರಿಸಿದ್ದರಿಂದಲೂ ಅವನ ಅತುಳವಾದ **ಬಾಹು ಬಲವು*** ಎಂಥಾದ್ದೆಂಬುದು ತಿಳಿಯುತ್ತದೆ. ಹೀಗೆ ಹನುಮಂತನು ಆಜಾನುಬಾಹುವೂ ದ್ವಾತ್ರಿಂಶಲ್ಲಕ್ಷಣೋಪೇತನೂ ಆಗಿದ್ದಾನೆ.

ಹನುಮಂತನಲ್ಲಿ ಜ್ಞಾನವೂ ಬಲವೂ ಮಾತ್ರವೇ ಅಲ್ಲದೆ ಅಣಿಮಾಮಹಿಮಾದಿ ಅಷ್ಟಸಿದ್ಧಿಗಳೂ ಅಸ್ಖಲಿತವಾದ ನೈಷ್ಠಿಕ ಬ್ರಹ್ಮಚರ್ಯನಿಷ್ಠೆ ಅಸದೃಶವಾದ ಇಂದ್ರಿಯನಿಗ್ರಹ, ವಿಷ್ಣುವಿನಲ್ಲಿ ನಿಶ್ಚಲವಾದ ಏಕಾಂತ ಭಕ್ತಿಯೇ ಮೊದಲಾದ ಸಕಲ ವೈಷ್ಣವಧರ್ಮಗಳೂ ಕಿಂಚಿತ್ತೂ ಕೊರತೆಯಿಲ್ಲದೆ ತುಂಬಿ ಸೂಸುತ್ತಿವೆ. ಅಷ್ಟೇ ಅಲ್ಲದೆ ಕೌಂಠರವ್ಯ ಶ್ರುತಿ ಹೇಳುವಂತೆ ಹನುಮಂತ ಬ್ರಹ್ಮಚಾರಿಧರ್ಮಗಳ ಜೊತೆ ಗೃಹಸ್ಥ, ವಾನಪ್ರಸ್ಥ, ಯತಿ— ನಾಲ್ಕೂ ಆಶ್ರಮಧರ್ಮಗಳನ್ನು ಎಳ್ಳಷ್ಟೂ ತಪ್ಪದೆ ಪರಿಪಾಲಿಸುತ್ತಾನೆ. ಇಷ್ಟಾದರೂ ಈ ಹನುಮಂತನಿಗೆ ತೃಪ್ತಿಯಿಲ್ಲ. ಶ್ರೀರಾಮಚಂದ್ರನು ಪರಂಧಾಮಕ್ಕೆ ಬಿಜಯ ಮಾಡುವಾಗ ಈತನನ್ನು ಕುರಿತು 'ನಾನು ನಿನಗೆ ಸದಾ ಕಾಣಿಸುತ್ತಲೇ ಇರುವೆ'ನೆಂದು ವರ ಕೊಟ್ಟರೂ ಸಹ ಈತ 'ಅಷ್ಟೇ

*ವಿಜಯದಾಸರು ಪ್ರಾಣದೇವರ ಹಸ್ತವನ್ನೇ ಸ್ತುತಿಸುತ್ತಾ ಒಂದು ಸುಳಾದಿಯನ್ನೇ ಬರೆದಿದ್ದಾರೆ.

ಸಾಲದು. ಸ್ವಾಮಿ ! ನನಗೆ ನಿನ್ನಲ್ಲಿ ದಿನೇದಿನೇ ಕ್ಷಣಕ್ಷಣವೂ ಭಕ್ತಿಯು ಅಭಿವೃದ್ಧಿಯಾಗುವಂತೆಯೂ ನನ್ನ ಭಕ್ತಿಯು ಮಿಕ್ಕ ಎಲ್ಲಾ ಜೀವ-ಕೋಟಿಯು ಮಾಡುವ ಭಕ್ತಿಗಿಂತಲೂ ಬಹಳ ಹೆಚ್ಚಾಗಿ ನಿಶ್ಚಲವಾಗಿ ಇರುವಂತೆಯೂ ಅನುಗ್ರಹಿಸಬೇಕೆ'ಂದು ವರ ಕೇಳಿಕೊಂಡ ನಿರ್ವ್ಯಾಜ ಭಕ್ತ. ಈಗಲೂ ಈ ರಾಮಭಕ್ತಾಗ್ರೇಸರನು ಕಿಂಪುರುಷಖಂಡದಲ್ಲಿ ಸದಾ ರಾಮ-ಧ್ಯಾನದಲ್ಲೇ ನಿರತನಾಗಿ ಚಿರಂಜೀವಿಯಾಗಿ ಇದ್ದೇಇದ್ದಾನೆ.

ಇಂಥಾ ಏಕಾಂತಭಕ್ತನಾದ ಈ ಹನುಮಂತನಲ್ಲಿ ಯಾರು ಸದಾ ಭಕ್ತಿ ಮಾಡುವರೋ, ಕನಸಿನಲ್ಲಿ-ಮನಸಿನಲ್ಲಿ, ಕುಳಿತಾಗ ನಿಂತಾಗ ಎಲ್ಲ ಕಾಲ-ಗಳಲ್ಲೂ ಯಾರು ಈತನ ಸ್ಮರಣೆ ಮಾಡುವರೋ ಅಂಥಾ ಹನುಮದ್ಭಕ್ತರಿಗೆ ಏನೇನು ಅನಿಷ್ಟಗಳು—ಆಪತ್ತುಗಳು–ಕುತ್ತುಗಳು ಯಾವ ಯಾವಾಗ ಬರುವವೋ ಆಗಾಗಲೇ ಅವನ್ನು ಈತ ತರಿದಟ್ಟಿ ಭಸ್ಮ ಮಾಡಿಬಿಡುವನು. ಅಷ್ಟೇ ಅಲ್ಲ, 'ಆಚತುರ್ದಶವರ್ಷಾತ್' ಎಂಬ ಪ್ರಮಾಣದಂತೆ ಪ್ರತಿಯೊಬ್ಬ ಮನುಷ್ಯನೂ ಪ್ರತಿನಿತ್ಯ ಕನಿಷ್ಠಪಕ್ಷ ಹತ್ತು ಜನ್ಮ ಎತ್ತುವಷ್ಟು ಪಾಪಗಳನ್ನು ಮಾಡುವನಂತೆ. ಆದರೆ ನಿರಂತರವಾದ ಹನುಮತ್ಸ್ಮರಣೆ-ಯಿಂದ ಅಷ್ಟು ಪಾಪಗಳೂ ನಾಶವಾಗಿ ಹೋಗುವುವಲ್ಲದೆ ಅಜ್ಞಾನವೂ ಮಿಥ್ಯಾಜ್ಞಾನವೂ ದೂರವಾಗುವುವು. ಇದೂ ಉಪಲಕ್ಷಣ. ಏಕೆಂದರೆ

ಬುದ್ಧಿರ್ಬಲಂ ಯಶೋ ಧೈರ್ಯಂ ನಿರ್ಭಯತ್ವಮರೋ(ಗಿ)ಗತಾ ।
ಅಜಾಡ್ಯಂ ವಾಕ್ಪಟುತ್ವಂ ಚ ಹನುಮತ್ಸ್ಮರಣಾದ್ಭವೇತ್ ॥

ಎಂಬ ಆರ್ಷೋಕ್ತಿಯಂತೆ ಚುರುಕುಬುದ್ಧಿಯೂ, ಬಲವೂ, ಕೀರ್ತಿಯೂ, ಧೈರ್ಯ, ನಿರ್ಭಯತ್ವ, ಆರೋಗ್ಯ, ವಾಕ್ಪಾಟವ ಎಲ್ಲಾ ಗುಣಗಳೂ ಸಹ ಹನುಮಂತನ ಸ್ಮರಣೆಯಿಂದಲೇ ಬೆಳೆಯುತ್ತವೆ. ಇಂಥಾ ಪರಮಪಾವನವಾದ ಹನುಮದವತಾರವನ್ನು ನಾನು ನನ್ನ ಯಥಾಶಕ್ತಿ ಮನದಣಿಯ ಸ್ತುತಿಸುತ್ತೇನಲ್ಲದೆ ನಿಶ್ಚಲ ಭಕ್ತಿಯಿಂದ ನಮಸ್ಕಾರವನ್ನೂ ಮಾಡುತ್ತೇನೆ.

**207. ವಿಶೇಷಣಗಳ ಸಮರ್ಥನೆ**—ಸ್ವರ್ಗೀಯ ಮಹಾಮಹೋ-ಪಾಧ್ಯಾಯ ಪಣಿಯಾಡಿ ಪಂಚಾಂಗಂ ಲಕ್ಷ್ಮೀನಾರಾಯಣ ಉಪಾಧ್ಯಾಯರು 'ಗುರುಸಾರ್ವಭೌಮ' ಪತ್ರಿಕೆಯಲ್ಲಿ ಪ್ರಕಟಿಸಿರುವ ಕನ್ನಡ ವ್ಯಾಖ್ಯಾನದಲ್ಲಿ

ಹನುಮಂತನಿಗೆ ಈ ಶ್ಲೋಕದಲ್ಲಿ ಕೊಟ್ಟಿರುವ ವಿಶೇಷಣಗಳ ಔಚಿತ್ಯವನ್ನು ರಾಮಾಯಣದ ಕಥೆಯಿಂದಲೇ ಅನೇಕ ನಿದರ್ಶನಗಳ ಮೂಲಕ ಸಮರ್ಥಿಸಿ-ಕೊಟ್ಟಿದ್ದಾರೆ. ಆದರಿಂದ ಮುಖ್ಯಾಂಶಗಳನ್ನು ಸಂಗ್ರಹಿಸಿ ಈ ರೀತಿ ಹೇಳಬಹುದು.

೧. **ಮಹಿತಮಹಾಪೌರುಷಃ**—೧. ಸೀತಾನ್ವೇಷಣಕ್ಕಾಗಿ ಹೊರಟ ಕಪಿವೀರರೆಲ್ಲರೂ ಸಮುದ್ರವನ್ನು ದಾಟಿ ಲಂಕೆಗೆ ಹೋಗಿಬರುವುದು ಅಸಾಧ್ಯ-ಕಾರ್ಯವೆಂದು ನಿರಾಶರಾದಾಗ ಹನುಮಂತನೊಬ್ಬನೇ ಸಮುದ್ರವನ್ನು ದಾಟಿ ಲಂಕೆಗೆ ಹೋಗಿ ಸೀತಾವೃತ್ತಾಂತವನ್ನು ತಿಳಿದುಕೊಂಡೂಬಂದನು. ೨. ಸಮುದ್ರದಾಟುವ ಮಧ್ಯೆ ಸುರಸೆಯೆಂಬ ನಾಗಮಾತೆಯು ಹನುಮಂತನನ್ನು ಅಡ್ಡಗಟ್ಟಲು ಅವಳ ಬಾಯನ್ನು ಸೂಕ್ಷ್ಮರೂಪದಿಂದ ಪ್ರವೇಶಿಸಿ ಹೊರಗೆ ಬಂದು ಅವಳನ್ನು ಪರಾಜಿತಳನ್ನಾಗಿ ಮಾಡಿದನು. ೩. ಬ್ರಹ್ಮವರದಿಂದ ದೃಪ್ತಳಾದ ಸಿಂಹಿಕೆಯೆಂಬ ದುಷ್ಟರಾಕ್ಷಸಿಯು ಹನುಮಂತನನ್ನು ಘೋರ-ರೂಪ ತಾಳಿ ನುಂಗಲು ಹನುಮಂತ ಅವಳ ಹೊಟ್ಟೆಯನ್ನೇ ಸೀಳಿಕೊಂಡು-ಹೊರಗೆ ಬಂದು ಅವಳನ್ನು ಸೋಲಿಸಿಬಿಟ್ಟನು. ೪. ಲಂಕೆಗೆ ಕಾವಲಾಗಿದ್ದ ಲಂಕಿಣಿಯು ಹನುಮಂತನನ್ನು ಲಂಕೆಗೆ ಪ್ರವೇಶಿಸಲು ತಡೆಮಾಡಿದಳು. ಹನುಮಂತ ಆಕೆಯನ್ನು ಪರಾಭವಗೊಳಿಸಿ ಲಂಕಾಪ್ರವೇಶ ಮಾಡಿಯೇ ಮಾಡಿದನು. ೫. ತಾನು ಏಕಾಂಗಿಯಾಗಿಯೇ ಇದ್ದರೂ ರಾವಣನನ್ನು ಅವನ ಸಭೆಯಲ್ಲಿಯೇ ಧಿಕ್ಕರಿಸಿ ಸೀತೆಯನ್ನು ರಾಮನಿಗೆ ಒಪ್ಪಿಸಿ ಸುಖ-ವಾಗಿರಬೇಕೆಂದೂ ಇಲ್ಲದಿದ್ದರೆ ಸಮೂಲವಾಗಿ ನಾಶಹೊಂದುವನೆಂದೂ ಅವನಿಗೆ ಸ್ಪಷ್ಟವಾಗಿ ಹೇಳಿದನು—ಇವೇ ಮೊದಲಾದ ಅಸಂಖ್ಯ ವ್ಯಾಪಾರ-ಗಳು ಹನುಮಂತನ ಮಹಾಪೌರುಷಕ್ಕೆ ಸಾಕ್ಷಿಗಳಾಗಿವೆ. ಈ ಮಹತ್ಕಾರ್ಯ-ಗಳನ್ನು ಅವನ ಜೊತೆ ಹೋಗಿದ್ದ ಅಂಗದಾದಿ ಕಪಿವೀರರೂ ಸುಗ್ರೀವಾದಿ-ಗಳೂ ಮಾತ್ರವೇ ಅಲ್ಲದೆ ಇಂದ್ರಾದಿ ದೇವತೆಗಳೂ ಸಹ ಶ್ಲಾಘಿಸಿದರೆಂದು ರಾಮಾಯಣದಲ್ಲಿ ಕಂಠೋಕ್ತವಾಗಿ ಹೇಳಿದೆ. ಎಲ್ಲದಕ್ಕೂ ಹೆಚ್ಚಾಗಿ ಇವೆಲ್ಲವೂ, ಮಹಾ ಪ್ರಭು ಶ್ರೀರಾಮಚಂದ್ರನ ಮೆಚ್ಚುಗೆಯನ್ನೇ ಪಡೆದಿವೆ. ಹೀಗೆ ಅವು ಸಕಲರಿಂದಲೂ **ಮಹಿತ**ಗಳೂ (ಗೌರವಿಸಲ್ಪಟ್ಟವುಗಳೂ) ಆಗಿವೆ.

೨. **ಬಾಹುಶಾಲೀ**—ಹನುಮಂತನ ಬಾಹುಪರಾಕ್ರಮಕ್ಕೂ ಹೇರಳವಾಗಿ ನಿದರ್ಶನಗಳನ್ನು ಕೊಡಬಹುದು. ೧. ಅವನು ಸಮುದ್ರ ದಾಟಿದ್ದೂ ಲಂಕಾಪ್ರವೇಶ ಮಾಡಿದ್ದೂ ಲಂಕಾದಹನ ಮಾಡಿದ್ದೂ ಎಲ್ಲವೂ ಕೇವಲ ಬಾಹುಬಲದಿಂದಲೇ ಅಲ್ಲವೆ ? ೨. ಲಂಕೆಯಲ್ಲಿದ್ದ ರಾವಣನ ಅಶೋಕವನವು ಅಲ್ಲಿ ಕಾವಲಾಗಿ ನೇಮಕವಾಗಿದ್ದ ಅನೇಕ ರಾಕ್ಷಸದಳಗಳಿಂದ ರಕ್ಷಿತವಾಗಿತ್ತು. ಅದನ್ನು ಹನುಮಂತ ಒಬ್ಬನೇ ಹೊಕ್ಕು ಅಲ್ಲಿದ್ದ ಮರಗಳನ್ನು ಬರಿಯ ಕೈಗಳಿಂದಲೇ ಧ್ವಂಸ ಮಾಡಿದ್ದಲ್ಲದೆ ಅಲ್ಲಿ ರಕ್ಷಕರಾಗಿದ್ದವರನ್ನೆಲ್ಲಾ ಕೈಗಳಿಂದಲೇ ತರಿದಟ್ಟಿಬಿಟ್ಟನು. ೩. ರಾವಣನ ಆಜ್ಞೆಯಿಂದ ಮೈಮೇಲೆ ಯುದ್ಧಕ್ಕೆ ಬಂದ ಅನೇಕ ರಾಕ್ಷಸದಳಗಳನ್ನು ಕೈಗಳಿಂದಲೇ ಕಿತ್ತು ಎಬ್ಬಿದ ವೃಕ್ಷಗಳಿಂದಲೇ ಬಡಿದಪ್ಪಳಿಸಿದನು, ಎಷ್ಟೋ ಲೆಕ್ಕವಿಲ್ಲದಷ್ಟು ರಾಕ್ಷಸರನ್ನು ಅವರು ಪ್ರಯೋಗಿಸಿದ ಅಸ್ತ್ರಶಸ್ತ್ರಗಳಿಂದಲೇ ತನ್ನ ಕೈಯಿಂದಲೇ ತಿರುಗಿಸಿ ಹೊಡೆದು ಸಂಹರಿಸಿಬಿಟ್ಟನು. ೪. ರಾವಣ-ಇಂದ್ರಜಿತುಗಳನ್ನು ಬಿಟ್ಟರೆ ಬಲದಲ್ಲಿ ಮೂರನೆಯವನಾಗಿದ್ದ ಅಕ್ಷಕುಮಾರನನ್ನು ಕೈಯಿಂದಲೇ ಹಿಡಿದು-ಕೊಂಡು ಗರಗರನೆ ತಿರುಗಿಸಿ ನೆಲದ ಮೇಲೆ ಅಪ್ಪಳಿಸಿ ಗತಿ ಕಾಣಿಸಿಬಿಟ್ಟನು. ೫. ರಾವಣನಿಗೆ ಮುಷ್ಟಿಪ್ರಹಾರ ಮಾಡಿ ಜರ್ಜರಗೊಳಿಸಿದ ಮಹಿಮೆ ಇಲ್ಲೇ ಮುಂದೆ ಇಪ್ಪತ್ತನೇ ಶ್ಲೋಕದಲ್ಲಿ ಬರುವುದು. ಹೀಗೆ ಆಯುಧಾಪೇಕ್ಷೆಯೇ ಇಲ್ಲದೆ ಕೇವಲ ಬಾಹುಬಲದಿಂದಲೇ ಶತ್ರುಗಳನ್ನು ಸಂಹಾರ ಮಾಡಬಲ್ಲ ಪರಾಕ್ರಮಶಾಲಿ (ಭೀಮನೊಬ್ಬನನ್ನು ಬಿಟ್ಟರೆ) ಬೇರೆ ಎಲ್ಲೆಲ್ಲೂ ಸಿಗಲಾರನು.

೩. **ಸಹಸ್ವಾನ್** ಎಂದರೆ ಧೈರ್ಯಶಾಲಿ ಮತ್ತು ಬಲಿಷ್ಠ-ನೆಂದರ್ಥ. ಮನಃಕ್ಷೋಭೆಯನ್ನುಂಟು ಮಾಡುವ ಎಂಥಾ ಮುಗ್ಗಟ್ಟಿನಲ್ಲೂ ಎದೆಗುಂದದಿರುವುದೇ ಧೈರ್ಯವಲ್ಲವೇ ? ಅದೇ ಬಲಿಷ್ಠನ ಲಕ್ಷಣವೂ ಆಗಿದೆ-ಯಷ್ಟೆ. ಇದಕ್ಕೂ ಸಾಕಷ್ಟು ಪುರಾವೆಗಳನ್ನು ಕೊಡಬಹುದು. ೧. ಸುಗ್ರೀವ ವಿಧಿಸಿದ್ದ ತಿಂಗಳ ಅವಧಿಯು ಮುಗಿದು ಹೋದರೂ ಲೆಕ್ಕಿಸದೆ ಬಂದ ಕಾರ್ಯದ ಸಾಧನೆಗಾಗಿ ಸಮುದ್ರಲಂಘನ ಲಂಕಾಪ್ರವೇಶಾದಿಗಳನ್ನು ಮಾಡಿದ್ದು. ೨. ಲಂಕೆಗೆ ಹೋದಾಗ ತಾನೊಬ್ಬನೇ ಇದ್ದರೂ ತನ್ನ ಮೇಲೆ

ಎಂಬತ್ತುಕೋಟಿ ರಾಕ್ಷಸಸೈನಿಕರು ಎಂಬತ್ತುಸಾವಿರ ಸೇನಾಪತಿಗಳೊಂದಿಗೆ ಯುದ್ಧಕ್ಕೆ ಬಂದರೂ ಹನುಮಂತ ಎದೆಗುಂದಲಿಲ್ಲ. ಅದಕ್ಕೆ ಪ್ರತಿಯಾಗಿ ಉರವಣಿಸಿ ಅವರೆಲ್ಲರನ್ನೂ ಸದೆಬಡೆದುಬಿಟ್ಟನು. ೩. ರಾವಣನ ಅನುಯಾಯಿಗಳು ಕುಚೋದ್ಯಕ್ಕಾಗಿ ತನ್ನ ಬಾಲಕ್ಕೆ ಬಟ್ಟೆ ಕಟ್ಟಿ ಬೆಂಕಿ ಹಚ್ಚಿದರೂ ಹನುಮಂತ ಕಿಂಚಿತ್ತೂ ಕಳವಳಗೊಳ್ಳಲಿಲ್ಲ. ಅದಕ್ಕೆ ಪ್ರತಿ-ಯಾಗಿ ಆ ಬೆಂಕಿಯಿಂದ, ಲಂಕೆಗೆ ಲಂಕೆಯನ್ನೇ ಸುಟ್ಟು ಬಂದ. ಇದಕ್ಕಿಂತಲೂ ಹೆಚ್ಚಿನ ಧೈರ್ಯ ಎಲ್ಲಿ ಸಿಗುತ್ತದೆ ? ಇದಕ್ಕೂ ಹೆಚ್ಚಿನ ಸಾಹಸವೇನು ಬೇಕು ?

**೪. ಅಂಹೋನೋಹಾಪಹಃ** — ನಾವು ಹಿಂದೆ ೧೬ನೇ ಶ್ಲೋಕ-ದಲ್ಲಿ ವಾಯುದೇವರ ಗುರುತ್ವದ ವಿಷಯ ವಿವರಿಸುವಾಗ (ಖಂಡ 193 ರಲ್ಲಿ) ದೇವತೆಗಳೆಲ್ಲ ಸ್ವಭಾವತಃ ಜ್ಞಾನಿಗಳೆಂದೂ ದೈತ್ಯಾವೇಶದಿಂದ ಅವರಿಗೆ ಅಜ್ಞಾನ, ಮೋಹ-ಅಹಂಕಾರಾದಿ ದೋಷಗಳು ತಾತ್ಕಾಲಿಕವಾಗಿ ಬರುವು-ವೆಂದೂ ಹೇಳಿದ್ದೇವೆ. ಅದರಂತೆ ರುದ್ರಾದಿ ಸಕಲ ದೇವತೆಗಳಿಗೂ ದೈತ್ಯಾವೇಶ-ದಿಂದ ಅಜ್ಞಾನವೂ ಮೋಹವೂ ಬರುವುವು; ಅದರಿಂದ ಅವರೂ ಪಾಪಕಾರ್ಯ ರೂಪ ಹರಿವಿರೋಧವನ್ನು ಮಾಡುವರು. ಆದರೆ ಹನುಮಂತನಿಗೆ ಅಜ್ಞಾನವೂ ಇಲ್ಲ, ದೈತ್ಯಾವೇಶವೂ ಇಲ್ಲ, ಯಾವ ಕ್ಷಣದಲ್ಲೂ ಮೋಹದ ಹೆಸರೂ ಸಹ ಇಲ್ಲ, ಆದಕಾರಣ ಅವನು ಬೇರೆ ದೇವತೆಗಳಿಗೂ ದೇವತಾಂಶರಾದ ಕಪಿವೀರರಿಗೂ ಬಂದ ಮೋಹವನ್ನೂ ಅದರಿಂದ ಸಂಭವಿಸಿದ ಪಾಪ (ಅಂಹಃ)ವನ್ನೂ ಅನೇಕ ವೇಳೆ ಪರಿಹರಿಸಿ ಅವರಿಗಾಗುತ್ತಿದ್ದ ಅನರ್ಥವನ್ನು ತಪ್ಪಿಸಿದ್ದಾನೆ. ಇದಕ್ಕೂ ಅನೇಕ ದೃಷ್ಟಾಂತಗಳನ್ನು ಕೊಡಬಹುದು. ೧. ರಾಮಲಕ್ಷ್ಮಣರನ್ನು ಮೊದಲ ಸಾರಿ ಋಷ್ಯಮೂಕಪರ್ವತದ ಬಳಿ ಸುಗ್ರೀವಾದಿಗಳು ಕಂಡಾಗ ಅವರ ಸ್ವರೂಪವನ್ನು ಅರಿಯದೆ ಭಯಗ್ರಸ್ತರಾಗಿದ್ದರು. ಹನುಮಂತ ರಾಮ-ಸುಗ್ರೀವರ ಸಖ್ಯವನ್ನು ಬೆಳೆಯಿಸಿದನು. ೨. ಸುಗ್ರೀವನಿಗೆ ವಾಲಿಸಂಹಾರಾ-ನಂತರ ರಾಜ್ಯವು ಲಭಿಸಿತು. ಸುಖಭೋಗಗಳಲ್ಲಿ ಲೋಲುಪನಾದ ಅವನು ರಾಮನನ್ನೇ ಮರೆತುಬಿಟ್ಟಿದ್ದನು. ಹನುಮಂತ ಸಕಾಲದಲ್ಲಿ ಅವನನ್ನು ಎಚ್ಚರಿಸಿ ರಾಮನ ದುರಾಗ್ರಹಕ್ಕೆ ಪಾತ್ರನಾಗುವುದನ್ನು ತಪ್ಪಿಸಿದನು.

೩. ಸೀತಾನ್ವೇಷಣಕ್ಕಾಗಿ ಹನುಮಂತನ ಜೊತೆ ಹೊರಟ ಅಂಗದಾದಿ ಕಪಿವೀರರು ಮಾಸಾವಧಿ ಮೀರಲು ಹೆದರಿಕೊಂಡು ಅಂಗದನ ಸೋದರಮಾವನಾದ ತಾರನ ಮಾತಿಗೆ ಮರುಳಾಗಿ ಸ್ವಯಂಪ್ರಭೆಯ ಗುಹೆಯಲ್ಲೇ ಇದ್ದುಬಿಡಬೇಕೆಂದು ನಿರ್ಣಯಿಸಿಕೊಂಡಿದ್ದರು. ಆಗ ಹನುಮಂತ ಅವರನ್ನು ಎಚ್ಚರಿಸಿ ಪ್ರಾಯೋಪವೇಶಕ್ಕೆ ಕೂಡುವಂತೆ ಮಾಡಿದನು. ಅದರಿಂದಲೇ ಮುಂದಿನ ಕಾರ್ಯವೆಲ್ಲ ಸುಸೂತ್ರವಾಗಿ ನಡೆದುಕೊಂಡುಹೋಯಿತು.

೪. ವಿಭೀಷಣನು ರಾವಣನ್ನು ತ್ಯಜಿಸಿ ಬಂದು ಶ್ರೀರಾಮನಿಗೆ ಶರಣಾಗತನಾದಾಗ ಸುಗ್ರೀವಾದಿ ಕಪಿವೀರರೆಲ್ಲರೂ ಅವನಿಗೆ ಆಶ್ರಯ ಕೊಡಬಾರದೆಂದು ವಿರೋಧಿಸಿದರು. ವಿಭೀಷಣನ ನೈಜಭಕ್ತಿಯನ್ನು ಅರಿತ ಹನುಮಂತ ಮಾತ್ರ ರಾಮನನ್ನು ಪ್ರಾರ್ಥಿಸಿ ವಿಭೀಷಣನನ್ನು ಅನುಗ್ರಹಿಸಬೇಕೆಂದು ಹೇಳಿದನು. ಹೀಗೆ ದೇವಾಂಶಸಂಭೂತರು ಮಾಡಿದ ತಪ್ಪುಗಳನ್ನೇ ಒಪ್ಪುಮಾಡಿದ ಹನುಮಂತ ನಮ್ಮಂಥ ಮನುಷ್ಯಮಾತ್ರರು ಮಾಡುವ ಪಾಪಗಳನ್ನೂ ಅಜ್ಞಾನ-ಮಿಥ್ಯಾಜ್ಞಾನದ ಕಾರ್ಯಗಳನ್ನೂ ತಿದ್ದಿ ಸರಿಪಡಿಸುವನೆಂದು ಹೇಳುವುದೇನಿದೆ ?

ಈ ಪ್ರಕಾರ ಪಂಡಿತಾಚಾರ್ಯರು ಪ್ರಾಣದೇವರಿಗೆ (ಹನುಮಂತನಿಗೆ) ಕೊಟ್ಟಿರುವ ಸಕಲ ವಿಶೇಷಣಗಳೂ ಸರ್ವಥಾ ಯಥಾರ್ಥವೇ ಹೊರತು ಒಂದೂ ಹುಸಿಯಲ್ಲ ಎಂಬುದನ್ನು ಪಂಡಿತಭೂಷಣೇತ್ಯಾದಿ ಬಿರುದಾಂಕಿತರಾದ ಈ ವಿದ್ಯಾವಾಚಸ್ಪತಿಗಳು (ಲಕ್ಷ್ಮೀನಾರಾಯಣ ಉಪಾಧ್ಯಾಯರು) ಗುರುಸಾರ್ವಭೌಮ ಪತ್ರಿಕೆಯಲ್ಲಿ ಸ್ಥಾಪನೆಮಾಡಿದ್ದಾರೆ.

ಇಲ್ಲಿಗೆ ೧೭ನೆಯ ಶ್ಲೋಕದ ವಿವರಣೆ ಮುಗಿಯಿತು.

## ಶ್ಲೋಕ ಹದಿನೆಂಟು. ಗಂಧಮಾದನ (ಸಂಜೀವನ) ಪರ್ವತವನ್ನು ತಂದದ್ದು.

**ವಿಶೇಷ**—ಮುಂದಿನ (೧೮–೧೯ನೇ) ಎರಡು ಶ್ಲೋಕಗಳಲ್ಲೂ ರಾಮಪರವಾದ ಅರ್ಥವೂ ಹನುಮತ್ಪರವಾದ ಅರ್ಥವೂ ಸುತರಾಂ ಬೇರೆಯಾಗಿರುವುದಲ್ಲದೆ ಪದವಿಭಾಗವೂ ಬೇರೆ–ಬೇರೆಯೇ ಆಗಿರುವುದರಿಂದ ಮುಂದಿನ ಈ

ಎರಡು ಶ್ಲೋಕಗಳಲ್ಲೂ ಮೊದಲು ರಾಮಪರವಾಗಿ ಪದವಿಭಾಗ, ಅನ್ವಯ, ಅರ್ಥ-ತಾತ್ಪರ್ಯಗಳನ್ನು ಪೂರ್ತಿಯಾಗಿ ಕೊಟ್ಟು ಆಮೇಲೆ ಹನುಮತ್ಪರ-ವಾಗಿ ಎಲ್ಲವನ್ನೂ ಬರೆಯಲಾಗಿದೆ.

## ರಾಮಪರವಾಗಿ ಅನ್ವಯಾರ್ಥಗಳು

**208. ಅವತಾರಿಕೆ**—ಹಿಂದಿನ ಶ್ಲೋಕದಲ್ಲಿ ಶ್ರೀರಾಮಾವತಾರದ ಮಹಿಮೆಯನ್ನು ಹೇಳುತ್ತಾ ಆ ಸ್ವಾಮಿ 'ಮಹಿತಮಹಾಪೌರುಷ' ಎಂದರೆ ದೇವತೆಗಳಿಂದಲೂ ಸ್ತುತ್ಯವಾದ ಅಮೋಘಪರಾಕ್ರಮಶಾಲಿಯೆಂದು ಹೇಳಿ-ದ್ದರು. ಆ ಪರಾಕ್ರಮವನ್ನೇ ಉಪಪಾದನೆ (ಸ್ಥಾಪನೆ) ಮಾಡುವುದಕ್ಕಾಗಿ 'ಪ್ರಾಕ್ ಪಂಚಾಶತ್—'ಎಂಬ ಈ ಶ್ಲೋಕದಲ್ಲಿ ಆ ರಾಮದೇವರ ಅನನ್ಯ-ಸಾಧಾರಣವಾದ ಒಂದು ಅದ್ಭುತ ಮಹಿಮೆಯನ್ನು ವರ್ಣಿಸಿದ್ದಾರೆ. (ಪುರಾ.) ಆದರೆ ಈ ಶ್ಲೋಕದ ಭಾವವು ಅರ್ಥವಾಗಬೇಕಾದರೆ ವಾಲ್ಮೀಕಿರಾಮಾಯಣ-ದಲ್ಲೂ (ಯುದ್ಧಕಾಂಡ, ೪೫–೫೦ ಸರ್ಗ) ತಾತ್ಪರ್ಯನಿರ್ಣಯದಲ್ಲೂ (೮ ಅಧ್ಯಾ., ೧೫೮–೪೬ ಶ್ಲೋ) ನಿರೂಪಿತವಾಗಿರುವ ಕಥಾಭಾಗವು ತಿಳಿದಿರ-ಬೇಕು. ಆದಕಾರಣ ಆ ಕಥೆಯನ್ನೇ ಇಲ್ಲಿ ಸಂಗ್ರಹಿಸಿ ಕೊಟ್ಟಿದ್ದೇವೆ.

**209. ರಾಮಾವತಾರದಲ್ಲಿ ಗರುಡನ ಸೇವೆ**—ಭಗವಂತ ನಾರಾಯಣನು ರಾವಣಾದಿ ಲೋಕಕಂಟಕರನ್ನು ಸಂಹರಿಸುವುದಕ್ಕಾಗಿ ರಾಮ-ಚಂದ್ರನೆಂಬ ಹೆಸರಿನಿಂದ ಮನುಷ್ಯನಾಗಿ ಅವತಾರ ಮಾಡಿದಾಗ ಎಲ್ಲ ದೇವತೆ ಗಳಿಗೂ ವಾನರರಾಗಿ ಅವತಾರ ಮಾಡಿ ಶ್ರೀರಾಮನಿಗೆ ಸೇವೆಮಾಡುವ ಅವಕಾಶದೊರಕಿತು. ಗರುಡನೊಬ್ಬನಿಗೆ ಮಾತ್ರ ಯಾವ ಅವತಾರಕ್ಕೂ ಅವಕಾಶವೇ ಇರಲಿಲ್ಲವಾದ್ದರಿಂದ ಸ್ವಲ್ಪ ಸೆಚ್ಚಿನಿಸಿತು. ಅದನ್ನು ಕಂಡ ಶ್ರೀಹರಿ ಅವನಿಗೂ ಸಮಾಧಾನ ಮಾಡಿ, 'ನಿನಗೂ ಸೇವೆ ಮಾಡಲು ಅವಕಾಶ ಕಲ್ಪಿಸಿಕೊಡುವೆನು, ಹೆದರಬೇಡ' ಎಂದು ಧೈರ್ಯಕೊಟ್ಟು 'ರಾವಣನ ಮಗ ಇಂದ್ರಜಿತ್ ಸಕಲ ವಾನರಯೋಧರನ್ನೂ ನಾಗಪಾಶದಿಂದ ಬಂಧಿಸಿ ನಿಶ್ಚೇಷ್ಟರನ್ನಾಗಿ ಮಾಡಿಬಿಡುವನು. ಅವರನ್ನು ಆ ನಾಗಪಾಶದಿಂದ ಬಿಡಿಸುವುದಕ್ಕೆ ನನಗೂ ಲಕ್ಷ್ಮಣನಿಗೂ ಹನುಮಂತನಿಗೂ ಸಾಮರ್ಥ್ಯವಿದ್ದರೂ

ನಾವು ಬಿಡಿಸುವುದಿಲ್ಲ. ಆಗ ನಾನು ನಿನ್ನನ್ನು ಸ್ಮರಿಸುವೆನು. ನೀನೇ ಬಂದು ಆ ಪಾಶಗಳನ್ನೆಲ್ಲ ಬಿಡಿಸು, ಇದೇ ನಿನ್ನ ಸೇವೆ' ಎಂದು ಅಪ್ಪಣೆ ಮಾಡಿದನು. ಅದರಂತೆಯೇ ಇಂದ್ರಜಿತ್ತು ಸಕಲ ವಾನರವೀರರನ್ನೂ ನಾಗಪಾಶದಿಂದ ಬಂಧಿಸಿಬಿಡಲು ರಾಮದೇವರು ಗರುಡನನ್ನು ಸ್ಮರಿಸಿ ಅವನನ್ನು ಬರಮಾಡಿ-ಕೊಂಡು ಅವನಿಂದಲೇ ನಾಗಪಾಶಗಳನ್ನು ಬಿಡಿಸಿದನು. ಹೀಗೆ ಗರುಡ-ನೊಬ್ಬನಿಗಾಗಿಯೇ ಒಂದು ವಿಶೇಷ ಸೇವೆಗಾಗಿ ಅವಕಾಶ ಕಲ್ಪಿಸಿಕೊಟ್ಟ ಮಹಾಪ್ರಭು ರಾಮದೇವರು ಎಂದು ಈ ಶ್ಲೋಕದಲ್ಲಿ ವರ್ಣಿಸಿದ್ದಾರೆ.

**ಪ್ರಾಕ್ ಪಂಚಾಶತ್ ಸಹಸ್ರ್ಯ—ರ್ವ್ಯವಹಿತಮಮಿತಂ**
**ಯೋಽಜನ್ಯೈಃ ಪರ್ವತಂ ತ್ವಂ**
**ಯಾವತ್ ಸಂಜೀವನಾದ್ಯಾ....ಷಧನಿಧಿ-ಮಧಿಕ-**
**ಪ್ರಾಣ ಲಂಕಾಮನೈಷೀಃ ।**
**ಅದ್ರಾಕ್ಷೀ.ದುತ್ಪತಂತಂ ತತ ಉತ ಗಿರಿಮುತ್-**
**ಪಾಟಯಂತಂ ಗೃಹೀತ್ವಾ**
**ಽಽಯಾಂತಂ ಖೇ ರಾಘವಾಂಘ್ರೌ ಪ್ರಣತಮಪಿ ತದೈ-**
**ಕಕ್ಷಣೇ ತ್ವಾಂ ಹಿ ಲೋಕಃ ॥ ೧೮ ॥**

**ಪದಚ್ಛೇದ**—ಪ್ರಾಕ್ ! ಪಂಚಾಶತ್ ! ಸಹಸ್ರೈಃ, ವ್ಯವಹಿತಂ, ಅಮಿತಂ, ಯಃ, ಅಜನ್ಯೈಃ, ಪರ್ವತಂ, ತ್ವಂ, ಯಾವತ್, ಸಂಜೀವನ ! ಆದ್ಯ ! ಔಷಧನಿಧಿಂ, ಅಧಿಕಪ್ರಾಣ ! ಲಂಕಾಂ, ಅನೈಷೀಃ, ಅದ್ರಾಕ್ಷೀತ್, ಉತ್ಪತಂತಂ, ತತಃ, ಉತ ! ಗಿರಿಂ, ಉತ್ಪಾಟಯಂತಂ, ಗೃಹೀತ್ವಾ, ಯಾಂತಂ, ಖೇ, ರಾಘವ ! ಅಂಘ್ರೌ, ಪ್ರಣತಂ, ಅಪಿ, ತದಾ, ಏಕಕ್ಷಣೇ, ತ್ವಾಂ, ಹಿ, ಲೋಕಃ ॥

**210. ಶ್ಲೋಕದ ವಿಶ್ಲೇಷಣೆ**—ನಾಲ್ಕನೇ ಚರಣದಲ್ಲಿರುವ **ರಾಘವ** ಎಂಬುದು ರಾಮದೇವರ ಸಂಬೋಧನೆ. ಅದಕ್ಕೆ ೧. ಪ್ರಾಕ್, ೨. ಪಂಚಾಶತ್, ೩. ಸಂಜೀವನ, ೪. ಆದ್ಯ, ೫. ಅಧಿಕಪ್ರಾಣ, ೬. ಉತ ಎಂದು ಆರು ವಿಶೇಷಣಗಳು. (ಇವೆಲ್ಲವೂ ಸಂಬೋಧನೆಗಳಾದ್ದರಿಂದ

ಪದಚ್ಛೇದ ಮಾಡುವಾಗ ಈ ಆರರ ಮುಂದೆಯೂ '!' ಎಂಬ ಸಂಬೋಧನಾ ಚಿಹ್ನೆಯನ್ನು ಹಾಕಿದೆ.) ರಾಮದೇವರ ಪರವಾಗಿ ಅರ್ಥ ಹೇಳುವಾಗ **ಪರ್ವತಂ**—ಗರುಡನನ್ನು ಎಂದೂ, **ಗಿರಿಂ**—ವಾಯುದೇವರನ್ನು ಎಂದೂ ಅರ್ಥವಾಗುತ್ತದೆ, ಇದನ್ನು ಮುಂದೆ ವಿವರಿಸುವೆವು. ಈ ಶ್ಲೋಕದಲ್ಲಿರುವ **ತ್ವಾಂ ಲೋಕಃ ಉತ್ಪಾಟಯಂತಂ ಅದ್ರಾಕ್ಷೀತ್**—ನಿನ್ನನ್ನು ಜನಗಳು ಕಿತ್ತುಹಾಕುವವನನ್ನಾಗಿ (ನಾಶ ಮಾಡುವವನನ್ನಾಗಿ) ಕಂಡರು ಎಂಬುದೇ ಪ್ರಧಾನವಾಕ್ಯ. ಕಿತ್ತುಹಾಕುವುದು ಸಕರ್ಮಕ ಕ್ರಿಯೆಯಾದ್ದರಿಂದ ಅದಕ್ಕೆ ಸಂದರ್ಭಾನುಗುಣವಾಗಿ 'ಭಕ್ತರ ಅನಿಷ್ಟಗಳನ್ನು' ಎಂಬ ಯೋಗ್ಯ-ವಾದ ಕರ್ಮಪದವನ್ನು ಅಧ್ಯಾಹಾರ ಮಾಡಿಕೊಂಡು ಸೇರಿಸಬೇಕು.

ಈ ಪ್ರಧಾನವಾಕ್ಯದಲ್ಲಿರುವ **ತ್ವಾಂ** ಎಂಬ ಸರ್ವನಾಮಕ್ಕೆ 'ಯಃ-ತ್ವಂ ಪರ್ವತಂ ಯಾವತ್ ಏಕಕ್ಷಣೇ ಹಿ ಲಂಕಾಂ ಅನೈಷೀಃ ಅಪಿ, ತದಾ ತಂ ತ್ವಾಂ' ಎಂಬ ಗುಣವಾಚಕ ಅಪೂರ್ಣವಾಕ್ಯವು ವಿಶೇಷಣವಾಗಿದೆ. ಹೀಗೆ 'ಯಾವ ನೀನು ಗರುಡನನ್ನು ಯಾವಾಗ ಒಂದೇ ಕ್ಷಣದಲ್ಲಿಯೇ ಲಂಕೆಗೆ ಕರೆಯಿಸಿಕೊಂಡೆಯೋ ಆಗ ಅಂಥಾ ನಿನ್ನನ್ನು ಜನಗಳು (ಭಕ್ತರ ಅನಿಷ್ಟ-ಗಳೆಲ್ಲವನ್ನೂ) ನಾಶಮಾಡುವವನೆಂದು ಕಂಡುಕೊಂಡರು (ನೋಡಿದರು)' ಎಂಬುದೇ ಇಡೀ ಶ್ಲೋಕದ ಒಟ್ಟು ತಾತ್ಪರ್ಯ.

ಅಪೂರ್ಣವಾಕ್ಯದಲ್ಲಿರುವ **ಪರ್ವತಂ**–ಗೆ ೧. ಔಷಧನಿಧಿಂ, ೨. ಅಂಘ್ರಿ ಪ್ರಣತಂ ಎಂದು ಎರಡು ವಿಶೇಷಣಗಳು. **ತ್ವಾಂ**–ಗೆ ೧. ತಂ, ೨. ಸಹಸ್ರೈಃ ಅಜನ್ಯೈಃ ವ್ಯವಹಿತಂ, ೩. ಅಮಿತಂ, ೪. ಗಿರಿಂ ಗೃಹೀತ್ವಾ ಖೇ ಯಾಂತಂ, ೫. ತತಃ ಉತ್ಪತಂತಂ ಎಂದು ಐದು ವಿಶೇಷಣಗಳು. ಮುಂದೆ (ಖಂಡ-211ರಲ್ಲಿ ಕೊಟ್ಟಿರುವ ಇಡೀ ಶ್ಲೋಕದ ಅನ್ವಯವನ್ನು ನೋಡಿದರೆ ಈ ವಿಚಾರಗಳೆಲ್ಲ ಹೃದ್ಗತವಾಗುವುವು ಆದರೆ ಅನ್ವಯಕ್ಕೆ ಹೋಗುವುದಕ್ಕೆ ಮೊದಲು ಅನೇಕ ಪದಗಳ ಅರ್ಥವಿಶೇಷವನ್ನೇ ವಿವರಿಸುವುದು ಅತ್ಯವಶ್ಯಕ-ವಾಗಿದೆ.

**211. ಕಠಿನ ಶಬ್ದಗಳ ವಿವರಣೆ—೧. ಪ್ರಾಕ್**—ಸಾಮಾನ್ಯ-ವಾಗಿ ಪ್ರಾಕ್ ಎಂದರೆ ಮೊದಲು, ಪೂರ್ವದಲ್ಲಿ ಅಥವಾ ಹಿಂದೆ ಎಂದು ಅರ್ಥ.

ಈ ಅರ್ಥದಲ್ಲಿ ಪ್ರಾಕ್ ಅವ್ಯಯವಾಗುತ್ತದೆ. ಆದರೆ ರಾಮದೇವರ ಪರವಾಗಿ ಅರ್ಥಮಾಡುವಾಗ ಪ್ರ+ಅಚ್–ಪ್ರಾಚ್ ಎಂಬ ಚಕಾರಾಂತ ಪುಲ್ಲಿಂಗಶಬ್ದ-ವಾಗುತ್ತದೆ. ವ್ಯಾಕರಣಶಾಸ್ತ್ರದ ಪ್ರಕಾರ ಚಕಾರಾಂತ ಶಬ್ದಗಳು ಪ್ರಥಮಾ ವಿಭಕ್ತಿ ಏಕವಚನದಲ್ಲಿ 'ಚೋಃ ಕುಃ' ಎಂಬ (ಪಾ. ೮.೨/೩೦) ಸೂತ್ರದಂತೆ ಚಕಾರಕ್ಕೆ ಕಕಾರಾದೇಶ ಬರುವುದರಿಂದ ಪ್ರಾಕ್ ಎಂದಾಗುತ್ತದೆ. ಅಂಚು ಗತೌ ಯಾಚನೇ ಚ–ಹೋಗು, ಬೇಡು ಎಂಬ (ಭ್ವಾ. ಉಭ.) ಧಾತುವಿನಿಂದ ಪ್ರಕರ್ಷೇಣ ಅಂಚತಿ–ಜಾನಾತೀತಿ ಪ್ರಾಕ್ ಎಂಬ ವ್ಯುತ್ಪತ್ತಿಯಿಂದ ಗತ್ಯ-ರ್ಥಕ ಧಾತುಗಳು ಜ್ಞಾನಾರ್ಥಕವಾದುದರಿಂದ ಪ್ರಾಕ್ ಎಂದರೆ ಚೆನ್ನಾಗಿ ತಿಳಿದವನು–ಸರ್ವಜ್ಞ ಎಂದರ್ಥವಾಗುತ್ತದೆ. ಇದರ ಸಂಬೋಧನಾರೂಪವೂ ಪ್ರಾಕ್ ಎಂದೇ ಆಗುವುದಾದ್ದರಿಂದ ಹೇ ಪ್ರಾಕ್–ಎಲೈ ಸರ್ವಜ್ಞನಾದವನೇ (ಶ್ರೀರಾಮನೇ !) ಎಂದರ್ಥವಾಗುತ್ತದೆ. **೨. ಪಂಚಾಶತ್** ಎಂದರೆ ಸಾಮಾನ್ಯವಾಗಿ 'ಐವತ್ತು' ಎಂದರ್ಥ. ಇಲ್ಲಿ ಪಂಚ+ಆ+ಶ+ತ ಎಂದು ಪದಚ್ಛೇದ. ಪಂಚ ಎಂದರೆ ಐದು; ಇಲ್ಲಿ ದೇವತೆಗಳು, ಋಷಿಗಳು, ಪಿತೃ-ಗಳು, ಚಕ್ರವರ್ತಿಗಳು ಮತ್ತು ಮನುಷ್ಯರೆಂದು ಐದು ಪಂಗಡವಾಗಿರುವ ಮುಕ್ತಿಯೋಗ್ಯರಿಗೆ ಸೂಚಕವಾಗಿದೆ. ಆ ಎಂದರೆ ಸಮ್ಯಕ್–ಚೆನ್ನಾಗಿ. ಶಕಾರವು ಸುಖವಾಚಕ (ಶಂ ಸುಖಂ ಶಂಕರಃ ಶ್ರೇಯಃ–ಏಕಾಕ್ಷರಕೋಶ.) ತಕಾರವು 'ತನುವಿಸ್ತಾರೇ' (ತನಾ. ಉ.) ಎಂಬ ಧಾತುವಿನ ರೂಪ. ಹೀಗೆ ಪಂಚಾಶತ್ ಎಂದರೆ ಪಂಚಾನಾಂ–ದೇವರ್ಷಿ-ಪಿತೃ-ಪ-ನರಾಣಾಂ, ಆ-ಸಮ್ಯಕ್, ಶಂ-ಸುಖಂ, ತನೋತಿ–ವಿಸ್ತಾರಯತೀತಿ ಪಂಚಾಶತ್ ಎಂಬ ವ್ಯುತ್ಪತ್ತಿಯಿಂದ–ದೇವಾದಿ ಪಂಚವರ್ಗದ ಮುಕ್ತಿಯೋಗ್ಯರಿಗೆ ಅವರವರ ಯೋಗ್ಯತಾನುಸಾರ ಮುಕ್ತಿಯಲ್ಲಿ ಸ್ವರೂಪಾನಂದವನ್ನು ಕೊಡುವವನೇ ಎಂದು ಸಂಬೋಧನಾರೂಪದ ಅರ್ಥ. **೩. ಸಂಜೀವನ.** ಸಮ್ಯಕ್ ಜೀವಯತಿ–ಪ್ರಾಣಾನ್ ಧಾರಯತೀತಿ ಸಂಜೀವನಃ, ತಸ್ಯ ಸಂಬುದ್ಧಿಃ । ಸಂ–ಚೆನ್ನಾಗಿ, ಜೀವ್-ಅನ–ಬದುಕುವುದಕ್ಕೆ ಆಧಾರಭೂತನಾದವನೇ, ಪ್ರಾಣ-ಧಾರಕನೇ ! ಎಂದರ್ಥ. 'ನಂದಿಗ್ರಹಿ—' (ಪಾ. ೩/೧/೧೩೪) ಎಂಬ ಸೂತ್ರದಂತೆ ಲ್ಯು ಪ್ರತ್ಯಯ ಬರಲು 'ಯುವೋರನಾಕೌ' (ಪಾ. ೭/೧/೧)

ಎಂಬ ಸೂತ್ರದಂತೆ ಅಸಾದೇಶ ಬಂದು 'ಸಂ-ಜೀವನ' ಎಂದಾಗಿದೆ. **೪. ಆದ್ಯ.** ಆದೌ ಭವಃ ಆದ್ಯಃ, ತಸ್ಯ ಸಂಬುದ್ಧಿಃ । 'ದಿಗಾದಿಭ್ಯೋ ಯತ್' (ಪಾ. ೪/೩/೫೪) ಎಲ್ಲಕ್ಕೂ ಮೊದಲಿನವನಾದ, ಅನಾದಿನಿತ್ಯ-ನಾದ ಎಂದರ್ಥ. **೫. ಅಧಿಕಪ್ರಾಣ** ಪ್ರಾಣಶಬ್ದವು ಬಲವಾಚಕವೂ ಆಗಿದೆ. 'ಶಕ್ತಿಃ ಪರಾಕ್ರಮ-ಪ್ರಾಣೌ' (ಅಮರ). ಪ್ರಾಣಃ ಸ್ಥಾಮ ಬಲಂ ದ್ಯುಮ್ನಂ ಓಜಃ ಶುಷ್ಮ ತರಃ ಸಹಃ (ಹಲಾಯುಧ). ಅಲ್ಲದೆ ಇಲ್ಲಿ ಅಧಿಕ ಶಬ್ದವು 'ಅನಂತ' ಪರ್ಯಾಯ. ಆದ್ದರಿಂದ ಅನಂತಬಲವುಳ್ಳ ಅಥವಾ ಅಪರಿಮಿತ ಬಲಶಾಲಿಯೇ ಎಂದರ್ಥವಾಗುತ್ತದೆ. **೬. ಉತ** ಶಬ್ದವೂ ಸಾಮಾನ್ಯವಾಗಿ ಅವ್ಯಯ; ಅದಕ್ಕೆ 'ಅಲ್ಲದೆ, ಮತ್ತು' ಎಂದು ಸಾಮಾ-ನ್ಯಾರ್ಥ. ಇಲ್ಲಿ 'ಉಶ್ಚಾಸೌ ತಶ್ಚೇತಿ ಉತಃ, ತಸ್ಯ ಸಂಬುದ್ಧಿಃ' ಎಂದು ವಿಗ್ರಹವಾಕ್ಯ. ಛಾಂದೋಗ್ಯಭಾಷ್ಯೋದಾಹೃತ(೧/೧/೧)ವಾದ ಸಾರ ನಿರ್ಣಯವೆಂಬ ಪ್ರಮಾಣಾನುಸಾರ **ಉಕಾರೇಣೋಚ್ಚ ಮುಚ್ಯತೇ** ಎಂದು ಹೇಳಿರುವಂತೆ **ಉ** ಎಂದರೆ ಉಚ್ಚ ಅಥವಾ ಉತ್ಕೃಷ್ಟ (ಶ್ರೇಷ್ಠ) ಎಂದರ್ಥ. ತನು ಧಾತುವಿನ ರೂಪವಾದ್ದರಿಂದ **ತ** ಎಂದರೆ ಸರ್ವತ್ರ-ವ್ಯಾಪ್ತನಾದ ಎಂದರ್ಥ. ಹೀಗೆ **ಉ-ತ** ಎಂದರೆ ಸರ್ವೋತ್ಕೃಷ್ಟನೂ ಸರ್ವತ್ರ ವ್ಯಾಪ್ತನೂ ಆದವನೆ ಎಂದರ್ಥ. ಇವೆಲ್ಲ ಕೊನೆಯ ಚರಣದಲ್ಲಿರುವ **ರಾಘವ** ಎಂಬ ಸಂಬೋಧನೆಗೆ ವಿಶೇಷಣಗಳು.

**೭. ಪರ್ವತಮ್**—ಪರಾನ್-ಅನ್ಯಾನ್, ಅವತಿ-ರಕ್ಷತೀತಿ ಪರ್ವತಃ-ಇತರರನ್ನು ರಕ್ಷಿಸುತ್ತದೆಯಾದ್ದರಿಂದ ಪರ್ವತ ಎಂದು ಇದರ ವ್ಯುತ್ಪತ್ತಿ. ತಾತ್ಪರ್ಯನಿರ್ಣಯದಲ್ಲಿ 'ಪರಾವನಾತ್ ಪರ್ವತನಾಮಧೇಯಾನ್' ಎಂದು ಹೇಳಿರುವಂತೆ ಪರ್ವತಶಬ್ದವು ಗರುಡವಾಚಕ. ಹೀಗೆಯೇ 'ಗಿರಿರ್ವಾಯುಃ ಸಮುದ್ದಿಷ್ಟಃ' ಎಂಬ ವಚನದಂತೆ **ಗಿರಿ** ಎಂದರೆ ವಾಯುದೇವನೆಂದರ್ಥ. ಗಿರತಿ-ಧಾರಯತಿ ಸರ್ವಾನ್ ಪ್ರಾಣಧಾರಣೇನೇತಿ ವಾ ಗ್ರಿಯತೇ-ಸ್ತೂ-ಯತೇ ಸಕಲೈರ್ವೇದೈರಿತಿ ವಾ ಗಿರಿಃ । ಸಕಲ ಪ್ರಾಣಿಗಳನ್ನೂ ಉಸಿರಾಡಿಸಿ ಧರಿಸುವುದರಿಂದಲೂ ಜೀವೋತ್ತಮನೆಂದು ಸಕಲ ವೇದಗಳಲ್ಲಿ ಸ್ತುತಿಸಲ್ಪಡು-ವುದರಿಂದಲೂ ವಾಯುದೇವರು ಗಿರಿಶಬ್ದವಾಚ್ಯರು. 'ಗೄ ನಿಗರಣೇ' (ತು.ಪ.)

ಧಾತುವಿಗೆ 'ಕ್ವಾಗ್ರ್ಯಾಶ್ವಾ....'ಎಂಬ ಉಣಾದಿ (೪/೧೪೧) ಸೂತ್ರದಿಂದ ಇ ಪ್ರತ್ಯಯ ಬಂದಿದೆ.

**೮. ಸಹಸ್ರೈಃ ಅಜನ್ಯೈಃ ವ್ಯವಹಿತಂ ||** ನ ಜಾಯತೇ ಇತಿ ಅಜನಾಃ । ಜನ್ ಎಂದರೆ ಹುಟ್ಟು ಅಥವಾ ಹೊಸದಾಗಿ ರಚಿತವಾಗು ಎಂದರ್ಥ. ಅದಕ್ಕೆ ವಿರುದ್ಧವಾದುದು ಅಜನ, ಹೊಸದಾಗಿ ರಚಿತವಾಗ-ದಂಥಾ ಎಂದರೆ ಅಪೌರುಷೇಯವಾದ ಎಂದರ್ಥ. ಆದಕಾರಣ ಅಜನ್ಯೈಃ ಎಂದರೆ ಅಪೌರುಷೇಯವಾದ ವೇದವಾಕ್ಯಗಳಿಂದ ಎಂದು ಅರ್ಥವಾಗುತ್ತದೆ. ಇದಕ್ಕೆ ಸಹಸ್ರೈಃ ಎಂಬುದು ವಿಶೇಷಣ. ಸಹಸ್ರೈಃ ಅಜನ್ಯೈಃ ಎಂದರೆ ಸಾವಿರಾರು ವೇದವಚನಗಳಿಂದ. ವ್ಯವಹಿತಂ ಎಂಬಲ್ಲಿ ವಿ+ಅವ+ಹಿತಂ ಎಂದು ಮೂರು ಭಾಗಗಳಿವೆ. ವಿ–ವಿಶಿಷ್ಟಃ-ಸರ್ವೋತ್ತಮಃ ಇತಿ ಅವಹಿತಂ–ನಿರ್ಣೀತಂ । ವಿ–ಸರ್ವೋತ್ತಮನೆಂದು, ಅವಹಿತಂ–ನಿರ್ಣೀತನಾದ. ಸಹಸ್ರೈಃ–ಸಾವಿರಾರು, ಅಜನ್ಯೈಃ–ವೇದವಾಕ್ಯಗಳಿಂದ, ವ್ಯವಹಿತಂ–ಸರ್ವೋ-ತ್ತಮನೆಂದು ನಿರ್ಣೀತನಾದ (ಇದು ರಾಮನಿಗೆ ವಿಶೇಷಣ).

**೯. ಗಿರಿಂ ಗೃಹೀತ್ವಾ ಖೇ ಯಾಂತಮ್ ।** 'ಗಿರಿರ್ವಾಯುಃ ಸಮುದ್ದಿಷ್ಟಃ' ಎಂಬ ವಚನದಂತೆ ಗಿರಿ ಎಂದರೆ ವಾಯುದೇವರು ಎಂದರ್ಥ. ಗಿರಿಂ–ವಾಯುವನ್ನು, ಮುಖ್ಯಪ್ರಾಣನನ್ನು, ಗೃಹೀತ್ವಾ-ಕರೆದುಕೊಂಡು (ಎಂದರೆ ಅವನ ಜೊತೆ), ಖೇ–ಇಂದ್ರಿಯಗಳಲ್ಲಿ, ಯಾಂತಂ–ನಿಯಾಮಕ-ನಾಗಿ ಸಂಚರಿಸುವ ಎಂದು ಪದಶಃ ಅರ್ಥ. ಸಕಲೇಂದ್ರಿಯಗಳಿಗೂ ಮುಖ್ಯ-ಪ್ರಾಣನೇ ಮುಖ್ಯನಿಯಾಮಕ; ಪ್ರಾಣವೇ ಇಲ್ಲದಿದ್ದರೆ ಯಾವ ಇಂದ್ರಿ-ಯವೂ ಕೆಲಸ ಮಾಡಲಾರದು. ಹೀಗೆ ಸರ್ವೇಂದ್ರಿಯಗಳಿಗೆ ಒಡೆಯನಾದ ಮುಖ್ಯಪ್ರಾಣನ ಜೊತೆ (ಅವನ ದ್ವಾರಾ) ಸಕಲೇಂದ್ರಿಯಗಳಿಗೂ ನಿಯಾ-ಮಕನಾದ ಎಂದರ್ಥ ಕಣ್ಣು ಕಿವಿ ಮೂಗು ಮೊದಲಾದ ಎಲ್ಲ ಇಂದ್ರಿಯ-ಗಳೂ ಮುಖ್ಯಪ್ರಾಣನ ಅಧೀನ; ಆ ಮುಖ್ಯಪ್ರಾಣನಿಗೂ ಶ್ರೀಹರಿಯೇ ಮುಖ್ಯ ನಿಯಾಮಕ.

**೧೦. ತತಃ ಉತ್ಪತಂತಮ್ ।** ತತಃ ಎಂಬುದು ತಸಿಲ್‌ಪ್ರತ್ಯಯ ಅಂತವಾದ ಅವ್ಯಯ. ಇದಕ್ಕೆ ಇಲ್ಲಿ 'ಅದರಿಂದ, ಅಥವಾ ಅದಕ್ಕಿಂತಲೂ'

ಎಂದರೆ ಹಿಂದೆ ಹೇಳಿದ ಇಂದ್ರಿಯಗಳಿಗಿಂತಲೂ ಎಂದರ್ಥವಾಗುತ್ತದೆ. ಉತ್ಪತಂತಂ ಎಂದರೆ ಮೇಲಕ್ಕೆ ಹಾರುವ ಎಂದರ್ಥ ; ಇಲ್ಲಿ 'ಅವುಗಳನ್ನು ಮೀರಿದ, ಅವುಗಳಿಗೆ ಒಳಗಾಗದ' ಎಂದರ್ಥವಾಗುತ್ತದೆ. ಹೀಗೆ, ತತಃ ಉತ್ಪತಂತಂ ಎಂಬುದಕ್ಕೆ ಇಂದ್ರಿಯಗಳ ಹಿಡಿತಕ್ಕೆ ಒಳಗಾಗದ ಅಥವಾ ಇಂದ್ರಿಯಗಳಿಗೆ ಮೀರಿದ ಎಂದರ್ಥ. ಕೇನೋಪನಿಷತ್ತಿನಲ್ಲಿ ಭಗವಂತನನ್ನು ಕಣ್ಣು ನೋಡಲಾರದೆಂದೂ ಎಂದರೆ ನೋಡಿ ಗ್ರಹಿಸಲಾರದೆಂದೂ ವಾಕ್ಕು ವರ್ಣಿಸಲಾರದೆಂದೂ ಹೀಗೆ ಇಂದ್ರಿಯಗಳಿಗೆ ಗೋಚರನಾಗದವನೆಂದು ವರ್ಣಿಸಿದೆ ; ಇಲ್ಲೂ ಅದೇ ಅರ್ಥವನ್ನೇ ಹೇಳಬೇಕು. ರಾಮದೇವರು ಇಂದ್ರಿಯಗಳಿಗೆ ಒಡೆಯನಾದ ಮುಖ್ಯಪ್ರಾಣನಿಗೆ ನಿಯಾಮಕನಾದರೂ ಅವರನ್ನು ಯಾವ ಇಂದ್ರಿಯವೂ ಸಮಗ್ರವಾಗಿ ಗ್ರಹಿಸಲಾರದು ಎಂದು ಭಾವ.

212. **ರಾಮಪರವಾಗಿ ಅನ್ವಯ**—೧. ಪ್ರಾಕ್, ೨. ಪಂಚಾಶತ್, ೩. ಸಂಜೀವನ, ೪. ಆದ್ಯ, ೫. ಅಧಿಕಪ್ರಾಣ, ೬. ಉತ, ೭. ರಾಘವ! ಯಃ ತ್ವಂ ಅ) ಔಷಧನಿಧಿಂ, ಆ) ಅಂಘ್ರಿ-ಪ್ರಣತಂ ಪರ್ವತಂ ಯಾವತ್ ಏಕಕ್ಷಣೇ ಹಿ ಲಂಕಾಂ ಅನೈಷೀಃ-ಅಪಿ, ತದಾ ೧. ತಂ, ೨. ಸಹಸ್ರೈಃ ಅಜನ್ಯೈಃ ವ್ಯವಹಿತಂ, ೩. ಅಮಿತಂ, ೪. ಗಿರಿಂ ಗೃಹೀತ್ವಾ ಖೇ ಯಾಂತಂ, ೫. ತತಃ ಉತ್ಪತಂತಂ ತ್ವಾಂ ಲೋಕಃ ಉತ್ಪಾಟಯಂತಂ, ಅದ್ರಾಕ್ಷೀತ್ ಎಂದು ದಂಡಾನ್ವಯ.

**ಅನ್ವಯಾರ್ಥ**—೧. ಪ್ರಾಕ್-ಸರ್ವಜ್ಞಮೂರ್ತಿಯಾದ, ೨. ಪಂಚಾಶತ್–ದೇವ-ಋಷಿ-ಪಿತೃ-ಚಕ್ರವರ್ತಿ-ಮನುಷ್ಯರೆಂದು ಐದು ಗುಂಪಾಗಿರುವ ಮುಕ್ತಿಯೋಗ್ಯರಿಗೆ ಅವರವರ ಯೋಗ್ಯತಾನುಸಾರ ಸುಖವನ್ನು ಕೊಡುವಂಥಾ, ೩. ಸಂಜೀವನು—ಸಕಲ ಪ್ರಾಣಿಗಳೂ ಬದುಕುವುದಕ್ಕೆ ಆಧಾರಭೂತನಾದ, ೪. ಆದ್ಯ–ಆದಿಪುರುಷನಾದ, ೫. ಅಧಿಕಪ್ರಾಣ–ಅಪರಿಮಿತಬಲವುಳ್ಳವನಾದ, ೬. ಉತ–ಸರ್ವೋತ್ಕೃಷ್ಟನೂ, ಸರ್ವತ್ರ ವ್ಯಾಪ್ತನೂ ಆದ, ೭. ರಾಘವ–ಎಲೈ ರಾಮಚಂದ್ರನೇ ! ಯಃ ತ್ವಂ–ಯಾವ ನೀನು, ಅ. ಔಷಧನಿಧಿಂ–ವಿಷಪರಿಹಾರಕವಾದ ಸಕಲ ಔಷಧಗಳಿಗೂ

ಮೂಲಭೂತನಾದ (ಸಕಲವಿಧವಾದ ವಿಷಗಳನ್ನೂ ಪರಿಹರಿಸುವಂಥಾವನಾದ), ೬. ಅಂಘ್ರೌ–ನಿನ್ನ ಚರಣಗಳಲ್ಲಿ, ಪ್ರಣತಂ–(ರಾಮಾವತಾರದಲ್ಲಿ ಸಕಲ-ದೇವತೆಗಳಿಗೂ ವಾನರರಾಗಿ ಸೇವೆ ಸಲ್ಲಿಸಲು ಅವಕಾಶಕೊಟ್ಟಂತೆ ತನಗೂ ಸಹ ಒಂದು ಸೇವಾವಕಾಶವನ್ನು ಕಲ್ಪಿಸಿಕೊಡಬೇಕೆಂದು) ನಮಸ್ಕಾರ ಮಾಡಿದ್ದ ಪರ್ವತಂ–ಗರುಡನನ್ನು, ಯಾವತ್–ಯಾವಾಗ,ಏಕಕ್ಷಣೇ–ಒಂದೇ ಕ್ಷಣದಲ್ಲಿ, ಲಂಕಾಂ-ಲಂಕಾಪಟ್ಟಣಕ್ಕೆ, ಅನ್ವೈಷೀಃ ಅಪಿ–ಕರಿಸಿಕೊಂಡೆಂಯೋ (ಮತ್ತು ಅಪಿ ಶಬ್ದದಿಂದ ಗರುಡನ ರೆಕ್ಕೆಗಳ ಗಾಳಿಯಿಂದಲೇ ಇಂದ್ರ-ಜಿತ್ತಿನ ನಾಗಪಾಶದಿಂದ ಬದ್ಧರಾಗಿದ್ದ ಎಷ್ಟೋ ಕಪಿಗಳನ್ನು ಸ್ವಸ್ಥಪಡಿ-ಸಿದಿರಿ ಮತ್ತು ಗರುಡನ ದರ್ಶನದಿಂದಲೇ ಸಕಲ ನಾಗಪಾಶಗಳೆಲ್ಲವೂ ಬಿಟ್ಟು ಹೋದುವು ಎಂದೂ ಅರ್ಥವಾಗುತ್ತದೆ), ತದಾ–ಆಗ, ೧. ತಂ–ಅಂಥಾ, ೨. ಸಹಸ್ರೈಃ ಅಜನ್ಯೈಃ–ಸಾವಿರಾರು ವೇದವಾಕ್ಯಗಳಿಂದ, ವ್ಯವಹಿತಂ–ಸರ್ವೋತ್ತಮನೆಂದು ನಿರ್ಣೀತನಾದ, ೩. ಅಮಿತಂ–ಅಪಾರನೂ ಅನಂತನೂ ಆದ, ೪. ಗಿರಿಂ–ಇಂದ್ರಿಯಗಳಿಗೆಲ್ಲಾ ಒಡೆಯನಾದ ಮುಖ್ಯಪ್ರಾಣನನ್ನು ; ಗೃಹೀತ್ವಾ–ಕರೆದುಕೊಂಡು (ಎಂದರೆ ಅವನ ಜೊತೆಯೇ), ಖೇ–ಇಂದ್ರಿಯ ಗಣದಲ್ಲಿ, ಯಾಂತಂ–ಸಂಚಾರಮಾಡುವ (ಎಂದರೆ ಸಕಲೇಂದ್ರಿಯಗಳನ್ನೂ ಮುಖ್ಯಪ್ರಾಣನ ದ್ವಾರಾ ಪ್ರೇರಿಸುವಂಥಾ), ೫. ತತಃ–ಅವುಗಳಿಂದ (ಇಂದ್ರಿಯಗಳಿಂದ), ಉತ್ಪತಂತಂ–ಮೀರಿದವನಾದ (ಯಾವ ಇಂದ್ರಿಯ-ಗಳಿಗೂ ಸಮಗ್ರವಾಗಿ ಗೋಚರನಾಗದ), ತ್ವಾಂ–ನಿನ್ನನ್ನು, ಲೋಕಃ–ಜನಗಳು, ಉತ್ಪಾಟಯಂತಂ–(ಭಕ್ತರ ಸಕಲಾನಿಷ್ಟವನ್ನೂ) ನಿವಾರಣೆ ಮಾಡತಕ್ಕವನೆಂದು, ಅದ್ರಾಕ್ಷೀತ್ – ಕಂಡರು.

**213. ರಾಮಪರವಾಗಿ ಭಾವಾರ್ಥ**—ಭಗವಂತ ಶ್ರೀರಾಮ-ಚಂದ್ರ ಸಮಸ್ತವನ್ನೂ ಬಲ್ಲವನಾದ ಸರ್ವಜ್ಞಮೂರುತಿ. ದೇವತೆಗಳು ಋಷಿಗಳು ಪಿತೃಗಳು ಚಕ್ರವರ್ತಿಗಳು ಮನುಷ್ಯೋತ್ತಮರೆಂದು ಐದು ವರ್ಗಕ್ಕೆ ಸೇರಿದ ಮುಕ್ತಿಯೋಗ್ಯರಿಗೂ ಅವರವರ ತಾರತಮ್ಯಾನುಸಾರ ಹೆಚ್ಚು ಹೆಚ್ಚು ಸ್ವರೂಪಾನಂದವನ್ನು ಕೊಡುವ ಸಮರ್ಥ. ಬ್ರಹ್ಮಾದಿ ತೃಣಜೀವರ ಪರ್ಯಂತ ಸಕಲ ಪ್ರಾಣಿಗಳಿಗೂ ಜೀವನಾಧಾರಭೂತನಾಗಿರುವನಲ್ಲದೆ

ಎಲ್ಲರಿಗೂ ಮೀರಿದ ಅಪರಿಮಿತಾನಂತ ಬಲವುಳ್ಳವನೂ ಆಗಿದ್ದಾನೆ. ಸರ್ವೋತ್ತಮನೂ ಸರ್ವವ್ಯಾಪಿಯೂ ಆಗಿದ್ದಾನೆ. ಇಂಥಾ ಸ್ವಾಮಿಯು ರಾಮಾವತಾರ ಮಾಡುವ ಸಂದರ್ಭದಲ್ಲಿ ಸಕಲ ದೇವತೆಗಳೂ ಭೂಮಿಯಲ್ಲಿ ವಾನರ ವೀರರಾಗಿ ಅವತಾರ ಮಾಡಿ ತನಗೆ ಸಹಾಯ ಮಾಡಬೇಕೆಂದು ಆಜ್ಞೆ ಮಾಡಿದನು. ಅದನ್ನು ಕಂಡು ಗರುಡದೇವನು ತನಗೂ ಸೇವೆ ಮಾಡಲು ಒಂದು ಅವಕಾಶ ಕಲ್ಪಿಸಿಕೊಡಬೇಕೆಂದು ಕಳಕಳಿಯಿಂದ ಪಾದಕ್ಕೆರಗಿ ಪ್ರಾರ್ಥಿಸಿಕೊಂಡನು. ದಯಾಮಯನಾದ ರಾಮದೇವರು ಅವನಿಗೂ ಸೇವೆ ಮಾಡಲು ಅವಕಾಶ ಮಾಡಿಕೊಟ್ಟು ಅನುಗ್ರಹಿಸಿದನು.

ರಾವಣನ ಮಗನಾದ ಇಂದ್ರಜಿತ್ ಈಶ್ವರನ ವರಬಲದಿಂದ ದೃಪ್ತನಾಗಿ ಸಕಲ ವಾನರಯೋಧರನ್ನೂ ನಾಗಪಾಶದಿಂದ ಬಂಧಿಸಿಬಿಟ್ಟನು. ಆ ಕ್ಷಣ ರಾಮಚಂದ್ರಸ್ವಾಮಿ ಗರುಡನನ್ನೇ ಲಂಕೆಗೆ ಕರೆಯಿಸಿಬಿಟ್ಟನು. ಸಕಲವಿಷಗಳನ್ನೂ ಮೂಲೋತ್ಪಾಟನೆ ಮಾಡಬಲ್ಲ ಆ ಗರುಡನ ರೆಕ್ಕೆಯ ಗಾಳಿಯಿಂದಲೇ ಎಷ್ಟೋ ನಾಗಪಾಶಗಳು ಬಿಟ್ಟುಹೋದುವು. ಅವನ ದರ್ಶನವಾದ ಮೇಲಂತೂ ಎಲ್ಲ ನಾಗಪಾಶಗಳೂ ಕಳಚಿಹೋದುವು. ಇವೆಲ್ಲವೂ ಒಂದು ಕ್ಷಣದಲ್ಲೇ ನಡೆದುಹೋಯಿತು. ಇದನ್ನು ಕಂಡ ಮಹಾಜ್ಞಾನಿಗಳು ಶ್ರೀರಾಮದೇವರ ಕೃಪಾಕಟಾಕ್ಷವು ಬಿದ್ದಮೇಲೆ ಯಾವ ವಿಷ ಏನು ಮಾಡೀತು ? ಯಾವ ಅನಿಷ್ಟ ತೊಲಗಿಹೋಗದೆ ಉಳಿದೀತು ? ಆ ರಾಮನ ಅಪಾಂಗಲವ ಮಾತ್ರದಿಂದಲೇ ಸಕಲಾನಿಷ್ಟಗಳೂ ತೊಲಗುವುವಲ್ಲದೆ ಸಕಲಾಭೀಷ್ಟಗಳೂ ಸಿದ್ಧಿಸುವುದರಲ್ಲಿ ಆಶ್ಚರ್ಯವೇನಿದೆ ಎಂದು ಹೇಳಿಕೊಂಡರು.

ಏಕೆಂದರೆ ಈ ಸ್ವಾಮಿಯು ಸರ್ವೋತ್ತಮನೆಂಬುದನ್ನೂ ಸಕಲೇಂದ್ರಿಯ ಪ್ರೇರಕನಾದರೂ ಯಾವ ಇಂದ್ರಿಯಗಳಿಗೂ ಸಮಗ್ರವಾಗಿ ಗೋಚರನಾಗುವುದಿಲ್ಲ, ಅವನು ಪ್ರಾಣದೇವನಿಗೂ ಪ್ರಾಣ ಸ್ವರೂಪನಾಗಿದ್ದಾನೆ ಎಂಬ ವಿಷಯವನ್ನೂ ಸಾವಿರಾರು ಶ್ರುತಿ ಸ್ಮೃತಿಗಳು ಸಾರಿಹೇಳುತ್ತವೆ ಎಂದು ತಾತ್ಪರ್ಯ.

## ಹನುಮತ್ಪರವಾಗಿ ಅರ್ಥತಾತ್ಪರ್ಯಗಳು

**214. ಅವತಾರಿಕೆ**—ಹನುಮಂತನ ಮತ್ತೊಂದು ಅದ್ಭುತ-ಕಾರ್ಯವನ್ನು ವರ್ಣಿಸುತ್ತಾರೆ (ಕಕ. ವಿ. ಛ.). ಹಿಂದಿನ ಶ್ಲೋಕದಲ್ಲಿ ಹನುಮಂತನ ಗುಣವರ್ಣನ ಮಾಡುತ್ತಾ ಅವನು 'ಮಹಿತಮಹಾಪೌರುಷ' ನೆಂದೂ 'ಬಾಹುಶಾಲಿ'ಯೆಂದೂ ಸ್ತುತಿಸಿದ್ದರು. ಈ ಮಾತುಗಳು ಕೇವಲ ಮುಖಸ್ತುತಿಯಲ್ಲ, ಪರಂತು ವಾಸ್ತವಾಂಶವೇ ಎಂಬುದನ್ನು ಪ್ರತಿಪಾದಿ-ಸುವುದಕ್ಕಾಗಿ ಹನುಮಂತನ ಅನೇಕ ಅದ್ಭುತಕಾರ್ಯಗಳಲ್ಲಿ ಪರಮಾದ್ಭುತ-ವಾದ, ಗಂಧಮಾದನಪರ್ವತವನ್ನು ಕೈಯಲ್ಲೇ ತಂದ ವಿಚಾರವನ್ನು ಅವನ ಮಹಾಪರಾಕ್ರಮಕ್ಕೆ ನಿದರ್ಶನರೂಪವಾಗಿ ಈ ಶ್ಲೋಕದಲ್ಲಿ ವರ್ಣಿಸುತ್ತಾರೆ. ಇಲ್ಲಿಯೂ ಸಹ ಈ ಶ್ಲೋಕದ ಭಾವಾರ್ಥ ಮುಂದಟ್ಟಾಗಲು ವಾಲ್ಮೀಕಿ ರಾಮಾಯಣ (ಯುದ್ಧಕಾಂಡ, ೭೪ನೇ ಸರ್ಗ)ದಲ್ಲೂ ತಾತ್ಪರ್ಯನಿರ್ಣಯ (೮ ಅಧ್ಯಾ. ೧೪೮–೫೮ ಶ್ಲೋ.)ದಲ್ಲೂ ನಿರೂಪಿತವಾದ ಕಥಾಭಾಗವು ತಿಳಿದಿರಬೇಕು. ಆದಕಾರಣ ಆ ಕಥೆಯನ್ನೇ ಮೊದಲು ನಿರೂಪಣೆ-ಮಾಡುತ್ತೇವೆ.

**215. ಗಂಧಮಾದನಪರ್ವತವನ್ನು ತಂದ ಕಥೆ**—ಅಸದೃಶ-ಪರಾಕ್ರಮಿಗಳೆಂದು ಪ್ರಸಿದ್ಧರಾಗಿದ್ದ ರಾವಣನ ದೇವಾಂತಕ ತ್ರಿಶಿರ ಅತಿ-ಕಾಯ ಮೊದಲಾದ ಅನೇಕ ಮಂದಿ ರಾಕ್ಷಸವೀರರೆಲ್ಲ ರಾಮನ ಬಾಣಗಳಿಗೆ ತುತ್ತಾಗಿಹೋದರು. ಇದನ್ನು ಕಂಡ ಇಂದ್ರಜಿತ್ ಅವರನ್ನು ಮಾಯಾ-ಯುದ್ಧದಿಂದಲ್ಲದೆ ಬೇರೆ ರೀತಿ ಜಯಿಸಲು ಸಾಧ್ಯವಿಲ್ಲವೆಂದು ನಿಶ್ಚಯಿಸಿ ಮಾಯಾಸಿದ್ಧಿಗಾಗಿ ಬೆಂಕಿಯಲ್ಲಿ ಹೋಮಮಾಡಿ ಯುದ್ಧಕ್ಕೆ ಸಿದ್ಧನಾಗಿ ಬಂದನು. ರುದ್ರದೇವರ ಮತ್ತು ಬ್ರಹ್ಮದೇವರ ವರಬಲದಿಂದ ಆ ಇಂದ್ರಜಿತ್ ಕಣ್ಣಿಗೇ ಕಾಣಿಸದಂತೆ ಆಕಾಶಕ್ಕೆ ಏರಿ ಎಲ್ಲ ಕಪಿವೀರರ ಮೇಲೂ ಸಂಮೋಹ-ನಾಸ್ತ್ರವನ್ನು ಪ್ರಯೋಗ ಮಾಡಿಬಿಟ್ಟನು. ಬ್ರಹ್ಮದೇವರ ವರವಿದ್ದುದರಿಂದ ರಾಮದೇವರು ಮತ್ತು ಹನುಮಂತ ಇಬ್ಬರನ್ನು ಬಿಟ್ಟು ಮಿಕ್ಕವರೆಲ್ಲರೂ ಅಸ್ತ್ರಮೋಹಿತರಾಗಿ ಯುದ್ಧರಂಗದಲ್ಲೇ ಭೂಮಿಯ ಮೇಲೆ ಎಚ್ಚರವಿಲ್ಲದ

ಮಲಗಿಬಿಟ್ಟರು. ಅದೇ ಸಮಯಕ್ಕೆ ಅಲ್ಲಿಗೆ ಬಂದ ವಿಭೀಷಣನು ಹನುಮಂತ-ನೊಡನೆ ಜಾಂಬುವಂತನ ಬಳಿಗೆ ಹುಡುಕಿಕೊಂಡು ಬಂದು ಅವನನ್ನು ನೀರು ತಟ್ಟಿ ಎಬ್ಬಿಸಿದನು. ಮೈಮೇಲೆ ಎಚ್ಚರ ಬಂದ ಕೂಡಲೇ ಜಾಂಬುವಂತ ವಿಭೀಷಣನನ್ನು ಗುರುತಿಸಿದ ಕೂಡಲೇ 'ಹನೂಮಾನ್ ವಾನರಶ್ರೇಷ್ಠಃ ಪ್ರಾಣಾನ್ ಧಾರಯತೇ ಕ್ವಚಿತ್ ?' (ಯು.ಕಾಂ, ೭೪ ಸ., ೧೮ ಶ್ಲೋ) 'ಹನುಮಂತ ಬದುಕಿದ್ದಾನೇನಪ್ಪಾ ?' ಎಂದು ಕೇಳಿದನು. ವಿಭೀಷಣನು 'ಹನುಮಂತನ ಮೇಲೇ ಅಷ್ಟೇನು ಅಭಿಮಾನ ? ರಾಮಲಕ್ಷ್ಮಣರನ್ನೂ ವಿಚಾರಿಸದೆ ಅವನನ್ನೇ ವಿಚಾರಿಸಲು ಕಾರಣವೇನು ?' ಎಂದು ಕೇಳಿದ್ದಕ್ಕೆ ಜಾಂಬುವಂತನು—

ತಸ್ಮಿನ್ ಜೀವತಿ ವೀರೇ ತು ಹತಮಪ್ಯಹತಂ ಬಲಮ್ ।
ಹನುಮತ್ಯುಜ್ಝಿತಪ್ರಾಣೇ ಜೀವಂತೋಽಪಿ ವಯಂ ಹತಾಃ ॥ ೨೨ ॥

'ಅವನೊಬ್ಬ ಬದುಕಿದ್ದರೆ ನಮ್ಮ ವಾನರಸೈನ್ಯವು ಹತವಾಗಿದ್ದರೂ ಹತವಾಗದಿದ್ದಂತೆಯೇ ಸರಿ ಹನುಮಂತ ಒಬ್ಬ ತೀರಿದನೆಂದರೆ ನಾವೆಲ್ಲರೂ ಬದುಕಿದ್ದರೂ ಸತ್ತಂತೆಯೇ ಸರಿ. ಅದಕ್ಕೆ ಕೇಳಿದೆ' ಎಂದು ಹೇಳಿದನು. ಅದನ್ನು ಕೇಳಿ ಹನುಮಂತ 'ಇಗೋ ಇಲ್ಲಿದ್ದೇನೆ, ಏನಾಗಬೇಕೆಂ'ದು ಕೇಳಿದನು. ಅದಕ್ಕೆ ಜಾಂಬುವಂತನು 'ಹಿಮವತ್ಪರ್ವತದ ಬಳಿಗೆ ಹೋಗಿ ಅದರ ಕಾಂಚನಗಂಗಾ ಮತ್ತು ಮೇರು ಶಿಖರಗಳ ಮಧ್ಯದಲ್ಲಿರುವ ಗಂಧ-ಮಾದನದಲ್ಲಿ ಅನೇಕ ಔಷಧಿಮೂಲಿಕೆಗಳಿವೆ. ಅವುಗಳಲ್ಲಿ ೧. ಮೃತ-ಸಂಜೀವಿನೀ (ಸತ್ತವರನ್ನು ಬದುಕಿಸುವಂಥಾದ್ದು), ೨. ವಿಶಲ್ಯಕರಣೀ (ಶಸ್ತ್ರಾಸ್ತ್ರಗಳು ದೇಹದಲ್ಲಿ ಸಿಕ್ಕಿಕೊಂಡಿದ್ದರೂ ಬಿಡಿಸುವಂಥಾದ್ದು), ೩. ಸಾವರ್ಣ್ಯಕರಣೀ (ರಕ್ತಸ್ರಾವವಾಗಿ ಬಿಳಿಚಿಕೊಂಡಿದ್ದರೂ ಹಿಂದಿನ ಬಣ್ಣ-ವನ್ನೇ ತರಿಸುವಂಥಾದ್ದು), ಮತ್ತು ೪. ಸಂಧಾನಕರಣೀ (ಅಂಗಾಂಗಗಳು ತುಂಡು ತುಂಡಾಗಿದ್ದರೂ ಕೂಡಿಸುವಂಥಾದ್ದು) ಎಂದು ನಾಲ್ಕು ಮೂಲಿಕೆ-ಗಳಿವೆ. ಅವನ್ನು ತೆಗೆದುಕೊಂಡು ಬಾ' ಎಂದು ಹೇಳಿದನು.

ಆ ಮಾತು ಕೇಳುವುದೇ ತಡ, ಹನುಮಂತ ಆ ಕ್ಷಣದಲ್ಲೇ ಹಾರಿ ಆ ಪರ್ವತದ ಬಳಿಗೆ ಹೋಗಿ ಆ ಪರ್ವತವನ್ನೂ ಹುಡುಕಿ ವನಸ್ಪತಿ-

ಗಳಿಗಾಗಿ ಹುಡುಕಾಡಿದನು. ಆದರೂ ಅವು ಕಣ್ಣಿಗೆ ಬೀಳಲಿಲ್ಲ. ಅದರಿಂದ ಅಸಮಾಧಾನಗೊಂಡು ಹನುಮಂತ ಆ ಪರ್ವತವನ್ನೇ ಬುಡಸಹಿತ ಕೈಯಲ್ಲೇ ಎತ್ತಿಕೊಂಡು ಲಂಕೆಗೆ—ವಾನರಸೈನ್ಯವು ಮೋಹಿತರಾಗಿ ಬಿದ್ದಿದ್ದ ಸ್ಥಳಕ್ಕೆ—ಬಂದುಬಿಟ್ಟನು. ಆ ವನಸ್ಪತಿಗಳ ತಂಗಾಳಿ ಬೀಸಿದ ಕೂಡಲೇ ಕಪಿಗಳೆಲ್ಲರೂ ಮೂರ್ಛೆಯಿಂದ ಎದ್ದರಲ್ಲದೆ ಯಾವ ನೋವೂ ಇಲ್ಲದಂತೆ ಆರೋಗ್ಯಕಾಯುರಾದರು. ಇದೇ ಈಗ ಪ್ರಸಕ್ತವಾದ ಕಥೆ. ಇದನ್ನು ತಿಳಿದುಕೊಂಡರೆ ಈ ಶ್ಲೋಕ ಚೆನ್ನಾಗಿ ಅರ್ಥವಾಗುತ್ತದೆ. ಈಗ ಶ್ಲೋಕಕ್ಕೇ ಹೋಗೋಣ (ಈಗ ಹನುಮತ್ಪರವಾಗಿಯೇ ಪದಚ್ಛೇದ ಮಾಡಿದೆ.)

**ಪ್ರಾಕ್ ಪಂಚಾಶತ್ಸಹಸ್ರೈ—ರ್ವ್ಯವಹಿತಮಮಿತಂ**
**ಯೋಜನೈಃ ಪರ್ವತಂ ತ್ವಂ**
**ಯಾವತ್ ಸಂಜೀವನಾದ್ಯೌ—ಷಧನಿಧಿ-ಮಧಿಕ-**
**ಪ್ರಾಣ ಲಂಕಾಮನೈಷೀಃ ।**
**ಅದ್ರಾಕ್ಷೀ-ದುತ್ಪತಂತಂ ತತ ಉತ ಗಿರಿಮುತ್**
**ಪಾಟಯಂತಂ ಗೃಹೀತ್ವಾ**
**ಽಽಯಾಂತಂ ಖೇ ರಾಘವಾಂಘ್ರೌ ಪ್ರಣತಮಪಿ ತದೈ-**
**ಕಕ್ಷಣೇ ತ್ವಾಂ ಹಿ ಲೋಕಃ ॥ ೧೮ ॥**

**ಪದವಿಭಾಗ**—ಪ್ರಾಕ್, ಪಂಚಾಶತ್ಸಹಸ್ರೈಃ, ವ್ಯವಹಿತಂ, ಅಮಿತಂ, ಯೋಜನೈಃ, ಪರ್ವತಂ, ತ್ವಂ, ಯಾವತ್, ಸಂಜೀವನಾದ್ಯೌಷಧನಿಧಿಂ, ಅಧಿಕಪ್ರಾಣ, ಲಂಕಾಂ, ಅನೈಷೀಃ, ಅದ್ರಾಕ್ಷೀತ್, ಉತ್ಪತಂತಂ, ತತಃ, ಉತ, ಗಿರಿಂ, ಉತ್ಪಾಟಯಂತಂ, ಗೃಹೀತ್ವಾ, ಆಯಾಂತಂ, ಖೇ, ರಾಘವಾಂಘ್ರೌ, ಪ್ರಣತಂ, ಅಪಿ, ತದಾ, ಏಕಕ್ಷಣೇ, ತ್ವಾಂ, ಹಿ, ಲೋಕಃ ॥

**216. ಶ್ಲೋಕದ ವಿಶ್ಲೇಷಣೆ**—ಹನುಮತ್ಪರವಾಗಿ ಅರ್ಥ ಹೇಳುವಾಗ 'ಅಧಿಕಪ್ರಾಣ' ಎಂಬುದೊಂದೇ ಸಂಬೋಧನೆ. ಇಲ್ಲೂ ಯಾವತ್-ತದಾ ಎಂಬ ಪದಗಳು ಬಂದಿರುವುದರಿಂದ ಇಡೀ ಶ್ಲೋಕವು ದೊಡ್ಡ ಸಂಯುಕ್ತವಾಕ್ಯವಾಗಿದೆ. ಇದರಲ್ಲಿ—ತದಾ ಲೋಕಃ ತ್ವಾಂ ಏಕಕ್ಷಣೇ ಹಿ

ಅದ್ರಾಕ್ಷೀತ್-ಆಗ ಜನಗಳು ನೀವು ಒಂದೇ ಒಂದು ಕ್ಷಣದಲ್ಲಿ (ಇಷ್ಟು ಕೆಲಸಗಳನ್ನೂ ಮಾಡಿದ್ದನ್ನು) ಕಂಡರು ಎಂಬುದೇ ಪ್ರಧಾನವಾಕ್ಯ. ಆಗ (ತದಾ) ಎಂದರೆ ಯಾವಾಗ ಎಂಬುದನ್ನು 'ಯಾವತ್ ಪ್ರಾಕ್ ತ್ವಂ ಪರ್ವತಂ ಲಂಕಾಂ ಅನೈಷೀಃ'-ಯಾವಾಗ ಹಿಂದೆ ನೀನು ಆ ಪರ್ವತವನ್ನು ಲಂಕೆಗೆ ತಂದೆಯೋ ಆಗ ಎಂದು ಸಂಬಂಧಸೂಚಕ ಅಪೂರ್ಣವಾಕ್ಯ. ಈ ಅಪೂರ್ಣವಾಕ್ಯದಲ್ಲಿರುವ ಪರ್ವತಂ-ಗೆ ೧. ಪಂಚಾಶತ್ಸಹಸ್ರೈಃ ಯೋಜನೈಃ ವ್ಯವಹಿತಂ, ೨. ಅಮಿತಂ, ೩. ಸಂಜೀವ....ನಿಧಿಂ ಎಂದು ಮೂರು ವಿಶೇಷಣಗಳು. ಪ್ರಧಾನವಾಕ್ಯದಲ್ಲಿರುವ ತ್ವಾಂ-ಗೆ ಅ) ತತಃ ಉತ್ಪತಂತಂ, ಆ) ಉತ ಗಿರಿಂ ಉತ್ಪಾಟಯಂತಂ, ಇ) ತತಃ ಗಿರಿಂ (ಎಂದು ಆವೃತ್ತಿಮಾಡಿಕೊಳ್ಳಬೇಕು) ಗೃಹೀತ್ವಾ ಖೇ ಆಯಾಂತಂ, ಈ) ರಾಘವಾಂಘ್ರೌ ಪ್ರಣತಂ ಅಪಿ ಎಂದು ನಾಲ್ಕು ವಿಶೇಷಣಗಳು.

ಸಂಸ್ಕೃತದಲ್ಲಿ ಅನೈಷೀಃ-ನೀನು ತಂದಿ ಅಥವಾ ತೆಗೆದುಕೊಂಡು ಬಂದಿ ಎಂಬುದೂ ಅದ್ರಾಕ್ಷೀತ್-ನೋಡಿದರು ಎಂಬುದೂ ಎರಡೂ ದ್ವಿಕರ್ಮಕ ಕ್ರಿಯಾಪದಗಳು. ಆದ್ದರಿಂದ ಅವೆರಡಕ್ಕೂ ಕ್ರಮವಾಗಿ (ಅ) ಪರ್ವತಂ ಲಂಕಾಂ ಎಂದೂ (ಆ) ತ್ವಾಂ, ಉತ್ಪತಂತಂ, ಉತ್ಪಾಟಯಂತಂ, ಆಯಾಂತಂ ಪ್ರಣತಂ ಎಂದೂ ಎರಡೆರಡು ಕರ್ಮಗಳಿವೆ. ಅದರಂತೆ ಮೊದಲನೆಯ ವಾಕ್ಯ ಯಾವತ್ ತ್ವಂ ಪರ್ವತಂ ಲಂಕಾಂ ಅನೈಷೀಃ ಎಂದಾಗುತ್ತದೆ. ಇದಕ್ಕೆ ಶುದ್ಧ ಕನ್ನಡದಲ್ಲಿ ಯಾವಾಗ ನೀನು ಪರ್ವತವನ್ನು ಲಂಕಾಪಟ್ಟಣಕ್ಕೆ ತಂದೆಯೋ ಎಂದೇ ಅರ್ಥವಾಗುತ್ತದೆ. ಹೀಗೆಯೇ ಲೋಕಃ ತ್ವಾಂ ಏಕಕ್ಷಣೇ ಹಿ ಉತ್ಪತಂತಂ ಉತ್ಪಾಟಯಂತಂ ಆಯಾಂತಂ ಪ್ರಣತಂ ಅಪಿ ಅದ್ರಾಕ್ಷೀತ್ ಎಂಬ ಪ್ರಧಾನವಾಕ್ಯಕ್ಕೆ ಶುದ್ಧ ಕನ್ನಡಭಾಷೆಯಲ್ಲಿ ಅರ್ಥ ಹೇಳಿದರೆ— ಜನಗಳು ಒಂದೇಒಂದು ಕ್ಷಣದಲ್ಲಿಯೇ ನೀವು (ಬೆಟ್ಟದ ಬಳಿಗೆ) ಹಾರಿದ್ದು, (ಬೆಟ್ಟವನ್ನು) ಬುಡಮುಟ್ಟ ಕಿತ್ತಿದ್ದು, (ಲಂಕೆಗೆ) ಹಿಂದಿರುಗಿ ಬಂದದ್ದು (ರಾಮನಿಗೆ) ನಮಿಸಿದ್ದು ಇಷ್ಟೂ ಕೆಲಸ ಮಾಡಿದ್ದನ್ನು ಕಂಡರು—ಎಂದೇ ಆಗುತ್ತದೆ. ಹಾರಿದವರನ್ನಾಗಿಯೂ, ಕಿತ್ತವರನ್ನಾಗಿಯೂ ಹಿಂದಿರುಗಿದವರನ್ನಾಗಿಯೂ ನಮಸ್ಕಾರಮಾಡಿದವರನ್ನಾಗಿಯೂ ಎಂದು ಅರ್ಥ ಹೇಳುವುದು ಕೇವಲ ಗ್ರಾಂಥಿಕ ಭಾಷೆಯೆನಿಸುತ್ತದೆ. ಇರಲಿ.

ಅಂತೂ ಒಟ್ಟಿನಲ್ಲಿ—ಹೇ ಹನುಮಂತ ! ನೀನು ಹಿಂದೆ ಲಂಕಾ-ಪಟ್ಟಣಕ್ಕೆ ಗಂಧಮಾದನ ಪರ್ವತವನ್ನು ತಂದ ಸಂದರ್ಭದಲ್ಲಿ ಲಂಕೆಯಿಂದ ಬೆಟ್ಟದ ಬಳಿಗೆ ಹಾರಿಹೋಗಿ ಆ ಬೆಟ್ಟವನ್ನು ಬುಡಮಟ್ಟ ಕಿತ್ತುಕೊಂಡು ಲಂಕೆಗೆ ಬಂದು ರಾಮನಿಗೆ ನಮಿಸಿದ್ದು ಇಷ್ಟು ಮಹತ್ಕಾರ್ಯವನ್ನೂ ಕೇವಲ ಒಂದು ಕ್ಷಣದೊಳಗೇ (ಎಂದರೆ ಸುಮಾರು ನಾಲ್ಕು ನಿಮಿಷಗಳ ಒಳಗೇ) ಮಾಡಿದ್ದನ್ನು ಜನಗಳೆಲ್ಲ ಕಣ್ಣಾರೆ ಕಂಡರು—ಎಂಬುದೇ ಈ ಶ್ಲೋಕದ ಒಟ್ಟು ಭಾವ. ಈ ಅರ್ಥದಲ್ಲಿ ಎಲ್ಲ ಪದಗಳಿಗೂ ಸರಳಾರ್ಥವೇ ಇರುವುದರಿಂದ ನೇರವಾಗಿ ಅನ್ವಯ-ಅನ್ವಯಾರ್ಥಗಳಿಗೇ ಹೋಗಿಬಿಡ-ಬಹುದು.

**217. ದಂಡಾನ್ವಯ**—(ಹೇ) ಅಧಿಕಪ್ರಾಣ ! ತ್ವಂ ಯಾವತ್ ಪ್ರಾಕ್ ೧. ಪಂಚಾಶತ್ಸಹಸ್ರೈಃ ಯೋಜನೈಃ ವ್ಯವಹಿತಂ, ೨. ಅಮಿತಂ, ೩. ಸಂಜೀವನಾದ್ಯೌಷಧನಿಧಿಂ ಪರ್ವತಂ ಲಂಕಾಂ ಅನೈಷೀಃ, ತದಾ ಲೋಕಃ ತ್ವಾಂ ಏಕಕ್ಷಣೇ ಹಿ (ಅ) ತತಃ ಉತ್ಪತಂತಂ, (ಆ) ಉತ ಗಿರಿಂ ಉತ್ಪಾಟ-ಯಂತಂ (ಇ) (ತತಃ ಗಿರಿಂ) ಗೃಹೀತ್ವಾ ಖೇ ಆಯಾಂತಂ, (ಈ) ರಾಘ-ವಾಂಘ್ರೌ ಪ್ರಣತಂ ಅಪಿ ಅದ್ರಾಕ್ಷೀತ್ ‖ **ಸೂಚನೆ**—ಹನುಮತ್ಪರವಾಗಿ ಅರ್ಥ ಹೇಳುವಾಗ ಪ್ರಾಕ್–ಪೂರ್ವದಲ್ಲಿ, ಪಂಚಾಶತ್-ಸಹಸ್ರೈಃ ಯೋಜ-ನೈಃ–ಐವತ್ತು ಸಾವಿರ ಯೋಜನ, ವ್ಯವಹಿತಂ–ದೂರದಲ್ಲಿದ್ದ, ಖೇ–ಆಕಾಶದಲ್ಲಿ ಎಂದೇ ಅರ್ಥವಾಗುತ್ತದೆ.

**ಅನ್ವಯಾರ್ಥ**—ಅಧಿಕಪ್ರಾಣ–ಮಹಾ ಬಲಶಾಲಿಯಾದ ಹೇ ಹನು-ಮಂತ! ತ್ವಂ–ನೀನು ; ಯಾವತ್–ಯಾವಾಗ, ಪ್ರಾಕ್–ಹಿಂದೆ (ಇಂದ್ರಜಿತು ಸಕಲ ವಾನರರನ್ನೂ ಮೋಹನಾಸ್ತ್ರದಿಂದ ಮೂರ್ಛಿತರನ್ನಾಗಿ ಮಾಡಿದಾಗ ಎಂದರ್ಥ) ೧. ಪಂಚಾಶತ್-ಸಹಸ್ರೈಃ ಯೋಜನೈಃ–ಐವತ್ತು ಸಾವಿರಯೋಜನ ಗಳಷ್ಟು; ವ್ಯವಹಿತಂ–ದೂರದಲ್ಲಿದ್ದ ; ೨. ಅಮಿತಂ–ಯಾರಿಗೂ ತಿಳಿಯದ (ಎಂದರೆ ಅದು ಏನು? ಎಲ್ಲಿದೆ? ಅದರ ಸ್ವರೂಪವೇನು? ಎಂಬುದು ಯಾರಿಗೂ ತಿಳಿಯದೇ ಇದ್ದ ಎಂದರ್ಥ—ಕಕ., ವಿ., ಛ.,) ಅಥವಾ ದೊಡ್ಡದಾದ (ಪುರಾ ) (ಎಂದರೆ ತಾತ್ಪರ್ಯನಿರ್ಣಯದಲ್ಲಿ ಹೇಳಿದಂತೆ ೮ ಅಧ್ಯಾ. ೧೫೭

ಶ್ಲೋಕದ ನೂರು ಗಾವುದ ವಿಸ್ತಾರವುಳ್ಳ) ; ೩. ಸಂಜೀವನಾದಿ-ಔಷಧ-ನಿಧಿಂ–ಮೃತಸಂಜೀವಿನಿ, ಸಂಧಾನಕರಣೀ, ವಿಶಲ್ಯಕರಣೀ ಮತ್ತು ಸಾವರ್ಣ್ಯಕರಣೀ ಎಂದು ನಾಲ್ಕು ಮೂಲಿಕೆಗಳಿಗೆ ಆಶ್ರಯವಾಗಿದ್ದ ; ಪರ್ವತಂ–ಗಂಧಮಾದನಪರ್ವತವನ್ನು ; ಲಂಕಾಂ–ಲಂಕೆಗೆ ; ಅನೈಷೀಃ–ತಂದೆಯೋ (ತೆಗೆದುಕೊಂಡುಬಂದೆಯೋ) ; ತದಾ–ಆಗ, ಲೋಕಃ–ಜನಗಳು (ಲೋಕಸ್ತು ಭುವನೇ ಜನೇ–ಅಮರ [ಕಕ. ಛ.], ತ್ವಾಂ–ನೀನು, ಏಕಕ್ಷಣೇ ಒಂದು ಕ್ಷಣದೊಳಗಾಗಿಯೇ (ಹಿ-ಕಾರವು ಇಲ್ಲಿ ಏವಕಾರಾರ್ಥದಲ್ಲಿ ಬಂದಿದೆ), 1. ತತಃ–ಅಲ್ಲಿಂದ (ಲಂಕಾಪಟ್ಟಣದಿಂದ—ಕಕ. ವಿ. ಛ. ಪುರಾ.) ಉತ್ಪತಂತಂ–ಬೆಟ್ಟದ ಬಳಿಗೆ ಹಾರಿಹೋದುದನ್ನೂ, 2. ಉತ–ಅನಂತರ, ಗಿರಿಂ–ಆ ಬೆಟ್ಟವನ್ನು (ಗಂಧಮಾದನಪರ್ವತವನ್ನು), (ಹುಡುಕಿದರೂ ಮೂಲಿಕೆಗಳು ಬೇಗ ಕಾಣಿಸದೆಹೋದ ಕಾರಣ) ಉತ್ಪಾಟಯಂತಂ–ಬುಡಸಹಿತ ಕಿತ್ತುದನ್ನೂ, 3. [ತತಃ–ಅಲ್ಲಿಂದ (ಬೆಟ್ಟವಿದ್ದ ಹಿಮವತ್ಪ್ರದೇಶದಿಂದ), ಗಿರಿಂ–ಆ ಗಂಧಮಾದನವನ್ನು,] ಗೃಹೀತ್ವಾ–ಕೈಯಲ್ಲಿ ಹಿಡಿದುಕೊಂಡು ಖೇ–ಆಕಾಶದಲ್ಲಿ (ಅನಂತಂ ಸುರವರ್ತ್ಮ ಖಮ್—ಅಮರ. ಕಕ. ಖಮಿಂದ್ರಿಯಂ ಸಮಾಖ್ಯಾತಂ ಖಮಾಕಾಶಂ ಪ್ರಕೀರ್ತಿತಂ-ನಿಘಂಟು ಛ.), ಆಯಾಂತಂ–ಬರುವುದನ್ನೂ, 4. ರಾಘವಾಂಘ್ರೌ–ಶ್ರೀರಾಮನ ಪಾದದಲ್ಲಿ ಪ್ರಣತಂ ಅಪಿ–ನಮಸ್ಕಾರ ಮಾಡಿದ್ದನ್ನೂ, ಅದ್ರಾಕ್ಷೀತ್–ಕಂಡರು.

**218. ಭಾವಾರ್ಥ**—ಹನುಮಂತನ ಒಂದೊಂದು ಚರಿತ್ರೆಯನ್ನು ನೆನೆಸಿಕೊಂಡರೂ ರೋಮಾಂಚವೇ ಆಗುತ್ತದೆ ಒಂದೊಂದೂ ಅಂಥಂಥಾ ಅದ್ಭುತವಾದ ಮಹಾಪರಾಕ್ರಮದ ಕಾರ್ಯಗಳೇ ಆಗಿವೆ. ಏಕೆಂದರೆ ಲೋಕದಲ್ಲಿ ಎಷ್ಟೋ ವೀರರಿದ್ದಾರೆ, ಎಷ್ಟೋ ಬುದ್ಧಿವಂತರೂ ಇದ್ದಾರೆ. ಆದರೆ ಅವರೆಲ್ಲರ ಧೈರ್ಯ-ಚಾತುರ್ಯಗಳ ಮಾತೇ ಬೇರೆ, ಹನುಮಂತನ ಧೈರ್ಯ, ಅವನ ಚಾತುರ್ಯವೇ ಬೇರೆ. ಅವನ ಸಾಹಸ, ಅವನ ಚಾಕಚಕ್ಯತೆ, ಅವನ ದಕ್ಷತೆ ಯಾರಿಗೂ ಊಹಿಸಲೂ ಅಸದಳವಾದಂಥವು. ಅವನು ಗಂಧಮಾದನಪರ್ವತವನ್ನು ಎತ್ತಿ ತಂದ ಒಂದು ಪ್ರಸಂಗವೇ ಸಾಕು, ಅವನ ಈ ಎಲ್ಲ ಗುಣಗಳನ್ನೂ ಒರೆಹಚ್ಚಿ ತೋರಿಸಿಕೊಡುತ್ತದೆ.

ರಾವಣನ ಮಗ ಇಂದ್ರಜಿತ್ ಮೊದಲೇ ಮಾಯಾಯುದ್ಧದಲ್ಲಿ ನಿಪುಣಾಗ್ರೇಸರ. ಜೊತೆಗೆ ಬ್ರಹ್ಮನ ಮತ್ತು ರುದ್ರನ ವರಗಳ ಬಲವೂ ಬೇರೆ. ಅವನು ಹೋಮ ಮಾಡಿ ಯುದ್ಧಕ್ಕೆ ನಿಂತರೆ ಯಾರಿಗೂ ಕಣ್ಣಿಗೇ ಬೀಳುತ್ತಿರಲಿಲ್ಲ. ಹಾಗೆಯೇ ಯುದ್ಧ ಮಾಡುತ್ತಾ ಅವನು ನೀಲ ಸುಗ್ರೀವ ನಳ ಅಂಗದಾದಿ ಸಕಲ ಕಪಿವೀರರನ್ನೂ ಮೋಹನಾಸ್ತ್ರದಿಂದ ಮೋಹಿಸಿ ಮೈಮೇಲೆ ಎಚ್ಚರಿಕೆಯೇ ಇಲ್ಲದಂತೆ ಮಲಗಿಸಿಬಿಟ್ಟನು. ಹನುಮಂತ-ನೊಬ್ಬ ಮಾತ್ರ ಇಂದ್ರಜಿತ್ತನ ಮೋಹಕ್ಕೆ ಸಿಕ್ಕುಬೀಳದೆ ಎಚ್ಚರದಿಂದಿದ್ದನು. ವಿಭೀಷಣನು ಜಾಂಬುವಂತನನ್ನು ಹೇಗೋ ನೀರು ತಟ್ಟಿ ಎಬ್ಬಿಸಿದನು. ಎಚ್ಚರಗೊಂಡಕೂಡಲೇ ಆ ಜಾಂಬುವಂತ ಹನುಮಂತನಿಗೆ ಅರ್ಧಲಕ್ಷ ಯೋಜನ ದೂರದಲ್ಲಿದ್ದ ಗಂಧಮಾಧನಪರ್ವತಕ್ಕೆ ಹೋಗಿ ಮೃತಸಂಜೀ-ವಿನಿಯೇ ಮೊದಲಾದ ನಾಲ್ಕು ಮೂಲಿಕೆಗಳನ್ನು ತರುವಂತೆ ಹೇಳಿದನು. ಹನುಮಂತ ಒಂದೇ ನೆಗೆತಕ್ಕೆ ಆ ಪರ್ವತದ ಬಳಿಗೆ ಹೋಗಿ ಮೂಲಿಕೆಗಳಿಗಾಗಿ ಹುಡುಕಾಡಿದನು. ಮೂಲಿಕೆಗಳು ಬೇಗ ಕಣ್ಣಿಗೆ ಬೀಳಲಿಲ್ಲ. ಆದರಿಂದ ಕ್ರುದ್ಧನಾಗಿ ಆ ಇಡೀ ಬೆಟ್ಟವನ್ನೇ ಬುಡಸಹಿತ ಕಿತ್ತುಕೊಂಡು ಕೈಯಲ್ಲಿ ಹಿಡಿದುಕೊಂಡು ಲಂಕಾಪಟ್ಟಣಕ್ಕೆ ಬಂದು ರಾಮನ ಮುಂದಿಟ್ಟು ನಮಸ್ಕಾರ ಮಾಡಿದನು. ಆ ಮೂಲಿಕೆಗಳ ಗಾಳಿ ಬೀಸಿದ ಕೂಡಲೇ ವಾನರರೆಲ್ಲರೂ ಎಚ್ಚತ್ತು ದೃಢಕಾಯರಾಗಿ ಎದ್ದುಬಿಟ್ಟರು. ಹೀಗೆ ಬೆಟ್ಟವನ್ನು ಕಿತ್ತು ತಂದುದೇ ಮಹತ್ಕಾರ್ಯವಾಗಿದ್ದರೂ ಅದಕ್ಕಿಂತಲೂ ಪರಮಾಶ್ಚರ್ಯಕರವಾದ ಸಂಗತಿಯೇನೆಂದರೆ ಲಂಕಾಪಟ್ಟಣದಿಂದ ಅರ್ಧಲಕ್ಷಯೋಜನ ದೂರದಲ್ಲಿದ್ದ ಬೆಟ್ಟದ ಬಳಿಗೆ ಹೋದದ್ದು, ಅಲ್ಲಿ ಮೂಲಿಕೆಗಳಿಗಾಗಿ ಹುಡುಕಾಡಿದ್ದು, ಸಿಗದೇ ಹೋಗಲು ಬೆಟ್ಟವನ್ನೇ ಕಿತ್ತಿದ್ದಲ್ಲದೆ ಅದನ್ನು ಲಂಕೆಗೆ ತಂದದ್ದು ಇಷ್ಟು ಕಾರ್ಯಗಳನ್ನೂ ಒಂದು ಕ್ಷಣದೊಳಗಾಗಿಯೇ (ಎಂದರೆ ಸುಮಾರು ನಾಲ್ಕು ನಿಮಿಷದಷ್ಟರೊಳಗಾಗಿಯೇ) ಮಾಡಿದ್ದಂತೂ ಎಂಥಾ ಪರಮಾಶ್ಚರ್ಯ-ಕರವಾದ ಸಂಗತಿ! ಎಂದು ಬೆಕ್ಕಸುಬೆರಗಾಗಿ ಪಂಡಿತಾಚಾರ್ಯರು ಆಶ್ಚರ್ಯಮಗ್ನರಾಗಿದ್ದಾರೆ. ಶ್ರೀಮಜ್ಜಗನ್ನಾಥದಾಸರೂ ಸಹ ಒಂದು ಕೀರ್ತನೆಯಲ್ಲಿ (ಪದದಲ್ಲಿ) ಈ ಪ್ರಸಂಗವನ್ನೇ ಸ್ಮರಿಸಿ ಪ್ರಾಣದೇವರನ್ನು ಹೀಗೆ ಸ್ತುತಿಸಿದ್ದಾರೆ—

ರಾಗ ಭೈರವಿ (ಅಥವಾ ಮಧ್ಯಮಾವತಿ) ಆದಿತಾಳ
ಪ್ರಾಣದೇವ ನೀನಲ್ಲದೆ ಕಾಯ್ವರ
ಕಾಣೆನೊ ಜಗದೊಳಗೆ—ಮುಖ್ಯ-॥ ಪ ॥
(ಪಾಠಾಂತರ) ಕಾಣೆ ಲೋಕದೊಳಗೆ—ಮುಖ್ಯ-॥ ಪ ॥

ಪಾಪಿನ ಪಾಶದಿ ರಾವಣಿ ನೀಲ ಸು–। ಗ್ರೀವ ಮುಖ್ಯರ ಬಿಗಿಯೆ
ಸಾವಿರದೈವತ್ತು ಗಾವುದದಲ್ಲಿಹ ಸಂ–। ಜೀವನವನು ತಂದೆ—ಮುಖ್ಯ ॥ ೩ ॥

(ಪಾಪಿನಪಾಶದಿ–ನಾಗಪಾಶದಿಂದ, ರಾವಣಿ–ರಾವಣನಮಗ ಇಂದ್ರ-ಜಿತ್ತು. ಮುಖ್ಯರ–ಮೊದಲಾದವರನ್ನು ಬಿಗಿಯೆ–ಬಂಧಿಸಲು. ಸಾವಿರ-ದೈವತ್ತು–ಐವತ್ತುಸಾವಿರ, ಅರ್ಧಲಕ್ಷ.)

**ವಿಶೇಷ**—'ಏಕಸ್ಮಿನ್ ಕ್ಷಣೇ ಲಂಕಾಪ್ರದೇಶಾತ್ ಪಂಚಾಶತ್ಸಹಸ್ರ-ಯೋಜನಮಾರ್ಗಗಮನಂ, ಪರ್ವತೋತ್ಪಾಟನಂ, ತಂ ಗೃಹೀತ್ವಾ ತಾವ ನ್ಮಾರ್ಗಪ್ರತ್ಯಾಗಮನಂ, ತತ್ಪಾದಪಂಕಜಪ್ರಣಾಮಃ ಏವಂಭೂತೋ ವ್ಯಾಪಾ-ರೋಽನ್ಯೈರನೇಕಕಾಲಕರ್ತವ್ಯೋಽಪಿ ತ್ವಯೈಕಸ್ಮಿನ್ ಕ್ಷಣೇ ಕೃತಃ। ಅಹೋ ತೇ ಮಹಿಮಾರ್ಣವಃ ಸ್ತೋ(ಶ್ರೋ)ತ್ರ್ಯಾಣಾಮವಾಙ್ಮನಸಗೋಚರ ಇತಿ ಭಾವಃ(ಕಕ.ಛ.)॥' ಒಂದು ಕ್ಷಣದೊಳಗಾಗಿಯೇ ಲಂಕಾಪಟ್ಟಣದಿಂದ ಗಂಧ-ಮಾದನಪರ್ವತವಿದ್ದ ಕಡೆಗೆ ಐವತ್ತುಸಾವಿರಗಾವುದ ದಾಟಿ ಹೋದದ್ದು, ಅಲ್ಲಿ ಪರ್ವತವನ್ನು ಕಿತ್ತಿದ್ದು, ಕಿತ್ತು ಕೈಲಿ ಹಿಡಿದುಕೊಂಡು ಪುನಃ ಅರ್ಧಲಕ್ಷ-ಗಾವುದ ದೂರವನ್ನು ದಾಟಿ ಬಂದು ರಾಮಪಾದದಲ್ಲಿಟ್ಟು ನಮಸ್ಕರಿಸಿದ್ದು ಇಷ್ಟು ಕಾರ್ಯಗಳನ್ನು ಮಾಡುವುದೇ ಪರಮಾದ್ಭುತವಾಗಿರುವಾಗ ಇದಿಷ್ಟನ್ನೂ ಒಂದೇ ಕ್ಷಣದಲ್ಲೇ ಮಾಡಿದ್ದು ಎಂಥಾ ಆಶ್ಚರ್ಯ. ಇಂಥಾ ನಿಮ್ಮ ಮಹಿಮೆಯ ಸಾಗರವು ಕೇಳುವವರ ಮಾತಿಗೂ ಮನಸ್ಸಿಗೂ ಎಟುಕದ ವಿಚಿತ್ರವಾಗಿದೆಯೆಂದು ಭಾವ. (ಕಕ. ಛ.) ಇಲ್ಲಿಗೆ ಹದಿನೆಂಟನೆಯ ಶ್ಲೋಕ ಮುಗಿಯಿತು.

## ಶ್ಲೋಕ ಹತ್ತೊಂಭತ್ತು. ಆ ಪರ್ವತವನ್ನು ಹಿಂದಕ್ಕೆ ಎಸೆದದ್ದು.

### ರಾಮಪರವಾಗಿ ಅರ್ಥತಾತ್ಪರ್ಯಗಳು

**219.** ಅವತಾರಿಕೆ—(ಪುರಾ.) ರಾಮದೇವರ ಆ ಅಮಾನುಷ-ವ್ಯಾಪಾರವನ್ನೇ ಸ್ಮರಿಸಿಕೊಂಡು ಪುಲಕಾಂಕಿತರಾಗಿ ಅದೇ ವಿಚಾರವನ್ನೇ ಉಪಸಂಹಾರಮಾಡಿ ಆ ಭಗವದ್ರೂಪಕ್ಕೆ ನಮಸ್ಕಾರವನ್ನೂ ಮಾಡುತ್ತಾರೆ.

**ಕ್ಷಿಪ್ತಃ ಪಶ್ಚಾತ್ ಸಲೀಲಂ ಶತಮತುಲಮತೇ**
**ಯೋಽಜನಾನಾಂ ಸ ಉಚ್ಚ-**
**ಸ್ತಾವದ್ ವಿಸ್ತಾರವಾಂಶ್ಚಾ—ಪ್ಯುಪಲಲವ ಇವ**
**ವ್ಯಗ್ರಬುದ್ಧ್ಯಾ ತ್ವಯಾಽತಃ ।**
**ಸ್ವ ಸ್ವಸ್ಥಾಽನಸ್ಥಿತಾತಿ—ಸ್ಥಿರ ಶ ಕಲ ಶಿಲಾ-**
**ಜಾಲಸಂಶ್ಲೇಷ ನಷ್ಟ-**
**ಚ್ಛೇದಾಂಕಃ ಪ್ರಾಗಿವಾಭೂತ್ ಕಪಿವರವಪುಷ-**
**ಸ್ತೇ ನಮಃ ಕೌ ಶಲಾಯ ॥ ೧೯ ॥**

**ಪದವಿಭಾಗ**—ಕ್ಷಿಪ್ತಃ, ಪಶ್ಚಾತ್, ಸಲೀಲಂ, ಶತಂ, ಅತುಲಮತೇ ! ಯಃ, ಅಜನಾನಾಂ, ಸಃ, ಉಚ್ಚೈಃ, ತಾವತ್, ವಿಸ್ತಾರವಾನ್, ಚ, ಅಪಿ, ಉಪಲಲವಃ, ಇವ, ವ್ಯಗ್ರಬುದ್ಧ್ಯಾ, ತ್ವಯಾ, ಅತಃ, ಸ್ವ ! ಸ್ವಸ್ಥ ! ಅನಸ್ಥಿತ ! ಅತಿಸ್ಥಿರ ! ಶ ! ಕಲ ! ಶಿಲಾಜಾಲಸಂಶ್ಲೇಷ ! ನಷ್ಟಚ್ಛೇದಾಂಕಃ ಪ್ರಾಕ್, ಇವ, ಅಭೂತ್, ಕಪಿವರವಪುಷಃ , ತೇ, ನಮಃ, ಕೌ, ಶಲಾಯ ॥

**220.** ಶ್ಲೋಕದ ವಿಶ್ಲೇಷಣೆ—ತೇ ನಮಃ–ನಿನಗೆ ನಮಸ್ಕಾರ ಎಂದಿರುವುದರಿಂದ ಈ ಶ್ಲೋಕ ರಾಮದೇವರನ್ನೇ ಸಂಬೋಧಿಸಿ ಹೇಳಿದ್ದಾಗಿದೆಯೆಂದು ಸ್ಪಷ್ಟವಾಗುತ್ತದೆ. ಆ ರಾಮದೇವರಿಗೆ ಪ್ರಥಮ ಚರಣದಲ್ಲಿ 1. ಅತುಲಮತೇ, (೩ನೇ ಚರಣದಲ್ಲಿ) 2. ಸ್ವ, 3. ಸ್ವಸ್ಥ, 4. ಅನಸ್ಥಿತ, 5. ಅತಿಸ್ಥಿರ, 6. ಶ, 7. ಕಲ, ಮತ್ತು 8. ಶಿಲಾಜಾಲಸಂಶ್ಲೇಷ ! ಎಂದು ಎಂಟು ವಿಶೇಷಣಗಳು, ಎಲ್ಲವೂ ಸಂಬುದ್ಧಿರೂಪಗಳೇ.

ಪ್ರಧಾನವಾಕ್ಯದಲ್ಲಿರುವ ತೇ-ಗೆ ೧. ಕಪಿವರವಪುಷಃ ಶಲಾಯು ಎಂಬುದು ನೇರವಾಗಿ ವಿಶೇಷಣ. ೨. ಯಃ ಅಜನಾನಾಂ ಶತಂ ಅಪಿ ಉಚ್ಚೈಃ ವಿಸ್ತಾರವಾಂಶ್ಚ ಎಂಬುದೂ, ೩. ಸಃ ತ್ವಯಾ ನಷ್ಟಚ್ಛೇದಾಂಕಃ ಪ್ರಾಗಿವ ಅಭೂತ್ ಎಂಬುದೂ ಪರ್ಯಾಯದಿಂದ ವಿಶೇಷಣಗಳೇ. ೩ನೇ ವಿಶೇಷಣದಲ್ಲಿರುವ ಸಃ ಎಂಬುದನ್ನು ೩ಅ. ಯಃ ತಾವತ್ ವ್ಯಗ್ರಬುದ್ಧ್ಯಾ ಕೌ ಉಪಲಲವಃ ಇವ ಕ್ಷಿಪ್ತಃ ಎಂಬ ವಾಕ್ಯಭಾಗ ವಿವರಿಸುತ್ತದೆ. ನಷ್ಟಚ್ಛೇದಾಂಕಃ ಎಂಬುದನ್ನು ಅತಃ ಸಲೀಲಂ ಎಂಬ ಪದಗಳು ವಿವರಿಸುತ್ತವೆ. ಸಂಬೋಧನೆಗಳನ್ನು ಬಿಟ್ಟು ಮಿಕ್ಕ ಭಾಗಕ್ಕೆ ಈ ರೀತಿ ಸ್ಥೂಲವಾಗಿ ಅರ್ಥವಾಗುತ್ತದೆ:— ೩ಅ. ಯಾವ ಕಪಿಸಮೂಹವು ಮೊದಲು ದಿಕ್ಕು ತೋರದಂತಾಗಿ (ಅಥವಾ) ಮಾಯಾಯುದ್ಧಕುಶಲನಾದ ಇಂದ್ರಜಿತ್ತಿನಿಂದ ಭೂಮಿಯ ಮೇಲೆ ಕಲ್ಲುಚೂರುಗಳಂತೆ (ನಿಶ್ಚೇಷ್ಟವಾಗಿ) ಮಾಡಲ್ಪಟ್ಟಿತ್ತೋ, ೩. ಅದು (ಕಪಿಸಮೂಹವು) ನಿನ್ನಿಂದ ಇವನ (ಗರುಡನ) ಮುಖಾಂತರ ನಿರಾಯಾಸವಾಗಿ ಯಾವ ನೋವೂ ಇಲ್ಲದಂತೆ ಹಿಂದಿನಂತೆಯೇ ಆಯಿತು. ೨. ನೀನು ನೂರು ಮಂದಿ ಋತ್ವಿಜರಿಗಿಂತಲೂ ಶ್ರೇಷ್ಠನೂ ಅನಂತಜ್ಞಾನಾನಂದಾದಿಗುಣ ಪರಿಪೂರ್ಣನೂ ೧. ಕಪಿವೀರರಾದ ಸುಗ್ರೀವಾದಿಗಳಿಗೆ ಸುಖವನ್ನು ಕೊಡುವಂಥಾವನೂ ಆಗಿದ್ದೀಯೆ. ಇಂಥಾ ನಿನಗೆ ನಮಸ್ಕಾರ.

ಇದರಲ್ಲಿ ಸಂಬೋಧನಾರೂಪಗಳಿಗೂ ಕೆಲವು ಬೇರೆ ಶಬ್ದಗಳಿಗೂ ಅರ್ಥವಿವರಣೆ ಕ್ಲಿಷ್ಟವಾದ್ದರಿಂದ ಮೊದಲು ಅವುಗಳ ಅರ್ಥ ತಿಳಿಸಿ ಆಮೇಲೆ ಅನ್ವಯ-ಅರ್ಥಗಳಿಗೆ ಹೋಗುವೆನು.

**221. ಕ್ಲಿಷ್ಟಪದಗಳ ವಿವರಣೆ—೧.** ತುಲಾ ಎಂದರೆ ತಕ್ಕಡಿ. ಅದರಿಂದ ಅತುಲ ಎಂದರೆ ತಕ್ಕಡಿಗೆ ಎಂದರೆ ಅಳತೆಗೆ, ಹಿಡಿತಕ್ಕೆ ಸಿಗದದ್ದು ಎಂದರ್ಥ; ಅರ್ಥಾತ್ ಅಸಾಧಾರಣವಾದ, ಎದುರಿಲ್ಲದ ಹೋಲಿಕೆಯಿಲ್ಲದ ಎಂದು ಭಾವ. ಮತಿ–ಬುದ್ಧಿ, ಹೀಗೆ ಅತುಲಮತೇ ಎಂದರೆ ಅಸಾಧಾರಣವಾದ (ಹೋಲಿಕೆಯಿಲ್ಲದ) ಬುದ್ಧಿಯುಳ್ಳವನೇ! ಎಂದರ್ಥ. ೨. ಆ ಭಗವಂತ ಗಾಯತ್ರೀಮಂತ್ರ ಹೇಳುವಂತೆ ರಮಾಬ್ರಹ್ಮಾದಿ ಸಕಲ ಜೀವರ ಬುದ್ಧಿಯನ್ನೂ ಪ್ರೇರಿಸುವನು ; ಆದಕಾರಣ ಅವನ ಬುದ್ಧಿಗೆ ಯಾರೂ ಸರಿ-

ಸಮಾನರಿಲ್ಲ. ಹಾಗಾದರೆ ಆವನ ಬುದ್ಧಿಯನ್ನು ಪ್ರೇರಿಸುವವರಾರು ? ಎಂದರೆ **ಸ್ವ** ಎಂದರು ; ತನ್ನ ಬುದ್ಧಿಯನ್ನು ತಾನೇ ಪ್ರೇರಿಸಿಕೊಳ್ಳುವ ಸ್ವತಂತ್ರ ಮೂರುತಿ ಎಂದರ್ಥ. ಇದನ್ನೇ ಭಾಗವತತಾತ್ಪರ್ಯದೊಳ(೧೦/೧/೪೩) ದಾಹೃತವಾದ 'ಸ್ವತಂತ್ರತ್ವಾತ್ ಸುಖತ್ವಾಚ್ಚ ಸ್ವನಾಮಾ ವಿಷ್ಣುರುಚ್ಯತೇ' ಎಂಬ ಪದ್ಮಪುರಾಣವಾಕ್ಯವು ಹೇಳುತ್ತದೆ. ಸುಖಸ್ವರೂಪನಾದ್ದರಿಂದಲೂ ಸ್ವತಂತ್ರನಾದ್ದರಿಂದಲೂ ಪರಮಾತ್ಮನಿಗೆ ಸ್ವ ಎಂದು ಹೆಸರು. ಹೀಗೆಯೇ 'ಸ್ವಾತಂತ್ರ್ಯಾತ್ ಸ್ವ ಇತಿಪ್ರೋಕ್ತಃ' ಎಂಬ ಇನ್ನೊಂದು ಪ್ರಮಾಣವೂ ಇದೆ.

೩. **ಸ್ವಸ್ಥ.** ಸ್ವಸ್ಮಿನ್ ತಿಷ್ಠತೀತಿ ಸ್ವಸ್ಥಃ । ತಸ್ಯ ಸಂಬುದ್ಧಿಃ । ತನಗೆ ತಾನೇ ಆಧಾರವಾಗಿರುವವನು ಎಂದರ್ಥ. ಸ್ವಾಧಾರ ಎಂದರ್ಥ ೪. **ಅನಸ್ಥಿತ.** ಅನೇ–ಮುಖ್ಯಪ್ರಾಣೇ, ಸ್ಥಿತ–ವಿದ್ಯಮಾನ. 'ಕಸ್ಮಿನ್ನಹಂ' ಎಂಬ ಶ್ರುತಿಯಂತೆ (ಷಟ್ಪ್ರಶ್ನ ೬/೫) ಭಗವಂತ ಮುಖ್ಯಪ್ರಾಣನಲ್ಲಿದ್ದು-ಕೊಂಡೇ ಎಲ್ಲ ಕಾರ್ಯಗಳನ್ನೂ ಮಾಡುತ್ತಾನಲ್ಲದೆ ಮುಖ್ಯಪ್ರಾಣನ ದ್ವಾರಾ ಹೋಗದಿದ್ದರೆ ಲಭ್ಯನೇ ಆಗುವುದಿಲ್ಲ. ಅದೇ ರೀತಿ ಹನುಮಂತನ ದ್ವಾರಾ ಸೇವಿಸದಿದ್ದರೆ ಶ್ರೀರಾಮನೂ ಯಾರ ಸೇವೆಯನ್ನೂ ಸ್ವೀಕರಿಸುವು-ದಿಲ್ಲ ಎಂದು ಭಾವ. ೫. **ಅತಿಸ್ಥಿರ** ಎಂದರೆ ಅತ್ಯಂತ ಸ್ಥಿರನಾದವನೇ ! ಎಂದರ್ಥ. ಪ್ರಾಣಿಗಳ ಜೀವ ಹೋದರೂ ಮುಖ್ಯಪ್ರಾಣ ಮಾತ್ರ ಸ್ಥಿರ-ವಾಗಿರುತ್ತಾನೆ. ಹೀಗೆ ಮುಖ್ಯಪ್ರಾಣನಿಗೆ ಅಮೃತ ಎಂದು ಹೆಸರು. ಆ ಮುಖ್ಯಪ್ರಾಣನ ಶಕ್ತಿಯೆಲ್ಲ ಈ ಒಂದು ಬ್ರಹ್ಮಕಲ್ಪಕ್ಕೆ ಸೇರಿದ್ದು. ರಾಮ-ದೇವರಂತೂ ಅಂತಹ ಅನಂತ ಪ್ರಾಣರಿಗೆ ಆ ಶಕ್ತಿಯನ್ನು ಕೊಡುವವನಾದ್ದ-ರಿಂದ 'ಅತಿಸ್ಥಿರ'. ಈ ವಿಷಯವನ್ನೇ ಈಶಾವಾಸ್ಯ ಭಾಷ್ಯದಲ್ಲಿ ಹೇಳಿದ 'ಅತಿರೋಹಿತವಿಜ್ಞಾನಾತ್ ವಾಯುರಪ್ಯಮೃತಃ ಸ್ಮೃತಃ । ಮುಖ್ಯಾಮೃತಃ ಸ್ವಯಂ ರಾಮಃ ಪರಮಾತ್ಮಾ ಸನಾತನಃ ॥' ಎಂಬ ರಾಮಸಂಹಿತಾವಾಕ್ಯವು 'ಪ್ರಳಯಕಾಲದಲ್ಲೂ ಮುಚ್ಚಿಹೋಗದ (ಪ್ರಕಟವಾಗೇ ಇರುವ) ವೃತ್ತಿ-ಜ್ಞಾನವುಳ್ಳವರಾದ ಕಾರಣ ವಾಯುವಿಗೂ ಅಮೃತ (ಸ್ಥಿರ) ಎಂದು ಹೆಸರು. ಶ್ರೀರಾಮನಂತೂ ಸ್ವಯಂಪ್ರಭು, ಸದಾ ಜ್ಞಾನಪೂರ್ಣ, ಸನಾತನನು' ಎಂದು ಸ್ಪಷ್ಟಪಡಿಸುತ್ತದೆ. ಅತಿಸ್ಥಿರ ಎಂದರೆ ಉತ್ಪತ್ತಿ ನಾಶ ಎರಡೂ ಇಲ್ಲದ ಸನಾತನಮೂರ್ತಿಯೇ ! ಎಂದರ್ಥವನ್ನೂ ಹೇಳಬಹುದು.

**೬.** 'ಶಂ ಸುಖಂ' ಎಂದು ಏಕಾಕ್ಷರಕೋಶವಿರುವುದರಿಂದ ಶಕಾರ ಸುಖವಾಚಕ ಆದಕಾರಣ **ಶ** ಎಂದರೆ ಎಲ್ಲೈ ಸುಖಸ್ವರೂಪನೇ, ಸುಖಮಯನೇ ಎಂದರ್ಥ. **೭.** **'ಕಲ ಜ್ಞಾನೇ'** ಎಂತ ಧಾತುವಿರುವ ಕಾರಣ **ಕಲ** ಎಂದರೆ ಜ್ಞಾನರೂಪನೇ ಎಂದರ್ಥ. (ಪುರಾ.) **೮. ಶಿಲಾಜಾಲಸಂಶ್ಲೇಷ-** ಶಿಲಾ–ಕಲ್ಲುಬಂಡೆಗಳು. ಜಲ ಎಂದರೆ ನೀರು ಎಂದರ್ಥವಷ್ಟೆ ; ಜಲಾನಾಂ ಇದಂ ಜಾಲಂ ಎಂಬ ವ್ಯುತ್ಪತ್ತಿಯಿಂದ ಜಲಮಯವಾದ ಸಮುದ್ರಕ್ಕೆ ಜಾಲಂ ಎಂದು ಸಂಕೇತ. ಸಂ–ಶ್ಲೇಷ ಎಂದರೆ ಬಂಧನ. ಹೀಗೆ ಈ ಪದಕ್ಕೆ 'ಕಲ್ಲುಗಳಿಂದ ಸಮುದ್ರಕ್ಕೆ ಸೇತುವೆಯನ್ನು ಕಟ್ಟಿದವನೇ' ಎಂದರ್ಥ-ವಾಗುತ್ತದೆ. (ಪುರಾ.) ಇವೆಲ್ಲ ರಾಮದೇವರ ವಿಶೇಷಣಗಳು.

**೯. ವ್ಯಗ್ರಬುದ್ಧ್ಯಾ**—ವ್ಯಗ್ರ (ವಿ+ಅಗ್ರ) ಎಂದರೆ ಏಕಾಗ್ರತೆ-ಯಿಲ್ಲದ, ಕಲಕಿದ, ವ್ಯಾಕುಲವಾದ ಎಂದರ್ಥ. ಅಂಥ ಬುದ್ಧಿಯಿಂದ ಎಂದರೆ ವ್ಯಾಕುಲತೆಯಿಂದ, ಬುದ್ಧಿ ತೋರದೆ ದಿಙ್ಮೂಢರಾದದ್ದರಿಂದ ಎಂಬುದು ಕಪಿಗಳು ಇಂದ್ರಜಿತುವಿನ ಸಮ್ಮೋಹನಾಸ್ತ್ರದಿಂದ ಸಮ್ಮೋಹಿತರಾಗಿ ನೆಲದ ಮೇಲೆ ನಿಶ್ಚೇಷ್ಟರಾಗಿ ಬೀಳಲು ಕಾರಣವನ್ನು ತೋರಿಸುತ್ತದೆ. ಅಥವಾ ಇದನ್ನು ಇಂದ್ರಜಿತನಿಗೇ ವಿಶೇಷಣವೆಂದೂ ಹೇಳಬಹುದು. ವ್ಯಗ್ರಾ-ವ್ಯಾಕುಲಾ, ಕಪಟಮಯೀ, ಬುದ್ಧಿಃ ಯಸ್ಯ ಸಃ ವ್ಯಗ್ರಬುದ್ಧಿಃ, ತೇನ ಎಂಬ ವಿಗ್ರಹವಾಕ್ಯದಂತೆ ಋಜುಸ್ವಭಾವವಿಲ್ಲದೆ ವಕ್ರಬುದ್ಧಿಯುಳ್ಳ ಇಂದ್ರಜಿತ್ತಿಂದ ಎಂದೂ ಅರ್ಥ ಮಾಡಬಹುದು. **೧೦. ಕೌ** ಎಂಬುದು ಉಕಾರಾಂತ-ಸ್ತ್ರೀಲಿಂಗ 'ಕು' ಶಬ್ದದ ಸಪ್ತಮ್ಯೇಕವಚನರೂಪ. 'ಗೋತ್ರಾ ಕುಃ, ಪೃಥಿವೀ ಪೃಥ್ವೀ' ಎಂದು ಅಮರ. ಕುವತೇ ಇತಿ ಕುಃ । ಶಬ್ದ ಮಾಡು-ವಂಥಾದ್ದು. ಕು ಶಬ್ದೇ (ಭ್ವಾ. ಆತ್ಮ) ಎಂಬ ಧಾತುವಿನ ಮೇಲೆ ಡು ಪ್ರತ್ಯಯ ಬಂದಿದೆ (ಮಿತದ್ವಾದಿಭ್ಯ ಉಪಸಂಖ್ಯಾನಮ್–ವಾರ್ತಿಕ). ಆದ್ದ-ರಿಂದ ಕೌ ಎಂದರೆ ಭೂಮಿಯಲ್ಲಿ ಎಂದರೆ ನೆಲದ ಮೇಲೆ ಎಂದರ್ಥವಾಗು-ತ್ತದೆ. **೧೧. ಉಪಲ-ಲವಃ** 'ಪಾಷಾಣ-ಪ್ರಸ್ತರ-ಗ್ರಾವೋ—ಪಲಾ-ಶ್ಮಾನಃ ಶಿಲಾ ದೃಷತ್' ಎಂಬ ಅಮರದಂತೆ ಉಪಲ ಎಂದರೆ ಕಲ್ಲು ; ಅದರ 'ಲವ' ಎಂದರೆ ಚೂರು ; ಸಣ್ಣಕಲ್ಲುಚೂರು ಎಂದರ್ಥ. **೧೨. ಅತಃ**

ಎಂಬುದು ತಸಿಲ್‌ಪ್ರತ್ಯಯಾಂತ ಅವ್ಯಯ. ಇದಕ್ಕೆ 'ಇವನ ದೆಸೆಯಿಂದ' ಎಂದು ಅರ್ಥ. ಹಿಂದಿನ ಶ್ಲೋಕದಲ್ಲಿ ಪರ್ವತನೆಂಬ ಗರುಡ ಪ್ರಸಕ್ತನಾದ್ದ-ರಿಂದ ಇಲ್ಲೂ ಅದೇ ಅರ್ಥ ಹೇಳಬೇಕು. ಅತಃ–ಗರುಡನ ದೆಸೆಯಿಂದ (ಗರುಡ ಬಂದದ್ದರಿಂದ). **೧೩. ನಷ್ಟ-ಛೇದ-ಅಂಕಃ।** ಛೇದ ಎಂದರೆ ಬಾಣದ ಏಟು (ಪೆಟ್ಟು) ಎಂದರ್ಥ. ಅದರ ಅಂಕಃ–ಗುರುತು, ಚಿಹ್ನೆ—ಅದೂ ನಷ್ಟ ಇಲ್ಲದಂತೆ, ಬಾಣದ ಏಟು ಬಿದ್ದಿತ್ತು ಎಂಬ ಕುರುಹೇ ಇಲ್ಲದಂತೆ (ಸಂಪೂರ್ಣವಾಗಿ ಗುಣವಾಗಿ) ಎಂದರ್ಥ.

**೧೪. ಅಜನಾನಾಂ ಶತಮ್**—ನ ಜಾಯತ ಇತ್ಯಜೋ ವಿಷ್ಣುಃ, ಜನನವೇ ಇಲ್ಲದವನು ಅಜ; ವಿಷ್ಣು ಎಂದರ್ಥ. ಅಜಃ–ವಿಷ್ಣುಃ, ನೋ–ನಿಯಾಮಕೋ ಯೇಷಾಂ ತೇ ಅಜನಾಃ ಋತ್ವಿಜಃ । ಅಜ–ವಿಷ್ಣುವೇ, ನ–ನಿಯಾಮಕನಾಗಿರುವವರು; ಕೇವಲ ವಿಷ್ಣುವೊಬ್ಬನಿಗೇ ಅಧೀನರಾದವರು ಎಂದರೆ ಬ್ರಹ್ಮಪದವಿಗೆ ಬರುವ ನೂರು ಮಂದಿ ಋತ್ವಿಜರು. ಅವರ ವಿಷಯ ಹಿಂದೆ ನಖಸ್ತುತಿಯಲ್ಲೇ ೭೧–೭೩ ಪುಟಗಳಲ್ಲಿ ತಿಳಿಸಿದೆ. **೧೫. ಶಲಾಯ**—ಶಂ ಸುಖಂ ಲಾತೀತಿ ಶಲಃ, ತಸ್ಮೈ–ಸುಖಪ್ರದಾಯ । ಶಂ-ಸುಖವನ್ನು, ಲಾ–ಪ್ರದಾನಮಾಡುವ ಎಂದರೆ ಸುಖಪ್ರದನಾದ ಎಂದರ್ಥ.

**222. ದಂಡಾನ್ವಯ**—1. ಅತುಲಮತೇ 2. ಸ್ವ 3. ಸ್ವಸ್ಥ 4. ಅನಸ್ಥಿತ 5. ಅತಿಸ್ಥಿರ 6. ಶ 7. ಕಲ 8. ಶಿಲಾಜಾಲಸಂಶ್ಲೇಷ (ಹೇ ರಾಮ !) ೩೮) ಯಃ ತಾವತ್ ವ್ಯಗ್ರಬುದ್ಧ್ಯಾ ಕೌ ಉಪಲಲವಃ ಇವ ಕ್ಷಿಪ್ತಃ, ೩. ಸಃ ಪಶ್ಚಾತ್ ತ್ವಯಾ ಅತಃ ಸಲೀಲಂ ನಷ್ಟಚ್ಛೇದಾಂಕಃ ಪ್ರಾಗಿವ ಅಭೂತ್ । ೨. ತ್ವಂ ಅಜನಾನಾಂ ಶತಂ ಅಪಿ (ಪ್ರತಿ) ಉಚ್ಚೈಃ ವಿಸ್ತಾರವಾಂಶ್ಚ । ೧. ಕಪಿವರವಪುಷಃ ಶಲಾಯ ತೇ ನಮಃ ॥ (ಶ್ಲೋಕ ಓದಿಕೊಂಡು ಅನ್ವಯದಲ್ಲಿ ಹೇಗೆ ಪದಗಳು ಹಿಂದು-ಮುಂದಾಗಿವೆ ಎಂಬು-ದನ್ನು ಗಮನಿಸಿರಿ.)

**ಅನ್ವಯಾರ್ಥ**—1. ಅತುಲಮತೇ–ಅಸಾಧಾರಣಬುದ್ಧಿಯುಳ್ಳ, 2. ಸ್ವ–ಸ್ವತಂತ್ರನೂ ಸುಖರೂಪನೂ ಆದ, 3. ಸ್ವಸ್ಥ–ತನ್ನ ಆಧಾರದ ಮೇಲೆಯೇ ನಿಂತಿರುವ (ಅನನ್ಯಾಧಾರನಾದ), 4. ಅನ-ಸ್ಥಿತ–ಮುಖ್ಯ-

ಪ್ರಾಣಾಂತರ್ಯಾಮಿಯಾದ, 5. ಅತಿಸ್ಥಿರ-ಶಾಶ್ವತನಾದ ಸನಾತನ ಮೂರ್ತಿಯಾದ ; 6. ಶ-ಸುಖಸ್ವರೂಪನಾದ, 7. ಕಲ-ಜ್ಞಾನಸ್ವರೂಪನಾದ, 8. ಶಿಲಾಜಾಲಸಂಶ್ಲೇಷ—ಬೆಟ್ಟಗಳಿಂದಲೇ ಸಮುದ್ರಕ್ಕೆ ಸೇತುವೆಯನ್ನು ಕಟ್ಟಿದ ಹೇ ಶ್ರೀರಾಮಚಂದ್ರಮೂರ್ತಿಯೇ ! (೩೮) ಯಃ-ಯಾವ ಕಪಿವೀರರ ಸಮೂಹವು (ಅಥವಾ ಸೈನ್ಯವು); ತಾವತ್-ಮೊದಲು (ಗರುಡ-ಬರುವುದಕ್ಕೆ ಪೂರ್ವದಲ್ಲಿ) ; ವ್ಯಗ್ರಬುದ್ಧ್ಯಾ-ಮಾಯಾಯುದ್ಧಕುಶಲನಾದ ಇಂದ್ರಜಿತ್ತಿಂದ (ಅಥವಾ) ವ್ಯಾಕುಲಬುದ್ಧಿಯುಳ್ಳವರಾದ್ದರಿಂದ, ಕೌ-ನೆಲದ ಮೇಲೆ, ಉಪಲ-ಲವಃ ಇವ-(ರಸ್ತೆಗೆ ಹಾಕುವ) ಕಲ್ಲುಚೂರುಗಳಂತೆ; ಕ್ಷಿಪ್ತಃ-ಕೆಡವಲ್ಪಟ್ಟಿತ್ತೋ ; ೩. ಸಃ-ಆ ವಾನರದಳವು, ಪಶ್ಚಾತ್-ಅನಂತರ (ಆಮೇಲೆ), ತ್ವಯಾ-ನಿನ್ನಿಂದ (ರಾಮನಿಂದ), ಅತಃ-ಈ ಗರುಡನ ಆಗಮನ-ದಿಂದ, ಸಲೀಲಂ-ಅನಾಯಾಸವಾಗಿ (ಎದ್ದುದಲ್ಲದೆ), ನಷ್ಟಭೇದಾಂಕಃ-ಬಾಣದ ಏಟು ಬಿದ್ದ ಕುರುಹೇ ಇಲ್ಲದಂತೆ, ಪ್ರಾಗಿವ-ಯುದ್ಧಕ್ಕೆ ಮೊದಲು ಇದ್ದಂತೆಯೇ (ದೃಢಕಾಯರಾಗಿ) ; ಅಭೂತ್-ಆಯಿತು. ೨. ತ್ವಂ-ನೀನು ಅಜನಾನಾಂ ಶತಂ ಅಪಿ-ನೂರು ಮಂದಿ ಋತ್ವಿಜರಿಗಿಂತಲೂ ; ಉಚ್ಚಃ-ಉತ್ತಮನೂ ; ವಿಸ್ತಾರವಾಂಶ್ಚ-ದೇಶತಃ ಕಾಲತಃ ಗುಣತಃ ಎಲ್ಲಾ ವಿಷಯ-ಗಳಲ್ಲೂ ಅಪರಿಮಿತನೂ ಅನಂತನೂ ಆಗಿದ್ದೀಯೆ. ೧. ಕಪಿವರವಪುಷಃ-(ನಿನ್ನ ಸೇವೆಮಾಡುವುದಕ್ಕಾಗಿಯೇ) ಕಪಿಗಳಾಗಿ ಅವತಾರಮಾಡಿರುವ ದೇವತೆಗಳಿಗೆ, ಶಲಾಯ-ಸುಖಪ್ರದನಾದ, ತೇ-ನಿನಗೆ, ನಮಃ-ನಮಸ್ಕಾರ.

**223. ರಾಮಪರವಾಗಿ ಭಾವಾರ್ಥ**—ಹೇ ರಾಮಚಂದ್ರ ! ನೀನು ರಮಾಬ್ರಹ್ಮಾದಿ ಸಕಲರ ಬುದ್ಧಿಗಳನ್ನೂ ಪ್ರೇರಣೆ ಮಾಡುವ ಅಪರಿ-ಮಿತಾನಂತಜ್ಞಾನಸ್ವರೂಪನು. ಸರ್ವತಂತ್ರ-ಸ್ವತಂತ್ರ. ಸ್ವಾವಲಂಬಿ. ಜಗತ್ತಿಗೇ ಜೀವನಾಧಾರಭೂತನಾದ ಮುಖ್ಯಪ್ರಾಣನಿಗೇ ಆಧಾರಭೂತನಾಗಿ ಅವನಿಗೂ ಅಂತರ್ಯಾಮಿಯಾಗಿರುವಿ. ಅನಂತಬ್ರಹ್ಮರನ್ನು ನಿಯಮನ ಮಾಡಿದ ಅನಾದ್ಯನಂತಮೂರುತಿ. ದುಃಖದ ಗಂಧವೂ ಇಲ್ಲದ ಕೇವಲ ಸುಖಸ್ವರೂಪನು. ಜ್ಞಾನಾನಂದಮಯ. ಇಂಥಾ ನೀನು ಸಮುದ್ರಕ್ಕೇ ಕಲ್ಲುಗಳಿಂದ ಸೇತುವೆ ಕಟ್ಟಿ ಅದ್ಭುತಮಹಿಮೆಯನ್ನು ಪ್ರಕಟಿಸಿದಿ. ನಿನ್ನ

ಮಹಿಮೆಯನ್ನು ಸಮಗ್ರವಾಗಿ ತಿಳಿಯುವುದಕ್ಕೆ ಯಾರಿಂದಲೂ ಸಾಧ್ಯವಿಲ್ಲ. ಈ ರಾಮಾವತಾರದಲ್ಲೇ ವಿಚಿತ್ರಶಕ್ತಿಯನ್ನು ಪ್ರಕಟಿಸಿದಿ. ಮಾಯಾ-ಯುದ್ಧವಿಶಾರದನಾದ ರಾವಣನ ಮಗ ಇಂದ್ರಜಿತ್ ಕಣ್ಣಿಗೇ ಕಾಣಿಸದಂತೆ ಯುದ್ಧ ಮಾಡುತ್ತಾ ನಾಗಪಾಶವನ್ನು ಪ್ರಯೋಗ ಮಾಡಿಬಿಟ್ಟಾಗ ಸುಗ್ರೀ-ವಾದಿ ಕೋಟಿಗಟ್ಟಲೆ ಕಪಿವೀರರು ದಿಗ್ಭ್ರಾಂತರಾಗಿ ಮೂರ್ಛೆಹೊಂದಿ ನಾಗ-ಪಾಶದಿಂದ ಬಂಧಿತರಾಗಿ (ರಸ್ತೆ ಮಾಡಲು ಹಾಕಿರುವ) ಕಲ್ಲುಚೂರುಗಳಂತೆ ನಿಶ್ಚೇಷ್ಟಿತರಾಗಿ ನೆಲದಮೇಲೇ ಮಲಗಿಬಿಟ್ಟಿದ್ದರು. ಆ ಸಮಯದಲ್ಲಿ ನೀನು ಗರುಡನನ್ನು ಕರೆಯಿಸಿ ಅವನ ವಿಷಹಾರಕ ಶಕ್ತಿಯಿಂದ ಆ ನಾಗಪಾಶಗಳೆಲ್ಲ ಬಿಟ್ಟುಹೋಗುವಂತೆ ಮಾಡಿದಿಯಲ್ಲದೆ ಆ ನಾಗಪಾಶದ ಕಿಂಚಿತ್‌ಪ್ರಭಾವವೂ ಉಳಿಯದಂತೆ ಆ ಕೋಟಿಗಟ್ಟಲೆ ವಾನರರನ್ನೂ (ವಾಲ್ಮೀಕಿರಾಮಾಯಣದಲ್ಲಿ ಹೀಗೆ ಅರವತ್ತೇಳುಕೋಟಿ ವಾನರರು ಬಾಣಹತರಾಗಿದ್ದರೆಂದು ಹೇಳಿದೆ ೭೪ ಸರ್ಗ, ೧೨ ಶ್ಲೋ.) ಅನಾಯಾಸವಾಗಿ ನೀರುಜರನ್ನಾಗಿ (ಗಾಯವೇ ಇಲ್ಲದಂತೆ) ಮಾಡಿಬಿಟ್ಟೆಯಲ್ಲವೆ. ಇಂಥಾ ಮಹತ್ಕಾರ್ಯವನ್ನು ಬೇರೆ ಯಾರು ಮಾಡಲಾಪರು ? ಬ್ರಹ್ಮಪದವಿಗೆ ಬರತಕ್ಕವರೆಂದು ನಿಯತರಾದ, ಆದ್ದ-ರಿಂದಲೇ ಜೀವಕೋಟಿಯಲ್ಲೇ ಅತ್ಯುತ್ತಮರೆನಿಸಿದ, ನೂರು ಮಂದಿ ಋಜು-ಗಣಸ್ಥರಿಗಿಂತಲೂ ನೀನು ಅನಂತಗುಣ ಶ್ರೇಷ್ಠನೂ ದೇಶತಃ ಕಾಲತಃ ಗುಣತಃ ಪರಿಪೂರ್ಣನೂ ಆಗಿದ್ದೀಯೆ. ಈಗ ಸೇವೆಮಾಡುವುದಕ್ಕಾಗಿಯೇ ಕಪಿ-ಗಳಾಗಿ ಅವತಾರಮಾಡಿರುವ ಸಕಲ ದೇವತೆಗಳಿಗೂ ಕೊನೆಯಲ್ಲಿ ಮೋಕ್ಷಾ-ನಂದವನ್ನು ಅನುಗ್ರಹಿಸುವ ಮಹಾಪ್ರಭು. ಇಂಥಾ ನಿನಗೆ ನಾನು ಭಕ್ತಿ-ಪೂರ್ವಕ ನಮಸ್ಕಾರ ಮಾಡುತ್ತೇನೆ.

## ಹನುಮತ್ಪರವಾಗಿ ಅರ್ಥತಾತ್ಪರ್ಯಗಳು

**224. ಅವತಾರಿಕೆ**—(ಕಕ. ವಿ. ಛ.) ಈಗ ಆ ಹನುಮಂತನ ಅಮಾನುಷವ್ಯಾಪಾರವನ್ನು ನೆನಸಿನೆನೆಸಿಕೊಂಡು ಭಕ್ತಿಪುಲಕಿತರಾದ ಕಪಿಗಳು ಅವನ ಕಾರ್ಯಕೌಶಲವನ್ನು ಸ್ತುತಿಸಿ ವಂದಿಸುತ್ತಾರೆ—

**ಕ್ಷಿಪ್ತಃ ಪಶ್ಚಾತ್ ಸಲೀಲಂ ಶತಮತುಲಮತೇ !**
**ಯೋಜನಾನಾಂ ಸ ಉಚ್ಚ-**
**ಸ್ತಾವದ್ವಿಸ್ತಾರವಾಂಶ್ಚಾ—ಪ್ಯುಪಲಲವ ಇವ**
**ವ್ಯಗ್ರಬುದ್ಧ್ಯಾ ತ್ವಯಾಽತಃ ।**
**ಸ್ವ-ಸ್ವ-ಸ್ಥಾನ-ಸ್ಥಿತಾತಿ—ಸ್ಥಿರ-ಶಕಲ-ಶಿಲಾ—**
**ಜಾಲಸಂಶ್ಲೇಷ-ನಷ್ಟ-**
**ಚ್ಛೇದಾಂಕಃ ಪ್ರಾಗಿವಾಭೂತ್ ಕಪಿವರವಪುಷ-**
**ಸ್ತೇ ನಮಃ ಕೌಶಲಾಯ ॥ ೧೯ ॥**

**ಪದವಿಭಾಗ**—ಕ್ಷಿಪ್ತಃ, ಪಶ್ಚಾತ್, ಸಲೀಲಂ, ಶತಂ, ಅತುಲಮತೇ ! ಯೋಜನಾನಾಂ, ಸಃ, ಉಚ್ಚೈಃ, ತಾವದ್ವಿಸ್ತಾರವಾನ್, ಚ, ಅಪಿ, ಉಪಲ-ಲವಃ, ಇವ, ವ್ಯಗ್ರಬುದ್ಧ್ಯಾ, ತ್ವಯಾ, ಅತಃ, ಸ್ವಸ್ವ....ಚ್ಛೇದಾಂಕಃ, ಪ್ರಾಕ್, ಇವ, ಅಭೂತ್, ಕಪಿವರವಪುಷಃ, ತೇ, ನಮಃ, ಕೌಶಲಾಯ ॥

225. **ಶ್ಲೋಕದ ವಿಶ್ಲೇಷಣೆ**—ಹನುಮತ್ಪರವಾಗಿ ಅರ್ಥಹೇಳು-ವಾಗ ಅತುಲಮತೇ ಎಂಬುದೊಂದೇ ಸಂಬೋಧನೆ. ಅದಕ್ಕೆ ಅರ್ಥ ಹಿಂದಿ-ನಂತೆಯೇ. ಈ ಶ್ಲೋಕದಲ್ಲಿ ಮುಖ್ಯವಾಗಿ ಮೂರು ಚಿಕ್ಕಚಿಕ್ಕ ವಾಕ್ಯ-ಗಳಿವೆ—1. ಪಶ್ಚಾತ್ ಸಃ ತ್ವಯಾ ಸಲೀಲಂ ಉಪಲಲವಃ ಇವ ಕ್ಷಿಪ್ತಃ—ಅನಂತರ ಅದನ್ನು ನೀನು ಲೀಲಾಜಾಲವಾಗಿ ಸಣ್ಣಕಲ್ಲುಚೂರಿನಂತೆ ಎಸೆದು-ಬಿಟ್ಟೆ. 2. (ಸಃ) ನಷ್ಟಚ್ಛೇದಾಂಕಃ ಪ್ರಾಗಿವ ಅಭೂತ್—ಅದು ಕಿತ್ತ ಗುರುತೇ ಇಲ್ಲದಂತೆ (ಸರಿಯಾಗಿ ಕೂಡಿಕೊಂಡು) ಹಿಂದಿನಂತೆಯೇ ಆಯಿತು. 3. ಕಪಿವರವಪುಷಃ ತೇ ಕೌಶಲಾಯ ನಮಃ—ವಾನರವೇಷಧಾರಿಯಾದ ನಿನ್ನ ಕೌಶಲ್ಯಕ್ಕೆ (ಕೈಚಳಕಕ್ಕೆ) ನಮಸ್ಕಾರ. (ವಪುಃ–ದೇಹ. ಸಕಾರಾಂತ ನಪುಂಸಕಶಬ್ದ.)

ಮೊದಲ ವಾಕ್ಯದಲ್ಲಿರುವ ಸಃ ಎಂಬುದಕ್ಕೆ ೧. ಯೋಜನಾನಾಂ ಶತಂ ಉಚ್ಚೈಃ, ೨. ತಾವದ್ವಿಸ್ತಾರವಾಂಶ್ಚಾಪಿ ಎಂದು ಎರಡು ವಿಶೇಷಣಗಳು. ಆ ಗಂಧಮಾದನಪರ್ವತವು ನೂರುಗಾವುದ ಎತ್ತರವುಳ್ಳದ್ದೂ ನೂರು ಗಾವುದ ವಿಸ್ತಾರವುಳ್ಳದ್ದೂ ಆಗಿತ್ತು, ಎಂದು ಅರ್ಥ. ವ್ಯಗ್ರಬುದ್ಧ್ಯಾ—ಏಕಾಗ್ರ-

ವಾಗಿರದ ಬುದ್ಧಿಯಿಂದ ಅಥವಾ ಉದಾಸೀನ ಬುದ್ಧಿಯಿಂದ ಅಥವಾ ಅಸಡ್ಡೆ-ಯಿಂದ ಎಂಬುದು ಕ್ಷಿಪ್ತಃ ಎಂಬುದಕ್ಕೆ ಕ್ರಿಯಾವಿಶೇಷಣ. ಕ್ಷಿಪ್ತಃ–ಎಸೆಯಲ್ಪಟ್ಟಿತು; ಎಲ್ಲಿಂದ ? ಎಂದರೆ **ಅತಃ**–ಈ ಲಂಕಾಪಟ್ಟಣದಿಂದಲೇ ಎಂಬುದೂ ಕ್ರಿಯಾವಿಶೇಷಣ. ಎರಡನೇ ವಾಕ್ಯದಲ್ಲಿರುವ ಪ್ರಾಗಿವ 'ಹಿಂದಿನಂತೆ' ಎಂಬು-ದನ್ನೇ ಸ್ವ-ಸ್ವ-ಸ್ಥಾನ....ಚ್ಛೇದಾಂಕಃ ಎಂಬುದು ವರ್ಣಿಸುತ್ತದೆ.

**226. ಕಠಿನಶಬ್ದಗಳ ವಿವರಣೆ**—ಹಿಂದಿನ ಶ್ಲೋಕದಲ್ಲಿ ಪ್ರಾಕ್ ಪರ್ವತಂ ತ್ವಂ ಲಂಕಾಮುನೀಷೀಃ ಎಂದು ಗಂಧಮಾದನ ಪರ್ವತ ಪ್ರಸಕ್ತ-ವಾಗಿದ್ದರಿಂದ ಇಲ್ಲಿ **ಸಃ**–ಅದು ಎಂದರೆ ಆ ಗಂಧಮಾದನಪರ್ವತ ಎಂದೇ ಅರ್ಥ. ಹಿಂದಿನ ಶ್ಲೋಕದಲ್ಲಿ ಅದು ಲಂಕೆಗೆ ಅರ್ಧಲಕ್ಷಗಾವುದ ದೂರ-ದಲ್ಲಿತ್ತು ಎಂದು ಹೇಳಿದ್ದರು. ಇಲ್ಲಿ ಅದರ ಅಳತೆ ಹೇಳಿದ್ದಾರೆ. ಅದು ಯೋಜನಾನಾಂ ಶತಂ ಉಚ್ಚಃ–ನೂರು ಯೋಜನ ಎತ್ತರವಾಗಿತ್ತೆಂದೂ ತಾವದ್ವಿಸ್ತಾರವಾಂಶ್ಚಾಪಿ-ಅಷ್ಟೇ (ಎಂದರೆ ನೂರು ಗಾವುದ) ವಿಸ್ತಾರ-ವುಳ್ಳದ್ದೂ ಆಗಿತ್ತು ಎಂದು ಹೇಳಿದ್ದಾರೆ. ಇದಕ್ಕೆ 'ಉದ್ಬಬರ್ಹ ಗಿರಿಂ ಕ್ರೋಧಾತ್ ಶತಯೋಜನಮಂಡಲಮ್' ಎಂಬ ತಾತ್ಪರ್ಯನಿರ್ಣಯ-ವಾಕ್ಯವೇ (೮೦. ೧೫೭ಶ್ಲೋ.) ಪ್ರಮಾಣ. ವಾಲ್ಮೀಕಿರಾಮಾಯಣದಲ್ಲಿ ಈ ವಿಸ್ತಾರದ ವರ್ಣನೆ ಇಲ್ಲ. **ವ್ಯಗ್ರಬುದ್ಧ್ಯಾ** ಎಂಬುದಕ್ಕೆ ಕಕ. ವಿ. ಇಬ್ಬರೂ 'ಅಕೃತೋಹಾಪೋಹಯಾ' ಎಂದರೆ ಹೀಗೆ ಎಸೆದರೆ ಹೀಗೇ ಬೀಳುತ್ತದೆ ಎಂದು ಮೊದಲೇ ಆಲೋಚನೆ ಮಾಡದೆ ಎಂದು ಅರ್ಥ ಹೇಳು-ತ್ತಾರೆ. ಛ. ಅನ್ಯತ್ರ ಆಸಕ್ತವಾದ ಬುದ್ಧಿಯಿಂದ ಎನ್ನುತ್ತಾರೆ. ಒಟ್ಟಿನಲ್ಲಿ ಗುರಿಯಿಟ್ಟು ಎಸೆಯದೆ ಅಸಡ್ಡೆಯಿಂದ ಎಸೆದನು ಎಂದು ಭಾವ.

**ಸ್ವಸ್ವಸ್ಥಾನ ಇತ್ಯಾದಿ** ಸ್ವ-ಸ್ವ-ಸ್ಥಾನ–ತನ್ನ ತನ್ನ ಸ್ಥಾನದಲ್ಲಿ, ಸ್ಥಿತ–ಇದ್ದ ಅಥವಾ ಸೇರಿಕೊಂಡಿದ್ದರಿಂದ, ಅತಿಸ್ಥಿರ–ಬಹಳ ಗಟ್ಟಿಯಾದ, ಶಕಲ–ಸಣ್ಣ ಸಣ್ಣ ತುಂಡುಗಳು (ಭಿತ್ತಂ ಶಕಲ ಖಂಡೇ ವಾ–ಅಮರ), ಶಿಲಾ–ದೊಡ್ಡ ದೊಡ್ಡ ಬಂಡೆ ಗಳ, ಜಾಲ–ಗುಂಪಿನ, ಸಂಶ್ಲೇಷ–ಚೆನ್ನಾಗಿ ಕೂಡಿಕೊಂಡಿದ್ದರಿಂದ (ಅಂಟಿಕೊಂಡದ್ದರಿಂದ), ನಷ್ಟ-ಚ್ಛೇದಾಂಕಃ–ಕಿತ್ತ-ಗುರುತೇ ತಿಳಿಯದಂತಾಗಿ ಎಂದರ್ಥ. ಭಾವವೇನೆಂದರೆ ಲಂಕೆಗೆ ಒಯ್ಯು-

ವಾಗ ರಭಸದಲ್ಲಿ ಒಂದು ಕಲ್ಲು ಮೇಲೆ, ಒಂದು ಕಲ್ಲು ಕೆಳಗೆ, ಒಂದು ಚೂರು ಈ ಕಡೆ ಸರಿದಿತ್ತು, ಇನ್ನೊಂದು ಚೂರು ಆ ಕಡೆ ಉರುಳಿತ್ತು. ಹನುಮಂತ ಲಂಕಾಪಟ್ಟಣದಲ್ಲೇ ನಿಂತುಕೊಂಡು ಆ ಬೆಟ್ಟವನ್ನು ಅದು ಇದ್ದ ಸ್ಥಳಕ್ಕೇ ಒಗೆದುಬಿಟ್ಟಾಗ ಪ್ರತಿಯೊಂದು ದೊಡ್ಡ ದೊಡ್ಡ ಬಂಡೆಯೂ ಸಣ್ಣ ಸಣ್ಣ ಚೂರು (ತುಣುಕು)ಗಳೂ ಕೂಡ ಸರಿಯಾಗಿ ತಮ್ಮ ತಮ್ಮ ಹಿಂದಿದ್ದ ಸ್ಥಾನ-ದಲ್ಲೇ ಅಲುಗಾಡದಂತೆ ಕುಳಿತುಕೊಂಡುಬಿಟ್ಟುವು. ಅಷ್ಟೇ ಅಲ್ಲ, ಬೆಟ್ಟದ ಅಂಚೂ ಸಹ ಅಂಗುಲದಷ್ಟೂ ಹೆಚ್ಚು ಕಡಿಮೆಯಿಲ್ಲದೆ ಸರಿಯಾಗಿ ಹಿಂದಿದ್ದ ಸ್ಥಳದಲ್ಲೇ ಕೂತುಬಿಟ್ಟಿತು. ಆದರಿಂದ ಬೆಟ್ಟವನ್ನು ಕಿತ್ತಿದ್ದರೆಂಬ ಗುರುತೇ ಇಲ್ಲದಂತಾಗಿಹೋಯಿತೆಂದು ಭಾವ. ಎಸೆಯುವಾಗ ಕರಾರುವಾಕ ಎಸೆದ ಅವನ ಹಸ್ತಕೌಶಲವನ್ನು ಏನೆಂದು ವರ್ಣಿಸೋಣ? ಅದಕ್ಕೇ ಕೈಮುಗಿಯು-ತ್ತೇನೆ ಎಂಬುದೇ ಶ್ಲೋಕದ ಒಟ್ಟು ತಾತ್ಪರ್ಯ.

**227. ದಂಡಾನ್ವಯ—ಅತುಲಮತೇ !** 1. ಪಶ್ಚಾತ್ ಯೋ-ಜನಾನಾಂ ಶತಂ ಉಚ್ಚಃ, ತಾವದ್ವಿಸ್ತಾರವಾಂಶ್ಚಾಪಿ ಸಃ ತ್ವಯಾ ವ್ಯಗ್ರ-ಬುದ್ಧ್ಯಾ ಅತಃ ಉಪಲಲವಃ ಇವ ಸಲೀಲಂ ಕ್ಷಿಪ್ತಃ । 2. (ಸಃ ಚ) ಸ್ವ-ಸ್ವ-ಸ್ಥಾನ....ಚ್ಛೇದಾಂಕಃ ಪ್ರಾಗಿವ ಅಭೂತ್ । 3. ಕಪಿವರವಪುಷಃ ತೇ ಕೌಶಲಾಯ ನಮಃ ॥

**ಅನ್ವಯಾರ್ಥ—**ಅತುಲಮತೇ !—ಅಸದೃಶವಾದ ಬುದ್ಧಿಯುಳ್ಳ ಹೇ ಹನುಮಂತ ! 1. ಪಶ್ಚಾತ್–ಆಮೇಲೆ (ಎಂದರೆ ತಂದ ಕಾರ್ಯವು ಮುಗಿದ ಬಳಿಕ, ಎಲ್ಲ ವಾನರರೂ ಮೂರ್ಛೆಯಿಂದ ಎಚ್ಚೆತ್ತ ಬಳಿಕ), ಯೋಜನಾನಾಂ ಶತಂ ಉಚ್ಚಃ–ನೂರು ಗಾವುದ ಎತ್ತರವುಳ್ಳದ್ದೂ; ತಾವದ್-ವಿಸ್ತಾರವಾನ್ ಚ ಅಪಿ–ಅಷ್ಟೇ (ನೂರು ಗಾವುದ) ವಿಸ್ತಾರವೂ ಉಳ್ಳಂಥಾ, ಸಃ–ಆ ಗಂಧಮಾದನಪರ್ವತವು, ತ್ವಯಾ–ನಿನ್ನಿಂದ, ವ್ಯಗ್ರಬುದ್ಧ್ಯಾ–ಅಲಕ್ಷ್ಯಬುದ್ಧಿಯಿಂದ, ಅತಃ–ಇಲ್ಲಿಂದಲೇ, ಎಂದರೆ ಈ ಲಂಕಾಪಟ್ಟಣದಿಂದಲೇ, ಉಪಲ-ಲವಃ ಇವ–ಸಣ್ಣ ಕಲ್ಲುಚೂರನ್ನು ಎಸೆಯುವಂತೆ, ಸಲೀಲಂ–ಅನಾಯಾಸವಾಗಿ, ಕ್ಷಿಪ್ತಃ–ಹಿಂದಕ್ಕೆ (ತಂದಿದ್ದ ಸ್ಥಳಕ್ಕೆ) ಎಸೆ (ಒಗೆ)ಯಲ್ಪಟ್ಟಿತು. 2. (ಸಃ ಚ–ಅದು), ಸ್ವ-ಸ್ವ-ಸ್ಥಾನ....

ಚ್ಛೇದಾಂಕಃ–ಸ್ವ-ಸ್ವ–ತನ್ನ, ತನ್ನ, ಸ್ಥಾನ–ಸ್ಥಳದಲ್ಲಿ, ಸ್ಥಿತ–ಇರೋಣದ-ರಿಂದ (ಸೇರಿಕೊಂಡಿದ್ದರಿಂದ), ಅತಿಸ್ಥಿರ-ಬಹಳ ಗಟ್ಟಿಯಾಗಿ ಜೋಡಿಕೊಂಡ, ಶಕಲ–ಸಣ್ಣ ತುಂಡುಗಳೇನು, ಶಿಲಾ–ದೊಡ್ಡ ಬಂಡೆಗಳೇನು,—ಇವುಗಳ, ಜಾಲ-ಸಮೂಹಗಳ, ಸಂಶ್ಲೇಷ–ಸರಿಯಾಗಿ ಹೊಂದಿಕೊಳ್ಳೋಣದರಿಂದ, ನಷ್ಟ-ಚ್ಛೇದ-ಅಂಕಃ–ಕಿತ್ತ ಗುರುತೇ ಇಲ್ಲದಂತಾಗಿ, ಪ್ರಾಕ್ ಇವ—ಹಿಂದೆ ಇದ್ದಂತೆಯೇ, ಅಭೂತ್–ಆಗಿಹೋಯಿತು. 3. ಕಪಿವರ-ವಪುಷಃ–ಕಪಿ-ವೇಷಧಾರಿಯಾದ, ತೇ–ನಿನ್ನ, ಕೌಶಲಾಯ–ಕೌಶಲ್ಯಕ್ಕೆ (ಚಾತುರ್ಯಕ್ಕೆ, ಕೈ ಚಳಕಕ್ಕೆ), ನಮಃ–ನಮಸ್ಕಾರ.

228. (ಭಾವಾರ್ಥ) **ಹನುಮಂತನ ಅದ್ಭುತವಾದ ಹಸ್ತ-ಕೌಶಲ**—ಅಸಾಧಾರಣ ಪರಾಕ್ರಮಶಾಲಿಯಾದ ಹನುಮಂತನಿಗೆ ಅದ್ಭುತ-ವಾದ ಬಾಹುಬಲ ಎಷ್ಟಿತ್ತೋ ಅವನ ಮೇಧಾಶಕ್ತಿಯೂ ಅಷ್ಟೇ ತೀಕ್ಷ್ಣ-ವಾಗಿತ್ತು. ಆದುದರಿಂದಲೇ ಅವನನ್ನು ಮಹರ್ಷಿಗಳು 'ಮನೋಜವಂ ಮಾರುತತುಲ್ಯ ವೇಗಂ ಜಿತೇಂದ್ರಿಯಮ್ ಬುದ್ಧಿಮತಾಂ ವರಿಷ್ಠಮ್' ಎಂದು ಸ್ತುತಿಸಿದ್ದಾರೆ. ಯಾರಿಗೂ ತಿಳಿಯದಂತೆ ಎಲ್ಲೋ ಅಗೋಚರ-ವಾಗಿದ್ದ ಅಮೂಲ್ಯವಾದ ಔಷಧಿಗಳಿಗೆ ಆಕರವಾಗಿದ್ದ ಗಂಧಮಾದನ-ಪರ್ವತವನ್ನು ಹುಡುಕಿ ಅದನ್ನು ಬುಡಮಟ್ಟ ಕಿತ್ತು ಅಂಗೈಯಲ್ಲೇ ಕ್ಷಣ-ದೊಳಗಾಗಿ ತಂದದ್ದು ಅವನ ಮನೋವೇಗವನ್ನೂ ಅತುಳ ಬಾಹುಬಲವನ್ನೂ ಒರೆಹಚ್ಚಿ ತೋರಿಸಿಕೊಟ್ಟಂತಾಯಿತು. ಆ ಪರ್ವತವನ್ನು ತಂದ ಉದ್ದೇಶವು ನೆರವೇರಿ ಸಾರ್ಥಕವಾಗಲು ಅದನ್ನು ಅಷ್ಟೇ ಬೇಗ ಅದರ ಮೂಲಸ್ಥಾನಕ್ಕೆ ಹೋಗಿ ಕೂಡುವಂತೆ ಹಿಂದಕ್ಕೆ ಎಸೆದದ್ದು ಅವನ ಕೈಚಳಕದ ಪರಾಕಾಷ್ಠತೆ-ಯನ್ನೂ ಬುದ್ಧಿಯ ಚಾಣಾಕ್ಷತನವನ್ನೂ ಎತ್ತಿತೋರಿಸುತ್ತದೆ. ಏಕೆಂದರೆ ಆ ಪರ್ವತ ಸಣ್ಣ-ಪುಟ್ಟದ್ದೇನೂ ಆಗಿರಲಿಲ್ಲ. ಅದು ನೂರು ಗಾವುದದಷ್ಟು ಎತ್ತರದ್ದೂ ಆಗಿತ್ತಲ್ಲದೆ ನೂರು ಗಾವುದದಷ್ಟೇ ವಿಸ್ತಾರವಾಗಿ ಹರಡಿ-ಕೊಂಡಿತ್ತು. ಇಂಥಾ ಭಾರಿ ಪರ್ವತವನ್ನು ಅಂಗೈಯಲ್ಲೇ ಎತ್ತಿ ತಂದುದೇ ಪರಮಾಶ್ಚರ್ಯಕರ. ಅದರಲ್ಲಿದ್ದ ಔಷಧಿಮೂಲಿಕೆಗಳ ಗಾಳಿ ಬೀಸಿದ್ದರಿಂದಲೇ ಕೋಟ್ಯಾನುಕೋಟಿ ವಾನರವೀರರೆಲ್ಲರೂ ಮೂರ್ಛೆಯಿಂದಲೂ ಎಚ್ಚೆತ್ತರು,

ಅವರ ದೇಹಗಳಲ್ಲಿ ಹೊಕ್ಕಿಕೊಂಡಿದ್ದ ಅಸ್ತ್ರಶಸ್ತ್ರಗಳೆಲ್ಲ ಹೊರಗೂ ಬಂದು ಬಿಟ್ಟುವು. ಬಾಣಗಳ ಹೊಡೆತದಿಂದ ತುಂಡಾಗಿದ್ದ ಅಥವಾ ಭಗ್ನವಾಗಿದ್ದ ಅವಯುವಗಳೆಲ್ಲವೂ ಸರಿಹೋಗಿಬಿಟ್ಟುವು. ಬಾಣಗಳ ಶಸ್ತ್ರಗಳ ಏಟು ತಗಲಿ ಗಾಯಗೊಂಡಿದ್ದೆಲ್ಲವೂ ಸರಿಹೋಗಿಬಿಟ್ಟು ಅವರೆಲ್ಲ ಹಿಂದಿನಂತೆಯೇ ಗಟ್ಟು-ಮುಟ್ಟಾಗಿಬಿಟ್ಟರು. ಹೀಗೆ ಬೆಟ್ಟವನ್ನು ತಂದ ಕೆಲಸ ನಿರಾಯಾಸವಾಗಿ ಕ್ಷಣ-ದೊಳಗೇ ಆಗಿಹೋದಕಾರಣ ಆ ಪರ್ವತ ಇನ್ನು ನಿಷ್ಪ್ರಯೋಜನವಾಯಿತು. ಅದನ್ನು ಹಿಂದಕ್ಕೆ ಕಳುಹಿಸಬೇಕಾಯಿತು. ಆದರೆ ತರುವಾಗ ಏನು ಉತ್ಸಾಹ-ವಿತ್ತೋ ಆ ಹುರುಪು ಹೊರಟುಹೋಯಿತು. ಅದನ್ನು ಇದ್ದಲ್ಲೇ ಇಟ್ಟು ಬರುವುದಕ್ಕೋಸ್ಕರ ಅರ್ಧಲಕ್ಷಯೋಜನ ಹೋಗಿಬರುವ ವ್ಯವಧಾನವೂ ಇರಲಿಲ್ಲ. ಆದಕಾರಣ ಮಕ್ಕಳು ಕಲ್ಲುಚೂರನ್ನು ಹೇಗೋ ಏನೋ ಗುರಿಯೂ ಇಡದೆ ಎಸೆದಾಡುವಂತೆ ಹನುಮಂತ ಲಂಕಾಪಟ್ಟಣದಲ್ಲಿ ನಿಂತಿದ್ದ ಸ್ಥಳ-ದಿಂದಲೇ ಅಸಡ್ಡೆಯಿಂದ (ಗುರಿಯೂ ಇಡದೆ) ಆ ಭಾರೀ ಪರ್ವತವನ್ನು ಕೈಯಿಂದಲೇ ಹಿಂದಕ್ಕೆ ಲೀಲಾಜಾಲವಾಗಿ ಎಸೆದು, (ಒಗೆದು)ಬಿಟ್ಟ. ಅಷ್ಟಕ್ಕೇ ಆ ಪರ್ವತ ತಾನಿದ್ದ ಸ್ಥಳಕ್ಕೇ ಹೋಗಿ ಸರಿಯಾಗಿ ಕುಳಿತುಕೊಂಡಿತಲ್ಲದೆ ಅದರ ಒಂದು ಬಂಡೆಯಾಗಲಿ, ಸಣ್ಣ ಕಲ್ಲುತುಣುಕಾಗಲಿ ಅತ್ತ ಇತ್ತ ಹೋಗದೆ ಅಡ್ಡದಿಡ್ಡಿ ಸೇರಿಸಿದಂತಾಗದೆ ಎಲ್ಲವೂ ತಮ್ಮ ತಮ್ಮ ಸ್ಥಳದಲ್ಲೇ ಜೋಡಿಕೊಂಡು ಕೂತುಬಿಟ್ಟದ್ದರಿಂದ ಬೆಟ್ಟವನ್ನು ಕಿತ್ತಿದ್ದ ಗುರುತೇ ತಿಳಿಯದಂತಾಗಿಹೋಯಿತು. ಇದಲ್ಲವೇ ಕೈಚಳಕದ ಕೌಶಲ. ಅದನ್ನು ಎಷ್ಟೆಂದು ಬಣ್ಣಿಸೋಣ ? ಇಗೋ ಅವನ ಆ ಕೌಶಲಕ್ಕೇ ನಮಸ್ಕಾರ.

'ಮಂಗಚೇಷ್ಟೆ' ಎಂಬುದು ಅಡ್ಡಾದಿಡ್ಡಿ ಹರಕು-ಮುರುಕು ಕೆಲಸಕ್ಕೆ ಪ್ರಸಿದ್ಧವಾಗಿದೆ. ಈ ಹನುಮಂತ ಕಪಿವರವೇಷಧಾರಿಯೇ ಆದರೂ ಇವನ ರೀತಿಯೇ ಬೇರೆ ಎಂದು ತೋರಿಸುವುದಕ್ಕಾಗಿ ಕಪಿವರವಪುಷಃ ಶಬ್ದವನ್ನು ಜೋಡಿಸಿದ್ದಾರೆಂದು ತಿಳಿಯಬೇಕು.

## ಶ್ಲೋಕ ಇಪ್ಪತ್ತು. ಹನುಮಂತನ ಹಸ್ತದ ಮಹಿಮೆ

**229.** ಅವತಾರಿಕೆ—ಹಿಂದಿನ ಎರಡು ಶ್ಲೋಕಗಳಲ್ಲೂ ರಾಮ-ದೇವರ ಅದ್ಭುತ ಮಹಿಮೆಯನ್ನೂ ಹನುಮಂತನ ಬಾಹುಪರಾಕ್ರಮವನ್ನೂ

ವರ್ಣಿಸಿ ಈ ಶ್ಲೋಕದಲ್ಲಿ ಅವರಿಬ್ಬರ ಹಸ್ತದ ಮಹಿಮೆಯನ್ನೂ ಸ್ತುತಿಸಿ ಅವರ ಹಸ್ತಗಳು ಇಷ್ಟಾರ್ಥಗಳನ್ನು ನೆರವೇರಿಸಲೆಂದು ಪ್ರಾರ್ಥಿಸುತ್ತಾರೆ. (ಕಕ. ವಿ. ಛ.) ಶಿಷ್ಟಾನಾಮಿಷ್ಟದೋಽಸ್ಯ ಮುಷ್ಟಿರಿತಿ ಸ್ಪಷ್ಟಯನ್ ಮುಷ್ಟಿಂ ವಿಶಿನಷ್ಟಿ–ಈ ಹನುಮಂತನ ಮುಷ್ಟಿಯು ಸಾಧುಸಜ್ಜನರಿಗೆ ಬೇಕಾದ ಇಷ್ಟಾರ್ಥಗಳನ್ನು ನೆರವೇರಿಸಿಕೊಡಲು ಸಮರ್ಥವಾದುದು ಎಂದು ವಿವರಿಸುತ್ತಾರೆ.

**ದೃಷ್ಟ್ವಾ ದುಷ್ಟಾಧಿಪೋರಃ ಸ್ಫುಟಿತಕನಕಸದ್**
**ವರ್ಮ ಘೃಷ್ಟಾಸ್ಥಿಕೂಟಂ**
**ನಿಷ್ಪಿಷ್ಟಂ ಹಾಟಕಾದ್ರಿ—ಪ್ರಕಟ-ತಟ-ತಟಾ-**
**ಕಾತಿಶಂಕೋ ಜನೋಽಭೂತ್ ।**
**ಯೇನಾಜೌ ರಾವಣಾರಿ—ಪ್ರಿಯನಟನಪಟುರ್-**
**ಮುಷ್ಟಿರಿಷ್ಟಂ ಪ್ರದೇಷ್ಟುಂ**
**ಕಿಂ ನೇಷ್ಟೇ ಮೇ ಸ ತೇಽಷ್ಟಾ—ಪದ-ಕಟಕ-ತಟಿತ್**
**ಕೋಟಿಭಾಮ್ವೃಷ್ಟಕಾಷ್ಠಃ ॥ ೨೦ ॥**

**ಪದವಿಭಾಗ**—(ಉಭಯಪರವಾಗಿಯೂ) ದೃಷ್ಟ್ವಾ, ದುಷ್ಟಾಧಿಪೋರಃ, ಸ್ಫುಟಿತ-ಕನಕ-ಸದ್ವರ್ಮ, ಘೃಷ್ಟಾಸ್ಥಿಕೂಟಂ, ನಿಷ್ಪಿಷ್ಟಂ, ಹಾಟಕಾದ್ರಿ....ಶಂಕಃ, ಜನಃ, ಅಭೂತ್, ಯೇನ, ಆಜೌ, ರಾವಣಾರಿ.... ಪಟುಃ, ಮುಷ್ಟಿಃ, ಇಷ್ಟಂ, ಪ್ರದೇಷ್ಟುಂ, ಕಿಂ, ನ, ಈಷ್ಟೇ, (ರಾಮಪರವಾಗಿ) ಮೇ, ಸತಾ, ಇಷ್ಟ, ಅಪದಕಟಕ, ತಟಿತ್ಕೋಟಿಭ, ಆಮ್ವೃಷ್ಟಕಾಷ್ಠಃ ॥ (ಹನುಮತ್ಪರವಾಗಿ) ಮೇ, ಸಃ, ತೇ, ಅಷ್ಟಾಪದ....ಕಾಷ್ಠಃ ॥

**230. ಶ್ಲೋಕದ ವಿಶ್ಲೇಷಣೆ**—(ರಾಮಪರವಾಗಿ) ಇಷ್ಟ, ಅಪದಕಟಕ, ತಟಿತ್ಕೋಟಿಭ ಎಂಬ ಮೂರೂ ರಾಮದೇವರಿಗೆ ಸಂಬೋಧನಾರೂಪ ವಿಶೇಷಣಗಳು. ಈ ಶ್ಲೋಕವು ಸಂಬೋಧನಾರೂಪವಾಗಿರುವುದರಿಂದ ನಾಲ್ಕನೇ ಚರಣದಲ್ಲಿರುವ **ಸಃ** ಜೊತೆಗೆ ಭವಾನ್ ಎಂಬ ಯೋಗ್ಯಕರ್ತೃಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಆಗ—ಸಃ ಭವಾನ್ ಮೇ ಇಷ್ಟಂ

ಕಿಂ ನೇಷ್ಟೇ? (ಅಥವಾ ನೇಷ್ಟೇ ಕಿಮ್ ?)–ಅಂಥಾ ನೀನು ನನ್ನ ಇಷ್ಟಾರ್ಥವನ್ನು ಕೊಡಲು ಸಮರ್ಥನಾಗಿಲ್ಲವೇ ? (ಅರ್ಥಾತ್ ಸರ್ವಥಾ ಸಮರ್ಥನಾಗಿಯೇ ಇದ್ದೀಯೆ) ಎಂಬುದು ಪ್ರಧಾನವಾಕ್ಯ. ಸಃ ಭವಾನ್ ಎಂಬ ಕರ್ತೃಪದಕ್ಕೆ 1. ರಾವಣಾ....ಪಟುಃ, 2. ಮುಷ್ಟಿಃ, 3. ಆಮ್ರೃಸ್ತಕಾಷ್ಠಃ ಎಂದು ಮೂರು ಪದಗಳು ನೇರವಾಗಿ ವಿಶೇಷಣಗಳು. 4. ಯೇನ ಆಜೌ-ನಿಷ್ಪಿಷ್ಟಂ ದುಷ್ಟಾಧಿಪೋರಃ ದೃಷ್ಟ್ವಾ ಜನಃ....ತಟಾಕಾತಿಶಂಕಃ ಅಭೂತ್ ಎಂಬುದು ವಿಶೇಷಣರೂಪ ಅಪೂರ್ಣವಾಕ್ಯ. ಈ ಅಪೂರ್ಣವಾಕ್ಯಕ್ಕೆ— ಯಾವ ನಿನ್ನಿಂದ ಯುದ್ಧದಲ್ಲಿ ಚೂರ್ಣೀಕೃತವಾದ ರಾವಣನ ಎದೆಯನ್ನು ನೋಡಿ ಜನಗಳು ಕೆರೆಯೇ ಇರಬೇಕೆಂದು ಭ್ರಾಂತಿಗೊಂಡರೋ ಅಂಥಾ ನೀನು ಎಂದು ಸಂಬಂಧ.

ಅಪೂರ್ಣವಾಕ್ಯದಲ್ಲಿರುವ ದುಷ್ಟಾಧಿಪೋರಃ ಶಬ್ದಕ್ಕೆ ೧. ಸ್ಫುಟಿತ-ಕನಕಸದ್ವರ್ಮ, ೨. ಘೃಷ್ಟಾಸ್ಥಿಕೂಟಂ ಎಂದು ಎರಡು ವಿಶೇಷಣಗಳು. ನಾಲ್ಕನೇ ಚರಣದಲ್ಲಿರುವ ಸತಾ ಎಂಬುದು ಯೇನ ಎಂಬುದಕ್ಕೆ ವಿಶೇಷಣ.

**ಹನುಮತ್ಪರವಾಗಿ** ತೇ ಸಃ (೪ನೇ ಚರಣ) ಮುಷ್ಟಿಃ (೩ನೇ ಚರಣ) ಮೇ ಇಷ್ಟಂ ಪ್ರದೇಷ್ಟುಂ ನೇಷ್ಟೇ ಕಿಮ್ ? ಎಂದು ಹಿಂದಿನಂತೆಯೇ ಅನ್ವಯ. ಅಲ್ಲಿ ಭವಾನ್ ಕರ್ತೃಪದವಾಗಿತ್ತು. ಇಲ್ಲಿ 'ನಿನ್ನ ಮುಷ್ಟಿ'ಯೇ ಕರ್ತೃಪದ. ಇದಕ್ಕೆ 1. ರಾವಣಾ....ಪಟುಃ, 2. ಅಷ್ಟಾಪದ....ಕಾಷ್ಠಃ ಎಂದು ಎರಡು ವಿಶೇಷಣಗಳು. ಜೊತೆಗೆ 3. ಯೇನ ಆಜೌ ನಿಷ್ಪಿಷ್ಟಂ ದುಷ್ಟಾಧಿಪೋರಃ ದೃಷ್ಟ್ವಾ ಜನಃ....ತಟಾಕಾತಿಶಂಕಃ ಅಭೂತ್ ಎಂಬ ಅಪೂರ್ಣವಾಕ್ಯವೂ ಒಂದು ವಿಶೇಷಣ. ದುಷ್ಟಾಧಿಪೋರಃ ಶಬ್ದಕ್ಕೆ ೧. ಸ್ಫುಟಿತಕನಕಸದ್ವರ್ಮ, ೨. ಘೃಷ್ಟಾಸ್ಥಿಕೂಟಂ ಎಂದು ಹಿಂದಿನಂತೆಯೇ ವಿಶೇಷಣಗಳು. ಹನುಮತ್ಪರವಾಗಿ ಈ ಶ್ಲೋಕಕ್ಕೆ—ಯಾವ ನಿನ್ನ ಮುಷ್ಟಿ-ಯಿಂದ ಭಗ್ನಮಾಡಲ್ಪಟ್ಟ ರಾವಣನ ಎದೆಯನ್ನು ನೋಡಿ ಜನಗಳು ಕೆರೆಯೇ ಇರಬೇಕೆಂದು ಭ್ರಾಂತಿಗೊಂಡರೋ ಅಂಥಾ ನಿನ್ನ ಮುಷ್ಟಿಯು ನನ್ನ ಇಷ್ಟಾರ್ಥವನ್ನು ನೆರವೇರಿಸಿಕೊಡಲಾರದೇ ? (ಅರ್ಥಾತ್ ಅವಶ್ಯ ನಡೆಸಿ-ಕೊಡಬಲ್ಲದು) ಎಂದು ಒಟ್ಟು ಅರ್ಥ.

ಈಗ ಹಿಂದಿನಂತೆ ಕಠಿನಶಬ್ದಾರ್ಥವನ್ನು ವಿವರಿಸಿ ಅನ್ವಯ-ಅರ್ಥಗಳಿಗೆ ಹೋಗೋಣ.

**231. ಕಠಿನಪದಗಳ ವಿವರಣೆ—೧. ದುಷ್ಟಾಧಿಪೋರಃ.** ದುಷ್ಟ-ದುಷ್ಟರಾಕ್ಷಸರಿಗೆ, ಅಧಿಪ-ಒಡೆಯನಾದ ರಾವಣನ, ಉರಃ–ಎದೆಯನ್ನು-ಉರಸ್ ಸಕಾರಾಂತ ನಪುಂಸಕ ಲಿಂಗ ಶಬ್ದ. ಉರೋ ವತ್ಸಂ ಚ ವಕ್ಷಶ್ಚ–ಅಮರ (ವಕ್ಷಸ್ ಶಬ್ದವೂ ಸಕಾರಾಂತ, ನ.ಲಿಂ.). **೨. ಸ್ಫುಟಿತ....ವರ್ಮ.** ಸಂಸ್ಕೃತದಲ್ಲಿ ಸ್ಫುಟ ಭೇದನೇ (ಚುರಾ.ಅ.) ಎಂದು ಧಾತುಪಾಠವಿರುವುದ-ರಿಂದ ಸ್ಫುಟ್ ಎಂದರೆ ಒಡೆದುಚೂರಾಗು (ಮಡಕೆಯಂತೆ ತುಂಡಾಗು) ಎಂದರ್ಥ. ಇಲ್ಲಿ ಮುಂದೆ ಕನಕ-ಸದ್ವರ್ಮ–ಬಂಗಾರದ ಕವಚ ಎಂದಿರುವುದ-ರಿಂದ ಅದುಒಡೆದು ಚೂರಾಗುವ ಸಂಭವವಿಲ್ಲವಾದ್ದರಿಂದ ಲಕ್ಷಣಯಾ 'ನಜ್ಜು-ಗುಜ್ಜಾದ', ಜಜ್ಜಿ ಹೋದ ಎಂದೇ ಸ್ಫುಟಿತ ಶಬ್ದಕ್ಕೆ ಅರ್ಥಮಾಡಬೇಕು. ಕನಕ–ಬಂಗಾರದ, ವರ್ಮ (ನಕಾರಾಂತ ನ.ಲಿಂ.)–ಕವಚ. 'ತ್ವಕ್ತ್ರಂ ತು ದಂಶನಂ ವರ್ಮ ತನುತ್ರಂ ಕವಚೋ ಸ್ತ್ರಿಯಾಮ್'—ವೈಜಯಂತೀಕೋಶ **೩. ಘೃಷ್ಟಾಸ್ಥಿಕೂಟಂ**—ಘೃಷ್ಟ ಎಂದರೆ ಪುಡಿಪುಡಿಯಾದ ಅಥವಾ ಚೂರುಚೂರಾಗಿಹೋದ ಎಂದರ್ಥ ಅಸ್ಥಿ-ಮೂಳೆಗಳೇ, ಕೂಟ-(ಪುರಾ. ಕಕ.ಥ.) ಗಿರಿಶಿಖರಗಳಾಗಿರುವ, ಎಂದರೆ ಬೆಟ್ಟದ ಶಿಖರಗಳು ಹೇಗೆ ಎತ್ತರವಾಗಿ ದೃಢವಾಗಿರುವುವೋ ಹಾಗೆಯೇ ರಾವಣನ ಎಲುಬುಗಳೂ ಕಲ್ಲಿನಂತೆ ದೃಢ-ವಾಗಿದ್ದುವು. ಅಂಥಾ ಎಲುಬುಗಳೂ ಸಹ ರಾಮನ ಬಾಣದಿಂದಲೂ ಹನುಮಂತನ ಮುಷ್ಟಿಪ್ರಹಾರದಿಂದಲೂ ಪುಡಿಪುಡಿಯಾದುವು ಎಂದು ಭಾವ. ಇದರಿಂದ ರಾಮನ ಬಾಣಗಳು ಮತ್ತು ಹನುಮಂತನ ಮುಷ್ಟಿಯೂ ಇನ್ನೆಷ್ಟು ಬಲವಾಗಿದ್ದುವೆಂಬುದನ್ನು 'ಧ್ವನಿ'ಯಿಂದ ಸೂಚಿಸಿದ್ದಾರೆ. ವಿ. ಟೀಕಾಪ್ರಕಾರ ಕೂಟ ಎಂದರೆ ಸಮೂಹ ಎಂದರ್ಥ ಅಮರದಲ್ಲಿ 'ಮಾಯಾ ನಿಶ್ಚಲಯಂತ್ರೇಷು ಕೈತವಾನೃತರಾಶಿಷು । ಅಯೋಘನೇ ಶೈಲಶೃಂಗೇ ಸೀರಾಂಗೇ ಕೂಟಮಸ್ತ್ರಿಯಾಮ್ ॥ ಎಂದು ಕೂಟಶಬ್ದಕ್ಕೆ ಎರಡೂ ಅರ್ಥವುಂಟೆಂದು ಹೇಳಿದೆ. **೪ ನಿಷ್ಪಿಷ್ಟಂ**—ನಿಸ್(ಉಪಸರ್ಗ) +ಪಿಷಲೃ ಸಂಚೂರ್ಣನೇ + ಕ್ತ ಪ್ರತ್ಯಯ-ಪುಡಿಪುಡಿಯಾದ, ಪುಡಿ ಮಾಡ-ಲ್ಪಟ್ಟ ಎಂದರ್ಥ.

**೫. ಹಾಟಕಾದ್ರಿ....ಶಂಕಃ**—ಹಾಟಕ ಎಂದರೆ ಬಂಗಾರ; ಸ್ವರ್ಣಂ ಸುವರ್ಣಂ ಕನಕಂ ಹಿರಣ್ಯಂ ಹೇಮ ಹಾಟಕಮ್-ಅಮರ. **ಹಾಟಕಾದ್ರಿ** ಎಂದರೆ ಮೇರುಪರ್ವತ. 'ಮೇರುಃ ಸುಮೇರು—ರ್ಹೇಮಾದ್ರೀ ರತ್ನಸಾನುಃ ಸುರಾಲಯಃ' ಅಮರ. ಪ್ರಕಟ ಎಂದರೆ (ಕಕ. ಥ. ಪುರಾ.) ಪ್ರಕಾಶಮಾನವಾದ; (ವಿ.) ಸ್ಪಷ್ಟಃ, ವಿಸ್ತೀರ್ಣ ಇತಿ ಯಾವತ್—ಸ್ಪಷ್ಟ-ವಾದ ಎಂದರೆ, ವಿಶಾಲವಾಗಿ ಹರಡಿಕೊಂಡಿರುವ. ತಟ–ದಡದಲ್ಲಿ (ವಿ.) ದಡದಪ್ರದೇಶದಲ್ಲಿರುವ ಎಂದರ್ಥ. ತಟಾಕ–ಕೆರೆ. ಅತಿಶಂಕಾ–ಬಲವಾದ ಭ್ರಾಂತಿ. ಹಾಟಕಾದ್ರಿ-ಮೇರುಪರ್ವತದಲ್ಲಿ, ಪ್ರಕಟ–ಪ್ರಕಾಶಿಸುವ (ಕಂಗೊಳಿ-ಸುವ) (ವಿ.) ಹರಡಿಕೊಂಡಿರುವ, ತಟ–ದಡದ ಪ್ರದೇಶದಲ್ಲಿರುವ, ತಟಾಕ–ಕೆರೆಯೇ ಇರಬೇಕೆಂದು, ಅತಿಶಂಕಃ ಅಭೂತ್-ಬಲವಾದ ಭ್ರಾಂತಿಯುಳ್ಳವ-ರಾದರು ಎಂದರ್ಥ. ಇದರ ಅಭಿಪ್ರಾಯವೇನೆಂದರೆ—ರಾಮನ ಬಾಣ ಹೊಡೆದದ್ದರಿಂದಲೂ ಹನುಮಂತ ಮುಷ್ಟಿಪ್ರಹಾರ ಮಾಡಿದ್ದರಿಂದಲೂ ರಾವಣನ ಎದೆಯು ಮಾತ್ರವಲ್ಲದೆ ಎದೆಗೆ ಹಾಕಿಕೊಂಡಿದ್ದ ಬಂಗಾರದ ಕವಚವೂ ಸಹ ಜಜ್ಜಿ ನೆಜ್ಜುಗುಟ್ಟಿಹೋದುವು. ರಾವಣನ ಎದೆ ವಿಶಾಲ-ವಾಗಿದ್ದುದರಿಂದಲೂ ಅದಕ್ಕೆ ಚಿನ್ನದ ಕವಚ ಹಾಕಿದ್ದುದರಿಂದಲೂ ಅದು ಭಗ್ನವಾಗಿ ಸೊಟ್ಟಪಟ್ಟೆ ಆದ್ದರಿಂದ ಕವಚಸಹಿತವಾದ ಅವನ ಎದೆಯೇ ಮೇರುಪರ್ವತದಂತಿತ್ತು. ಕವಚ ಚುಕ್ಕಾಚೂರಾಗಿದ್ದುದರಿಂದಲೂ ರಕ್ತವು-ಹರಿಯುತ್ತಿದ್ದುದರಿಂದಲೂ ಅದನ್ನು ನೋಡಿದ ಜನಗಳಿಗೆ ಅವನ ಎದೆ ಮತ್ತು ಕವಚಗಳು ಮೇರುಪರ್ವತದ ತಪ್ಪಲಲ್ಲಿರುವ ಕೆರೆಯಂತೆ ಕಾಣಿಸುತ್ತಿತ್ತು ಎಂದು ಉತ್ಪ್ರೇಕ್ಷೆ ಮಾಡಿದ್ದಾರೆ.

**೬. ರಾವಣಾರಿ....ಪಟುಃ** (ರಾಮಪರವಾಗಿ). ರಾವಣ-ಅರಿ–ರಾವಣಾದಿದುಷ್ಟರಾಕ್ಷಸರೇ ಶತ್ರುಗಳಾಗಿರುವ ಋಷಿಗಳು ಎಂದರ್ಥ (ರಾವಣಾದಯ ಅರಯಃ ಯೇಷಾಂ ತೇ ಮುನಯಃ ಎಂದು ಬಹುವ್ರೀಹಿಸಮಾಸ). ಅಂಥಾ ಋಷಿಗಳಿಗೆ, ಪ್ರಿಯ–ಹಿತವಾದುದನ್ನು, ನಟನ–ಮಾಡುವುದರಲ್ಲಿ, ಪಟುಃ–ಸಮರ್ಥನಾದ ಎಂದರ್ಥ. ಮುನೀಶ್ವರರ ಯಜ್ಞಯಾಗಾದಿ ಸತ್ಕರ್ಮ-ಗಳಿಗೆ ವಿಘ್ನಮಾಡುತ್ತಿದ್ದ ಅನೇಕ ದೈತ್ಯರನ್ನು ವಧಮಾಡಿ ಆ ಮುನಿ

ಪುಂಗವರಿಗೆ ಇಷ್ಟವಾದ ಕಾರ್ಯವನ್ನೇ ಮಾಡುವುದರಲ್ಲಿ ದಕ್ಷನಾದ ಎಂದರ್ಥ. (ಹನುಮತ್ಪರವಾಗಿ) ರಾವಣಾರಿ ಎಂದರೆ ರಾಮದೇವರು ; ಅವರಿಗೆ ಪ್ರಿಯವಾದ ಕಾರ್ಯಗಳನ್ನು ಮಾಡುವುದರಲ್ಲಿ ನಿಪುಣನಾದ ಎಂದರ್ಥ. **೭. ಮುಷ್ಟಿಃ** ಎಂದರೆ ಹನುಮತ್ಪರವಾಗಿ ಮುಷ್ಟಿ ಅಥವಾ ಕೈಯ ಹಿಡಿ ಎಂದರ್ಥ. ರಾಮಪರವಾಗಿ 'ಮುಷ ಸ್ತೇಯೇ' (ಕ್ರ್ಯಾ.ಪ.) ಎಂಬ ಧಾತುವಿನಿಂದ ಮುಷ್ಯತೇಃ ಅಪಹ್ರಿಯತೇ ಪಾಪಂ ಶತ್ರುಬಲಂ ವಾಽನೇನೇತಿ ಮುಷ್ಟಿಃ ಎಂದಾಗುತ್ತದೆ (ಪುರಾ.). ಆದರಂತೆ ಮುಷ್ಟಿ ಎಂದರೆ ಪಾಪವನ್ನೂ ಶತ್ರುಬಲವನ್ನೂ ಸಂಹಾರಮಾಡುವಂಥಾ ಎಂದು ಅರ್ಥಮಾಡಬೇಕು. **೮. ಈಷ್ಟೇ** ಎಂಬುದು 'ಈಶ ಐಶ್ವರ್ಯೇ' (ಅದಾ. ಆ.) ಎಂಬ ಧಾತು-ವಿನ ವರ್ತಮಾನಕಾಲದ (ಲಟ್) ಪ್ರಥಮಪುರುಷೈಕವಚನರೂಪ ; ಈಷ್ಟೇ । ಈಶಾತೇ, ಈಶತೇ ಇತ್ಯಾದಿರೂಪಗಳು. ಈಷ್ಟೇ ಎಂದರೆ ಸಮರ್ಥವಾಗು-ತ್ತದೆ. ಮಾಡಬಲ್ಲುದು ಎಂದರ್ಥ. **ನ ಈಷ್ಟೇ ಕಿಂ** ಎಂಬುದನ್ನು ಕಾಕು ಎನ್ನುತ್ತಾರೆ. ಪ್ರಶ್ನೆಯಲ್ಲೇ ಆದರ ಉತ್ತರ ಅಡಗಿರುತ್ತದೆ. ಸಮರ್ಥ-ವಾಗಿಲ್ಲವೇ ಎಂಬ ಪ್ರಶ್ನೆಗೆ 'ಸರ್ವಥಾ ಸಮರ್ಥವಾಗಿಯೇ ಇದೆ' ಎಂದೇ ಅರ್ಥ.

**೯. ಸತೇಷ್ಟಾ....ಕಾಷ್ಟಃ** ಎಂಬುದಕ್ಕೆ ಎರಡು ಪದವಿಭಾಗವೇ ಆಗುತ್ತದೆ. ಹನುಮತ್ಪರವಾಗಿ ಪದವಿಭಾಗ, ಅರ್ಥ ಎರಡೂ ಸರಲ. ಸಃ ಎಂಬುದು ಮೂರನೇ ಚರಣದಲ್ಲಿರುವ ಮುಷ್ಟಿಃ (ಪು.ಸ್ತ್ರೀ)ಗೆ ವಿಶೇಷಣ. 'ಸಂಗ್ರಾಹೋ ಮುಷ್ಟಿರಿಷ್ಯತೇ' (ಹಲಾಯುಧ) 'ಸಂಶ್ಲಿಷ್ಟಪ್ರಸೃತಾಂಗುಲೌ। ಅಕ್ಲೀಬೌ ಮುಷ್ಟಿ-ಮುಸ್ತೂ ದ್ವೌ ಸಂಗ್ರಾಹೋ ಮುಚುಟಿಃ ಸ್ತ್ರಿಯಾಮ್' ವೈಜಯಂತೀಕೋಶ. ಕೈಯಿನ ಬೆಟ್ಟುಗಳನ್ನು ಜೋಡಿಸಿ (ಸಂಶ್ಲಿಷ್ಟ) ಚಾಚಿದರೆ (ಪ್ರಸೃತ) ಆಗುವ ಕೈ ಆಕಾರಕ್ಕೇ ಮುಷ್ಟಿಃ, ಮುಸ್ತುಃ, ಸಂಗ್ರಾ-ಹಃ, ಮುಚುಟಿಃ ಎಂದು ಹೆಸರು. ಇದರಲ್ಲಿ ಮುಷ್ಟಿ, ಮುಸ್ತು ಎರಡೂ ಪುಲ್ಲಿಂಗ-ಸ್ತ್ರೀಲಿಂಗ ಎರಡರಲ್ಲೂ ನಡೆಯುತ್ತವೆ. ಈ ಶ್ಲೋಕದಲ್ಲಿ ಸಃ ಎಂಬ ವಿಶೇಷಣ ಕೊಟ್ಟಿರುವುದರಿಂದ ಪುಲ್ಲಿಂಗದಲ್ಲಿ ಪ್ರಯೋಗಿಸಿದ್ದಾರೆ. ಸಃ ಮುಷ್ಟಿಃ ಎಂಬುದನ್ನು ತೇ ಜೊತೆ ಸೇರಿಸಬೇಕು, ತೇ ಸಃ ಮುಷ್ಟಿಃ—ನಿನ್ನ

ಆ ಮುಷ್ಟಿಯು. ಇದಕ್ಕೆ ಅಷ್ಟಾಪದ....ಕಾಷ್ಠಃ ಎಂಬುದು ವಿಶೇಷಣ. ಅಮರದಲ್ಲಿ ಸ್ವರ್ಣಂ ಸುವರ್ಣಂ ಕನಕಂ ಎಂದು ಆರಂಭಿಸಿ 'ಜಾಂಬೂನದ-ಮಷ್ಟಾಪದೋಽ ಸ್ತ್ರಿಯಾಂ' ಎಂದು ಬಂಗಾರದ ಹೆಸರುಗಳನ್ನು ಹೇಳಿರುವುದ-ರಿಂದ ಅಷ್ಟಾಪ(ದಃ)ದಂ ಎಂದರೆ ಬಂಗಾರ ಎಂದರ್ಥ. ಕಟಕಂ ಎಂದರೆ ಕಡಗವೆಂಬ ಹಸ್ತಾಭರಣ. ಆವಾಪಕಃ ಪಾರಿಹಾರ್ಯಃ ಕಟಕಂ ವಲಯೋಽ-ಸ್ತ್ರಿಯಾಮ್–ಅಮರ. ತಟಿತ್ ಎಂದರೆ ಮಿಂಚು. 'ತಟಿತ್ ಸೌದಾಮಿನೀ ವಿದ್ಯುತ್'–ಅಮರ. ಭಾಃ ಎಂದರೆ ಕಾಂತಿ, ಹೊಳಪು. 'ಭಾಶ್ಛವಿ-ದ್ಯುತಿ-ದೀಪ್ತಯಃ' ಅಮರ. ತಟಿತ್-ಕೋಟಿ-ಭಾ ಎಂದರೆ ಕೋಟಿ ಮಿಂಚು-ಗಳಂತೆ ಫಳಫಳಿಸುವ ಎಂದರ್ಥ. ಆವೃಷ್ಟ ಎಂದರೆ (ಕಕ. ವಿ. ಪುರಾ.) ವ್ಯಾಪ್ತವಾದ (ಛ.) ಪ್ರಕಾಶಿತವಾದ, ಕಾಷ್ಠಾಃ ಎಂಬುದು ಆಕಾರಾಂತ ಸ್ತ್ರೀಲಿಂಗಶಬ್ದ. 'ದಿಶಸ್ತು ಕಕುಭಃ ಕಾಷ್ಠಾಃ' ಎಂದು ಅಮರವಿರುವುದರಿಂದ ಕಾಷ್ಠಾಃ ಎಂದರೆ ದಿಕ್ಕುಗಳು ಎಂದರ್ಥ. ಒಟ್ಟಿನಲ್ಲಿ ಅಷ್ಟಾ....ಕಾಷ್ಠಃ ಎಂಬುದಕ್ಕೆ ಅಷ್ಟಾಪದ–ಬಂಗಾರದ, ಕಟಕ–ಕಡಗಗಳ (ಎರಡು ಕೈಗಳಿಗೂ ಒಂದೊಂದು ಕಡಗವಾದರೂ ಇರಲೇಬೇಕಲ್ಲವೆ). ತಟಿತ್-ಕೋಟಿ-ಭಾ–ಕೋಟಿ ಮಿಂಚುಗಳಂತೆ ಹೊಳೆಯುವ ಪ್ರಕಾಶದಿಂದ, ಆವೃಷ್ಟ-ವ್ಯಾಪ್ತ-ವಾದ (ಪ್ರಕಾಶಿತವಾದ), ಕಾಷ್ಠಃ–ದಶದಿಕ್ಕುಗಳುಳ್ಳ ಮುಷ್ಟಿಯು. ಕೈಗಳಿಗೆ ಹಾಕಿಕೊಂಡಿರುವ ಕಡಗಗಳು ಮಿಂಚಿನಂತೆ ಹೊಳೆಯುತ್ತಿರುತ್ತವೆ. ಮುಷ್ಟಿ-ಯನ್ನು ಅಲ್ಲಾಡಿಸಿದಾಗ ಹತ್ತೂ ದಿಕ್ಕುಗಳಲ್ಲೂ ಕಡಗಗಳ ಪ್ರಕಾಶ ಹರಡಿಕೊಂಡು ಜಗಮಗಿಸುತ್ತದೆ—ಅಂಥಾ ಮುಷ್ಟಿಯು ಎಂದು ಅನ್ವಯ.

ರಾಮಪರವಾಗಿ ಸತಾ, ಇಷ್ಟ, ಅಪದಕಟಕ, ತಟಿತ್ಕೋಟಿಭ, ಆವೃ-ಷ್ಟಕಾಷ್ಠಃ ಎಂದು ಪದಚ್ಛೇದ ಮಾಡಬೇಕು. ಸತಾ ಎಂಬುದು ತಕಾರಾಂತ ಸತ್ ಎಂಬ ಪುಲ್ಲಿಂಗ ಶಬ್ದದ ತೃತೀಯೈಕವಚನ ರೂಪ 'ಸಚ್ಛಬ್ದ ಉತ್ತಮಂ ಬ್ರೂಯಾತ್' ಎಂಬ ಪ್ರಮಾಣದಂತೆ ಸತಾ ಎಂದರೆ ಉತ್ತಮ-ನಾದ ಅಥವಾ ನಿರ್ದೋಷನಾದ ಎಂದರ್ಥ. ಇದು ತೃತೀಯ ಚರಣದಲ್ಲಿರುವ 'ಯೇನ'ಕ್ಕೆ ವಿಶೇಷಣ. ಇಷ್ಟ, ಅಪದಕಟಕ, ತಟಿತ್ಕೋಟಿಭ ಮೂರೂ ಸಂಬೋಧನಾರೂಪಗಳು, ರಾಮನಿಗೆ ವಿಶೇಷಣಗಳು. ಇಷ್ಟ-ಸಮಸ್ತ ಭಕ್ತವೃಂದಕ್ಕೂ ಪ್ರಿಯನಾದ. 'ಪದ ಗತೌ' (ದಿ. ಆ.) ಎಂಬ ಧಾತುವಿ-

ನಿಂದ ನಿಷ್ಪನ್ನವಾದ ಪದ ಶಬ್ದ ಜ್ಞಾನವಾಚಕ. ಅದರ ವಿರುದ್ಧವಾದುದು ಅಪದ-ಅಜ್ಞಾನ-ಕಟ ಧಾತು ದಾಹಾರ್ಥಕವಾದ ಕಾರಣ ಕಟಕ ಎಂದರೆ ದಾಹಕ ಎಂದರ್ಥವಾಗುತ್ತದೆ. ಹೀಗೆ ಅಪದಕಟಕ ಎಂದರೆ ಅಜ್ಞಾನದಾಹಕ ಎಂದರ್ಥವಾಗುತ್ತದೆ. ರಾಮದೇವರ ದಿವ್ಯದೃಷ್ಟಿ ಬಿದ್ದರೆ ಸಾಕು ಎಲ್ಲ ಅಜ್ಞಾನವೂ ದಹಿಸಿ ಹೋಗುತ್ತದೆ ಎಂದು ಭಾವ. ತಟಿತ್-ಕೋಟಿ-ಭ ಎಂದರೆ ಕೋಟಿ ಮಿಂಚುಗಳನ್ನೂ ಮೀರಿಸುವ ಪ್ರಕಾಶವುಳ್ಳವನೆಂದರ್ಥ. ಆವ್ಯೃಷ್ಟ-(ಹಿಂದಿನಂತೆ) ವ್ಯಾಪ್ತವಾದ, ಕಾಷ್ಠಃ-ಅವ್ಯಾಕೃತಾಕಾಶ ರೂಪ-ವಾದ ದಿಕ್ಕುಗಳುಳ್ಳ.

**232. ರಾಮಪರವಾಗಿ ಅನ್ವಯ**—ಇಷ್ಟ, ಅಪದಕಟಕ, ತಟಿ-ತ್ಕೋಟಿಭ (ಹೇ ರಾಮಚಂದ್ರ !) ಸತಾ ಯೇನ (ಭವತಾ) ನಿಷ್ಪಿಷ್ಟಂ ಸ್ಫುಟಿತಕನಕಸದ್ವರ್ಮ ಘೃಷ್ಟಾಸ್ಥಿಕೂಟಂ ದುಷ್ಟಾಧಿಪೋರಃ ದೃಷ್ಟ್ವಾ ಜನಃ ಹಾಟಕಾದ್ರಿ....ಶಂಕಃ ಅಭೂತ್, (ಸಃ) ರಾವಣಾರಿ....ಪಟುಃ ಮುಷ್ಟಿಃ ಆವ್ಯೃಷ್ಟಕಾಷ್ಠಃ (ಭವಾನ್) ಮೇ ಇಷ್ಟಂ ಪ್ರದೇಷ್ಟುಂ ನೇಷ್ಟೇ ಕಿಮ್ ? ಎಂದು ದಂಡಾನ್ವಯ.

**ಅನ್ವಯಾರ್ಥ**—ಇಷ್ಟ–'ಪ್ರಿಯೋ ಹಿ ಜ್ಞಾನಿನೋಽತ್ಯರ್ಥ ಮಹಂ ಸ ಚ ಮಮ ಪ್ರಿಯಃ' ಎಂದು ಶ್ರೀಕೃಷ್ಣ ಭಗವದ್ಗೀತೆಯಲ್ಲಿ (೭/೧೭) ಹೇಳಿದಂತೆ ಭಕ್ತರಿಗೆ ಪ್ರಿಯನಾದ ಅಥವಾ ಸಕಲ ಭಕ್ತರೂ ಇಷ್ಟರಾಗಿರುವ, ಅಪದ–ಅಜ್ಞಾನಕ್ಕೆ, ಕಟಕ–ದಾಹಕನಾದ, ತಟಿತ್-ಕೋಟಿ-ಭ–ಕೋಟಿ-ಮಿಂಚುಗಳ ಪ್ರಕಾಶವುಳ್ಳ ಹೇ ರಾಮಚಂದ್ರನೇ ! ಸತಾ–ಉತ್ತಮನಾದ ಅಥವಾ ನಿರ್ದೋಷನಾದ, ಯೇನ (ಭವತಾ)–ಯಾವ ನಿನ್ನಿಂದ, ನಿಷ್ಪಿಷ್ಟಂ–ಬಾಣದಿಂದ ಪುಡಿಪುಡಿಮಾಡಲ್ಪಟ್ಟ; ಸ್ಫುಟಿತಸದ್ವರ್ಮ–ಜಜ್ಜಿನುಗ್ಗೇಕಾಯಿ-ಯಂತೆ ಆದ ಕವಚವುಳ್ಳ ; ಘೃಷ್ಟಾಸ್ಥಿಕೂಟಂ–ಶಿಖರಗಳಂತೆ ಎತ್ತರ-ವಾಗಿರುವ ಮೂಳೆಗಳು (ಅಥವಾ ಮೂಳೆಗಳ ಸಮೂಹವು) ಚೂರು-ಚೂರಾಗಿಹೋದ; ದುಷ್ಟ-ಅಧಿಪ-ಉರಃ–ದುಷ್ಟರಲ್ಲಿ ಅಗ್ರಗಣ್ಯನಾದ ರಾವಣನ ಎದೆಯನ್ನು ; ದೃಷ್ಟ್ವಾ–ನೋಡಿ ; ಜನಃ–ಜನಗಳು, ಹಾಟಕಾ....ಶಂಕಃ— ಹಾಟಕ-ಅದ್ರಿ–ಮೇರುಪರ್ವತದ, ಪ್ರಕಟ–ಪ್ರಕಾಶಮಾನವಾದ ಅಥವಾ

ವಿಶಾಲವಾಗಿ ಹರಡಿಕೊಂಡಿರುವ, ತಟ–ದಡದಲ್ಲಿರುವ (ದಡಪ್ರದೇಶದಲ್ಲಿರುವ), ತಟಾಕ–ಕೆರೆಯೇ ಎಂದು, ಅತಿಶಂಕಃ–ಬಲವಾದ ಭ್ರಾಂತಿಯುಳ್ಳವರಾಗಿ, ಅಭೂತ್–ಆಯಿತೋ ; (ಸಃ–ಅಂಥಾ) ರಾವಣಾ....ಪಟುಃ–ರಾವಣಾರಿ-ರಾವಣಾದಿದುಷ್ಟರೇ ಶತ್ರುಗಳಾದ ಮುನಿಗಳಿಗೆ, ಪ್ರಿಯ-ಇಷ್ಟವಾದುದನ್ನು, ನಟನ–ಮಾಡುವುದರಲ್ಲಿ, ಪಟುಃ–ಸಮರ್ಥನಾದ; ಮುಷ್ಟಿಃ–ಪಾಪವನ್ನೂ ಶತ್ರುಬಲವನ್ನೂ ಸಂಹಾರಮಾಡುವ, ಅವ್ಯಾಪ್ಯಕಾಷ್ಠಃ–ಅವ್ಯಾಪ್ಯ–ವ್ಯಾಪ್ತ-ವಾದ, ಕಾಷ್ಠಃ-ಅವ್ಯಾಕೃತಾಕಾಶರೂಪವಾದ ದಿಕ್ಕುಗಳುಳ್ಳ ; (ಭವಾನ್)–ನೀನು ; . ಮೇ–ನನ್ನ, ಇಷ್ಟಂ–ಅಭೀಪ್ಸಿತವನ್ನು (ಇಷ್ಟಾರ್ಥವನ್ನು) ಪ್ರದೇಷ್ಟುಂ-ಕೊಡುವುದಕ್ಕೆ ; ನ ಈಷ್ಟೇ ಕಿಂ–ಸಮರ್ಥವಾಗಿಲ್ಲವೇನು ? (ಎಂದರೆ ಅವಶ್ಯವಾಗಿ ಸಮರ್ಥವಾಗಿಯೇ ಇದ್ದಿ ಎಂದು ಭಾವ.)

**233. ಹನುಮತ್ಪರವಾಗಿ ಅನ್ವಯ**—'ತೇ ಮುಷ್ಟಿಃ' ಎಂದರೆ 'ನಿನ್ನ ಮುಷ್ಟಿಯು' ಎಂದು ನೇರವಾಗಿ ಹನುಮಂತನಿಗೇ ಸಂಬೋಧಿಸಿರು-ವುದರಿಂದ ಹೇ ಹನುಮನ್ ! ಎಂಬ ಸಂಬೋಧನೆಯನ್ನು ಅಧ್ಯಾಹಾರ-ಮಾಡಿಕೊಳ್ಳಬೇಕು. (ಹೇ ಹನುಮನ್ !) ಯೇನ (ತ್ವಯಾ) ನಿಷ್ಪಿಷ್ಟಂ ಸ್ಫುಟಿತಕನಕಸದ್ವರ್ಮ ಘೃಷ್ಟಾಸ್ಥಿಕೂಟಂ ದುಷ್ಟಾಧಿಪೋರಃ ದೃಷ್ಟ್ವಾ ಜನಃ ಹಾಟಕಾ....ಶಂಕಃ ಅಭೂತ್, ಸಃ ರಾವಣಾರಿ ಪ್ರಿಯನಟನಪಟುಃ ಅಸ್ಪಾ-ಪದ....ಕಾಷ್ಠಃ ತೇ ಮುಷ್ಟಿಃ ಮೇ ಇಷ್ಟಂ ಪ್ರದೇಷ್ಟುಂ ನೇಷ್ಟೇ ಕಿಮ್ ? ಎಂದು ದಂಡಾನ್ವಯ.

ಹನುಮತ್ಪರವಾಗಿ ಅರ್ಥಹೇಳುವಾಗ ನಾಲ್ಕಾರು ಪದಗಳಿಗೆ ಮಾತ್ರ ಅರ್ಥ ವ್ಯತ್ಯಾಸವಾಗುತ್ತದೆ. ಮಿಕ್ಕ ಹೆಚ್ಚು ಪದಗಳಿಗೆಲ್ಲ ಹಿಂದಿನಂತೆಯೇ ಅರ್ಥ. ಆದರೂ ಇಡೀ ಶ್ಲೋಕಾರ್ಥ ಮನಸ್ಸಿಗೆ ನಾಟುವುದಕ್ಕಾಗಿ ಎಲ್ಲ ಪದಗಳಿಗೂ ಅರ್ಥ ಹೇಳಿಯೇ ಇದೆ.

**ಹನುಮತ್ಪರವಾಗಿ ಅರ್ಥ**—ಹೇ ಹನುಮನ್–ಎಲೈ ಹನುಮಂತ ! ಯೇನ (ತ್ವಯಾ)–ಯಾವ ನಿನ್ನಿಂದ, ನಿಷ್ಪಿಷ್ಟಂ–ಚೂರ್ಣಮಾಡಲ್ಪಟ್ಟ, ಸ್ಫುಟಿತಕನಕಸದ್ವರ್ಮ–ಜಜ್ಜಿಹೋದ ಬಂಗಾರದ ಕವಚವುಳ್ಳ, ಘೃಷ್ಟಾಸ್ಥಿ-ಕೂಟಂ–ಬೆಟ್ಟದ ಶಿಖರಗಳಂತೆ ಎತ್ತರವಾಗಿಯೂ ದೃಢವಾಗಿಯೂ ಇದ್ದ

ಮೂಳೆಗಳು (ಅಥವಾ ಎದೆಯ ಮೂಳೆಗಳ ಪಂಜರವೇ) ಚೂರು ಚೂರಾಗಿ ಹೋದ, ದುಷ್ಟಾಧಿಪ-ಉರಃ–ದುಷ್ಟರಿಗೆಲ್ಲಾ ಒಡೆಯನಾದ ರಾವಣನ ಎದೆ-ಯನ್ನು, ದೃಷ್ಟ್ವಾ–ನೋಡಿ, ಜನಃ–ಜನಗಳು, ಹಾಟಕಾದ್ರಿ....ಶಂಕಃ–ಹಾಟ-ಕಾದ್ರಿ–ಮೇರುಪರ್ವತದ, ಪ್ರಕಟ–ಪ್ರಕಾಶಮಾನವಾದ ಅಥವಾ ವಿಶಾಲವಾಗಿ ಹರಡಿಕೊಂಡಿರುವ, ತಟ–ದಡದಲ್ಲಿರುವ, ತಟಾಕ–ಕೆರೆಯೋ ಎಂದು ತಿಳಿದು, ಅತಿಶಂಕಃ–ಬಲವಾದ ಭ್ರಾಂತಿಯುಳ್ಳವರಾಗಿ, ಅಭೂತ್–ಆಯಿತೋ, ಸಃ–ಅಂಥಾ, ರಾವಣಾ....ಪಟುಃ–ರಾವಣಾರಿ–ಶ್ರೀರಾಮನಿಗೆ, ಪ್ರಿಯ–ಇಷ್ಟವಾದ ಕಾರ್ಯಗಳನ್ನು, ನಟನ–ಮಾಡುವುದರಲ್ಲಿ, ಪಟುಃ–ದಕ್ಷವಾದ, ಅಷ್ಟಾಪದ.... ಕಾಷ್ಠಃ–ಅಷ್ಟಾಪದ–ಬಂಗಾರದ, ಕಟಕ–ಕಡಗಗಳ, ತಟಿತ್‌ಕೋಟಿ-ಭಾ–ಕೋಟಿಮಿಂಚುಗಳ ಕಾಂತಿಯಿಂದ, ಆವ್ಯಷ್ಟ–ವ್ಯಾಪ್ತವಾದ, ಕಾಷ್ಠಃ–ದಿಕ್ಕು-ಗಳುಳ್ಳ, ತೇ–ನಿನ್ನ, ಮುಷ್ಟಿಃ–ಮುಷ್ಟಿಯು, ಮೇ–ನಿನ್ನ, ಇಷ್ಟಂ–ಇಷ್ಟಾ-ರ್ಥವನ್ನು, ಪ್ರದೇಷ್ಟುಂ–ಕೊಡುವುದಕ್ಕೆ, ನೇಷ್ಟೇ ಕಿಂ–ಸಮರ್ಥವಾಗಿಲ್ಲ-ವೇನು ?

**234. ಭಾವಾರ್ಥ**—ರಾಮಪರವಾಗಿಯೇ ಆಗಲಿ, ಹನುಮತ್ಪರ-ವಾಗಿಯೇ ಆಗಲಿ, ಈ ಶ್ಲೋಕದ ಭಾವಾರ್ಥ ಸರಿಯಾಗಿ ತಿಳಿಯಬೇಕಾದರೆ ವಾಲ್ಮೀಕಿ ರಾಮಾಯಣದ ಯುದ್ಧಕಾಂಡದ ೫೯ನೇ ಅಧ್ಯಾಯದಲ್ಲೂ ತಾತ್ಪರ್ಯ ನಿರ್ಣಯದ ೮ನೇ ಅಧ್ಯಾಯದ ೭೮–೯೮ ಶ್ಲೋಕಗಳಲ್ಲೂ ನಿರೂಪಣೆ ಮಾಡಿರುವ ಕಥಾಭಾಗವು ಸ್ವಲ್ಪವಾದರೂ ತಿಳಿದಿರಬೇಕು. ಆದ-ಕಾರಣ ಆ ಕಥೆಯನ್ನೇ ಮೊದಲು ನಿರೂಪಣೆ ಮಾಡಿ ಆಮೇಲೆ ಭಾವಾರ್ಥ-ವನ್ನು ಹೇಳುವೆವು.

**ಕ. ಹನುಮಂತ ರಾವಣನಿಗೆ ಮುಷ್ಟಿಪ್ರಹಾರಮಾಡಿದ್ದು**—ರಾಮ-ರಾವಣರಿಗೆ ಆರಂಭವಾದ ಯುದ್ಧದಲ್ಲಿ ರಾವಣನ ಅಪ್ರತಿಮಯೋಧ-ರೆಂದು ಪ್ರಸಿದ್ಧರಾಗಿದ್ದ ಧೂಮ್ರಾಕ್ಷ ವಜ್ರದಂಷ್ಟ್ರ ಅಕಂಪನ ಪ್ರಹಸ್ತ ಮೊದಲಾದ ಅನೇಕ ರಾಕ್ಷಸ ಸೈನ್ಯಾಧಿಪತಿಗಳು ತಮ್ಮ ತಮ್ಮ ಸೈನ್ಯಸಮೇತ ಯುದ್ಧದಲ್ಲಿ ನಾಶವಾಗಿ ಹೋದರು. ಇದನ್ನು ಕಂಡು ರಾವಣನು ಒಂದು ಕಡೆ ಶೋಕಾಕುಲನಾದುದಲ್ಲದೆ ಇನ್ನೊಂದು ಕಡೆ ಕೋಪೋದ್ದೀಪಿತನೂ ಆಗಿ

'ಆ ವಾನರಸೈನ್ಯವನ್ನೂ ರಾಮ-ಲಕ್ಷ್ಮಣರನ್ನೂ ನಾನೇ ಹೋಗಿ ಬಾಣೌಘ-ಗಳಿಂದ ದಹಿಸಿ ಹಾಕುವೆ' ನೆಂದು ಸಂಕಲ್ಪಿಸಿಕೊಂಡು ರಥಾರೂಢನಾಗಿ ಯುದ್ಧ-ರಂಗಕ್ಕೆ ಬಂದು ಅನೇಕ ಮುಖ್ಯ ಮುಖ್ಯ ಕಪಿವೀರರನ್ನು ಭಂಗಗೊಳಿಸಿದನು. ಅದನ್ನು ಕಂಡು ಲಕ್ಷ್ಮಣನು ಅವನನ್ನು ಎದುರಿಸಿ ಯುದ್ಧ ಮಾಡಲಾರಂಭಿ-ಸಿದನು. ಅವನ ಬಾಣಪ್ರಹಾರವನ್ನು ಎದುರಿಸಲಾರದೆ ರಾವಣನು ಆ ಲಕ್ಷ್ಮಣನ ಮೇಲೆ ಅಮೋಘವಾದ ಬ್ರಹ್ಮದತ್ತವಾದ ಶಕ್ತಿಯನ್ನು ಪ್ರಯೋ-ಗಿಸಿದನು. ಅದರಿಂದ ಲಕ್ಷ್ಮಣ ಮೂರ್ಛಿತನಾಗಿ ಬೀಳಲು ರಾವಣ ಅವನನ್ನೇ ಎತ್ತಿಕೊಂಡು ಲಂಕೆಗೆ ಹೋಗಿಬಿಡಬೇಕೆಂದು ಹವಣಿಸುತ್ತಿದ್ದನು.

ಇದನ್ನು ಕಂಡು ಹನುಮಂತ ಆ ಕ್ಷಣ ರಾವಣನ ಬಳಿಗೆ ಧಾವಿಸಿ ಬಂದು ಬಿಟ್ಟನು. ಅವನ ಆ ಕೆಟ್ಟ ಪ್ರಯತ್ನವನ್ನು ಭಂಗಗೊಳಿಸಿ ತನ್ನ ವಜ್ರ-ಕಲ್ಪವಾದ ಮುಷ್ಟಿಯಿಂದ ರಾವಣನ ಎದೆಯನ್ನು ಅಪ್ಪಳಿಸಿದನು. ಆ ಹೊಡೆತವನ್ನು ಸಹಿಸಲಾರದೆ ರಾವಣನ ಹತ್ತು ತಲೆಗಳು ಸುತ್ತುವಂತಾ-ದುವು. ಅವನ ಎದೆಯೆಲ್ಲಾ ನಜ್ಜುಗುಜ್ಜಾಗಿಹೋಯಿತಲ್ಲದೆ ಅವನು ಇದ್ದಲ್ಲೇ ಕುಸಿದು ಬಿದ್ದುಬಿಟ್ಟನು. ಮತ್ತು ವಾಲ್ಮೀಕಿ ರಾಮಾಯಣದಲ್ಲಿ ಹೇಳಿರುವಂತೆ,

ಆಸ್ಯೈಃ ಸನೇತ್ರಶ್ರವಣೈ—ರ್ವವಾಮ ರುಧಿರಂ ಬಹು ।
ವಿಘೂರ್ಣಮಾನೋ ನಿಶ್ಚೇಷ್ಟೋ ರಥೋಪಸ್ಥ ಉಪಾವಿಶತ್ ॥
ವಿಸಂಜ್ಞೋ ಘೂರ್ಣಿತಶ್ಚಾಸೀತ್ ನ ಚ ಸ್ಥಾನಂ ಸಮಾಲಭತ್ ॥

(ಆಸ್ಯೈಃ–ಮುಖಗಳಿಂದ, ನೇತ್ರ-ಕಣ್ಣು, ಶ್ರವಣ-ಕಿವಿ, ವವಾಮ–ಕಾರಿಕೊಂಡನು, ಕಕ್ಕಿಕೊಂಡನು, ರುಧಿರಂ–ರಕ್ತವನ್ನು, ವಿಘೂರ್ಣಮಾನಃ–ತಲೆತಿರುಗಿದಂತೆ ಆಗಿ, ತಲೆ ಸುತ್ತು ಬಂದು, ವಿಸಂಜ್ಞಃ–ಮೂರ್ಛಿತನಾಗಿ.)

ಹತ್ತೂ ಬಾಯಿಗಳಿಂದಲೂ ಬಹಳ ರಕ್ತವನ್ನು ಕಾರಿಕೊಂಡನು. ಬಾಯಿಗಳಿಂದ ಮಾತ್ರವಲ್ಲದೆ ಕಣ್ಣುಗಳಿಂದಲೂ ಕಿವಿಗಳಿಂದಲೂ ರಕ್ತವು ಹೊರಟಿಕೊಂಡವು. ತಲೆತಿರುಗಿದಂತಾಗಿ ಮೂರ್ಛಿತನಾಗಿ ರಥದ ಬಳಿಯಲ್ಲೇ ಅಲ್ಲೇ ಕುಸಿದುಬಿದ್ದನು. ಅವನಿಗೆ ತಾನು ಎಲ್ಲಿದ್ದೇನೆಂಬುದೇ ತಿಳಿಯದಂತಾ-ಯಿತು.

ಸ್ವಲ್ಪ ಹೊತ್ತಾದ ಬಳಿಕ ಹಾಗೆಯೇ ಚೇತರಿಸಿಕೊಂಡು ಹನುಮಂತ-ನನ್ನು ಬಹಳ ಪ್ರಶಂಸಿಸಿದನು—

ಸ ಲಬ್ಧಸಂಜ್ಞಃ ಪ್ರಶಶಂಸ ಮಾರುತಿಂ
'ತ್ವಯಾ ಸಮೋ ನಾಸ್ತಿ ಪುಮಾನ್ ಹಿ ಕಶ್ಚಿತ್ ।
ಕಃ ಪ್ರಾಪಯೇದನ್ಯ ಇಮಾಂ ದಶಾಂ ಮಾಮ್ ?'....

(ತಾತ್ಪರ್ಯನಿರ್ಣಯ ೮/೭೯)

'ಹನುಮಂತ ! ನಿನ್ನ ಸಮಾನ ಬಲಿಷ್ಠನಾದ ಪುರುಷ ಬೇರೆ ಯಾರೂ ನಿಶ್ಚಯವಾಗಿಯೂ ಇಲ್ಲ. ಏಕೆಂದರೆ ಬೇರೆ ಯಾರು ನನಗೆ ಈ ರೀತಿ ದುರವಸ್ಥೆ ಬರುವಂತೆ ಮಾಡಲು ಸಾಧ್ಯವಾದೀತು ?' ಎಂದು ಹೇಳಿದನು. ಅದಕ್ಕೆ ಹನುಮಂತ

ಧಿಗಸ್ತು ಮಮ ವೀರ್ಯೇಣ ಯಸ್ತ್ವಂ ಜೀವಸಿ ರಾವಣ !

(ವಾಲ್ಮೀಕಿ ರಾಮಾಯಣ)

'ರಾವಣ ! ನನ್ನ ವೀರ್ಯವನ್ನು ಹೊಗಳುವಿ. ನನ್ನ ಹೊಡೆತ ತಿಂದೂ ಸಹ ಉಳಿದಿಯಲ್ಲಾ, ಆದ್ದರಿಂದ ನನ್ನ ವೀರ್ಯಕ್ಕೆ ಧಿಕ್ಕಾರವಿರಲಿ !' ಎಂದು ಹೇಳಿದನಂತೆ. ಇಲ್ಲಿ ಒಂದು ಸೂಕ್ಷ್ಮ ಪ್ರಮೇಯವೇ ಅಡಗಿದೆ. ಜಯ-ವಿಜಯರಿಗೆ ವಿಷ್ಣು ಕೊಟ್ಟ ವರದಂತೆ ಅವರಿಬ್ಬರನ್ನೂ ಮೂರು ಸರಿಯೂ ವಿಷ್ಣುವೇ ಕೊಲ್ಲಬೇಕು. ಹೀಗೆ ರಾವಣ-ಕುಂಭಕರ್ಣ ಇಬ್ಬರಿಗೂ (ಜಯ-ವಿಜಯರೇ ರಾಕ್ಷಸರಾಗಿ ಹುಟ್ಟಿರುವ ಕಾರಣ) ರಾಮನ ಕೈಯಿಂದಲೇ ವಧವಾಗಬೇಕು. ಆದಕಾರಣ ಹನುಮಂತ ರಾವಣನ ಮೇಲೆ ಪೂರ್ತಿ ಬಲ-ಪ್ರಯೋಗ ಮಾಡಿರಲಿಲ್ಲ; ಆದರೂ ಅವನಿಗೆ ಈ ಅವಸ್ಥೆಯಾಯಿತು. ಇರಲಿ. ಈ ವಿಚಾರವನ್ನು ಇಲ್ಲಿಗೇ ನಿಲ್ಲಿಸಿ ಮುಂದಿನ ಕಥೆಗೆ ಹೋಗೋಣ.

**ಖ. ಶ್ರೀರಾಮನಿಂದ ರಾವಣನ ಪರಾಭವ**—ರಾವಣ ಚೇತ-ರಿಸಿಕೊಂಡು ಯುದ್ಧಕ್ಕೆ ಸಿದ್ಧನಾಗುವಷ್ಟರಲ್ಲಿ ಹನುಮಂತ ಮೂರ್ಛಿತ-ನಾಗಿದ್ದ ಲಕ್ಷ್ಮಣನನ್ನು ರಾಮನ ಬಳಿಗೆ ಕೊಂಡೊಯ್ದನು. ಆಗ ರಾಮನು ಲಕ್ಷ್ಮಣನನ್ನು ಸಂತೈಸಿ ತಾನೇ ರಾವಣನೊಡನೆ ಯುದ್ಧ ಮಾಡುವುದಕ್ಕೆ ಸಿದ್ಧನಾದನು. ರಾವಣ ರಥಾರೂಢನಾಗಿರುವಾಗ ತನ್ನ ಸ್ವಾಮಿ ನೆಲದ

ಮೇಲೆ ನಿಂತು ಯುದ್ಧ ಮಾಡಬಾರದೆಂದು ಹನುಮಂತ ರಾಮನನ್ನು ಹೆಗಲ ಮೇಲೇರಿಸಿಕೊಂಡು ರಾವಣನನ್ನು ಎದುರಿಸಿದನು. ರಾವಣ ರಾಮನ ಮೇಲೆ ಬಾಣಪ್ರಯೋಗ ಮಾಡುವುದನ್ನು ಬಿಟ್ಟು ಹನುಮಂತನ ಮೇಲೇ ಬಾಣಗಳನ್ನು ಹೊಡೆದನು. ಹನುಮಂತನಿಗೆ ಆದರಿಂದ ಏನೂ ತೊಂದರೆಯಾಗಲಿಲ್ಲ. ಆದರೆ ರಾಮನು, ನೇರವಾಗಿ ತನ್ನ ಮೇಲೆ ಬಾಣ ಹೊಡೆಯದೆ ಹನುಮಂತನ ಮೇಲೆ ಬಾಣ ಪ್ರಯೋಗ ಮಾಡಿದ್ದಕ್ಕೆ ರಾವಣನನ್ನು ನಿಂದಿಸಿ ರಾವಣನ ಮೇಲೆ ಬಾಣಗಳ ಮಳೆಯನ್ನೇ ಸುರಿಸಿ ಅವನ ರಥವನ್ನೂ ಛತ್ರ-ಧ್ವಜಪತಾಕೆಗಳನ್ನೂ ಕುದುರೆಗಳನ್ನೂ ಕತ್ತರಿಸಿ ಹಾಕಿದನಲ್ಲದೆ ಅವನ ಸಾರಥಿಯನ್ನೂ ಯಮಪುರಿಗೆ ಕಳುಹಿಸಿಬಿಟ್ಟನು.) ರಾವಣನ ಮೇಲೂ ಅಸ್ತ್ರಗಳ ಮಳೆಗರೆದನು. ಇದರಿಂದ ಹಿಂದೆ ಎಂದೆಂದೂ ಯುದ್ಧದಲ್ಲಿ ಹಿಮ್ಮೆಟ್ಟದ ಆ ರಾವಣ ರಾಮನ ಬಾಣದ ಹೊಡೆತಕ್ಕೆ ಸಿಕ್ಕಿ ಕಂಗೆಟ್ಟು ಹೋದನು.

ಸ ರಾಮಬಾಣಾಭಿಹತೋ ಭೃಶಾರ್ತ-
ಶ್ಚಚಾಲ ಚಾಪಂ ಚ ಮುಮೋಚ ವೀರಃ ।

(ವಾಲ್ಮೀಕಿ ರಾಮಾಯಣ)

ಅವನು ದಿಕ್ಕು ತೋರದೆ ಸ್ತಬ್ಧನಾಗಿ ನಿಂತುಬಿಟ್ಟ, ಅವನ ಕೈಯಿಂದ ಧನುಸ್ಸು ಜಾರಿಬಿತ್ತು. ಹಾಗೂ ಚೇತರಿಸಿಕೊಂಡು ಖಡ್ಗಾದಿ ಶಸ್ತ್ರಗಳಿಂದ ಯುದ್ಧ ಮಾಡಲು ಸಿದ್ಧನಾದನು. ಆಗ ರಾಮ ಬೇರೆ ಅಸ್ತ್ರಪ್ರಯೋಗ ಮಾಡಿ ಅವನ ಎಲ್ಲಾ ಆಯುಧಗಳನ್ನೂ ಕತ್ತರಿಸಿಹಾಕಿಬಿಟ್ಟು ಅರ್ಧ-ಚಂದ್ರಾಕಾರದ ಬಾಣಪ್ರಯೋಗ ಮಾಡಿ ಅವನ ಹತ್ತು ತಲೆಗಳ ಮೇಲೂ ಇದ್ದ ಎಲ್ಲ ಕಿರೀಟಗಳನ್ನೂ ಕೆಡವಿಬಿಟ್ಟನು. ಇದರಿಂದ ದಿಗ್ಭ್ರಾಂತನಾಗಿ ದಿಕ್ಕು ತೋರದೆ ಕಣ್ಣು ಕಣ್ಣು ಬಿಡುತ್ತಾ ನಿಂತಿದ್ದ ರಾವಣನನ್ನು ಕುರಿತು ಶ್ರೀರಾಮ ಹೀಗೆಂದು ಹೇಳಿದನು—

ಗಚ್ಛಾನುಜಾನಾಮಿ ರಣಾರ್ದಿತಸ್ತ್ವಂ
ಪ್ರವಿಶ್ಯ ರಾತ್ರಿಂಚರರಾಜ ! ಲಂಕಾಮ್ ॥ (ವಾ.ರಾ.)

ಹೇ ರಾಕ್ಷಸೇಂದ್ರ, ನಾನು ನಿನಗೆ ಅನುಮತಿಕೊಟ್ಟಿದ್ದೇನೆ. ಲಂಕೆಗೆ ಹಿಂದಿರುಗಿ ಹೋಗು.

ಸಮಸ್ತಭೋಗಾನನುಭೂಯ ಶೀಘ್ರಂ
ಪ್ರತೋಷ್ಯ ಬಂಧೂನ್ ಪುನರೇಹಿ ಮರ್ತ್ಯಮ್ ॥
(ತಾ.ನಿ. ೮/೯೮)

ಸಮಸ್ತಭೋಗಗಳನ್ನೂ (ಕಡೆಯ ಸಾರಿ) ಬೇಗ ಬೇಗ ಅನುಭವಿಸಿಬಿಟ್ಟು ನಿನ್ನ ಬಂಧುಗಳಿಗೆಲ್ಲಾ ಹೇಳಿ ಸಂತೋಷಪಡಿಸಿ ಪುನಃ ಸಾಯುವುದಕ್ಕೆ ಸಿದ್ಧನಾಗಿಯೇ ಬಾ—ಎಂದು ರಾಮನು ರಾವಣನನ್ನು ಮೂದಲಿಸಿ ಹೇಳಿ-ದನು. ಇದಾದಮೇಲೆ ರಾವಣ ಮನೆಗೆ ಹಿಂದಿರುಗಿದ ಅವಸ್ಥೆಯನ್ನು ವಾಲ್ಮೀಕಿಗಳು ಸುಂದರವಾಗಿ ವರ್ಣಿಸಿದ್ದಾರೆ—

ಸ ಏವಮುಕ್ತೋ ಹತದರ್ಪಹರ್ಷೋ
ನಿಕೃತ್ತಚಾಪಃ ಸ ಹತಾಶ್ವಸೂತಃ ।
ಶರಾರ್ದಿತಃ ಕೃತ್ತಮಹಾಕಿರೀಟೋ
ವಿವೇಶ ಲಂಕಾಂ ಸಹಸಾ ಸ ರಾಜಾ ॥

(ನಿಕೃತ್ತ–ಕತ್ತರಿಸಿಹಾಕಿದ, ಚಾಪಃ–ಬಿಲ್ಲು. ಸೂತ–ಸಾರಥಿ. ಶರ-ಬಾಣಗಳಿಂದ, ಆರ್ದಿತಃ–ಪೀಡಿತನಾಗಿ, ಕೃತ್ತ-ಭಿನ್ನವಾದ. ವಿವೇಶ–ಪ್ರವೇಶಿ-ಸಿದನು. ಸಹಸಾ–ಶೀಘ್ರವಾಗಿ)

ರಾಮನಿಂದ ಹೀಗೆ ಮೂದಲಿಸಿ ಹೇಳಲ್ಪಟ್ಟ ಆ ರಾಕ್ಷಸರಾಜನು ದರ್ಪವೂ ಹರ್ಷವೂ ಭಗ್ನವಾಗಿ ಹೋಗಲು, ತನ್ನ ಧನುಸ್ಸೇ ಕತ್ತರಿಸಿಹೋಗಲು, ರಥದ ಕುದುರೆಗಳು ಸಾರಥಿ ಎಲ್ಲವೂ ನಾಶವಾಗಿಹೋಗಲು, ತಲೆಯ ಮೇಲಿನ ಕಿರೀಟವೂ ಭಿನ್ನವಾಗಿಹೋಗಿರಲು ರಾಮನ ಬಾಣಗಳ ಹೊಡೆತ-ವನ್ನು ಸಹಿಸಲಾರದೆ ಮ್ಲಾನಮುಖನಾಗಿ ಲಂಕಾಪಟ್ಟಣವನ್ನು ಪ್ರವೇಶಿಸಿ-ದನು. ಇದೀಗ ರಾಮಾಯಣದಲ್ಲಿ ನಮಗೆ ಪ್ರಸಕ್ತವಾದ ಕಥೆ. ಇದನ್ನು ಓದಿಕೊಂಡರೆ ಮುಂದೆ ಹೇಳುವ ಭಾವಾರ್ಥದ, ಹಿಂದೆ ಅಡಗಿರುವ ಗೂಢಾ-ಶಯವು, ಚೆನ್ನಾಗಿ ಮಂದಟ್ಟಾಗುತ್ತದೆ.

**೧. ಸಕಲಾಭೀಷ್ಟಪ್ರದನಾದ ಶ್ರೀರಾಮ**—ಹೇ ಶ್ರೀರಾಮಚಂದ್ರ ! ಸಕಲ ಭಕ್ತರೂ ನಿನಗೆ ಹೇಗೆ ಪ್ರಿಯರೋ ಹಾಗೆ ನೀನು ಸಕಲ ಭಕ್ತರಿಗೂ ಅತ್ಯಂತಪ್ರಿಯನು. ನಿನ್ನ ಸ್ಮರಣೆಯಿಂದಲೇ ಅಜ್ಞಾನಾದಿ ಸಕಲದೋಷ-

ಗಳೂ ದಹಿಸಿ ಹೋಗುವುವು. ನೀನು ಅವ್ಯಾಕೃತಾಕಾಶಕ್ಕೂ ಮೀರಿದ ವ್ಯಾಪ್ತಿಯುಳ್ಳವನು. ಕೋಟಿಮಿಂಚುಗಳಂತೆ ಪ್ರಕಾಶಿಸುವ ಹೇ ಪ್ರಭೋ, ಕೇವಲ ತಪೋನಿರತರಾಗಿದ್ದ ವಿಶ್ವಾಮಿತ್ರಾದಿ ಅನೇಕ ಮಹರ್ಷಿಗಳಿಗೆ ಕಂಟಕಪ್ರಾಯರಾಗಿದ್ದ ಅಸಂಖ್ಯ ರಾಕ್ಷಸರನ್ನು ಸಂಹಾರಮಾಡಿ ನೀನು ಲೋಕಕ್ಕೇ ಅಭಯವನ್ನು ನೀಡಿದಿ. ನಿನ್ನ ಮಹಿಮೆಯನ್ನೂ ನಿನ್ನ ಪರಾಕ್ರಮವನ್ನೂ ಅಲ್ಪನಾದ ನಾನು ಎಷ್ಟೆಂದು ಕೊಂಡಾಡಲಿ. ಯಾವ ರಾವಣನ ಪರಾಕ್ರಮವನ್ನು ಎದುರಿಸಲಾರದೆ ಇಂದ್ರಾದಿ ದೇವತೆಗಳೆಲ್ಲ ಕಂಗೆಟ್ಟುಹೋಗಿದ್ದರೋ ಅಂಥ ಅತುಲಪರಾಕ್ರಮಿಯೆನಿಸಿದ ರಾವಣನೇ ನಿನ್ನ ಬಾಣಗಳ ಹೊಡೆತಕ್ಕೆ ಸಿಕ್ಕಾಗ ಕಂಗೆಟ್ಟು ದಿಗ್ಭ್ರಾಂತನಾಗಿಹೋದ. ಅವನು ಧರಿಸಿದ ಕವಚವೆಲ್ಲ ಭಗ್ನವಾಗಿಹೋಗಿ ಮುಖವನ್ನೇ ತೋರಿಸದಂತಾಗಲು ಅವನು ಅವನತಮುಖನಾಗಿ ಲಂಕೆಗೆ ಹಿಂದಿರುಗಬೇಕಾಯಿತು. ಹೀಗೆ ತ್ರೈಲೋಕ್ಯದಲ್ಲೇ ಮಹಾಪರಾಕ್ರಮಿಯೆಂದು ಪ್ರಸಿದ್ಧನಾಗಿದ್ದ ರಾವಣನನ್ನೇ ತೃಣಪ್ರಾಯಮಾಡಿ ಪರಾಭವಗೊಳಿಸಿದ ನೀನು ನನ್ನಂಥಾ ಅಲ್ಪನ ಇಷ್ಟಾರ್ಥವನ್ನು ನೆರವೇರಿಸಿಕೊಡುವುದು ಏನು ಅತಿಶಯ, ಸ್ವಾಮಿ! ನೀನು ಶರಣಾಗತರಕ್ಷಕನೆಂಬ ಪೂರ್ಣಭರವಸೆ ನನಗಿದೆ ಎಂಬುದೇ ರಾಮಪರವಾಗಿ ಭಾವಾರ್ಥ.

**ಘ. ಹನುಮಂತನ ಮುಷ್ಟಿಯ ಪ್ರಭಾವ**—ಹೇ ಹನುಮಂತ! ನೀನು ಎಂಥಾ ಬಲವಂತ. ನಿನ್ನ ಬಾಹುಬಲವೇ ಎಷ್ಟು ಅಮೋಘವಾದುದು! ಬಾಹುಬಲವಿರಲಿ, ನಿನ್ನ ಮುಷ್ಟಿಯಲ್ಲೇ ಎಂಥಾ ಅಪಾರಶಕ್ತಿಯಿದೆ! ಆದರೂ ಈ ಶಕ್ತಿಯೆಲ್ಲವನ್ನೂ ನಿನ್ನ ಆರಾಧ್ಯದೇವತೆಯಾದ ಆ ಶ್ರೀರಾಮನಿಗೆ ಬಹುಪ್ರಿಯವಾದ ಮಹತ್ಕಾರ್ಯಗಳನ್ನು ಎಸಗುವುದರಲ್ಲೇ ಪ್ರಯೋಗಿಸಿ ಸಾರ್ಥಕಗೊಳಿಸಿದಿ. ದುಷ್ಟರಿಗೆಲ್ಲಾ ಅಗ್ರೇಸರನಾಗಿದ್ದ ರಾವಣನು ಬ್ರಹ್ಮ-ರುದ್ರರ ವರಗಳಿಂದ ಕೊಬ್ಬಿ ಮೂರು ಲೋಕಗಳಿಗೂ ಕಂಟಕಪ್ರಾಯನಾಗಿದ್ದನು. ಇಂಥವನು ತನ್ನ ಶಕ್ತ್ಯಾಯುಧಪ್ರಹಾರದಿಂದ ಮೂರ್ಛಿತನಾಗಿ ಬಿದ್ದ ಲಕ್ಷ್ಮಣನನ್ನು ಸೆರೆಯಾಳಾಗಿ ಕೊಂಡೊಯ್ಯಬೇಕೆಂದು ಹವಣಿಸುತ್ತಿದ್ದನು. ಅವನ ಆ ಸನ್ನಾಹವನ್ನು ಕಂಡ ನೀನು ಆಕ್ಷಣ ರಾವಣನ ಬಳಿಗೆ ಧಾವಿಸಿ ಬಂದು ಅವನ ಆ ದುರುದ್ದೇಶವನ್ನು ಭಂಗ-

ಗೊಳಿಸುವುದಕ್ಕಾಗಿ ಅವನ ಆ ಎದೆಯ ಮೇಲೆ ಮುಷ್ಟಿಪ್ರಹಾರ ಮಾಡಿದಿ. (ಆ ಪ್ರಹಾರವನ್ನೇ ಇನ್ನೂ ಬಲವಾಗಿ ಮಾಡಿದ್ದಿದ್ದರೆ ಅವನ ಕಥೆಯೇ ಮುಗಿದುಹೋಗುತ್ತಿತ್ತು. ಅವನನ್ನು ಶ್ರೀರಾಮನೇ ಕೊಲ್ಲಬೇಕೆಂದು ವರ-ವಿದ್ದುದರಿಂದ ಬಹಳ ಬಲವಾಗಿ ಹೊಡಿಯಲಿಲ್ಲ, ಇರಲಿ.)

ಆದರೂ, ಅಬ್ಬಬ್ಬ, ಎಂಥಾ ಮುಷ್ಟಿಪ್ರಹಾರ ಅದು ! ರಾಕ್ಷಸಾಧಿಪ-ನಾದ ರಾವಣನ ಎದೆಯೇ ಬೆಟ್ಟದಂತೆ ವಿಶಾಲವಾಗಿತ್ತು. ಅವನ ಎದೆ ಗೂಡಿನ ಎಲುಬುಗಳೆಲ್ಲ ಉಬ್ಬಿಕೊಂಡು ಬೆಟ್ಟದ ಶಿಖರಗಳಂತೆ ದೃಢವಾಗಿ ಅಭೇದ್ಯವಾಗಿದ್ದುವು. ಎದೆಯ ಮೇಲೆ ಅವನು ಧರಿಸಿದ ಬಂಗಾರದ ಕವಚದ ಹೊದಿಕೆ ಬೇರೆ ಇತ್ತು. ಇಷ್ಟಾದರೂ ನಿನ್ನ ಮುಷ್ಟಿಯು ಆ ಹೊಡೆತಕ್ಕೆ ಎದೆಯಪಂಜರದ ಎಲುಬುಗಳೆಲ್ಲ ಜಜ್ಜಿಹೋಗಿ ಚೂರುಚೂರಾದುವು. ಎದೆಯನ್ನು ಆಚ್ಛಾದಿಸಿಕೊಂಡಿದ್ದ ಚಿನ್ನದ ಕವಚವೂ ನೆಜ್ಜುಗುಟ್ಟಿ ಡೊಂಕು ಡೊಂಕಾಗಿಹೋಯಿತು. ರಾವಣನ ಈ ಅವಸ್ಥೆಯನ್ನು ಕಂಡ ಜನಗಳಿಗೆ ಏನೋ ದಿಗ್ಭ್ರಮೆಯಾಗಿ ಅವರು ಏನೇನೋ ಊಹಿಸಿಕೊಂಡರೆಂದು ಕವಿ ಉತ್ಪ್ರೇಕ್ಷೆಮಾಡಿ ವರ್ಣಿಸುತ್ತಾರೆ.

ರಾವಣನ ಎದೆಯೇ ವಿಶಾಲವಾದ ಬೆಟ್ಟದಂತಿದೆ. ಅದರ ಮೇಲೆ ಬಂಗಾರದ ಕವಚದ ಹೊದಿಕೆಬೇರೆ ಇದೆ. ಜೊತೆಗೆ ಅದು ಅಡ್ಡಾದಿಡ್ಡಿ ಮಡಿಚಿ ಮುದಿರಿಕೊಂಡಿದೆ. ಎದೆಯ ಗೂಡಿನ ಎಲುಬುಗಳೆಲ್ಲ ಪುಡಿಪುಡಿ-ಯಾಗಿರುವುದರಿಂದ ದೊಡ್ಡ ಹಳ್ಳದಂತೆ ಕಾಣಿಸುತ್ತದೆ. ಅದರೊಳಗೆ ರಕ್ತ ಕಾಣಿಸುತ್ತಿದೆ. ಇದನ್ನೆಲ್ಲಾ ಕಂಡ ಜನಗಳು ರಾವಣನ ಮುರಿದ ಎದೆ-ಯನ್ನೇ ಮೇರುಪರ್ವತದ ತಪ್ಪಲಲ್ಲಿ (ಮೇರುಪರ್ವತವೂ ಚಿನ್ನದ ಪರ್ವತ) ಒಂದು ಕಡೆ ಹರಡಿರುವ ಕೆಂಪುನೀರಿನ ಕೆರೆಯೇ ಇರಬೇಕೆಂದು ಭ್ರಾಂತಿ-ಗೊಂಡರಂತೆ.

ಹನುಮಂತ, ಇದೀಗ ನಿನ್ನ ಮುಷ್ಟಿಯ ಪ್ರಭಾವ. ಹೇ ವಾನರ-ಪುಂಗವ, ಇಂಥಾ ನೀನು ನಿನ್ನ ಕೈಗಳಲ್ಲಿ ಧರಿಸಿರುವ ಚಿನ್ನದ ಕಡಗ-ಗಳಾದರೂ ಎಷ್ಟು ದಿವ್ಯವಾಗಿವೆ ! ಅವುಗಳು ಕೋಟಿಮಿಂಚುಗಳಂತೆ ಹೊಳೆ-ಯುತ್ತಾ ಥಳಥಳಿಸುತ್ತಿವೆ. ಕೈಗಳು ಅಲ್ಲಾಡಿದರೆ ಸಾಕು, ಆ

ಕೈಗಡಗಗಳ ಕಾಂತಿಯಿಂದ ಹತ್ತು ದಿಕ್ಕುಗಳೂ, ಮಿಂಚು ಹೊಳೆದರೆ ಹೇಗೆ ಬೆಳಕಿನಿಂದ ಜಗಮಗಿಸುವುವೋ, ಹಾಗೆ ಥಳಥಳಗೊಳ್ಳುವುವು. ಇಂಥಾ ದಿವ್ಯವಾದ ಕಡಗವನ್ನು ಧರಿಸಿದ ಮತ್ತು ಇಂಥಾ ಅಪಾರಶಕ್ತಿಯುಳ್ಳ ನಿನ್ನ ಮುಷ್ಟಿಯು ನನ್ನಂಥಾ ಅಲ್ಪನ ಇಷ್ಟಾರ್ಥವನ್ನು ನೆರವೇರಿಸಿಕೊಡಲು ಸಮರ್ಥವೆಂಬುದರಲ್ಲಿ ಏನು ಸಂದೇಹವಿದೆ? ನಿಸ್ಸಂದೇಹವಾಗಿ ಸರ್ವಥಾ ನಡೆಸಿಯೇಕೊಡುವುದೆಂದು ಪೂರ್ಣವಿಶ್ವಾಸವಿದೆಯೆಂದು ಭಾವ.

## ಶ್ಲೋಕ ಇಪ್ಪತ್ತೊಂದು. ಬ್ರಹ್ಮಪಟ್ಟದ ಅನುಗ್ರಹ ದೊರಕಿದ್ದು.

**235.** ಅವತಾರಿಕೆ—ಶ್ರುತಿಗೀತೆಯಲ್ಲಿ 'ನ ಪರಿಲಷಂತಿ ಕೇಚಿದ-ಪವರ್ಗಮಪೀಶ್ವರ ತೇ ಚರಣಸರೋಜಹಂಸಕುಲಸಂಗವಿಸೃಷ್ಟಗೃಹಾಃ' (ಭಾಗ. ೧೦/೮೪/೨೩-೨೯) 'ಹೇ ಭಗವಂತ ನಿನ್ನ ಪಾದಕಮಲಗಳ ಧ್ಯಾನ-ದಲ್ಲೇ ಮಗ್ನರಾದ ಕೆಲವು ಏಕಾಂತಭಕ್ತರು ನಿನ್ನ ಪ್ರೀತಿಯನ್ನಲ್ಲದೆ ಬೇರೆ ಮೋಕ್ಷ(ಅಪವರ್ಗ)ವನ್ನೂ ಸಹ ಬಯಸುವುದಿಲ್ಲ'ವೆಂದು ಹೇಳಿ-ದಂತೆ ಶ್ರೀರಾಮಚಂದ್ರನ ಅತ್ಯಂತಭಕ್ತಾಗ್ರೇಸರನಾದ ಹನುಮಂತ ಆ ಸ್ವಾಮಿಯ ಪರಮಪ್ರೀತಿಯನ್ನಲ್ಲದೆ ಬೇರೆ ಯಾವ ಪ್ರತಿಫಲವನ್ನೂ ಎಳ್ಳಷ್ಟೂ ಅಪೇಕ್ಷಿಸದಿದ್ದರೂ ಆ ಹನುಮಂತನ ಅಪಾರವಾದ ಅನನ್ಯ-ಸಾಧಾರಣವಾದ ನಿಷ್ಕಾಮಸೇವೆಗೆ ಮೆಚ್ಚಿದ ಮಹಾಪ್ರಭು ಶ್ರೀರಾಮಚಂದ್ರನೇ ಅತ್ಯಂತಪ್ರೀತನಾಗಿ ಹನುಮಂತನಿಗೆ ಮುಂದಿನ ಕಲ್ಪದಲ್ಲಿ ಸಹಭೋಗ ರೂಪ-ವಾದ ಬ್ರಹ್ಮಪಟ್ಟವನ್ನು ಅನುಗ್ರಹಿಸಿದನೆಂದು ಹೇಳಿ ರಾಮಾವತಾರದ ಮಹಿಮೆಯನ್ನೂ ಹನುಮದವತಾರದ ಚರಿತ್ರೆಯನ್ನೂ ಉಪಸಂಹಾರ-ಮಾಡುತ್ತಾರೆ (ಕಕ. ವಿ. ಛ). ನಿಮ್ಮ ಸೇವೆಯಿಂದ ಪ್ರೀತನಾದ ವಿಷ್ಣು ಬ್ರಹ್ಮತ್ವದ ವಿಷಯದಲ್ಲಿ ತಲೆಯ ಮೇಲೆ ಕೈಯಿಟ್ಟು ಸಂಪೂರ್ಣಾನುಗ್ರಹ ಮಾಡಿದರೆಂದು ಹನುಮಂತದೇವರಲ್ಲಿ ವಿಜ್ಞಾಪಿಸಿಕೊಳ್ಳುತ್ತಾರೆ (ಪುರಾ.) ಶ್ರೀರಾಮದೇವರು ಹನುಮಂತದೇವರಲ್ಲಿ ಅನುಗ್ರಹಿಸಿದ ರೀತಿಯನ್ನೂ ಹನುಮಂತದೇವರು ರಾಮದೇವರ ಅನುಗ್ರಹವನ್ನು ಸಂಪಾದಿಸಿದ ರೀತಿಯನ್ನೂ ಹೇಳುತ್ತಾರೆ.

**ದೇವ್ಯಾದೇಶಪ್ರಣೀತಿ—ದ್ರುಹಿಣ-ಹರ-ವರಾ-**
**ವಧ್ಯ-ರಕ್ಷೋ-ವಿಘಾತಾ-**
**ದ್ಯಾಸೇವ್ಯೋದ್ಯದ್ದಯಾರ್ದ್ರಃ ಸಹಭುಜಮಕರೋದ್**
**ರಾಮನಾಮಾ ಮುಕುಂದಃ ।**
**ದುಷ್ಪ್ರಾಪೇ ಪಾರಮೇಷ್ಠ್ಯೇ ಕರತಲಮತುಲಂ**
**ಮೂರ್ಧ್ನಿ ವಿನ್ಯಸ್ಯ ಧನ್ಯಂ**
**ತನ್ವನ್ ಭೂಯಃ ಪ್ರಭೂತ—ಪ್ರಣಯವಿಕಸಿತಾ-**
**ಬ್ಜೇಕ್ಷಣಸ್ತ್ವೇಕ್ಷಮಾಣಃ ॥ ೨೧ ॥**

**ಸೂಚನೆ**—ಈ ಶ್ಲೋಕದಲ್ಲೂ ರಾಮಪರಾರ್ಥ—ಹನುಮತ್ಪರಾರ್ಥ-ಗಳಿಗೆ ಪದಚ್ಛೇದದಲ್ಲೂ ಅನ್ವಯದಲ್ಲೂ ಬಹಳ ವ್ಯತ್ಯಾಸವಿರುವುದರಿಂದ ಎರಡನ್ನೂ ಬೇರೆಬೇರೆಯಾಗಿಯೇ ಕೊಟ್ಟಿದೆ.

**ರಾಮಪರವಾಗಿ ಪದವಿಭಾಗ, ಅನ್ವಯಾದಿಗಳು**

**ಪದವಿಭಾಗ**—ದೇವ್ಯಾ....ಹರ-ವರ ! ಅವಧ್ಯರಕ್ಷೋವಿಘಾತ ! ಆದ್ಯ ! ಆಸೇವ್ಯೋದ್ಯದ್ದಯಾರ್ದ್ರಃ, ಸಹಭುಜಂ, ಅಕರೋತ್, ರಾಮನಾಮಾ, ಮುಕುಂದಃ, ದುಷ್ಪ್ರಾಪೇ, ಪಾರಮೇಷ್ಠ್ಯೇ, ಕರತಲಂ, ಅತುಲಂ, ಮೂರ್ಧ್ನಿ, ವಿನ್ಯಸ್ಯ, ಧನ್ಯಂ, ತನ್ವನ್, ಭೂಯಃಪ್ರಭೂತ....ಬ್ಜೇಕ್ಷಣಃ, ತು, ಏಕ್ಷಮಾಣಃ ॥

**236 ರಾಮಪರವಾಗಿ ಶ್ಲೋಕದ ವಿಶ್ಲೇಷಣೆ**—ದೇವ್ಯಾ.... ಹರವರ, ಆವಧ್ಯರಕ್ಷೋವಿಘಾತ, ಆದ್ಯ ಎಂಬ ಮೂರು ರಾಮದೇವರಿಗೆ ಸಂಬೋಧನಾರೂಪ ವಿಶೇಷಣಗಳು. ರಾಮನಾಮಾ ಮುಕುಂದಃ ಎಂಬುದೇ ಕರ್ತೃಪದ. ಸಂಬೋಧನೆಗೆ ಅನುಕೂಲವಾಗುವಂತೆ ಭವಾನ್ ಎಂಬ ಪದ ಅಧ್ಯಾಹಾರಮಾಡಿಕೊಳ್ಳಬೇಕು. ಪಾರಮೇಷ್ಠ್ಯೇ ಸಹಭುಜಂ ಅಕರೋತ್ ಎಂಬುದೇ ಮುಖ್ಯವಾಕ್ಯ. ಅದಕ್ಕೆ ರಾಮನಾಮಕ ಮುಕುಂದನಾದ ನೀನು ಬ್ರಹ್ಮಪದವಿಯಲ್ಲಿ ಸಹಭೋಗವನ್ನು (ಅನುಗ್ರಹ)ಮಾಡಿದಿ—ಎಂದು ಅರ್ಥ. ಕರ್ತೃಪದಕ್ಕೆ ೧. ಆಸೇವ್ಯೋದ್ಯದ್ದಯಾರ್ದ್ರಃ, ೨ ಮೂರ್ಧ್ನಿ ಕರತಲಂ ವಿನ್ಯಸ್ಯ ಅತುಲಂ ಧನ್ಯಂ ತನ್ವನ್, ೩. ಭೂಯಃಪ್ರಭೂತ....ಬ್ಜೇಕ್ಷಣಃ,

೪. ಏಕ್ಷಮಾಣಃ ತು ಎಂದು ನಾಲ್ಕು ವಿಶೇಷಣಗಳು. ದುಷ್ಪ್ರಾಪೇ ಎಂಬುದು ಪಾರಮೇಷ್ಠ್ಯೇ ಎಂಬುದಕ್ಕೆ ವಿಶೇಷಣ. ಒಟ್ಟಿನಲ್ಲಿ ರಾಮಪರವಾಗಿ ದಂಡಾನ್ವಯ ಹೀಗಾಗುತ್ತದೆ :—

**ದಂಡಾನ್ವಯ**—1. ದೇವ್ಯಾದೇಶ....ಹರ-ವರ, 2. ಅವಧ್ಯರಕ್ಷೋ-ವಿಘಾತ, 3. ಆದ್ಯ (ಹೇ ರಾಮಚಂದ್ರ !) ರಾಮನಾಮಾ ಮುಕುಂದಃ ಭವಾನ್ ೧. ಆಸೇವ್ಯೋ....ದ್ರ್ರಃ, ೨. ಮೂರ್ಧ್ನಿ ಕರತಲಂ ವಿನ್ಯಸ್ಯ ಅತುಲಂ ಧನ್ಯಂ ತನ್ವನ್, ೩. ಭೂಯಃ ಪ್ರಭೂತ....ಬ್ಜೇಕ್ಷಣಃ, ೪. ಏಕ್ಷ-ಮಾಣಃ ತು (ತಂ ಎಂಬ ಯೋಗ್ಯ ಕರ್ಮಪದವನ್ನು ಅಧ್ಯಾಹಾರ ಮಾಡಿ-ಕೊಳ್ಳಬೇಕು.)

ದುಷ್ಪ್ರಾಪೇ ಪಾರಮೇಷ್ಠ್ಯೇ ಸಹಭುಜಂ ಅಕರೋತ್ ॥

ಇದರ ಅರ್ಥವು ತಿಳಿಯಬೇಕಾದರೆ ಕಠಿನ ಪದಗಳಿಗೆ ವಿವರಣೆ ಬೇಕಾ-ಗುತ್ತದೆ. ಆದಕಾರಣ ಮೊದಲು ಕಠಿನ ಪದಗಳ ಅರ್ಥವನ್ನು ವಿವರಿಸಿ ಆಮೇಲೆ ಅರ್ಥಕ್ಕೆ ಹೋಗುವೆನು.

**237. ಕಠಿನಪದಗಳ ವಿವರಣೆ—೧. ದೇವ್ಯಾದೇಶ ಇತ್ಯಾದಿ.** ದೇವ್ಯಾದೇಶ ಎಂದಾರಂಭಿಸಿ ದಯಾದ್ರ್ರಃವರೆಗೆ ಹನುಮತ್ಪರವಾಗಿ ಒಂದೇ-ಪದ ; ರಾಮಪರವಾಗಿ ದೇವ್ಯಾ....ವರ, ಅವಧ್ಯರಕ್ಷೋವಿಘಾತ, ಆದ್ಯ, ಆಸೇವ್ಯೋ....ದ್ರ್ರಃ ಎಂದು ಮೂರು ಪದಗಳಾಗುತ್ತದೆ. ಹನುಮತ್ಪರವಾಗಿ—ದೇವೀ—ಸೀತಾದೇವಿಗೆ, ಆದೇಶ—ರಾಮನ ಸಂದೇಶ ಮತ್ತು ದೇವಿ—ಸೀತಾ-ದೇವಿಯು, ಆದೇಶ—ರಾಮನಿಗೆ ಹೇಳಿಕಳುಹಿಸಿದ ಸಂದೇಶ ಎಂದು ಎರಡು ವಿಧ ಅರ್ಥವಾಗುತ್ತದೆ. ಪ್ರಣೀತಿ (ಪ್ರ+ನೀ, ಧಾತು+ಕ್ತಿನ್ ಪ್ರತ್ಯಯ) ಒಯ್ಯುವಿಕೆ, ಒಯ್ಯೋಣ, ದ್ರುಹಿಣ—ಬ್ರಹ್ಮದೇವರು. 'ಧಾತಾಬ್ಜ-ಯೋನಿರ್ದ್ರುಹಿಣೋ ವಿರಿಂಚಿಃ ಕಮಲಾಸನಃ'—ಎಂದು ಅಮರ. ದ್ರುಹ್ಯತಿ ದುಷ್ಟೇಭ್ಯ ಇತಿ ದ್ರುಹಿಣಃ ಎಂದರೆ ದುಷ್ಟರನ್ನು ದಂಡಿಸುವುದ-ರಿಂದ ಅವನಿಗೆ ದ್ರುಹಿಣನೆಂದು ಹೆಸರು. ದ್ರುಹ (ದಿವಾದಿ. ಪ.) ಧಾತುವಿಗೆ ಉಣಾದಿ ೨/೪೯ (ಬಹುಲಮನ್ಯತ್ರಾಪಿ) ಸೂತ್ರದಂತೆ ಇನನ್ ಪ್ರತ್ಯಯ ಬಂದಿದೆ. ಹರ ಎಂದರೆ ಈಶ್ವರ, ರುದ್ರ. 'ಹರಃ ಸ್ಮರಹರೋ ಭರ್ಗಃ'

—ಅಮರ. ಬ್ರಹ್ಮನೂ ರುದ್ರನೂ ಸುಲಭಸೇವೆಗೆ ವರಗಳನ್ನು ಕೊಡುವ-ರಾದ್ದರಿಂದ ರಾಕ್ಷಸರೆಲ್ಲರೂ ಹೆಚ್ಚಾಗಿ ಅವರಿಬ್ಬರನ್ನೇ ಮೊರೆಹೋಗುವರು. ಆದರೆ ಅವರಿಬ್ಬರ ವರಗಳನ್ನೂ ರಾಮದೇವರೂ ಕ್ವಚಿತ್ ಹನುಮಂತನೂ ಮುರಿಯಲು ಸಮರ್ಥರೆಂದು ತಾತ್ಪರ್ಯ ನಿರ್ಣಯದಲ್ಲಿ ಹೇಳಿದೆ. ಅದನ್ನೇ ದ್ರುಹಿಣ-ಹರ-ವರ-ಅವಧ್ಯ-ರಕ್ಷೋ-ವಿಘಾತ–ಬ್ರಹ್ಮನ ಮತ್ತು ರುದ್ರನ ವರಗಳಿಂದ ಅವಧ್ಯರಾದ ಅನೇಕ ರಾಕ್ಷಸರನ್ನು ಕೊಲ್ಲುವುದು ಎಂದರ್ಥ. **ರಕ್ಷಃ** ಶಬ್ದವು ಸಕಾರಾಂತ ನಪುಂಸಕಲಿಂಗಶಬ್ದ; ಇದಕ್ಕೆ ರಾಕ್ಷಸ ಎಂದೇ ಅರ್ಥ. 'ಘಾತೋನ್ಮಾಥ-ವಧಾ ಅಪಿ' ಎಂಬ ಅಮರದಂತೆ ಘಾತ, **ವಿಘಾತ** ಎರಡಕ್ಕೂ ವಧ ಎಂದೇ ಅರ್ಥ, ಇದು ಹನ್–ಕೊಲ್ಲು (ಅದಾ. ಪ.) ಧಾತು-ವಿನ ಕೃದಂತ ಭಾವನಾಮ. ಭಾವಾರ್ಥದಲ್ಲಿ ಘ ಞ್ ಪ್ರತ್ಯಯ (೩/೩/೧೮) ಬರಲು, 'ಹೋ ಹಂತೇಃ–' (೭/೩/೫೪) ಎಂಬ ಸೂತ್ರದಂತೆ ಹನ್‌ನ ಹಕಾರಕ್ಕೆ ಕುತ್ವವೂ (ಘಕಾರಾದೇಶವೂ) 'ಹನಸ್ತಃ–' (೭/೩/೩೨) ಎಂಬ ಸೂತ್ರದಂತೆ ನಕಾರಕ್ಕೆ ತಕಾರಾದೇಶವೂ ಆದಿವೃದ್ಧಿಯೂ ಬರಲು ಹನ್+ ಘಞ್–ಘನ್+ಅ–ಘಾತ್ +ಅ–ಘಾತ ಎಂದು ರೂಪವಾಯಿತು. ಆದಿ–ಇವೇ ಮೊದಲಾದ ಎಂದರೆ ಸೀತೆಗೆ (ಮತ್ತು ಸೀತೆಯ) ಸಂದೇಶ ಒಯ್ಯು-ವುದು, ಬ್ರಹ್ಮನ ಮತ್ತು ರುದ್ರನ ವರಗಳಿಂದ ಅವಧ್ಯರಾಗಿದ್ದ ಅನೇಕ ರಾಕ್ಷಸರನ್ನು ಕೊಲ್ಲುವುದು (ಇದರ ವಿವರಣೆ ಮುಂದೆ ತಾತ್ಪರ್ಯ ಬರೆಯು-ವಾಗ ಖಂಡ 243–(ರಲ್ಲಿ ಬರುವುದು) ಇವೇ ಮೊದಲಾದ, **ಆ-ಸೇವಾ** ಮಹತ್ತರವಾದ ಸೇವೆಯಿಂದ, **ಉದ್ಯತ್**–ಉದಯಿಸುತ್ತಿರುವ, **ದಯಾ**–ಕೃಪೆಯಿಂದ, **ಆರ್ದ್ರಃ**–ಒದ್ದೆಯಾದ (ತುಂಬಿದ) ಮನಸ್ಸುಳ್ಳವರಾದ–ಎಂದು ರಾಮದೇವರ ವಿಶೇಷಣ.

ಇನ್ನು ರಾಮದೇವರ ಪರವಾಗಿ ಅರ್ಥಗಳು—ದೇವೀ ಎಂದರೆ ಲಕ್ಷ್ಮೀ-ದೇವಿ. ದ್ರುಹಿಣ-ಹರ ಶಬ್ದಗಳಿಗೆ ಹಿಂದಿನಂತೆ ಬ್ರಹ್ಮ-ರುದ್ರರು ಎಂದೇ ಅರ್ಥ ; ಆದೇಶ ಎಂದರೆ ಭಗವದಾಜ್ಞೆಯಿಂದ, ಪ್ರಣೀತಿ ಎಂದರೆ ಸೃಷ್ಟ್ಯಾದಿಕರ್ಮ-ಗಳಲ್ಲಿ ನಿಯೋಜನೆ ಎಂದರ್ಥ. ಅರ್ಥಾತ್ ನಖಸ್ತುತಿಯ ವರ್ಣನೆಯಲ್ಲಿ ೧೨೦-೧೨೨ನೇ ಪುಟಗಳಲ್ಲಿ ನಿರೂಪಣೆ ಮಾಡಿರುವಂತೆ ಭಗವಂತನೇ ಬ್ರಹ್ಮ-ರುದ್ರರಲ್ಲಿ ನಿಂತು ಸೃಷ್ಟ್ಯಾದಿಕಾರ್ಯಗಳನ್ನು ಮಾಡಿ-ಮಾಡಿಸುತ್ತಾನೆ. ಹೀಗೆ

ಲಕ್ಷ್ಮೀಗಿಂತಲೂ, ಭಗವದಾಜ್ಞೆಯಿಂದ ನಿಯುಕ್ತರಾದ (ಆದೇಶ-ಪ್ರಣೀತಿ) ಬ್ರಹ್ಮ-ರುದ್ರರಿಗಿಂತಲೂ, ವರ–ಶ್ರೇಷ್ಠನಾದ ಎಂಬುದು ದೇವ್ಯಾ....ಹರ-ವರ ಎಂಬುದರ ಅರ್ಥ. ಅವಧ್ಯರಕ್ಷೋವಿಘಾತ - ಅವಧ್ಯರಾಗಿದ್ದ ಅನೇಕ ರಾಕ್ಷಸರನ್ನು ಕೊಂದವನೇ. ಆದ್ಯ (ಆದೌಭವಃ) ಅನಾದಿಪುರುಷನೇ. ಆ-ಸೆವ್ಯೋದ್ಯದ್ದಯಾರ್ದ್ರಃ ಎಂಬುದಕ್ಕೆ ಹಿಂದಿನಂತೆಯೇ ಅರ್ಥ.

೨. **ಸಹಭುಜಂ** ಎಂಬುದು ಸಹಭುಜ್ ಎಂಬ ಜಕಾರಾಂತ ಪುಲ್ಲಿಂಗ ಶಬ್ದದ ದ್ವಿತೀಯೈಕವಚನರೂಪ. ಸಹ ಎಂದರೆ ಜೊತೆಯಲ್ಲಿ, ಭುಜ್ ಎಂದರೆ ಭುಜಿಸು–ಅನುಭೋಗಿಸು; ಅನುಭವಿಸುವುದು ಎಂದು ಆ-ಪಾತತಃ ಅರ್ಥ. ಇದರ ವಿವರವು ತಾತ್ಪರ್ಯನಿರ್ಣಯದಲ್ಲಿ (೮ಅಧ್ಯಾ.-೨೪೨ಶ್ಲೋ.) ಹೇಳಿರುವ

> ಭೋಗಾಶ್ಚ ಯೇ ಯಾನಿ ಚ ಕರ್ಮಜಾತಾ–
> ನ್ಯನಾದ್ಯನಂತಾನಿ ಮಮೇಹ ಸಂತಿ ।
> ಮದಾಜ್ಞಯಾ ತಾನ್ಯಖಿಲಾನಿ ಸಂತಿ
> ಧಾತುಃ ಪದೇ, ತತ್ ಸಹಭೋಗನಾಮ ॥

ಎಂಬ ರಾಮನ ವಚನದಿಂದ ತಿಳಿಯುತ್ತದೆ. ಇದಕ್ಕೆ ಅರ್ಥವೇನೆಂದರೆ —ಈ ಜಗತ್ತಿನಲ್ಲಿ ಅನಂತ ಪ್ರಾಣಿಗಳು ಮಾಡುವ ಸಕಲ ಪುಣ್ಯಕರ್ಮಗಳೂ ಸರ್ವಪ್ರೇರಕನಾದ್ದರಿಂದ ಅನಾದಿಕಾಲದಿಂದಲೂ ನನಗೇ (ಎಂದರೆ ರಾಮನಿಗೇ) ಸೇರಿದ್ದು. ಆಯಾಯಾ ಬ್ರಹ್ಮಕಲ್ಪದಲ್ಲಿ ಆಯಾ ಬ್ರಹ್ಮನೂ ಆ ಪ್ರಾಣಿ-ಗಳಲ್ಲಿದ್ದು ನನ್ನಾಜ್ಞೆಯಂತೆ ಆ ಸಕಲ ಪುಣ್ಯಗಳನ್ನೂ ಪ್ರೇರಿಸುವುದರಿಂದ ಅವನಿಗೂ ನನ್ನ ಜೊತೆಯೇ ಸೇರುತ್ತದೆ. ಈ ಪುಣ್ಯಗಳ ಸುಖಾನುಭವವೂ ಮುಖ್ಯವಾಗಿ ನಮಗೆ ಸೇರಿ ಕಿಂಚಿದಂಶ ಮಾತ್ರ ಆಯಾ ಪ್ರಾಣಿಗಳಿಗೆ ಸೇರಿರು-ತ್ತದೆ. ಹೀಗೆ ಬ್ರಹ್ಮಪದವಿಯಲ್ಲಿರುವವನು ಸಕಲ ಪ್ರಾಣಿಗಳು ಮಾಡುವ ಸಮಸ್ತ ಪುಣ್ಯಕರ್ಮಗಳ ಹೆಚ್ಚು ಭಾಗ ಸುಖಗಳನ್ನೂ ನನ್ನ ಜೊತೆಯೇ ಅನುಭವಿಸುವುದರಿಂದ ಅದಕ್ಕೆ ಸಹಭೋಗವೆಂದು ಹೆಸರು. ಸಹಭುಜಂ ಎಂದರೆ ಸಹಭೋಗವನ್ನು ಎಂದೇ ಅರ್ಥ. **ರಾಮನಾಮಾ** ಶಬ್ದವು ರಾಜನ್ ಶಬ್ದದಂತೆ ನಡೆಯುತ್ತದೆ. ರಾಮ–ಇತಿ ನಾಮ ಯಸ್ಯ ಸಃ ರಾಮ ಎಂದು ಹೆಸರುಳ್ಳ ಪ್ರಖ್ಯಾತನಾದ ಎಂದರ್ಥ.

೩. **ಪಾರಮೇಷ್ಠ್ಯೇ**—'ಬ್ರಹ್ಮಾತ್ಮಭೂಃ ಸುರಜ್ಯೇಷ್ಠಃ ಪರಮೇಷ್ಠೀ ಪಿತಾಮಹಃ' ಎಂಬ ಅಮರದಂತೆ ಪರಮೇಷ್ಠೀ ಎಂದರೆ ಬ್ರಹ್ಮದೇವರು. ಪರಮೇ-ಜೀವಕೋಟಿಯಲ್ಲಿ ಸರ್ವೋತ್ತಮವಾದ ಸ್ಥಾನದಲ್ಲಿ, ಷ್ಠೀ (ಸ್ಥಾ) ಎಂದರೆ ಇರುವವನು ಎಂದರ್ಥ. 'ಪರಮೇ ಕಿತ್' (ಸ್ಥಃ) ಎಂಬ ಉಣಾದಿ (೪/೧೦) ಸೂತ್ರದಂತೆ ಇನಿ ಪ್ರತ್ಯಯವೂ 'ತತ್ಪುರುಷೇಕೃತಿ-' (೬/೩/೧೪) ಎಂಬ ಸೂತ್ರದಂತೆ ಅಲುಕ್ ಸಮಾಸವೂ 'ಸ್ಥಾಸ್ಥಿನ್—' ಎಂಬ ವಾರ್ತಿಕ ದಂತೆ ಷತ್ವವೂ ಬಂದು ಪರಮೇಷ್ಠೀ ಎಂದಾಗಿದೆ. ಇದು ಗುಣೀ ಎಂಬಂತೆ ನಕಾರಾಂತ ಶಬ್ದ. ಪರಮೇಷ್ಠಿನಃ ಇದಂ ಪಾರಮೇಷ್ಠ್ಯಂ ಪದಂ, ತಸ್ಮಿನ್, 'ತಸ್ಯೇದಂ' (೪/೩/೧೨೦) ಇತ್ಯಣ್ ॥ ಕಕ. ವಿ. ಪ್ರಕಾರ ಭಾವಾರ್ಥದಲ್ಲಿ ಅಣ್ ಪರಮೇಷ್ಠಿನೋ ಭಾವಃ ಪಾರಮೇಷ್ಠ್ಯಮ್ ತಸ್ಮಿನ್ । ಪಾರಮೇ-ಷ್ಠ್ಯಂ ಪದಂ ಎಂದರೆ ಬ್ರಹ್ಮನ ಪದವಿ ಅಥವಾ ಪಟ್ಟ ಎಂದರ್ಥ.

೪. **ಧನ್ಯಂ ತನ್ವನ್**—ಸುಕೃತೀ ಪುಣ್ಯವಾನ್ ಧನ್ಯಃ ಎಂಬ ಅಮರದಂತೆ ಪುಣ್ಯವಂತ, ಕೃತಕೃತ್ಯ ಕೃತಾರ್ಥ ಎಂಬುದು **ಧನ್ಯ** ಶಬ್ದಾರ್ಥ. ಧನ ಶಬ್ದದ ಮೇಲೆ 'ಧನಗಣಂ ಲಬ್ಧಾ' (ಪಾ. ೪/೪/೮೪) ಎಂಬ ಸೂತ್ರ-ದಂತೆ ಯತ್ ಪ್ರತ್ಯಯಃ ಬಂದಿದೆ. **ತನ್ವನ್** ಎಂಬುದು ತನು ವಿಸ್ತಾರೇ (ತ. ಉ.) ಎಂಬ ಧಾತುವಿನ ಶತೃಂತ (ವರ್ತಮಾನ ಕೃದಂತ) ಪುಲ್ಲಿಂಗ ರೂಪ; ಕುರ್ವಾಣಃ-(ಕಕ. ವಿ. ಛ.) ಮಾಡುವವನಾಗಿ ಎಂದರ್ಥ.

೫. **ಭೂಯಃ ಪ್ರಭೂತ**—ಪ್ರಭೂತಂ ಪ್ರಚುರಂ ಪ್ರಾಜ್ಯಂ.... ಸ್ಥಿರಂ ಭೂಯಶ್ಚ ಭೂರಿ ಚ' ಎಂಬ ಅಮರದಂತೆ ಭೂಯಃ, ಪ್ರಭೂತ ಎರಡಕ್ಕೂ ಬಹಳ, ಅತಿಯಾದ ಎಂದೇ ಅರ್ಥ. ಆದರೆ ಇಲ್ಲಿ 'ಭೂಯಃ ಸ್ಯಾದಸಕೃನ್ಮುಹುಃ' ಎಂಬ ಹಲಾಯುಧಕೋಶದಂತೆ ಭೂಯಃ ಎಂಬುದಕ್ಕೆ ಪುನಃ ಪುನಃ, ಮತ್ತೆ ಮತ್ತೆ ಎಂದೇ ಅರ್ಥ ಹೇಳಬೇಕು; ಇಲ್ಲದಿದ್ದರೆ ಅಸ್ವಾರಸ್ಯ ದೋಷ ಬರುತ್ತದೆ. ಆದ್ದರಿಂದ ಕಕ. ವಿ. ಛ. ಎಲ್ಲರೂ ಹೀಗೆಯೇ ಅರ್ಥ ಮಾಡಿದ್ದಾರೆ. **ಪ್ರಭೂತ**-ಹೆಚ್ಚಾದ, ಪ್ರಣಯ (ಕಕ.-ವಿ. ಛ.) ಸ್ನೇಹದಿಂದ (ಪುರಾ.) ಪ್ರೀತಿಯಿಂದ, ವಿಕಸಿತ-ಅರಳಿದ, ಅಬ್ಜ-

ಈಕ್ಷಣಃ–ಕಮಲದಂತಿರುವ ಕಣ್ಣುಳ್ಳವನಾಗಿ (ಎಂಬುದು ಉಭಯ-ಪರವಾಗಿ ಒಂದೇ ಅರ್ಥ.) ರಾಮನಿಗೆ ವಿಶೇಷಣ. 'ಈಕ್ಷಣಂ ಚಕ್ಷುರಕ್ಷಿಣೀ' ಅಮರ ; ಯಾವುದರಿಂದ ನೋಡು (ಈಕ್ಷ್)ವೆವೋ ಅದು ಈಕ್ಷಣಂ-ಕಣ್ಣು.

೬. ತ್ವೇಕ್ಷಮಾಣಃ ಎಂಬಲ್ಲಿ ಹನುಮತ್ಪರವಾಗಿ ತ್ವಾ–ನಿನ್ನನ್ನು, ಈಕ್ಷಮಾಣಃ–ನೋಡಿದವನಾಗಿ (ಈಕ್ಷ್–ನೋಡು ಧಾತುವಿನ ಶಾನಚ್ ರೂಪ, ವರ್ತಮಾನ ಕೃದಂತ ರೂಪ) ಎಂದು ಪದಚ್ಛೇದ ಮಾಡಿ ಅರ್ಥಹೇಳಬೇಕು. ರಾಮಪರವಾಗಿ ತು+ಆ+ಈಕ್ಷಮಾಣಃ ಎಂದು ಪದಚ್ಛೇದ; ತುಕಾರಕ್ಕೆ ಏವಕಾರಾರ್ಥ (ಪುರಾ.) ; ಆ–ಚೆನ್ನಾಗಿ, ಈಕ್ಷಮಾಣಃ–ನೋಡಿದವನಾಗಿ. ಆ+ಈ ಎಂಬುದು ಸೇರಿ ಏಕ್ಷಮಾಣಃ ತು–ಏಕ್ಷಮಾಣಸ್ತು ಎಂದಾಗುತ್ತದೆ. ಅವಕ್ಕೆ ಚೆನ್ನಾಗಿ ನೋಡುತ್ತಿರುವವನಾಗಿ ಎಂದೇ ಅರ್ಥ.

ಈಗ ರಾಮಪರವಾಗಿ, ಅನ್ವಯ ಹಿಂದೆಯೇ (ಖಂಡ 236) ಹೇಳಿರು-ವುದರಿಂದ, ಅನ್ವಯಾರ್ಥಕ್ಕೆ ಹೋಗೋಣ.

**238. ರಾಮಪರವಾಗಿ ಅನ್ವಯಾರ್ಥ**—1. ದೇವ್ಯಾ....ವರ–ದೇವೀ–ಲಕ್ಷ್ಮೀದೇವಿ, ಆದೇಶ–ಭಗವಂತನ ಆಜ್ಞೆಯಂತೆ, ಪ್ರಣೀತಿ–ಸೃಷ್ಟ್ಯಾದಿ ಕಾರ್ಯಗಳಲ್ಲಿ ನಿಯಮಿಸಲ್ಪಡುವ, ದ್ರುಹಿಣ–ಬ್ರಹ್ಮದೇವರು, ಹರ-ರುದ್ರದೇವರು, ಮೊದಲಾದ ಎಲ್ಲ ದೇವತೆಗಳಿಗಿಂತಲೂ, ವರ–ಶ್ರೇಷ್ಠನಾದ, 2. ಅವಧ್ಯ....ಘಾತಃ—ವಧ್ಯ–ಬ್ರಹ್ಮರುದ್ರರ ವರಗಳಿಂದ ಸಾವು ಇಲ್ಲದೇ ಇದ್ದ, ರಕ್ಷಃ–ಅನೇಕ ರಾಕ್ಷಸರನ್ನು, ವಿಘಾತ–ಸಂಹಾರ ಮಾಡಿದ, 3. ಆದ್ಯ–ಆದಿಪುರುಷನಾದ ಹೇ ರಾಮಚಂದ್ರ ! ರಾಮ-ನಾಮಾ–ರಾಮನೆಂದು ಪ್ರಸಿದ್ಧನಾದ, ಮುಕುಂದಃ–ವಿಷ್ಣುವಾದ (ಭವಾನ್)–ನೀನು, ೧. ಆಸೇವೋ....ದ್ರ್ರಃ–ಆಸೇವಾ–ಬಹಳ ಸೇವೆ ಮಾಡಿದ್ದರಿಂದ, ಉದ್ಯತ್–ಉದಯಿಸುತ್ತಿರುವ, ದಯಾ–ಕೃಪೆಯಿಂದ, ಆರ್ದ್ರಃ–ಒದ್ದೆಯಾದ ಮನಸ್ಸುಳ್ಳವನಾಗಿ, ೨. ಮೂರ್ಧ್ನಿ–ನೆತ್ತಿಯ ಮೇಲೆ, ಕರತಲಂ–ಹಸ್ತಪ್ರದೇಶ-ವನ್ನು, ವಿನ್ಯಸ್ಯ–ಇಟ್ಟು, ಅತುಲಂ–ಭೃತ್ಯವರ್ಗದಲ್ಲಿ ಅಸದೃಶನಾದ ಇವನನ್ನು (ಹನುಮಂತನನ್ನು), ಧನ್ಯಂ–ಕೃತಾರ್ಥನನ್ನಾಗಿ, ತನ್ವನ್–ಮಾಡುತ್ತ ೩. ಭೂಯಃ....ಚ್ಛೇಕ್ಷಣಃ–ಭೂಯಃ–ಪುನಃ ಪುನಃ, ಪ್ರಭೂತ–ಅತ್ಯಧಿಕ-

ವಾದ, ಪ್ರಣಯ–ಸ್ನೇಹದಿಂದ (ಪ್ರೀತಿಯಿಂದ), ವಿಕಸಿತ–ಅರಳಿದ, ಅಬ್ಜ–ಕಮಲಗಳಂತಿರುವ, ಈಕ್ಷಣಃ–ಕಣ್ಣುಗಳುಳ್ಳವನಾಗಿ, ೪. ವೀಕ್ಷಮಾಣಃ ತು–ಚೆನ್ನಾಗಿ ನೋಡುತ್ತಿರುವವನೇ ಆಗಿ (ವಾತ್ಸಲ್ಯಾತಿಶಯವೇ ಹೀಗೆ ನೋಡು-ವುದಕ್ಕೆ ಕಾರಣವೆಂಬುದನ್ನು ತುಕಾರವು ಸೂಚಿಸುತ್ತದೆ.) (ತಂ–ಆ ಹನು-ಮಂತನನ್ನು) ದುಷ್ಪ್ರಾಪೇ–(ರುದ್ರಾದಿದೇವತೆಗಳಿಂದಲೇ) ಹೊಂದಲಶಕ್ಯವಾದ ಪಾರಮೇಷ್ಠ್ಯೇ–ಬ್ರಹ್ಮಪಟ್ಟದಲ್ಲಿ, ಸಹಭುಜಂ–ತನ್ನ ಜೊತೆಯಲ್ಲೇ ಸಕಲ ಪ್ರಾಣಿಗಳ ಪುಣ್ಯಕರ್ಮಗಳ ಸುಖವನ್ನು ಅನುಭವಿಸುವ ಸಯೋಗವೆಂಬ ಸಹಭೋಗವನ್ನು, ಅಕರೋತ್–ಅನುಗ್ರಹಿಸಿದನು.

**239. ಹನುಮತ್ಪರವಾಗಿ ಅನ್ವಯಾರ್ಥಗಳು**—ಶ್ಲೋಕದ ಕಡೆಯಲ್ಲಿ ತ್ವಾ ಈಕ್ಷಮಾಣಃ–ನಿನ್ನನ್ನು ನೋಡುವವನಾಗಿ ಎಂದು-ಬಂದಿರು-ವುದರಿಂದ ಹೇ ಹನುಮಾನ್ ಎಂಬ ಸಂಬೋಧನಾ ಪದವನ್ನು ಮೊದಲು ಅಧ್ಯಾಹಾರ ಮಾಡಿಕೊಳ್ಳಬೇಕು. ಹನುಮತ್ಪರ ಅರ್ಥ ಹೇಳುವಾಗಲೂ ರಾಮನಾಮಾ ಮುಕುಂದಃ ದುಷ್ಪ್ರಾಪೇ ಪಾರಮೇಷ್ಠ್ಯೇ ಸಹಭುಜಂ ಅಕ-ರೋತ್ ಎಂಬುದೇ ಪ್ರಧಾನವಾಕ್ಯ; ಈ ಅರ್ಥದಲ್ಲಿ ತ್ವಾ–ನಿನ್ನನ್ನು ಎಂಬುದು ಕರ್ಮ. ಮುಕುಂದಃ ಎಂಬುದಕ್ಕೆ ೧. ದೇವ್ಯಾ....ದಯಾರ್ದ್ರಃ ೨. ಅತುಲಂ ಕರತಲಂ ಮೂರ್ಧ್ನಿ ವಿನ್ಯಸ್ಯ ಧನ್ಯಂ ತನ್ವನ್, ೩. ಭೂಯಃ ಪ್ರಭೂತ....ಬ್ಜೇಕ್ಷಣಃ ೪. ಈಕ್ಷಮಾಣಃ ಎಂದು ನಾಲ್ಕು ವಿಶೇಷಣಗಳು. ಛಲಾರಿಯವರು ನಾಲ್ಕೂ ವಿಶೇಷಣಗಳನ್ನು ಹೇಳಿ ಕೊನೆಗೆ ಪ್ರಧಾನವಾಕ್ಯ ಹೇಳಿ ಅನ್ವಯ ತೋರಿಸಿದ್ದಾರೆ. ಕಕ. ಮತ್ತು ವಿ. ಎರಡೂ ದುಷ್ಪ್ರಾಪೇ ಪಾರಮೇಷ್ಠ್ಯೇ ಎಂಬುದನ್ನು ಕರತಲಂ ವಿನ್ಯಸ್ಯ ಎಂಬುದರೊಡನೆ ಜೋಡಿ-ಸುತ್ತಾರೆ. ಮತ್ತು ಮೊದಲ ಮೂರು ವಿಶೇಷಣಗಳನ್ನು ರಾಮನಾಮಾ ಎಂಬುದಕ್ಕೆ ಹಿಂದೆ ಸೇರಿಸಿ ಈಕ್ಷಮಾಣಃ ಎಂಬುದನ್ನು ಮಾತ್ರ ಸಹಭುಜಂ ಅಕರೋತ್ ಎಂಬುದರ ಹಿಂದೆ ಸೇರಿಸುತ್ತಾರೆ. ಪುರಾ. ರಾಮನಾಮಾ ಮುಕುಂದಃ ಮೊದಲೇ ಹೇಳಿ ಅನಂತರ ನಾಲ್ಕು ವಿಶೇಷಣಗಳನ್ನು ಅನ್ವಯ ಮಾಡಿ ಕೊನೆಗೆ ಪಾರಮೇಷ್ಠ್ಯೇ ಸಹಭುಜಂ ಅಕರೋತ್ ಹೇಳಿ ಮುಗಿಸು-ತ್ತಾರೆ. ಅನ್ವಯ ಹೇಗೆ ಮಾಡಿದರೂ ಅರ್ಥವೊಂದೇ ನಾವು ಪುರಾ.

ಕ್ರಮವನ್ನು ಅನುಸರಿಸಿ ಅನ್ವಯ ಮಾಡಿದ್ದೇವೆ. (ರಾಮನಾಮಾ ಮುಕುಂದಃ ಎಂಬುದನ್ನು ಮೊದಲು ಹೇಳದೆ ಈಕ್ಷಮಾಣಃ ಹೇಳಿದ ಬಳಿಕ ಹೇಳಿದರೆ ಛಲಾರೀ ಕ್ರಮವೇ ಆಗುತ್ತದೆ.)

**ದಂಡಾನ್ವಯ**—(ಹೇ ಹನುಮನ್ !) ರಾಮನಾಮಾ ಮುಕುಂದಃ ೧. ದೇವ್ಯಾ....ದಯಾರ್ದ್ರಃ, ೨. ಅತುಲಂ ಕರತಲಂ ಮೂರ್ಧ್ನಿ ವಿನ್ಯಸ್ಯ ಧನ್ಯಂ ತನ್ವನ್, ೩. ಭೂಯಃ ಪ್ರಭೂತ....ಕ್ಷಣಃ, ೪. ಈಕ್ಷಮಾಣಃ ತ್ವಾ ದುಷ್ಪ್ರಾಪೇ ಪಾರಮೇಷ್ಠ್ಯೇ ಸಹಭುಜಂ ಅಕರೋತ್.

**ಅನ್ವಯಾರ್ಥ**—ಹೇ ಹನುಮನ್-ಎಲೈ ಹನುಮಂತನೇ ! ರಾಮ-ನಾಮಾ ಮುಕುಂದಃ-ಶ್ರೀ ರಾಮಚಂದ್ರನೆಂಬ ಶ್ರೀ ವಿಷ್ಣುವು, ೧. ದೇವ್ಯಾ ....ದಯಾರ್ದ್ರಃ-ದೇವೀ-ಆದೇಶ-ಪ್ರಣೀತಿ-ಶ್ರೀರಾಮನ ಸಂದೇಶವನ್ನು ಸೀತಾ-ದೇವಿಗೆ ಮುಟ್ಟಿಸಿದ್ದು ಮತ್ತು ಸೀತಾದೇವಿಯ ಸಂದೇಶವನ್ನು ರಾಮನಿಗೆ ಮುಟ್ಟಿಸಿದ್ದು (ಎಂದು ಎರಡು ಪ್ರಕಾರ ಅರ್ಥ), ದ್ರುಹಿಣ-ಬ್ರಹ್ಮದೇವರ ಮತ್ತು, ಹರ-ರುದ್ರದೇವರ, ವರ-ವರಗಳಿಂದ, ಅವಧ್ಯ-ಅವಧ್ಯರಾಗಿದ್ದ, ರಕ್ಷಃ-ಅಕ್ಷಕುಮಾರಾದಿ ರಾಕ್ಷಸರನ್ನು, ವಿಘಾತ-ಕೊಂದುದೇ, ಆದಿ-ಮೊದ-ಲಾದ, ಆಸೇವಾ-ಮಹತ್ತರವಾದ ಸೇವೆಗಳಿಂದ (ಕಕ. ಅವಿಚ್ಛಿನ್ನ ಶುಶ್ರೂಷೆ-ಯಿಂದ), ಉದ್ಯತ್-ಅಭಿವ್ಯಕ್ತವಾದ, ದಯಾ-ಕೃಪೆಯಿಂದ, ಆರ್ದ್ರಃ-ಒದ್ದೆಯಾದ ಹೃದಯವುಳ್ಳವನಾಗಿ (ಕಕ. ಸಿಕ್ತನಾಗಿ), ೨. ಅತುಲಂ (ಕಕ.) ಸಮಾಧಿಕರಹಿತವಾದ (ವಿ. ಛ. ಪುರಾ.) ಅಸದೃಶವಾದ, ಕರತಲಂ-ಅಂಗೈ-ಯನ್ನು, ಮೂರ್ಧ್ನಿ-ನಿಮ್ಮ ನೆತ್ತಿಯ ಮೇಲೆ, ವಿನ್ಯಸ್ಯ-ಇಟ್ಟು, ಧನ್ಯಂ ತನ್ವನ್-ಕೃತಾರ್ಥನನ್ನಾಗಿ ಮಾಡುತ್ತಾ, ೩. ಭೂಯಃ-ಪುನಃ, ಪ್ರಭೂತ.... ಬ್ಜೇಕ್ಷಣಃ—ಪ್ರಭೂತ-ಅತ್ಯಧಿಕವಾದ, ಪ್ರಣಯ-ಸ್ನೇಹದಿಂದ, ಅಥವಾ ಪ್ರೀತಿಯಿಂದ, ವಿಕಸಿತ-ಅರಳಿದ, ಅಬ್ಜೇಕ್ಷಣ-ನೇತ್ರಕಮಲವುಳ್ಳವನಾಗಿ (ಎಂದರೆ ಪ್ರಸಾದಾಭಿಮುಖನಾಗಿ), ೪. ಈಕ್ಷಮಾಣಃ-(ನಿನ್ನನ್ನೇ) ನೋಡುತ್ತಾ (ಇದು ಸಂತೋಷಾತಿರೇಖವನ್ನು ಸೂಚಿಸುತ್ತದೆ), ತ್ವಾ-ನಿನ್ನ-ನ್ನು, ದುಷ್ಪ್ರಾಪೇ-ಬೇರೆ ಯಾರಿಗೂ ಅಲಭ್ಯವಾದ, ಪಾರಮೇಷ್ಠ್ಯೇ-ಬ್ರಹ್ಮಪಟ್ಟದಲ್ಲಿ, ಸಹಭುಜಂ ತನ್ನೊಡನೆಯೇ ಸುಖವನ್ನು ಅನುಭವಿಸುವ

ಯೋಗವನ್ನು (ಪುರಾ.) ತನ್ನಿಂದ ಕೂಡಿ ವಿಷಯಾನುಭವ ಮಾಡುವವನಾಗಿ, ಅಕರೋತ್–ಮಾಡಿದನು.

ಈ ಹಿಂದಿನ ಮೂರು ಶ್ಲೋಕಗಳ ಭಾವಾರ್ಥವನ್ನು ಗ್ರಹಿಸಲು ಹೇಗೆ ರಾಮಾಯಣೋಕ್ತ ಪ್ರಸಂಗಗಳ ಜ್ಞಾನವು ಅವಶ್ಯವಾಗಿತ್ತೋ ಈ ಶ್ಲೋಕದಲ್ಲಿ ಹೇಳಿದ ಪ್ರಮೇಯಗಳು ಅರ್ಥವಾಗುವುದಕ್ಕೂ ಅನೇಕ ವಿಚಾರಗಳ ಜ್ಞಾನ ಬೇಕೇ ಬೇಕು. ಈಗ ಮೊದಲು ಆ ವಿಶೇಷ ವಿಚಾರಗಳನ್ನು ತಿಳಿಸಿ ಕೊನೆಗೆ ಭಾವಾರ್ಥಕ್ಕೆ ಹೋಗುವೆವು.

### ವಿಶೇಷ ವಿಚಾರಗಳು.

**240. ದೇವ್ಯಾದೇಶ ಪ್ರಣೀತಿಃ**—ಪ್ರಾಯಶಃ ಇಡೀ ಸುಂದರ-ಕಾಂಡದ ಕಥೆಯೇ ಈ ಶಬ್ದಾವಳಿಯಲ್ಲಿ ಅಡಗಿದೆಯೆನ್ನಬಹುದು. ಹನುಮಂತ ಸಮುದ್ರ ಲಂಘಿಸಿದ್ದು, ಲಂಕೆಗೆ ಹೋದದ್ದು, ಸೀತೆ ಹುಡುಕಿದ್ದು, ಎಲ್ಲವೂ ಸೀತೆಗೆ ರಾಮನ ಸಂದೇಶವನ್ನು ಮುಟ್ಟಿಸುವುದಕ್ಕಾಗಿಯೇ. ಅವಳ ಆ ಸಂದೇಶ ಮುಟ್ಟಿಸಿದ ಗುರುತಿಗಾಗಿ ಸೀತಾಸಂದೇಶವನ್ನು ರಾಮನಿಗೆ ಮುಟ್ಟಿ-ಸುವುದೂ ಅವಶ್ಯವಾಗಿತ್ತು. ಹೀಗೆ ಈ ಶಬ್ದಾವಳಿಗೆ ಎರಡೂ ಅರ್ಥಗಳು ವಿಭಕ್ತಿಭೇದದಿಂದ ಕೂಡುತ್ತವೆ.

1. ದೇವ್ಯೈ ರಾಮಸ್ಯ ಆದೇಶಃ ದೇವ್ಯಾದೇಶಃ ಎಂದು ಮೊದಲನೇ ಅರ್ಥದಲ್ಲಿ ಚತುರ್ಥೀತತ್ಪುರುಷ ಸಮಾಸ.

2. ರಾಮಂ ಪ್ರತಿ ದೇವ್ಯಾಃ ಆದೇಶಃ ದೇವ್ಯಾದೇಶಃ ಎಂದು ಷಷ್ಠೀ-ತತ್ಪುರುಷ ಮುಂದೆ—ದೇವ್ಯಾದೇಶಸ್ಯ ಪ್ರಣೀತಿಃ–ನಯನಂ–ದೇವ್ಯಾದೇಶ-ಪ್ರಣೀತಿಃ ಎಂದು ವಿಗ್ರಹ. ಇದು ವ್ಯಾಕರಣಾಂಶವಾಯಿತು. ಈಗ ಈ ಸಂಬಂಧಿ ಕಥಾನಿರೂಪಣಗೆ ಹೋಗೋಣ.

**241. ಸಂದೇಶ ಕೊಂಡೊಯ್ದ ವಿಚಾರ**—ತಾತ್ಪರ್ಯನಿರ್ಣಯದ ಪ್ರಕಾರ ಅಶೋಕವನದಲ್ಲಿದ್ದವಳು ವಸ್ತುತಃ ಸೀತೆಯೇ ಅಲ್ಲ, ಅದು

---

*ಕೆಲವು ವ್ಯಾಕರಣಪಂಡಿತರ ಅಭಿಪ್ರಾಯದಂತೆ ಈ ರೀತಿ ಚತುರ್ಥೀತತ್ಪುರುಷ ಅಸಾಧು. ಆಗ—ದೇವೀಂ ಪ್ರತಿ ರಾಮಸ್ಯ ಸಂದೇಶಃ ಎಂದು ದ್ವಿತೀಯಾತತ್ಪುರುಷ ಎಂದು ಹೇಳಬೇಕು.

ಸೀತಾಕೃತಿ ಮಾತ್ರ. ಅದರಲ್ಲಿ ವ್ಯವಹಾರಸಿದ್ಧಿಗಾಗಿ ದೇವೇಂದ್ರ ಪ್ರವಿಷ್ಟ-ನಾಗಿದ್ದ—

ತಸ್ಯಾಸ್ತು ತಾಂ ಪ್ರತಿಕೃತಿಂ ಪ್ರವಿವೇಶ ಶಕ್ರೋ
ದೇವ್ಯಾಶ್ಚ ಸನ್ನಿಧಿಯುತಾಂ ವ್ಯವಹಾರಸಿದ್ಧ್ಯೈ । (೫/೩೮)

(ತಸ್ಯಾಃ–ಸೀತೆಯ, ಶಕ್ರಃ–ದೇವೇಂದ್ರ, ಆ ಸೀತಾಕೃತಿಯಲ್ಲಿ ಸೀತೆಯ ಕಿಂಚಿತ್ ಸನ್ನಿಧಿಯೂ ಇದ್ದುದರಿಂದ 'ಸೀತೆ' ಎಂಬ ವ್ಯವಹಾರ)

ಎರಡನೆಯದಾಗಿ ಸರ್ವಜ್ಞರಾದ ರಾಮದೇವರಿಗೆ ಹನುಮಂತನೊಬ್ಬನೇ ಸೀತೆ-ಯನ್ನು ಹುಡುಕಿ ತನ್ನ ಕಾರ್ಯವನ್ನು ಸಾಧಿಸಲು ಸಮರ್ಥನೆಂಬ ವಿಷಯ ಮೊದಲೇ ತಿಳಿದಿತ್ತು (ತಾ.ನಿ. ೬/೩೩–೪). ಆದ್ದರಿಂದ ಕಪಿಗಳೆಲ್ಲ-ರನ್ನೂ ನಾಲ್ಕೂ ದಿಕ್ಕುಗಳಿಗೂ ಕಳುಹಿಸುವ ಸಂದರ್ಭದಲ್ಲೇ ಶ್ರೀರಾಮ ಹನುಮಂತನನ್ನು ಹತ್ತಿರ ಕರೆದು ತನ್ನ ಚೂಡಾಮಣಿಯನ್ನು (ಎಂದರೆ ಜನಕಮಹಾರಾಜ ಸೀತಾವಿವಾಹಕಾಲದಲ್ಲಿ ತನಗೆ ಕೊಟ್ಟಿದ್ದ ಉಂಗುರ-ವನ್ನು) ಆವನಿಗೆ ಕೊಟ್ಟು ಆ ಉಂಗುರವನ್ನು ತೋರಿಸುವುದರ ಜೊತೆಗೆ ತನಗೂ ಸೀತೆಗೂ ಮಾತ್ರವೇ ಗೊತ್ತಿರುವ ಕೆಲವು ಸಂಭಾಷಣೆಯ ಅಂಶ-ಗಳನ್ನೂ ಸೀತೆಗೆ ವಿಶ್ವಾಸವುಂಟಾಗುವುದಕ್ಕಾಗಿ ತಿಳಿಸಬೇಕೆಂದೂ ಅಪ್ಪಣೆ ಮಾಡಿದ್ದನು. ಇದೇ **ರಾಮನ ಸಂದೇಶ**

ಅದರಂತೆ ಹನುಮಂತ ಸೀತೆಯನ್ನು ಅಶೋಕವನದಲ್ಲಿ ಕಂಡು ರಾಮನ ಸಂದೇಶವನ್ನು ತಿಳಿಸಿದ. ಇದಕ್ಕೆ ಪ್ರತಿಯಾಗಿ ಸೀತೆಯೂ ತನ್ನ ಚೂಡಾ-ಮಣಿಯನ್ನು (ಎಂದರೆ ತನ್ನ ತಂದೆ ತನಗೆ ವಿವಾಹಕಾಲದಲ್ಲಿ ಕೊಟ್ಟಿದ್ದ ಉಂಗುರವನ್ನು) ಕೊಟ್ಟು ಅದನ್ನು ರಾಮನಿಗೆ ತೋರಿಸಿ ರಾಮನಿಗೆ ಮಾತ್ರವೇ ಗೊತ್ತಿದ್ದ ಕುರಂಗಾಸುರನ ವಧೆಯ ವೃತ್ತಾಂತವನ್ನೂ (ಸೀತೆ ವನವಾಸದಲ್ಲಿದ್ದಾಗ ಅವಳ ತೊಡೆಯನ್ನು ಕುಕ್ಕಿ ವ್ರಣ ಮಾಡಿದ ಕಾಗೆಯ ಕಣ್ಣಿನಲ್ಲಿ ವಾಸ ಮಾಡಿಕೊಂಡಿದ್ದ ಅಸುರನನ್ನು ಸಂಹಾರ ಮಾಡಿದ ಸಮಾ-ಚಾರವನ್ನೂ) ತಿಳಿಸುವಂತೆ ಹೇಳಿದ್ದಳು. ಇದೇ **ಸೀತಾಸಂದೇಶ. ಲಂಕೆ-**ಯಿಂದ ಕಿಷ್ಕಿಂಧೆಗೆ ಹಿಂದಿರುಗಿದ ಬಳಿಕ ಈ ಸಂದೇಶವನ್ನು ರಾಮನಿಗೆ ತಿಳಿಸಿದನು. ಹೀಗೆ ಎರಡು ಕಡೆಯಿಂದಲೂ ಸಂದೇಶವನ್ನು ಒಯ್ದ ಕಾರಣವೇ

ಹನುಮಂತನಿಗೆ **ರಾಮದೂತ**ನೆಂಬ ಬಿರುದು ಅನ್ವರ್ಥವೂ ಸಾರ್ಥಕವೂ ಆಗಿದೆ.

**242. ಅದರ ಮಹತ್ವ**—ಅಷ್ಟೇ ಅಲ್ಲ, ಹನುಮದವತಾರದಲ್ಲಿ ಸಾಧಿಸಿದ ಪ್ರಧಾನ ಭಗವತ್ಕಾರ್ಯಗಳಲ್ಲಿ ಇದಕ್ಕೆ ವಿಶೇಷ ಮಹತ್ವವಿದೆ. ಹನುಮಂತನ ದ್ವಾದಶ ಮುಖ್ಯನಾಮಗಳಲ್ಲಿ **ಸೀತಾಸಂದೇಶಹಾರಕಃ** ಎಂಬುದು ಒಂದಾಗಿರುವುದಲ್ಲದೆ ಬಳಿತ್ಥಾಸೂಕ್ತವೂ ಸಹ ಈ ಸೇವೆಗೆ ಮಹತ್ವ ಕೊಟ್ಟು

ಯದೀಮುಪ ಹ್ವರತೇ ಸಾಧತೇ ಮತಿ-

ಋತಸ್ಯ ಧೇನಾ ಅನಯಂತ ಸಸ್ರುತಃ (೧ಋ.)

ಎಂದು ಉಲ್ಲೇಖಿಸಿದೆ. (ಇದರ ಅರ್ಥ) ಹನುಮಾನ್ ಎಂದರೆ ಮಹಾಜ್ಞಾನೀ ಎಂದಾಗುವುದರಿಂದ ವೇದಪುರುಷನು ಪ್ರಸಿದ್ಧವಾದ ಹೆಸರನ್ನು ಬಿಟ್ಟು ಗುಹ್ಯಭಾಷೆಯಿಂದ **ಮತಿಃ** ಎಂದೇ ಪರ್ಯಾಯದಿಂದ ಹೇಳಿದ್ದಾನೆ. ಯತ್ ಮತಿಃ–ಜ್ಞಾನಪ್ರಧಾನವಾದ್ದರಿಂದ ಹನುಮಂತನೆಂಬ ಯಾವ ಪ್ರಥಮಾವ-ತಾರವುಂಟೋ ಅದು, ('ಋ ಗತೌ' ಎಂಬ ಧಾತುವಿನ ರೂಪವಾದ್ದರಿಂದ) ಋತಸ್ಯ-ಜ್ಞಾನಮಯನಾದ ಶ್ರೀರಾಮನ, ಉಪ-ಸಮೀಪದಲ್ಲಿ, ಹ್ವರತೇ-ಕ್ರೀಡಿಸುತ್ತದೆ ಅಥವಾ 'ಹ್ವರ ಕೌಟಿಲ್ಯೇ' ಎಂದು ಧಾತುಪಾಠವಿರುವುರಿಂದ ಭಕ್ತಿಯ ಭರದಿಂದ ನಮ್ರವಾಗಿ ಇರುತ್ತದೆ. ಸಾಧತೇ–ದುಷ್ಟಸಂಹಾರ ಶಿಷ್ಟರಕ್ಷಣರೂಪ ಭಗವತ್ಕಾರ್ಯಗಳನ್ನು ಸಾಧನಮಾಡುತ್ತದೆ. (ಅಂಥಾ ಒಂದು ಮುಖ್ಯಕಾರ್ಯವನ್ನೇ ವೇದಪುರುಷ ನಿದರ್ಶನವಾಗಿ ಕೊಡುತ್ತಾನೆ) ಋತಸ್ಯ–ಶ್ರೀರಾಮನ, ಸಸ್ರುತಃ (ಸ್ರುತ್–ಸ್ರವಿಸುವ)–ಅಮೃತವನ್ನು ಸುರಿಸುವ, ಧೇನಾಃ–ಮಾತುಗಳನ್ನು (ಸಂದೇಶವನ್ನು), ಅನಯಂತ–ಒಯ್ದು ಮುಟ್ಟಿಸಿತು. (ಹನುಮಂತನ ಈ ದೂತಕಾರ್ಯದ ವರ್ಣನೆಯನ್ನು ಮಾಡುವ ಕಥಾಭಾಗವನ್ನು ನಿರಂತರ ಓದುವವರಿಗೆ—ಮನನಮಾಡು-ವವರಿಗೆ ಮೋಕ್ಷಲಾಭವಾಗುವುದೆಂಬುದನ್ನೂ ಸಸ್ರುತಃ ಎಂಬ ಪದ ಸೂಚಿಸುತ್ತದೆ.)

**243. ದ್ರುಹಿಣ-ಹರ-ವರಾವಧ್ಯ**–'ಗುರುಸಾರ್ವಭೌಮ' ಕನ್ನಡ ಟೀಕೆಯಲ್ಲಿ ಸ್ವ. ಮಹಾಮಹೋಪಾಧ್ಯಾಯ ಲಕ್ಷ್ಮೀನಾರಾಯಣ ಉಪಾಧ್ಯಾಯರು ತೋರಿಸಿರುವಂತೆ ಶ್ರೀರಾಮದೇವರಲ್ಲಿ ದ್ವೇಷಮಾಡಿ ಹತರಾದ ರಾಕ್ಷಸರಲ್ಲಿಯೇ ಮುಖ್ಯವಾಗಿ ಎರಡು ಪಂಗಡದವರಿದ್ದರು—ಕೆಲವರು ಸ್ವಭಾವತಃ ದ್ವೇಷಿಗಳು, ಕೆಲವರು ಶಾಪನಿಮಿತ್ತ ದ್ವೇಷಸಾಧನೆಮಾಡಿದರು. ರಾವಣ ಕುಂಭಕರ್ಣಾದಿಗಳು ಈ ಎರಡನೇ ಗುಂಪಿಗೇ ಸೇರಿದವರು. ಮಹತ್ವಾಕಾಂಕ್ಷಿಗಳಾದ್ದರಿಂದ ಈ ಎರಡು ಗುಂಪಿಗೆ ಸೇರಿದವರೂ ಭೋಗಭಾಗ್ಯಾಪೇಕ್ಷೆಯಿಂದ ಲೋಕವನ್ನೇ ಸ್ವಾಧೀನಮಾಡಿಕೊಳ್ಳಬಯಸಿದವರಾಗಿ ಸುಲಭಪ್ರಾಪ್ಯರಾದ ಬ್ರಹ್ಮದೇವರನ್ನೂ ರುದ್ರದೇವರನ್ನೂ ಕುರಿತು ತಪಸ್ಸುಮಾಡಿ ಅವಧ್ಯತ್ವವನ್ನೂ ಅಮೋಘಶಸ್ತ್ರಾಸ್ತ್ರಗಳನ್ನೂ ವರಗಳಾಗಿ ಪಡೆದುಕೊಂಡರು. (ಅವರ ವಿವರಣೆ ಸದ್ಯದಲ್ಲೇ ಮುಂದೆ ಬರುವುದು.) ಅವರ ವರ ಸಾಧನೆಗಳು ಬೇಗ ಪರಿಪಕ್ವವಾಗಲೆಂಬ ಶ್ರೀಹರಿಯ ಇಚ್ಛೆಯನ್ನು ಬಲ್ಲವರಾದ ಬ್ರಹ್ಮ-ರುದ್ರರಿಬ್ಬರೂ ಆ ರಾಕ್ಷಸರಿಗೆ ಕೇಳಿಕೇಳಿದ ವರಗಳನ್ನೆಲ್ಲಾ ಕೊಟ್ಟುಬಿಟ್ಟರು. ಹೀಗೆ ಆ ವರಗಳಿಂದ ಅಜೇಯರೂ ಅವಧ್ಯರೂ ಆಗಿ ಮದಾಂಧರಾದ ಆ ರಾಕ್ಷಸರು ಎಲ್ಲರನ್ನೂ ಹಿಂಸಿಸುತ್ತಾ ಲೋಕಕ್ಕೇ ಕಂಟಕಪ್ರಾಯವಾಗಿದ್ದರು.

**244. ಬ್ರಹ್ಮರುದ್ರರ ವರಗಳ ಇತಿಮಿತಿ**—ಮೇಲೆ ಹೇಳಿದಂತೆ ಬ್ರಹ್ಮ-ರುದ್ರರು ಅನೇಕರಿಗೆ ಅವಧ್ಯತ್ವಾದಿ ವರಗಳನ್ನು ಕೊಟ್ಟಿದ್ದರಾದರೂ ಅವು ಸರ್ವಥಾ ಅನುಲ್ಲಂಘ್ಯವೇನೂ ಆಗಿರಲಿಲ್ಲ. ಅವುಗಳೆಲ್ಲವನ್ನೂ ಮೀರುವ ಶಕ್ತಿ ಶ್ರೀಹರಿಯಲ್ಲಂತೂ ಸರ್ವದಾ ಸಂಪೂರ್ಣವಾಗಿ ಇದ್ದೇಇದೆ. ಕೆಲವನ್ನು ಅತಿಕ್ರಮಿಸುವ ಶಕ್ತಿ ವಾಯುದೇವರಿಗೂ ಉಂಟೆಂಬ ಆಶಿಷವನ್ನು ಶ್ರೀಮದಾಚಾರ್ಯರು ತಾತ್ಪರ್ಯನಿರ್ಣಯದಲ್ಲಿ (ಅಧ್ಯಾ. ೯, ಶ್ಲೋ. ೩೫–೩೯) ತೋರಿಸಿದ್ದಾರೆ. ಬ್ರಹ್ಮದೇವರು ಯೋಗ್ಯರಿಗೆ ಅನುಕೂಲವಾಗುವಂಥಾ ವರಗಳನ್ನು ಕೊಟ್ಟರೆ ವಿಷ್ಣು ಅವನ್ನು ಹುಸಿಮಾಡುವುದಿಲ್ಲ; ಅಯೋಗ್ಯರಿಗೆ ಕೊಟ್ಟ ಐಹಿಕ ವರಗಳನ್ನು ಮಾತ್ರ ಅತಿಕ್ರಮಿಸುವನು. ಇದೇ ರೀತಿ ವಾಯುದೇವರೂ (ಅದರಿಂದ ಹನುಮಂತನೂ ಕೂಡ) ಬ್ರಹ್ಮದೇವರಿಗೆ ಸಮಾನ-

ಸ್ಕಂಧರಾದಪ್ರಯುಕ್ತ ತಮ್ಮ ಸಮಶಕ್ತಿಯನ್ನು ತೋರಿಸುವುದಕ್ಕಾಗಿ ಕೆಲವು ವೇಳೆ ಬ್ರಹ್ಮ ಕೊಟ್ಟ ವರಗಳನ್ನು ಮೀರುವುದೂ ಉಂಟು ಶ್ರೀಹರಿ-ವಾಯು-ಗಳಿಗಲ್ಲದೆ ಬೇರೆ ಯಾರಿಗೂ ಬ್ರಹ್ಮದೇವರ ವರಗಳನ್ನು ಮೀರುವ ಶಕ್ತಿಯಿಲ್ಲ. ರುದ್ರದೇವರಿಗಿಂತಲೂ ಶ್ರೀಹರಿವಾಯುಗಳಿಬ್ಬರೂ ಬಹಳ ಹೆಚ್ಚು ಸಮರ್ಥ-ರಾದ್ದರಿಂದ ರುದ್ರನು ಅಯೋಗ್ಯರಿಗೆ ಕೊಟ್ಟ ವರಗಳನ್ನು ನಿರ್ವಿಚಾರವಾಗಿ ಭಂಗಗೊಳಿಸಿಬಿಡುವರು. ಇದರಿಂದಲೇ ಶ್ರೀರಾಮ ಹನುಮಂತ ಇಬ್ಬರೂ ಬ್ರಹ್ಮನೂ ರುದ್ರನೂ ಕೊಟ್ಟಿದ್ದ ಅವಧ್ಯತ್ವಾದಿ ವರಗಳನ್ನು ಹುಸಿಗೊಳಿಸಿ ರಾಕ್ಷಸರನ್ನು ಕೊಂದ ಅನೇಕ ಪ್ರಮೇಯಗಳು ರಾಮಾಯಣದ ಕಥೆಯಲ್ಲಿ ಹೇರಳವಾಗಿ ಸಿಗುತ್ತವೆ. ಪ್ರಕೃತ ಶ್ಲೋಕದಲ್ಲಿ ಪ್ರಸಕ್ತವಾದ ಈ ಪ್ರಮೇಯ ಮಂದಟ್ಟಾಗುವುದಕ್ಕಾಗಿ ಕೆಳಗೆ ಕೆಲವು ನಿದರ್ಶನಗಳನ್ನು ಮಾತ್ರ ತೋರಿಸುವೆವು.

**245. ರಾಮದೇವರು ಭಂಗಮಾಡಿದ ವರಗಳು**—ದಂಡಕಾರಣ್ಯದ ಜನಸ್ಥಾನದಲ್ಲಿ ವಾಸವಾಗಿದ್ದ ಶೂರ್ಪಣಖಿಯ ಬಂಧುಗಳಾದ ಖರ-ತ್ರಿಶಿರ-ದೂಷಣರೂ ಅವರೊಂದಿಗೆ ಇದ್ದ ಹದಿನಾಲ್ಕುಸಾವಿರ ರಾಕ್ಷಸರೂ ೨. ವಿರಾಧನೂ (ತಾ.ನಿ. ೫/೨೦), ಹರನ ವರದಿಂದ ಅವಧ್ಯರಾಗಿದ್ದರು. (೫/೧೭). ೩. ಕಬಂಧ ಬ್ರಹ್ಮನ ವರದಿಂದ ಅವಧ್ಯನಾಗಿದ್ದ (೫/೪೨). ೪. ಸುಪ್ತಘ್ನಾದಿ ಏಳು ಮಂದಿ ರಾಕ್ಷಸಸೇನಾನಾಯಕರೂ, ೫. (೮/೩೬) ಮಕರಾಕ್ಷನೂ (೮/೬೯) ಬ್ರಹ್ಮವರದಿಂದ ಅವಧ್ಯರಾಗಿದ್ದರು. ಹೀಗೆಯೇ ಅನೇಕರು ವರಗಳಿಂದ ಅವಧ್ಯರಾಗಿದ್ದರೂ ಅವರೆಲ್ಲರನ್ನೂ ರಾಮದೇವರು ಸಂಹಾರಮಾಡಿಯೇಬಿಟ್ಟರು.

**246. ಹನುಮಂತ ಸಂಹರಿಸಿದ ಅವಧ್ಯರಾಕ್ಷಸರು**—೧. ಹನುಮಂತ ಅಶೋಕವನವನ್ನು ಹಾಳುಮಾಡಿದಾಗ ಅವನನ್ನು ಸೆರೆಹಿಡಿದು-ಕೊಂಡು ಹೋಗಲು ಬಂದಿದ್ದ ಎಂಟುಕೋಟಿ ರಾಕ್ಷಸರೂ ಎಂಬತ್ತು ಸಾವಿರ ರಾಕ್ಷಸಸೇನಾಪತಿಗಳೂ ಈಶ್ವರನ ವರದಿಂದ ಅವಧ್ಯರಾಗಿದ್ದರು. ಆದರೂ ಹನುಮಂತ ಅವರೆಲ್ಲರನ್ನೂ ಕೈಯಿಂದಲೇ ಅಪ್ಪಳಿಸಿ ಕೊಂದುಹಾಕಿದನು. (ತಾ.ನಿ., ೭ಅ., ೧೯ಶ್ಲೋ.) ವಾ.ರಾ. ಸುಂ.ಕಾಂಡ, ೪೫–೪೬ ಸರ್ಗ, ೨.

ಸಪ್ತಮಂತ್ರಿಪುತ್ರರೂ ಈಶ್ವರನ ವರದಿಂದ ಅವಧ್ಯರಾಗಿದ್ದರು. ಅವರನ್ನೂ ಸಂಹಾರಮಾಡಿದನು (೭/೨೨). ೩. ಇದರಂತೆ ಧೂಮ್ರನೆಂಬುವನೂ (೮/೨೩) ನಿಕುಂಭ (೮/೨೯), ಸುರಾಂತಕ (೮/೩೨) ಮೊದಲಾದವರೆಲ್ಲರೂ ಈಶ್ವರನ ವರಗಳಿಂದ ಅವಧ್ಯರಾಗಿದ್ದರು. ತ್ರಿಶಿರಸ್ ಎಂಬುವನು ಬ್ರಹ್ಮವರದಿಂದ ಅವಧ್ಯನಾಗಿದ್ದ (೮|೩೪). ಇವರೆಲ್ಲರೂ ರಾಮರಾವಣರ ಘೋರಯುದ್ಧದಲ್ಲಿ ಹನುಮಂತನಿಂದ ಸಂಹೃತರಾದರು. ಯುದ್ಧೋನ್ಮತ್ತ ಮತ್ತು ಮತ್ತ ಎಂಬ ಇಬ್ಬರು ರಾಕ್ಷಸರು ಪಾರ್ವತೀವರದಿಂದ ಅಜೇಯರಾಗಿದ್ದರು. ಅವರಿಬ್ಬರನ್ನೂ ಹನುಮಂತ ಮುಷ್ಟಿಪ್ರಹಾರದಿಂದಲೇ ಸಂಹರಿಸಿಬಿಟ್ಟ (೮/೩೫). ಹೀಗೆಯೇ ಅಸಂಖ್ಯ ರಾಕ್ಷಸರು ಹನುಮಂತನಿಂದ ಹತರಾದರು. ಇಂದ್ರಜಿತ್ ಹನು-ಮಂತನ ಮೇಲೆ ಬ್ರಹ್ಮಾಸ್ತ್ರವನ್ನು ಪ್ರಯೋಗ ಮಾಡಿದಾಗ ಹನುಮಂತ ಅದನ್ನೂ ಹುಸಿಮಾಡಬಹುದಾಗಿತ್ತು. ಆದರೂ ಬ್ರಹ್ಮನಿಗೆ ಗೌರವತೋರಿಸಲು ಮುಹೂರ್ತಕಾಲ ಮಾತ್ರ ಅದರ ಬಂಧನಕ್ಕೆ ಒಳಗಾದನು. ಮುಹೂರ್ತ ಕಳೆದ ಮೇಲೆ ಹನುಮಂತ ಲಂಕೆಯನ್ನೇ ಸುಟ್ಟುಹಾಕಿದನು. ಹೀಗೆ ರಾಮನೂ ಹನುಮಂತನೂ ಬ್ರಹ್ಮನ ಮತ್ತು ರುದ್ರನ ಅನೇಕ ವರಗಳನ್ನು ಹುಸಿಮಾಡಿದರೆಂಬುದು ಸಿದ್ಧವಾಯಿತು.

**247. ಆಸೇವೋದ್ಯದ್ದಯಾದ್ರ್ರಃ**—ರಾಮದೇವರ ಪಟ್ಟಾಭಿ-ಷೇಕವೆಲ್ಲ ಮುಗಿದ ಬಳಿಕ ರಾಮದೇವರು ದೊಡ್ಡ ಸಭೆಯಲ್ಲಿ ಎಲ್ಲರನ್ನೂ ಉದ್ದೇಶಿಸಿ ಹೀಗೆ ಹೇಳಿದನು (ತಾ. ನಿ. ೮/೨೩೨–೪೩):—'ಹೇ ಭಕ್ತಾ-ಗ್ರೇಸರರೇ ! ನೀವೆಲ್ಲರೂ ತ್ರಿಕರಣಶುದ್ಧಿಪೂರ್ವಕವಾಗಿ ಪರಮಭಕ್ತಿಯಿಂದ ನನಗೆ ಸೇವೆ ಮಾಡಿದ್ದೀರಿ. ಹೀಗೆ ಮಾಡಬೇಕಾದ್ದು ನ್ಯಾಯವೇ ಆಗಿದೆ. ನಿಮಗೆಲ್ಲರಿಗೂ ಮುಕ್ತಿಯನ್ನು ಕೊಡೋಣದರಿಂದಲೇ ನೀವು ಮಾಡಿದ ಸಕಲ ಸೇವೆಗೂ ಯೋಗ್ಯವಾದ ಪರಿಹಾರ ಕೊಟ್ಟಂತೆ ಆಗುತ್ತದೆ—

ಮುಕ್ತಿಪ್ರದಾನಾತ್ ಪ್ರತಿಕರ್ತೃತಾ ಮೇ
ಸರ್ವಸ್ಯ ಚಾಥೋ ಭವತಾಂ ಭವೇತ ।

(ಪ್ರತಿಕರ್ತೃತಾ–ಪ್ರತ್ಯುಪಕಾರ, ಭವತಾಂ–ನಿಮ್ಮೆಲ್ಲರ, ಭವೇತ–ಆದೀತು.)

ಹನೂಮತೋ ನ ಪ್ರತಿಕರ್ತೃತಾ ಸ್ಯಾತ್
ಸ್ವಭಾವಭಕ್ತಸ್ಯ ನಿರೌಪಧಂ ಮೇ ॥ (೮/೨೩೩)

(ನಿರೌಷಧಂ–ಔಷಧವೇ ಇಲ್ಲದ ರೋಗವನ್ನು ಪರಿಹರಿಸುವುದಕ್ಕೆ ಹೇಗೆ ಸಾಧ್ಯವಿಲ್ಲವೋ ಹಾಗೆ.)

'ಆದರೆ ಸ್ವಭಾವಭಕ್ತನಾದ ಈ ಹನುಮಂತ ಮಾಡಿರುವ ಅಪಾರ ಸೇವೆಗೆ, ಔಷಧವೇ ಇಲ್ಲದ ರೋಗವನ್ನು ಹೇಗೆ ಪರಿಹರಿಸಲು ಸಾಧ್ಯವಿಲ್ಲವೋ ಹಾಗೆ, ನಾನು ಪರಿಹಾರವನ್ನು ಕೊಟ್ಟು ತೀರಿಸಲಾರೆ....ಆದಕಾರಣ ಈ ಹನುಮಂತನೇ ಮುಂದಿನ ಕಲ್ಪದಲ್ಲಿ ಬ್ರಹ್ಮಪಟ್ಟಕ್ಕೆ ಬಂದು ಅಲ್ಲಿ ಸಕಲ-ಪ್ರಾಣಿಗಳು ಮಾಡುವ ಸಕಲ ಪುಣ್ಯಕರ್ಮಗಳಿಂದಲೂ ಉಂಟಾಗುವ ಸೌಖ್ಯ-ವನ್ನು ನನ್ನ ಜೊತೆಯಲ್ಲಿಯೇ ಅನುಭವಿಸಲಿ, ಇದಕ್ಕೇ ಸಹಭೋಗವೆಂದು ಹೆಸರು' ಎಂದು ಹೇಳಿದ್ದಲ್ಲದೆ ಹನುಮಂತನನ್ನು ಪರಮಪ್ರೀತಿಯಿಂದ ಆಲಿಂಗಿಸಿಕೊಂಡನೆಂದು ತಾತ್ಪರ್ಯನಿರ್ಣಯದಲ್ಲಿ ಹೇಳಿದೆ. ಇದನ್ನೇ ಪಂಡಿತಾಚಾರ್ಯರು ಪ್ರಕಾರಾಂತರದಿಂದ 'ಕರತಲಮತುಲಂ ಮೂರ್ಧ್ನಿ ವಿನ್ಯಸ್ಯ ಧನ್ಯಂ ತನ್ವನ್' ಎಂದೂ, 'ಪ್ರಭೂತ ಪ್ರಣಯ ವಿಕಸಿತಾಬ್ಜೇಕ್ಷಣಃ ತ್ವಾ ಈಕ್ಷಮಾಣಃ' ಎಂಬ ಪದಗಳಿಂದಲೂ ವರ್ಣಿಸಿದ್ದಾರೆ. ಇದು ರಾಮನಿಗೆ ಹನುಮಂತನಲ್ಲಿ ಇರುವ ಪ್ರೀತ್ಯತಿಶಯದ ವ್ಯಂಜಕವಾಗಿದೆ.

**248. ಸಹಭುಜಂ ಅಕರೋತ್** ಎಂಬುದಕ್ಕೆ 'ಜೊತೆಯಲ್ಲೇ ಅನುಭವಿಸುವವನನ್ನಾಗಿ ಮಾಡಿದರು' ಎಂದು ಪದಶಃ ಅರ್ಥ. ಇದರ ವಿವರಣೆಯೂ ಅವಶ್ಯ ತಿಳಿದಿರಬೇಕಾದ್ದು. ಸಕಲ ಪ್ರಾಣಿಗಳು ಮಾಡುವ ಸಕಲ ವ್ಯಾಪಾರಗಳಿಗೂ ಶ್ರೀಹರಿಯೇ ಮುಖ್ಯಕಾರಣ. ಶ್ರೀಹರ್ಯಾಜ್ಞೆ-ಯಿಂದ, ಅಚಲಪ್ರತಿಮೆಯಂತೆ ಬ್ರಹ್ಮದೇವರೂ, ಉತ್ಸವಮೂರ್ತಿಯಂತೆ ವಾಯುದೇವರೂ ಅಮುಖ್ಯಕಾರಣರು. ಸಮಸ್ತ ಪ್ರಾಣಿಗಳು ಮಾಡುವ ಸಕಲ ಪುಣ್ಯಕರ್ಮಗಳಿಂದಲೂ ಲಭಿಸುವ ಸುಖವು ಜಡಸುಖವೆಂದೂ ಸಾರ-ಸುಖವೆಂದೂ ಎರಡು ಬಗೆಯಾಗಿರುತ್ತದೆ. ಜಡಸುಖವು ಹೆಚ್ಚಿನ ಮಟ್ಟದ್ದಾ-ಗಿದ್ದರೆ ಆದರಿಂದ ಆ ಜೀವಿಗೆ ಸ್ವರ್ಗಾದಿಲೋಕಗಳು ಪ್ರಾಪ್ತವಾಗುತ್ತವೆ. ಇಲ್ಲದಿದ್ದರೆ ಜೀವನಿಗೆ ದೊರಕುವ ಕ್ಷಣಿಕ ಆನಂದರೂಪವಾಗುತ್ತದೆ. ಸಾರ-ಸುಖವು ಜಡಸುಖಕ್ಕಿಂತ ಬಹಳ ಹೆಚ್ಚಿನ ಮಟ್ಟದ್ದೂ ಆಗಿರುವುದಲ್ಲದೆ ಪ್ರಮಾಣದಲ್ಲೂ ಬಹಳ ಅಧಿಕವಾಗಿರುತ್ತದೆ. ಈ ಸುಖದಲ್ಲೇ ಪುನಃ ಎರಡು

ಭಾಗ—ಶ್ರೀಹರಿಯ ಭಾಗ ಮತ್ತು ಬ್ರಹ್ಮದೇವರ ಭಾಗ. ಬ್ರಹ್ಮನ ಭಾಗ-ಕ್ಕಿಂತ ಹರಿಯ ಭಾಗ ಬಹಳ ಹೆಚ್ಚು. ಇದನ್ನು ಸ್ವರೂಪಸುಖವೆಂದೂ ಕರೆಯುತ್ತಾರೆ. ಹೀಗೆ ಸಕಲ ಪ್ರಾಣಿಗಳು ಮಾಡುವ ಸಕಲ ಪುಣ್ಯಗಳಲ್ಲೂ ಅಡಗಿರುವ ಸ್ವರೂಪಸುಖದ ಅಧಿಕಾಂಶವನ್ನು ಶ್ರೀಹರಿಯೂ ಮಿಕ್ಕ ಅಂಶ-ವನ್ನು ಅವನ ಜೊತೆಯಲ್ಲೇ ಬ್ರಹ್ಮದೇವರೂ **ಒಟ್ಟಿಗೆ ಅನುಭವಿಸುವರು.** ಆದ್ದರಿಂದ ಈ ಅನುಭವಕ್ಕೆ 'ಸಹಭೋಗ' ವೆಂದು ಹೆಸರು. ಇಂಥಾ ಅನು-ಭವ ಬ್ರಹ್ಮಪಟ್ಟದಲ್ಲಿರುವವರಿಗೆ ಮಾತ್ರ ಸಾಧ್ಯವಾದುದರಿಂದ ವಾಯುಸ್ತುತಿ-ಯಲ್ಲಿ 'ದುಷ್ಪ್ರಾಪೇ ಪಾರಮೇಷ್ಠ್ಯೇ (ಪದೇ) ಸಹಭುಜಂ ಅಕರೋತ್' ಎಂದು ಹೇಳಿದ್ದಾರೆ. ಹನುಮಂತ ಮಾಡಿದ ಅಸಂಖ್ಯ ಸೇವೆಗಳಿಂದ ತೃಪ್ತನಾದ ಶ್ರೀರಾಮ ಅವನಿಗೆ ಮುಂದಿನ ಕಲ್ಪದಲ್ಲಿ ಬ್ರಹ್ಮಪದವಿಯನ್ನು ಕೊಟ್ಟು ಈ ಸಹಭೋಗವನ್ನೂ ಅನುಗ್ರಹಿಸಿದನೆಂದು ತಾತ್ಪರ್ಯ.

ಈಗ ರಾಮಪರವಾಗಿಯೂ ಹನುಮತ್ಪರವಾಗಿಯೂ ಶ್ಲೋಕದ ಭಾವಾರ್ಥವನ್ನು ಬರೆದು ಹನುಮದವತಾರದ ಕಥಾ ನಿರೂಪಣವನ್ನು ಮುಗಿಸುವೆವು.

**249. ರಾಮಪರವಾಗಿ ಭಾವಾರ್ಥ**—ಹೇ ಭಗವನ್ ಶ್ರೀರಾಮ-ಚಂದ್ರ ! ನಿನ್ನ ನಾಮವೇ ಪರಮಪಾವನ. ನಿನ್ನ ಸ್ಮರಣೆಯೇ ಪುಣ್ಯಪ್ರದ. ನಿನ್ನ ಚರಿತ್ರೆಯು ಶುಭತಮಕಥಾಶಯ. ರಾವಣಾದಿ ದುಷ್ಟರಾಕ್ಷಸರ ಬಾಧೆ-ಯನ್ನು ತಾಳಲಾರದೆ ಇಂದ್ರಾದಿ ದೇವತೆಗಳು ಬ್ರಹ್ಮನನ್ನು ಮುಂದೆ ಮಾಡಿ-ಕೊಂಡು ಮೂಲರೂಪಿ ಶ್ರೀಮನ್ನಾರಾಯಣನಾದ ನಿನ್ನನ್ನು ಭೂಭಾರ-ಹರಣಕ್ಕಾಗಿ ಭೂಮಿಯಲ್ಲಿ ಅವತಾರ ಮಾಡಬೇಕೆಂದು ಪ್ರಾರ್ಥಿಸಿದ್ದರಿಂದ ನೀನು ಸೂರ್ಯವಂಶದಲ್ಲಿ ಶ್ರೀರಾಮನೆಂಬ ಹೆಸರಿನಿಂದ ಅವತಾರ ಮಾಡಿದಿ. ಹೀಗೆ ನೀನು ಸಾಕ್ಷಾನ್ನಾರಾಯಣನೇ ಆಗಿದ್ದೀಯೆ. ಸೃಷ್ಟಿಸ್ಥಿತಿ ಸಂಹಾರಾದಿ ಅಷ್ಟಕಾರ್ಯಗಳಿಗೆ ನೀನೇ ಮುಖ್ಯನಾಗಿದ್ದರೂ ನೀನು ಸ್ವೇಚ್ಛೆಯಿಂದ ಲಕ್ಷ್ಮೀದೇವಿಯನ್ನೂ ಬ್ರಹ್ಮರುದ್ರಾದಿಗಳನ್ನೂ ಸೃಷ್ಟ್ಯಾದಿಕಾರ್ಯಗಳಲ್ಲಿ ನಿಯೋಗಮಾಡುವಿ. ಆದಕಾರಣ ನಿಯಾಮಕನಾದ ನೀನು ನಿಯಮ್ಯರಾದ ಆ ರಮಾಬ್ರಹ್ಮರುದ್ರಾದಿಗಳೆಲ್ಲರಿಗಿಂತಲೂ ಸರ್ವೋತ್ತಮನೂ ಸರ್ವಶಕ್ತನೂ ಆಗಿದ್ದೀಯೆ.

ಹೀಗಿರಲು ತ್ರೇತಾಯುಗದಲ್ಲಿ ಅಸಂಖ್ಯ ದುಷ್ಟರಾಕ್ಷಸರು ಸುಲಭ-ಪ್ರಾಪ್ಯರಾದ ಬ್ರಹ್ಮ-ರುದ್ರರನ್ನು ಕುರಿತು ತಪಸ್ಸು ಮಾಡಿ ಅವರ ಮೂಲಕ ಅಜೇಯತ್ವ ಅವಧ್ಯತ್ವಾದಿ ಅಪೂರ್ವವರಗಳನ್ನು ಪಡೆದುಕೊಂಡು ಅದರಿಂದ ಗರ್ವಿತರಾಗಿ ಜನಗಳನ್ನು ನಾನಾವಿಧವಾಗಿ ಹಿಂಸೆಮಾಡುತ್ತಾ ಲೋಕಕಂಟಕ-ರಾಗಿದ್ದರು. ಇದನ್ನು ಕಂಡ ನೀನು ವರಲಬ್ಧವಾಗಿದ್ದ ಅವರ ಅವಧ್ಯತ್ವ-ವನ್ನು ಮುರಿದು ಖರತ್ರಿಶಿರದೂಷಣಾದಿಗಳು ವಿರಾಧ–ಕಬಂಧ–ಸುಪ್ತಘ್ನ-ಮಕರಾಕ್ಷಾದಿ ಕೋಟಿಗಟ್ಟಲೆ ರಾಕ್ಷಸರನ್ನು ಅನಾಯಾಸವಾಗಿ ಸಂಹರಿಸಿ ಜಗತ್ತಿಗೆ ಆಗುತ್ತಿದ್ದ ಅವರ ಬಾಧೆಯನ್ನು ತಪ್ಪಿಸಿ ಲೋಕಕಲ್ಯಾಣ ಮಾಡಿದ ಪುಣ್ಯಚರಿತ ನೀನು.

ನಿನ್ನ ಈ ದುಷ್ಟಸಂಹಾರಕಾರ್ಯದಲ್ಲಿ ನಿನಗೆ ಪ್ರಧಾನಾಂಗವಾದ ಹನುಮಂತನೂ ನಿನ್ನಂತೆಯೇ ಅನೇಕ ಕೋಟಿ ರಾಕ್ಷಸರನ್ನು ಅಶೋಕವನ ಭಂಗಮಾಡಿದಾಗಲೂ ರಾಮರಾವಣರ ಯುದ್ಧದಲ್ಲೂ ಸಂಹಾರ ಮಾಡಿ ನಿನಗೆ ನೆರವಾದನು. ಅವನ ಆ ಅಗಾಧ ಸೇವೆಗೆ ಮೆಚ್ಚಿದ ನೀನು ಅವನನ್ನು ಕರುಣಾಪೂರ್ಣದೃಷ್ಟಿಯಿಂದನೋಡಿ ಅವನ ಮಹತ್ಕಾರ್ಯಗಳನ್ನು ಪ್ರಶಂಸಿಸಿ ಪ್ರೀತ್ಯತಿಶಯದಿಂದ ಅವನನ್ನು ಆಲಿಂಗನಮಾಡಿಕೊಂಡಿ. ಕಡೆಗೆ ಪರಂಧಾಮಕ್ಕೆ ತೆರಳುವುದಕ್ಕೆ ಮುನ್ನ ಅವನ ತಲೆಯ ಮೇಲೆ ನಿನ್ನ ಅಮೃತಮಯವಾದ ದಿವ್ಯಕರಕಮಲವನ್ನಿಟ್ಟು,

ತವಾಹಮಕ್ಷಿಗೋಚರಃ ಸದಾ ಭವಾಮಿ ನಾನ್ಯಥಾ ।
....ಸಮೀಡ್ಯಮಾನಸದ್ಯಶಾ ರಮಸ್ವ ಮತ್ಪುರಃ ಸದಾ ॥

(ಅಕ್ಷಿಗೋಚರಃ - ಕಣ್ಣಿಗೆ ಕಾಣಿಸುವವನು. ಸಮೀಡ್ಯಮಾನ–ದೇವಗಂಧ-ರ್ವಾದಿಗಳಿಂದ ಸ್ತುತಿಸಲ್ಪಡುವ. ಸದ್ಯಶಾಃ–ಸತ್ಕೀರ್ತಿಯುಳ್ಳವನಾಗಿ, ರಮಸ್ವ–ನಲಿದಾಡು. ಮತ್ಪುರಃ–ನನ್ನ ಮುಂದೆ)

'ಹೇ ಹನುಮಂತ, ನಾನು ನಿನಗೆ ಸದಾ ಪ್ರತ್ಯಕ್ಷವಾಗಿಯೇ ಕಾಣಿಸುತ್ತಿ-ರುವೆನು.... ದೇವ ಗಂಧರ್ವಾದಿಗಳಿಂದ ಸ್ತುತಿಸಲ್ಪಡುವ ಕೀರ್ತಿಯುಳ್ಳವನಾಗಿ ನನ್ನ ಮುಂದೆಯೇ ನಿರಂತರವಾಗಿ ನಲಿದಾಡುತ್ತಿರು' ಎಂದು ಆಶೀರ್ವಾದ ಮಾಡಿದಿಯಲ್ಲದೆ ಮುಂದಿನ ಕಲ್ಪದಲ್ಲಿ ಅವನಿಗೆ ಬ್ರಹ್ಮಪದವಿಯನ್ನು ಕರುಣಿಸಿ

ಆ ಬ್ರಹ್ಮಕಲ್ಪ ಮುಗಿಯುವವರೆಗೂ ನಿನ್ನ ಜೊತೆಯಲ್ಲೇ ಸಕಲ ಭೋಗ-ಗಳನ್ನೂ ಅನುಭವಿಸುವ ಸಹಭೋಗವನ್ನು ಸಹ ಅನುಗ್ರಹ ಮಾಡಿದಿ. ಆಹಾ! ಎಂಥಾ ಕರುಣಾಕರಮೂರ್ತಿ ನೀನು! ಹನುಮಂತನ ಮೇಲೆ ನಿನ್ನ ಮಮತೆ, ನಿನ್ನ ಅನುಗ್ರಹ ಎಷ್ಟು ಅಪಾರವಾದುದು. ದೇವ! ಭಕ್ತ್ಯಾದಿಗಳಿಂದ ತುಂಬಿದ ನಮ ಉಕ್ತಿಯನ್ನು ನಿನಗೆ ಸಮರ್ಪಿಸುವೆವು—ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ.

**250. ಹನುಮತ್ಪರವಾಗಿ ಭಾವಾರ್ಥ**—ಹೇ ಜ್ಞಾನಿವರೇಣ್ಯನಾದ ಹನುಮಂತ! ಶ್ರೀರಾಮದೇವರಿಗೆ ನೀನು ಎಂಥಾ ನಿರ್ವ್ಯಾಜ ಸೇವೆಯನ್ನು, ಎಷ್ಟು ಭಕ್ತಿಯಿಂದ, ಎಷ್ಟು ಕಳಕಳಿಯಿಂದ ಮಾಡಿದಿ, ಸ್ವಾಮಿ! ಆ ಸೇವೆಯಾದರೂ ಎಂಥಾ ಮಹತ್ವದ ಸೇವೆ? ಒಂದೇ, ಎರಡೇ, ಲೆಕ್ಕವಿಲ್ಲದಷ್ಟು! ಒಂದೊಂದೂ ಬೇರೆ ಯಾರಿಂದಲೂ ಮನಸಾ ಊಹಿಸಲೂ ಸಾಧ್ಯವಿಲ್ಲದ ಸೇವೆ! ಸುಗ್ರೀವನ ಆಜ್ಞೆಯಂತೆ ಅಸಂಖ್ಯ ಕಪಿಗಳು ಸೀತೆಯನ್ನು ಹುಡುಕಲು ನಾಲ್ಕೂ ದಿಕ್ಕುಗಳಲ್ಲಿ ತಂಡೋಪತಂಡವಾಗಿ ಹೊರಟರಲ್ಲಾ, ಅವರಲ್ಲೆಲ್ಲ ಆ ಕಾರ್ಯವನ್ನು ಯಶಸ್ವಿಯಾಗಿ ಸಾಧಿಸಿಕೊಂಡು ಹಿಂದಿರುಗಿ ಬಂದ ಧೀರಾ-ಗ್ರಣಿ ನೀನೊಬ್ಬನೇ ಅಲ್ಲವೇ? ಈ ಸೇವೆಯ ನಿರ್ವಹಣೆಯಲ್ಲೂ ಹೆಜ್ಜೆ-ಹೆಜ್ಜೆಗೂ ನಿನ್ನ ಅಪಾರ ಆಸಕ್ತಿಯೂ ಅಸಾಧಾರಣ ನಿಷ್ಠೆಯೂ ಎದ್ದು ಕಾಣುತ್ತವೆ.

ರಾಮನ ಸಂದೇಶವನ್ನು ಸೀತೆಗೊಪ್ಪಿಸಿದ್ದು ಮಾತ್ರವಲ್ಲ, ಅವಳ ಸಂದೇಶವನ್ನೂ ರಾಮನಿಗೆ ಒಪ್ಪಿಸಿ ಅವಳು ಕಳುಹಿಸಿದ್ದ ಚೂಡಾಮಣಿ-ಯನ್ನೂ ರಾಮನ ಪಾದಾರವಿಂದಗಳಲ್ಲಿ ಅರ್ಪಿಸಿ ಕೃತಾರ್ಥತೆಯನ್ನು ಪಡೆದಿ. ಇದೇನು ಸಾಮಾನ್ಯ ಕೆಲಸವೇ? ಇದಕ್ಕಾಗಿ ನೀನು ಎಷ್ಟು ಕಷ್ಟಪಡಬೇಕಾ-ಯಿತು? ಸಮುದ್ರವನ್ನೇ ಧೀಂಕೆಟ್ಟು ಲಂಘಿಸಿದಿ. ದಾರಿಯಲ್ಲೇ ಎಷ್ಟು ವಿಘ್ನಗಳನ್ನು ಎದುರಿಸಿ ಜಯಿಸಿದಿ? ಮೈನಾಕನನ್ನು ತಣಿಸಿದಿ. ಸಿಂಹಿಕೆ-ಯನ್ನೂ ಸುರಸೆಯನ್ನೂ ಲಂಕಿಣಿಯನ್ನೂ ಪರಾಭವಗೊಳಿಸಿ ಲಂಕೆಯನ್ನು ಪ್ರವೇಶಿಸಿದಿ. ಯಾರಿಗೂ ಕಾಣದಂತೆ ಬೆಕ್ಕಿನಂತೆ ಚಿಕ್ಕ ರೂಪವನ್ನು ಧರಿಸಿ ಇಡೀ ಲಂಕೆಯನ್ನು ಪರಿಶೋಧಿಸಿದಿ. ಗುಟ್ಟಾಗಿ ಹಿಂದಿರುಗಿ ಬಂದರೆ ಕಳ್ಳ-

ತನದಂತೆ ಆದೀತೆಂದು ವಿಚಾರ ಮಾಡಿ ಅಶೋಕವನವನ್ನು ಭಂಗ ಮಾಡಿ ಅಕ್ಷಕುಮಾರನೇ ಮೊದಲಾದ ಅನೇಕ ರಾಕ್ಷಸರನ್ನು ಕೇವಲ ಬಾಹುಬಲದಿಂದಲೇ ಅಪ್ಪಳಿಸಿಬಿಟ್ಟೆ. ರಾವಣನಿಗೆ ಶ್ರೀರಾಮನ ಅಪರಿಮಿತ ಪರಾಕ್ರಮದ ಪರಿಚಯ ಮಾಡಿಕೊಟ್ಟು, ಲಂಕೆಯನ್ನೇ ಅಗ್ನಿದೇವನಿಗೆ ಆಹುತಿಯಾಗಿ ಒಪ್ಪಿಸಿ ಜಯಭೇರಿ ಹೊಡೆದು ಬಂದಿ.

ಕೋಟ್ಯಾನುಕೋಟಿ ದುಷ್ಟ ರಾಕ್ಷಸರು ಬ್ರಹ್ಮ-ರುದ್ರ-ಪಾರ್ವತ್ಯಾದಿಗಳ ವರಗಳಿಂದ ಕೊಬ್ಬಿ ಅವಧ್ಯರಾಗಿ ದುರ್ಗಮವಾದ ಲಂಕಾದ್ವೀಪದಲ್ಲೇ ಸೇರಿಕೊಂಡು ಎಲ್ಲರನ್ನೂ ಹಿಂಸಿಸುತ್ತಾ ಭೂಮಿಗೇ ಭಾರಭೂತರಾಗಿದ್ದರು. ಸೀತಾಪಹರಣದ ನೆಪದಿಂದ ಅವರೆಲ್ಲರನ್ನೂ ಧ್ವಂಸಮಾಡಿ ರಾಮದೇವರ ಭೂಭಾರಹರಣಕಾರ್ಯದಲ್ಲಿ ಪ್ರಧಾನಾಂಗವಾಗಿ ದುಡಿದು ಅಗಾಧಸೇವೆಯನ್ನು ಸಲ್ಲಿಸಿದಿ. ಹೇ ಕಪಿಕುಲಾಗ್ರೇಸರನೇ, ನೀನು ಇಷ್ಟು ದುಡಿದರೂ ನಿನಗೆ ಕಿಂಚಿತ್ತಾದರೂ ಪ್ರತಿಫಲಾಕಾಂಕ್ಷೆಯ ಬಯಕೆಯ ಸುಳಿವಾದರೂ ಉಂಟೆ? ಕೇಳಬಾರದು. ದೊಡ್ಡದೊಡ್ಡ ಜ್ಞಾನಿಗಳೂ ಮಹರ್ಷಿಗಳೂ ಕೂಡ ಕಟ್ಟಕಡೆಗೆ ಮೋಕ್ಷವನ್ನಾದರೂ ಬಯಸುವರು. ಹೇ ವೈರಾಗ್ಯನಿಧಿಯೇ! ನೀನು ಅದನ್ನೂ ಸಹ ಬಯಸಲಿಲ್ಲವಲ್ಲಾ! ಸಾಕ್ಷಾತ್ ರಾಮನೇ, ತಾನೇ ಸ್ವತಃ ನಿನ್ನನ್ನು ವರ ಕೇಳಿಕೋ ಎಂದಾಗ, ನೀನು ಯಾವ ವರ ಕೇಳಿದಿ? ರಾಜ್ಯವನ್ನೇ? ಕೋಶವನ್ನೇ? ಭೋಗವನ್ನೇ? ಭಾಗ್ಯವನ್ನೇ ಎಲ್ಲವನ್ನೂ ಬಿಟ್ಟು 'ನಿನ್ನಲ್ಲಿ ನಿರಂತರವಾಗಿ ಭಕ್ತಿಯು ಅಭಿವೃದ್ಧಿಯಾಗುತ್ತಿರುವಂತೆ ಅನುಗ್ರಹಿಸು' (ಖಂಡ 205 ನೋಡಿ) ಎಂದು ಕೇಳಿಕೊಂಡಿಯಲ್ಲವೇ! ಎಂಥಾ ಘನವೈರಾಗ್ಯ ಇದು!

[ಈ ವೈರಾಗ್ಯಾತಿಶಯವನ್ನೇ ಪುರಂದರದಾಸರೂ ಸಹ ಮೆಚ್ಚಿ ಹೀಗೆ ವರ್ಣಿಸಿದ್ದಾರೆ—

ರಾಗ—ತೋಡಿ ತಾಳ ಚಾಪು

ಸೇವಕತನದ ರುಚಿ ಯೇನರಿದ್ಯೋ ಪ॥
ದೇವ, ಹನುಮರಾಯ, ವೈರಾಗ್ಯ ಬೇಡಿ ಅನು

ಉದಧಿಯ ದಾಟಿ ಸೀತೆಯ ಕಂಡು ಬಂದಾಗ
ಮದುವೆಯ ಮಾಡೆನ್ನಬಾರದಿತ್ತೆ ।
ಪದದಿ ಪಾಷಾಣ ಪೆಣ್ಣ ಮಾಡಿದವನಿಗೆ
ಇದು ಏನಾಶ್ಚರ್ಯವೋ, ನೀ ಬಯಸಲೊಲ್ಲದೆ ೧

ಕ್ಷಣದೊಳು ಸಂಜೀವನಗಿರಿ ತಂದಾಗ
ಹಣ-ಹೊನ್ನು ಬೇಡಲು ಕೊಡದಿಹನೇ ।
[ವಿನಯದ ವಿಭೀಷಣಗೆ ರಾಜ್ಯವಿತ್ತ-
ವನಿಗೇನಾಶ್ಚರ್ಯವೋ ಹನುಮ ನೀನೊಲ್ಲದೆ]

ಪಾಠಾಂತರ

ವನಜಾಕ್ಷಿ ಸಿರಿದೇವಿಯರಸು ಉದಾರನಿಗೆ
ಘನವಾಗಿಹುದು ಏನು, ನೀನು ಬಯಸಲೊಲ್ಲದೆ ೨

ಸಾರ್ವಭೌಮನು ತಾನೆ ಮೆಚ್ಚಿ ಬಂದಾಗಲೆ
ಉರ್ವಿಯ ಬೇಡಲು ಕೊಡದಿಹನೇ ।
ಸರ್ವವ ತೊರೆದು **ಶ್ರೀಪುರಂದರವಿಠಲನ**
ನಿರ್ವ್ಯಾಜ ಭಕುತಿಯ ಬೇಡಿಕೊಂಡ್ಯಲ್ಲದೆ ೩

ಕಠಿನಶಬ್ದಾರ್ಥ—ಯೇನರಿದ್ಯೋ-ಎಷ್ಟು ಚೆನ್ನಾಗಿ ತಿಳಿದುಕೊಂಡಿದ್ದೀಯೆ. ಉದಧಿ–ಸಮುದ್ರ. ಪದದಿ–ಕಾಲಿಂದ. ಪಾಷಾಣ–ಕಲ್ಲಾಗಿದ್ದ ಅಹಲ್ಯೆಯನ್ನು. ಪೆಣ್ಣ–(ಶಾಪವಿಮೋಚನೆಮಾಡಿ) ಶುದ್ಧ ಹೆಣ್ಣಾಗಿ. ಉರ್ವಿಯ–ಭೂಮಿಯನ್ನು. ನಿರ್ವ್ಯಾಜ–ನಿಷ್ಕಾಮವಾದ (ಹೆಚ್ಚಿನ ವಿವರಣೆಗೆ ೧೪ನೇ ಶ್ಲೋಕದ ಚತುರ್ಥಚರಣ ನೋಡಿ).]

ಎಲೈ ವಾಯುಪುತ್ರನೇ, ನಿನ್ನ ಈ ಅಪಾರ ಸೇವೆಗೆ ಮೆಚ್ಚಿ ಪುಲಕಿತನಾದ ಸಾಕ್ಷಾತ್ ಶ್ರೀರಾಮಚಂದ್ರನೆಂಬ ಭಗವಂತನೇ ಪರಮ ಪ್ರೀತಿ-ವಾತ್ಸಲ್ಯಗಳಿಂದ ಅರಳಿದ ನೇತ್ರಾರವಿಂದಗಳಿಂದ ನೋಡಿ ನಿನ್ನ ತಲೆಯ ಮೇಲೆ ತನ್ನ ಅಮೃತಹಸ್ತವನ್ನಿಟ್ಟುದಲ್ಲದೆ ಗಾಢಾಲಿಂಗನವನ್ನೂ ಮಾಡಿಕೊಂಡನು. ಅಷ್ಟಕ್ಕೂ ತೃಪ್ತನಾಗದೆ ನಿನಗೆ ಮುಂದಿನ ಕಲ್ಪದಲ್ಲಿ ಬ್ರಹ್ಮಪಟ್ಟವನ್ನು ಕರುಣಿಸಿ, ಪುಣ್ಯಜೀವಿಗಳ ಸಕಲ ಪುಣ್ಯಗಳ ಸಾರಸುಖವನ್ನು



“ಶ್ರೀಹರಿವಾಯುಸ್ತುತಿ”ಯ ಲೇಖಕರಾದ ಶ್ರೀ ಪಿ. ವಿಷ್ಣುತೀರ್ಥರನ್ನು 'ವಾಸುದೇವಪದಪಂಕಜಸಂಗೀ' ಪತ್ರಿಕೆಯ ವಾಚಕರಿಗೆ ಹೊಸದಾಗಿ ಪರಿಚಯ ಮಾಡಿಕೊಡಬೇಕಾಗಿಲ್ಲ. ಈಗಾಗಲೇ “ನಖಸ್ತುತಿ”ಯಿಂದ ಪರಿಚಿತರಾಗಿರುವ ಇವರು 'ವಾಸುದೇವಪದಪಂಕಜಸಂಗೀ' ಪತ್ರಿಕೆಯಲ್ಲಿ 'ದೇವರಪೂಜಾ' ಬಗ್ಗೆ ಧಾರಾವಾಹಿ ಲೇಖನದ ಮೂಲಕ ಆಸ್ತಿಕಜನ-ಪ್ರಿಯರಾಗಿದ್ದಾರೆ. ಶ್ರೀ ಸತ್ಯಧ್ಯಾನತೀರ್ಥರಲ್ಲಿ ಶಾಂತಿ ಹಾಕಿ ಪಂಡಿತವರ್ಯ ರಾಗಿದ್ದ ಶ್ರೀ ಶ್ರೀರಂಗಂ ಮಾಧವಾಚಾರ್ಯರಲ್ಲಿ ಅಧ್ಯಯನ ಮಾಡಿದ್ದ ರೆಂಬುದನ್ನು 'ನಖಸ್ತುತಿ' 'ಶ್ರೀಹರಿವಾಯುಸ್ತುತಿ'ಯ ವಾಚಕರಿಗೆ ಪ್ರತ್ಯೇಕವಾಗಿ ತಿಳಿಸಬೇಕಾದುದಿಲ್ಲ.

ಸುಮಾರು ನಾಲ್ಕನೇ ದಶಕದ ಉತ್ತರಾರ್ಧದಲ್ಲಿ ಶ್ರೀ ರಾಘವೇಂದ್ರತೀರ್ಥರ ಸೇವೆ ಮಾಡಿ ಅನುಗೃಹೀತರಾದ ಇವರು 1951ರಿಂದ 1971ರವರೆಗೆ ಯಂತ್ರೋದ್ಧಾರಕಪ್ರಾಣದೇವರ ಹಾಗೂ ನವವೃಂದಾವನದ ವಿದ್ವನ್ಮಣಿಗಳ ವಿಶೇಷತಃ ಶ್ರೀ ವ್ಯಾಸರಾಜರ ಸೇವೆ ಮಾಡಿ ನವವೃಂದಾವನದ ದರ್ಶನ ಮಾಡಿರುವ ಅಶೇಷ ಮಾಧ್ವಸ್ತೋಮಕ್ಕೆ ಚಿರಪರಿಚಿತರಾಗಿದ್ದಾರೆ. ಅವರ ಪಾಂಡಿತ್ಯದ ಬಗ್ಗೆ ನಾವು ಹೇಳುವುದಕ್ಕಿಂತ ನಿಮ್ಮ ಹಸ್ತದಲ್ಲಿರುವ ಗ್ರಂಥಾವಲೋಕನವೇ ಸ್ಪಷ್ಟಪಡಿಸುತ್ತದೆ. ಇದೋ, ಇನ್ನು ಪುಸ್ತಕ ತೆರೆದು ನೋಡಿ!